ಶ್ರೀಯೈನಮಃ.

ಶ್ರೀಪಾರ್ಥಸಾರಥಯೇ ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ.

ಭಾರತಯುದ್ಧಾರಂಭದಲ್ಲಿ ಅರ್ಜುನನಂ ವ್ಯಾಜೀಕರಿಸಿ
ಸರ್ವಲೋಕ ಹಿತಾರ್ಥವಾಗಿ
ಶ್ರೀಕೃಷ್ಣ ಪರಮಾತ್ಮನಿಂದುಪದಿಷ್ಟವಾದ
ಶ್ರೀಭಗವದ್ಗೀತಾ ಪ್ರಬಂಧಕ್ಕೆ ದ್ವೈತಾದ್ವೈತ
ವಿಶಿಷ್ಟಾದ್ವೈತ ಭಾಷ್ಯಾರ್ಥಗಳಂ ಸಂಗ್ರಹಿಸಿರುವ

# ಶ್ರೀಮದ್ಗೀತಾರ್ಥ ಸಾರದ

ತೃತೀಯ ಷಟ್ಕವು



ಶ್ರೀಮನ್ಮಹೀಶೂರು ಮಹಾ ಸಂಸ್ಥಾನದ ಶ್ರೀಮನ್ಮಹಾರಾಣೀ
ರೀಜಂಟ್ ಸಿ, ಐ, ಬಿರುದಂ ವಹಿಸಿದ
ಶ್ರೀವಾಣೀವಿಲಾಸ ಮಹಾ ಸನ್ನಿಧಾನದ ಪರಿಪೂರ್ಣ ಸಹಾಯದಿಂದ
ಬೆಂಗಳೂರು ತುಲಸೀ ತೋಟದಲ್ಲಿರುವ

ತೂಪ್ಪುಲ್॥ ವೆಂಕಟಾಚಾರ್ಯರಿಂದ
ಬರೆಯಲ್ಪಟ್ಟು,

ಬ್ರ॥ ಶ್ರೀ॥ ವಾಜಪೇಯಂ॥ ಕೃಷ್ಣಯ್ಯನವರ
ಬೆಂಗಳೂರು ಬುಕ್‌ಡಿಪ್ಪೋ ಮುದ್ರಾಕ್ಷರಶಾಲೆಯಲ್ಲಿ
ಮುದ್ರಿಸಲ್ಪಟ್ಟಿತು, ಬೆಂಗಳೂರು.

1901.

ತೃತೀಯ ಷಟ್ಕದ ಕ್ರಯ ೩ ರೂ.



ಅರ್ಜುನ.



ಶ್ರೀಕೃಷ್ಣ,



## ವಿ ಶೇ ಷ ಸೂ ಚ ನಾ.

ಈ ಪುಸ್ತಕವನ್ನು ಅಪೇಕ್ಷಿಸುವಂತವರು ಈ ಪೇಜಿನಲ್ಲಿ ನನ್ನ ಹಸ್ತಾಕ್ಷರವು ಅಥವಾ ನನ್ನ ಮೊಹರು ಇಲ್ಲದೆ ಇರುವ ಪುಸ್ತಕವಂ ಪಡದರೆ ಅದು ಕಳವು ಛಾರ್ಜಿಗೆ ಸಂಬಂಧಿಸುವುದು. ... ... ... ... *

ತೂಪ್ಪುಲ್ ವೆಂಕಟಾಚಾರ್ಯಃ.





ಶ್ರೀಯೈನಮಃ.

ಶ್ರೀಪಾರ್ಥ ಸಾರಥಯೇ ನಮಃ

ಇದರಲ್ಲಿ ಬರೆಯಲ್ಪಟ್ಟ ಟೀಕಾಗಳ ಸಂಜ್ಞಾಕ್ಷರಗಳ ವಿವರಣವು.

* ಶ್ರೀಮದದ್ವೈತ ಸಿದ್ಧಾನ್ತ ಗ್ರಂಥಗಳು. *

ಶಂ॥ ಭಾ॥ ಶಂಕರಭಾಷ್ಯವು.

ಆ॥ ಗಿ॥ ಆನಂದಗಿರೀಯಟೀಕಾ.

ಶಂ॥ ಅ॥ ಶಂಕರಾನಂದೀಯಟೀಕಾ.

ಮ॥ ಸೂ॥ ಮಧೂಸೂದನ ಸರ್ವತೀಯಟೀಕಾ.

ಶ್ರೀ॥ ಶ್ರೀಧರಾಚಾರ್ಯರ ಟೀಕಾ.

* ಶ್ರೀವಿಶಿಷ್ಟಾದ್ವೈತಸಿದ್ಧಾನ್ತಗ್ರಂಥಗಳು. *

ರಾ॥ ಭಾ॥ ಶ್ರೀರಾಮಾನುಜಭಾಷ್ಯವು.

ತಾ॥ ಚಂ ತಾತ್ಪರ್ಯಚಂದ್ರಿಕೆಯು.

* ಶ್ರೀಮನ್ಮಧ್ವ ಸಿದ್ಧಾನ್ತ ಗ್ರಂಥಗಳು. *

ಮ॥ ಭಾ॥ ಶ್ರೀಮಧ್ವಾಚಾರ್ಯರವರಭಾಷ್ಯವು.

ಗೀ॥ ವಿ॥ ಶ್ರೀರಾಘವೇಂದ್ರ ಸ್ವಾಮಿಗಳವರಗೀತಾವಿವೃತಿ.

ತಾ॥ ನಿ॥ ತಾತ್ಪರ್ಯ ನಿರ್ಣಯವು.

* ವಿಶೇಷಸೂಚನಾ *

ಅ॥ ರಾ॥ ಭಾ ರಾಮಾನುಜಭಾಷ್ಯಾನುಸಾರವಾದ ಅರ್ಥವು.

ಅ॥ ಶಂ॥ ಭಾ ಶಂಕರಭಾಷ್ಯಾನು ಸಾರವಾದಅರ್ಥವು.

ಪೂ॥ ಪ್ರ॥ ಪೂರ್ವಪಕ್ಷಿಯಪ್ರಶ್ನೆಯು.

ಸಿ॥ ಉ॥ ಸಿದ್ಧಾಂತಿಯ ಉತ್ತರವು.

ಈ ಗ್ರಂಥಗಳು ಮಾತ್ರವಲ್ಲದೆ ಶ್ರೀಸತ್ಯಸಂಕಲ್ಪ ಸ್ವಾಮಿಗಳವರ ವ್ಯಾಖ್ಯಾನವೂ, ಮತ್ತು ಶ್ರೀಮದ್ವೇದಾನ್ತಮಹಾದೇಶಿಕಸ್ವಾಮಿಗಳವರಶ್ರೀಮದ್ಗೀತಾರ್ಥಸಂಗ್ರಹ ದ್ರಮಿಡಗಾಥಾ, ಸಂಗ್ರಹಶ್ಲೋಕಾದಿಗಳೂ ಈ ಗ್ರಂಥದಲ್ಲಿಸೇರಿಸಿ ಟೀಕಾ ಮಾಡಲ್ಪಟ್ಟಿರುವುದು.

## ಅಥತೃತೀಯಷಟ್ಕಗತಾನಾಂ ಶ್ಲೋಕಾನಾಂ ಮಾತೃಕಾವರ್ಣಾನುಕ್ರಮಃ,—

## ಉ



## ಊ



## ಋ



## ಏ



## ಓಂ



## ಕ

## ಯ

ಶ್ರೀಃ.

# ಶ್ರೀಕೃಷ್ಣಾಯ ನಮೋನಮಃ.

## ಶ್ರೀಭಗವದ್ಗೀತಾಮಾಹಾತ್ಮ್ಯವು.

ಋಷಿರುವಾಚ ॥ ಗೀತಾಯಾಶ್ಚೈವಮಾಹಾತ್ಮ್ಯಂಯಥಾವತ್ಸೂತಮೇವದ । ಪುರಾಣಮುನಿನಾಪ್ರೋಕ್ತಂವ್ಯಾಸೇನಮುನಿನೋದಿತಂ ॥೧॥ ಸೂತಉವಾಚ ॥ ಪೃಷ್ಟಂಭವದ್ಭಿಃಋಷಿಭಿರ್ಯದ್ಗೋಪ್ಯಂಪುರಾತನಂ ।ಶಕ್ಯತೇಕೇನವೈವಕ್ತುಂಗೀತಾಮಾಹಾತ್ಮ್ಯಮುತ್ತಮಂ ॥ ಕೃಷ್ಣೋಜಾನಾತಿವೈಸಮ್ಯಕ್ಕಿಂಚಿತ್ಕುಂತೀಸುತಃಫಲಂ । ವ್ಯಾಸೋವಾವ್ಯಾಸಪುತ್ರೋವಾಯಾಜ್ಞವಲ್ಕ್ಯೋಥಮೈಥಿಲಃ ॥ ಅನ್ಯೇಶ್ರವಣತಶ್ಶ್ರುತ್ವಾಲೇಶಂಸಂಕೀರ್ತಯಂತಿಚ। ತಸ್ಮಾತ್ಕಿಂಚಿದ್ವದಾಮ್ಯತ್ರವ್ಯಾಸೇನಸ್ಯಾನ್ಮಯಾಶ್ರುತಂ ॥ಸರ್ವೋಪನಿಷದೋಗಾವೋದೋಗ್ಧಾಗೋಪಾಲನಂದನಃ । ಪಾರ್ಥೋವತ್ಸಸ್ಸುಧೀರ್ಭೋಕ್ತಾದುಗ್ಧಂಗೀತಾಮೃತಂಮಹತ್ ॥ ಸಾರಥ್ಯಮರ್ಜುನಸ್ಯಾದೌಕುರ್ವನ್ಗೀತಾಮೃತಂದದೌ। ಲೋಕತ್ರಯೋಪಕಾರಾಯತಸ್ಮೈಕೃಷ್ಣಾತ್ಮನೇನಮಃ ॥೬॥ ಸಂಸಾರಸಾಗರಂಘೋರಂತರ್ತುಮಿಚ್ಛತಿಯೋನರಃ । ಗೀತಾನಾವಂಸಮಾಸಾದ್ಯಪಾರಂಯಾತಿಸುಖೇನಸಃ॥ ಗೀತಾಜ್ಞಾನಂಶ್ರುತಂನೈವಸದೈವಾಭ್ಯಾಸಯೋಗತಃ । ಮೋಕ್ಷಮಿಚ್ಛತಿಮೂಢಾತ್ಮಾಯಾತಿಬಾಲಕಹಾಸ್ಯತಾಂ ॥ ಯೇಶೃಣ್ವಂತಿಪಠಂತ್ಯೇವಗೀತಾಶಾಸ್ತ್ರಮಹರ್ನಿಶಂ।ನತೇವೈಮಾನುಷಾಜ್ಞೇಯಾದೇವರೂಪಾನಸಂಶಯಃ ॥ ಗೀತಾಜ್ಞಾನೇನಸಂಬೋಧಂಕೃಷ್ಣಃಪ್ರಾಹಾರ್ಜುನಾಯವೈ। ಮೋಕ್ಷಸ್ಥಾನಂಪರಂಪಾರ್ಥಸ್ಸಗುಣಂವಾಥನಿರ್ಗುಣಂ ॥ ೧೦ ॥ ಸೋಪಾನಾಷ್ಟಶತೈರೇವಂಪರಂಬ್ರಹ್ಮಾಧಿಗಚ್ಛತಿ । ಮಲನಿರ್ಮೋಚನಂಪುಂಸಾಂಜಲಸ್ನಾನಂದಿನೇದಿನೇ ॥ ಸಕೃದ್ಗೀತಾಂಭಸಿಸ್ನಾನಂಸಂಸಾರಮಲನಾಶನಂ । ಪರಾಸ್ಯಾನ್ನಶ್ರುತಂಜ್ಞಾನಂತಸ್ಮಿಂಚ್ಛ್ರದ್ಧಾನಭಾವನಾ ॥ ಗೀತಾಯಾಶ್ಚನಜಾನಾತಿಪಠನಂನೈವಪಾಠನಂ । ಸಏವಮಾನುಷೇಲೋಕೇಮನುಜೋವಿದ್ವರಾಪಕಃ ॥ ತಸ್ಮಾದ್ಗೀತಾಂನಜಾನಾತಿನಾಧಮಸ್ತತ್ಪರೋಜನಃ । ಧಿಕ್ತಸ್ಯಮಾನುಷಂದೇಹಂಧಿಗ್ಜ್ಞಾನಂಕುಲಶೀಲತಾಂ ॥ ಗೀತಾರ್ಥಂನವಿಜಾನಾತಿನಾಧಮಸ್ತತ್ಪರೋಜನಃ । ಧಿಕ್ಛರೀರಂಶುಭಂಶೀಲಂವಿಭವಂಸದ್ಗೃಹಾಶ್ರಮಂ ।೧೫॥ಗೀತಾಶಾಸ್ತ್ರಂನಜಾನಾತಿನಾಧಮಸ್ತತ್ಪರೋಜನಃ । ಧಿಕ್ಪ್ರಾರಬ್ಧಂಪ್ರತಿಷ್ಠಾಂಚಪೂಜಾಂಮಾನಂಮಹ

ತ್ರಮಂ ॥ ಗೀತಾಶಾಸ್ತ್ರರತಿರ್ನಾಸ್ತಿಸರ್ವಂತಂನಿಷ್ಫಲಂಜಗುಃ । ಧಿ
ಕ್ತಸ್ಯಜ್ಞಾನಮಾಚಾರಂವ್ರತಂಚೇಷ್ಟಾಂತಪೋಜಗುಃ । ಗೀತಾಗೀತಂನ
ಯದ್ಜ್ಞಾನಂತದ್ವಿದ್ಧ್ಯಾಸುರಸಮ್ಮತಂ ॥ ತನ್ಮೋಘಂಧರ್ಮರಹಿತಂ
ವೇದವೇದಾಂತಗರ್ಹಿತಂ. ತಸ್ಮಾದ್ಧರ್ಮಮಯೀಗೀತಾಸರ್ವಜ್ಞಾನಪ್ರ
ಯೋಜಿಕಾ ॥ ಸರ್ವಶಾಸ್ತ್ರಮಯೀಯಸ್ಮಾತ್ತಸ್ಮಾದ್ಗೀತಾವಿಶಿಷ್ಯತೇ।
ಯೋಧೀತೇಸಿತ್ಯಗೀತಾಂಚದಿವಾರಾತ್ರೌಯಥಾರ್ಥತಃ ॥ ಸ್ವಪನ್
ಜಾಗ್ರಂಶ್ಚಲಂಸ್ತಿಷ್ಠನ್ ಶಾಶ್ವತಂಮೋಕ್ಷಮಾಪ್ನುಯಾತ್ ।ಸಾಲಗ್ರಾ
ಮಶಿಲಾಯಾಂತು ದೇವಾಗಾರೇಶಿವಾಲಯೇ ॥ ತೀರ್ಥೇನದ್ಯಾಂಪ
ಠೇದ್ಯಸ್ತುವೈಕುಂಠಂಯಾತಿನಿಶ್ಚಿತಂ । ದೇವಕೀನಂದನಃಕೃಷ್ಣೋ
ಗೀತಾಪಾಠೇನತುಷ್ಯತಿ ॥ ಯಥಾನವೇದೈರ್ದಾನೇನಯಜ್ಞತೀರ್ಥವ್ರ
ತಾದಿಭಿಃ । ಗೀತಾಽಧೀತಾಚಯೇನಾಪಿಭಕ್ತಿಭಾವೇನಚೇತಸಾ ॥ ತೇ
ನವೇದಾಶ್ಚಶಾಸ್ತ್ರಾಣಿಪುರಾಣಾನಿಚಸರ್ವಶಃ । *ಯೋಗಿಸ್ಥಾನೀ
ಸಿದ್ಧೋಶಲೋಗ್ರಸೇತ್ಸಭಾಸುಚ ॥ ಯಜ್ಞೇಚವಿಷ್ಣುಭಕ್ತಾಗ್ರೇ
ಪಠನ್ಯಾತಿಪರಾಂಗತಿಂ । ಗೀತಾಪಾಠಂಚಶ್ರವಣಂಯಃ ಕರೋತಿದಿನೇ
ದಿನೇ ॥ ೨೫ ॥ ಕ್ರತವೋವಾಜಿಮೇಧಾದ್ಯಾಃ ಕೃತಾಸ್ತೇನಸದಕ್ಷಿಣಾಃ।
ಯಶ್ಶೃಣೋತಿಚಗೀತಾರ್ಥಂಕೀರ್ತಯತ್ಯೇವಯಃ ಪುಮಾನ್ ॥ ಶ್ರಾವ
ಯೇಚ್ಚಪರಾರ್ಥಂವೈಸ ಪ್ರಯಾತಿಪರಂಪದಂ । ಗೀತಾಯಾಃಪುಸ್ತ
ಕಂಸಿತ್ಯಂಯೋರ್ಚಯತ್ಯೇವಸಾದರಾತ್ ॥ ವಿಧಿನಾಭಕ್ತಿಭಾವೇನತಸ್ಯ
ಪುಣ್ಯಫಲಂಶೃಣು ।ಸಕಲಾಭೂಃಕೃತಾತೇನಯಜ್ಞಸ್ತಂಭವತೀಕಿಲ॥
ಕೃತಾನಿಸರ್ವತೀರ್ಥಾನಿ ದಾನಾನಿಚ ಬಹೂನ್ಯಪಿ । ಭೂತಪ್ರೇತಪಿಶಾ
ಚಾದ್ಯಾಸ್ತತ್ರನಪ್ರವಿಶಂತಿವೈ ॥ ಅತಿಚೋರೋದ್ಭವಂ ದುಃಖಂಪರೇ
ಣಾಪಿಕೃತಂಚಯತ್ । ನೋಪಸರ್ಪತಿತತ್ರೈವಯತ್ರಗೀತಾರ್ಚನಂಗೃ
ಹೇ ॥೩೦॥ ತಾಪತ್ರಯೋದ್ಭವಾಪೀಡಾನೈವವ್ಯಾಧಿಭಯಂಕ್ವಚಿತ್ ।ನ
ಶಾಪೋನೈವ ಪಾಪಂಚ ದುರ್ಗತಿರ್ನಾರಕೀನಚ ॥ ದೇಹೋರ್ಮಯಷ್ಷ
ಡೇತೇವೈನಬಾಧಂತೆ ಕದಾಚನ। ಭಗವತ್ಪರಮೇಶಾನೆಭಕ್ತಿರವ್ಯಭಿಚಾ
ರಿಣೀ ॥ ಜಾಯತೆಸತತಂ ತತ್ರಯತ್ರಗೀತಾಭಿವಂದನಂ । ಪ್ರಾರಬ್ಧಂ
ಭುಂಜಮಾನೋಪಿಗೀತಾಭ್ಯಾಸರತಿಸ್ಸದಾ ॥ ಸಮುಕ್ತಸ್ಸಸುಖೀಲೋಕೆ
ಕರ್ಮಣಾನೋಪಲಿಪ್ಯತೆ । ಮಹಾಪಾಪಾದಿ ಪಾಪಾನಿಗೀತಾಧ್ಯಾಯೀಕ
ರೋತಿಚೇತ್ ॥ ನಕಿಂಚಿತ್ಸ್ಪೃಶತೆತಸ್ಯನಲಿನೀದಳಮಂಭಸಾ । ಅನಾ

ಚೌರ್ಯೋದ್ಭವಂ ಪಾಪಮವಾಚ್ಯಾದಿಕೃತಂಚಯತ್ ॥೩೯॥ ಅಭಕ್ಷ್ಯಭ
ಕ್ಷಣಂದೋಷಮಸ್ಪೃಶ್ಯಸ್ಪರ್ಶಜಂತಥಾ । ಜ್ಞಾನಾಜ್ಞಾನಕೃತಂನಿತ್ಯಮಿಂ
ದ್ರಿಯೈರ್ಜನಿತಂಚಯತ್ ॥ ತತ್ಸರ್ವಂನಾಶಮಾಯಾತಿಗೀತಾಪಾಠೇನತ
ತ್ಕ್ಷಣಾತ್ ।ಸರ್ವತ್ರ ಪ್ರತಿಭುಕ್ತ್ವಾಚ ಪ್ರತಿಗೃಹ್ಯಚಸರ್ವಶಃ॥ ಗೀತಾ
ಪಾಠಂಪ್ರಕುರ್ವಾಣೋನಲಿಪ್ಯೇತಕದಾಚನ । ರತ್ನಪೂರ್ಣಾಂಮಹೀಂ
ಸರ್ವಾಂಪ್ರತಿಗೃಹ್ಯವಿಧಾನತಃ ॥ ಗೀತಾಪಾಠೇನಚೈಕೇನಶುದ್ಧಸ್ಸ್ಫ
ಟಿಕವತ್ಸದಾ।ಯಸ್ಯಾಂತಃ ಕರಣಂನಿತ್ಯಂಗೀತಾಯಾಂರಮತೇಸದಾ॥ಸ
ರ್ವಾಗ್ನಿಕಸ್ಸದಾಜಾಪೀಕ್ರಿಯಾವಾನ್ಸಚಪಂಡಿತಃ। ದರ್ಶನೀಯಸ್ಸಧನ
ವಾನ್ಸಯೋಗೀಜ್ಞಾನವಾನಪಿ ॥ ೪೦ ॥ ಸಏವಯಾಜ್ಞಿಕೋಯಾಜೀಸರ್ವ
ವೇದಾರ್ಥದರ್ಶಕಃ । ಗೀತಾಯಾಃಪುಸ್ತಕಂಯತ್ರನಿತ್ಯಪಾಠಶ್ಚವರ್ತ
ತೇ ॥ ತತ್ರಸರ್ವಾಣಿತೀರ್ಥಾನಿ ಪ್ರಯಾಗಾದೀನಿಭೂತಲೇ । ನಿವಸಂತಿಸ
ದಾದೇಹೇದೇಹಶೇಷೇಪಿಸರ್ವದಾ ॥ ಸರ್ವೇದೇವಾಶ್ಚಋಷಯೋಯೋಗಿ
ನಃಪನ್ನಗಾಶ್ಚಯೇ । ಗೋಪಾಲಬಾಲಕೃಷ್ಣೋಪಿನಾರದಧ್ರುವಪಾ
ರ್ಷದೈಃ ॥ ಸಹಾಯೋಜಾಯತೇ ಶೀಘ್ರಂ ಯತ್ರಗೀತಾಪ್ರವರ್ತತೇ ।
ಯತ್ರಗೀತಾವಿಚಾರಶ್ಚ ಪಠನಂಪಾಠನಂತಥಾ ॥ ತತ್ರಾಹಂನಿಶ್ಚಿತಂ
ಪೃಥ್ವಿನಿವಸಾಮಿಸದೈವಹಿ । ಗೀತಾಮೇಹೃದಯಂಪಾರ್ಥ ಗೀತಾಮೇಸಾ
ರಮುತ್ತಮಂ ॥೪೫॥
ಗೀತಾಮೇಜ್ಞಾನಮತ್ಯುಗ್ರಂಗೀತಾಮೇಜ್ಞಾನಮವ್ಯಯಂ । ಗೀತಾಮೇ
ಚೋತ್ತಮಂಸ್ಥಾನಂಗೀತಾಮೇಪರಮಂಪದಂ ॥ ಗೀತಾಮೇಪರಮಂಗು
ಹ್ಯಂಗೀತಾಮೇಪರಮೋಗುರುಃ । ಗೀತಾಶ್ರಯೇಹಂತಿಷ್ಠಾಮಿ ಗೀತಾ
ಮೇಪರಮಂಗೃಹಂ।ಗೀತಾಜ್ಞಾನಂಸಮಾಶ್ರಿತ್ಯತ್ರಿಲೋಕೀಂಪಾಲಯಾ
ಮ್ಯಹಂ। ಗೀತಾಮೇಪರಮಾವಿದ್ಯಾಬ್ರಹ್ಮರೂಪಾನಸಂಶಯಃ ॥ ಅ
ರ್ಧಮಾತ್ರಾಕ್ಷರಾನಿತ್ಯಮನಿರ್ವಾಚ್ಯಪದಾತ್ಮಿಕಾ । ಗೀತಾನಾಮಾನಿವ
ಕ್ಷ್ಯಾಮಿ ಗುಹ್ಯಾನಿ ಶೃಣುಪಾಂಡವ ॥ ಕೀರ್ತನಾತ್ಸರ್ವಪಾಪಾನಿ ವಿಲ
ಯಂಯಾಂತಿತತ್ಕ್ಷಣಾತ್। ಗೀತಾಗಂಗ ಚಗಾಯತ್ರೀಸೀತಾಸತ್ಯಾ
ಪತಿವ್ರತಾ ॥ ೫೦ ॥ ಬ್ರಹ್ಮಾವಲೀಬ್ರಹ್ಮವಿದ್ಯಾತ್ರಿಸಂಧ್ಯಾಮುಕ್ತಿಗೇ
ಹಿನೀ । ಅರ್ಧಮಾತ್ರಾಚಿದಾನಂದಾಭವಘ್ನೀಭ್ರಾಂತಿನಾಶಿನೀ॥ ವೇದತ್ರ
ಯೀಪರಾನಂತಾತತ್ತ್ವಾರ್ಥಜ್ಞಾನಮಂಜರೀ । ಇತ್ಯೇತಾನಿಜಪೇನ್ನಿ
ತ್ಯಂನರೋನಿಶ್ಚಲಮಾನಸಃ ॥ ಜ್ಞಾನಸಿದ್ಧಿಂಲಭೇಚ್ಛೀಘ್ರಂತಥಾಂತೇ

ಪರಮಂಪದಂ॥ಪಾಠೇಽಸಮರ್ಥಸ್ಸಂಪೂರ್ಣೇತದರ್ಧಂಪಾಠಮಾಚರೇತ್॥
ತದಾಗೋದಾನಜಂಪುಣ್ಯಂಲಭತೇನಾತ್ರಸಂಶಯಃ॥ ತ್ರಿಭಾಗಂಪಠಮಾ
ನಸ್ತು ಸೋಮಯಾಗಫಲಂಲಭೇತ್ ॥ ಷಡಂಶಂಜಾಪಮಾನಸ್ತುಗಂಗಾ
ಸ್ನಾನಫಲಂಲಭೇತ್ ।ತಥಾಧ್ಯಾಯದ್ವಯಂನಿತ್ಯಂಪಠಮಾನೋನಿರಂ
ತರಂ॥೫೫॥ ಇಂದ್ರಲೋಕಮವಾಪ್ನೋತಿಕಲ್ಪಮೇಕಂವಸೇದ್ಧ್ರುವಂ॥
ಏಕಮಧ್ಯಾಯಕಂನಿತ್ಯಂಪಠತೇಭಕ್ತಿಸಂಯುತಃ ॥ ರುದ್ರಲೋಕಮ
ವಾಪ್ನೋತಿಗಣೋಭೂತ್ವಾವಸೇಚ್ಚಿರಂ । ಅಧ್ಯಾಯಾರ್ಧಂಚಪಾದಂ
ವಾನಿತ್ಯಂಯಃಪಠತೇಜನಃ ॥ ಸಮೇತಿರವಿಲೋಕಂಚಮನ್ವಂತರಸ
ಮಾಶ್ಶತಂ ॥ ಗೀತಾಯಾಶ್ಶ್ಲೋಕದಶಕಂಸಪ್ತಪಂಚಚತುಷ್ಟಯಂ॥
ತ್ರಿದ್ವ್ಯೇಕಮೇಕಮರ್ಧಂವಾಶ್ಲೋಕಾನಾಂಯಃಪಠೇನ್ನರಃ । ಚಂ
ದ್ರಲೋಕಮವಾಪ್ನೋತಿ ವರ್ಷಾಣಾಮಯುತಂತಥಾ ॥ ಗೀತಾರ್ಥ
ಮೇಕಪಾದಂಚಶ್ಲೋಕಮಧ್ಯಾಯಮೇವಚ । ಸ್ಮರಂಸ್ತ್ಯಕ್ತ್ವಾಜ
ನೋದೇಹಂಪ್ರಯಾತಿಪರಮಂಪದಂ ॥ ೬೦ ॥ ಗೀತಾರ್ಥಂವಾಪಿಪಾಠಂ
ವಾಶೃಣುಯಾದಂತಕಾಲತಃ । ಮಹಾಪಾತಕಯುಕ್ತೋಽಪಿಮುಕ್ತಿಭಾ
ಗೀಭವೇನ್ನರಃ॥ಗೀತಾಪುಸ್ತಕಸಂಯುಕ್ತಃಪ್ರಾಣಾಂಸ್ತ್ಯಕ್ತ್ವಾಪ್ರಯಾ
ತಿಯಃ । ವೈಕುಂಠಂಸಮವಾಪ್ನೋತಿವಿಷ್ಣುನಾಸಹಮೋದತೇ ॥ ಗೀತಾ
ಧ್ಯಾಯಸಮಾಯುಕ್ತೋ ಮೃತೋಮಾನುಷತಾಂವ್ರಜೇತ್ । ಗೀ
ತಾಭ್ಯಾಸಂಪುನಃಕೃತ್ವಾ ಲಭತೇಮುಕ್ತಿಮುತ್ತಮಾಂ ॥ ಗೀತೇತ್ಯು
ಚ್ಚಾರಸಂಯುಕ್ತೋ ಮ್ರಿಯಮಾಣೋಗತಿಂಲಭೇತ್ । ಯದ್ಯತ್ಕ
ರ್ಮಚಸರ್ವತ್ರ ಗೀತಾಪಾಠಪ್ರಕೀರ್ತಿಮತ್ ॥ ತತ್ತತ್ಕರ್ಮಚನಿರ್ದೋ
ಷಂಭೂತ್ವಾ ಪೂರ್ಣತ್ವ ಮಾಪ್ನುಯಾತ್ । ಪಿತೄನುದ್ದಿಶ್ಯ ಯ
ಶ್ಶ್ರಾದ್ಧೇ ಗೀತಾಪಾಠಂಕರೋತಿವೈ ॥ ೬೫ ॥ ಸಂತುಷ್ಟಾಃಪಿತರ
ಸ್ತಸ್ಯ ನಿರಯಾದ್ಯಾಂತಿಸ್ವರ್ಗತಿಂ । ಗೀತಾಪಾಠೇನಸಂತುಷ್ಟಾಃಪಿತರ
ಶ್ಶ್ರಾದ್ಧ ತರ್ಪಿತಾಃ ॥ ಪಿತೃಲೋಕಂಪ್ರಯಾಂತ್ಯೇವಪುತ್ರಾಶೀ
ರ್ವಾದತತ್ಪರಾಃ । ಗೀತಾಪುಸ್ತಕದಾನಂಚಧೇನುಪುಚ್ಛಸಮನ್ವಿತಂ ॥
ಕೃತ್ವಾಚತದ್ದಿನೇಸಮ್ಯಕ್ ಕೃತಾರ್ಥೋಜಾಯತೇಜನಃ । ಪುಸ್ತಕಂ
ಹೇಮಸಂಯುಕ್ತಂಗೀತಾಯಾಶ್ಶ್ರದ್ಧಮಾನಸಃ ॥ ದತ್ವಾವಿಪ್ರಾಯ
ವಿದುಷೇಜಾಯತೇನಪುನರ್ಭವಃ।ಶತಪುಸ್ತಕದಾನಂಚಗೀತಾಯಾಃಪ್ರಕ
ರೋತಿಯಃ ॥ ಸಯಾತಿಬ್ರಹ್ಮಸದನಂಪುನರಾವೃತ್ತಿದುರ್ಲಭಂ । ಗೀ

ತಾದಾನಪ್ರಭಾವೇನ ಸಪ್ತಕಲ್ಪಾವಧಿಂಸಮಾಃ ॥೭೦॥ ವಿಷ್ಣುಲೋಕೇ
ಮವಾಪ್ನೋತಿ ವಿಷ್ಣುನಾಸಹಮೋದತೇ । ಸಮ್ಯಕ್ಶ್ರುತ್ವಾಚಗೀತಾರ್ಥಂ
ಪುಸ್ತಕಂಯಃಪ್ರದಾಪಯೇತ್ ॥ ತಸ್ಮೈಪ್ರೀತೋಽಭಗವಾನ್ದದಾತಿ
ಮನಸೇಪ್ಸಿತಂ । ದೇಹಂಮಾನುಷಮಾಶ್ರಿತ್ಯಚಾತುರ್ವರ್ಣ್ಯೇಷುಭಾರ
ತ॥ ನಶೃಣೋತಿನಪಠತಿ ಗೀತಾಮಮೃತರೂಪಿಣೀಂ। ಹಸ್ತಾತ್ತ್ಯಕ್ತ್ವಾ
ಮೃತಂಪ್ರಾಪ್ತಂಕಷ್ಟಾತ್ಕ್ಷ್ವೇಡಂಸಮಶ್ನುತೇ ॥ಪೀತ್ವಾಗೀತಾಮೃತಂ
ಲೋಕೇಲಬ್ಧ್ವಾಮೋಕ್ಷಂಸುಖೀಭವೇತ್। ಜನೈಸ್ಸಂಸಾರದುಃಖಾರ್ತೈ
ರ್ಗೀತಾಜ್ಞಾನಂಚಯೈಶ್ಶ್ರುತಂ ॥ ಸಂಪ್ರಾಪ್ತಮಮೃತಂತೈಶ್ಚಗತಾ
ಸ್ತೇಸದನಂಹರೇಃ । ಗೀತಾಮಾಶ್ರಿತ್ಯಬಹವೋಭೂಭುಜೋಜನಕಾದ
ಯಃ ॥೭೫॥ ನಿರ್ಧೂತಕಲ್ಮಷಾಲೋಕೇ ಗತಾಸ್ತೇಪರಮಂಪದಂ । ಗೀ
ತಾಸುನವಿಶೇಷೋಸ್ತಿಜನೇಷೂಚ್ಚಾವಚೇಷುಚ ॥ ಜ್ಞಾನೇಷ್ವೇವಸಮ
ಗ್ರೇಷು ಸಮಾಬ್ರಹ್ಮಸ್ವರೂಪಿಣೀ । ಯೋಭ್ಯಸೂಯತಿ ಗೀತಾಂಚ
ಯೋನಿಂದಾಂಮಾಂಕರೋತಿಚ ॥ ಸಮೇತಿನರಕಂಘೋರಂ ಯಾವದಾ
ಭೂತಸಂಪ್ಲವಂ । ಅಹಂಕಾರೇಣಮೂಢಾತ್ಮಾಗೀತಾರ್ಥಂನೈವಮನ್ಯ
ತೇ ॥ ಕುಂಭೀಪಾಕೇಷುಪಚ್ಯೇತ ಯಾವತ್ಕಲ್ಪಕ್ಷಯೋಭವೇತ್ । ಗೀ
ತಾರ್ಥಂವಾಚ್ಯಮಾನಂಯೋನಶೃಣೋತಿಸಮೀಪತಃ॥ ಶ್ವಸೂಕರಭವಾಂ
ಯೋನಿಮನೇಕಾಂಸೋಧಿಗಚ್ಛತಿ । ಚೌರ್ಯಂಕೃತ್ವಾಚಗೀತಾಯಾಃಪು
ಸ್ತಕಂಯಸ್ಸಮಾನಯೇತ್ ॥೮೦॥ನತಸ್ಯಚಫಲಂಕಿಂಚಿತ್ಪಠನಾಚ್ಚ
ವೃಥಾಭವೇತ್ । ಯಶ್ಶ್ರುತ್ವಾನೈವಗೀತಾರ್ಥಂ ಮೋದತೇಪರಮಾರ್ಥ
ತಃ ॥ ನೈವಾಪ್ನೋತಿಫಲಂಲೋಕೇ ಪ್ರಮಾದಾಚ್ಚವೃಥಾಶ್ರಮಃ । ಗೀ
ತಾಂಶ್ರುತ್ವಾಹಿರಣ್ಯಂಚಪಟ್ಟಾಂಬರವಿವೇಷ್ಟನಂ ॥ ನಿವೇದಯೇ
ಚ್ಚತದ್ವಕ್ತ್ರೇಪ್ರೀತಯೇಪರಮಾತ್ಮನಃ । ವಾಚಕಂಪೂಜಯೇದ್ಭ
ಕ್ತ್ಯಾದ್ರವ್ಯವಸ್ತ್ರಾದ್ಯುಪಸ್ಕರೈಃ ॥ ಅನೇಕೈರ್ಬಹುಧಾಪ್ರೀತ್ಯಾತು
ಷ್ಯತಾಂಭಗವಾನ್ಹರಿಃ॥ಮಾಹಾತ್ಮ್ಯಮೇತದ್ಗೀತಾಯಾಃಕೃಷ್ಣಪ್ರೋ
ಕ್ತಂಪುರಾತನಂ॥ ಗೀತಾಂತೇಪಠತೆಯಸ್ತುಯಥೋಕ್ತಫಲಭಾಗ್ಭವೇತ್।
ಗೀತಾಯಾಃಪಠನಂಕೃತ್ವಾಮಾಹಾತ್ಮ್ಯಂನೈವಯಃಪಠೇತ್॥೮೫॥ವೃಥಾ
ಪಾಠಫಲಂತಸ್ಯಶ್ರಮಏವಉದಾಹೃತಃ । ಏತನ್ಮಾಹಾತ್ಮ್ಯಸಂಯುಕ್ತಂ
ಗೀತಾಪಾಠಂಕರೋತಿಯಃ॥ಶ್ರದ್ಧಯಾಯಶ್ಶೃಣೋತ್ಯೇವದುರ್ಲಭಾಂಗ
ತಿಮಾಪ್ನುಯಾತ್ । ಶ್ರುತ್ವಾಪಠಿತ್ವಾಗೀತಾಂಚಮಾಹಾತ್ಮ್ಯಂಯಶ್ಶೃ
ಣೋತಿಚ ॥ ತಸ್ಯಪುಣ್ಯಫಲಂಲೋಕೇಭವೇದ್ಧಿಮನಸೇಪ್ಸಿತಂ ॥೮೮॥

ಇತಿ ಶ್ರೀಭಗವದ್ಗೀತಾ ಮಾಹಾತ್ಮ್ಯಂ ಸಂಪೂರ್ಣಮ್.



ಶ್ರಿಯೈ ಶ್ರೀರುಕ್ಮಿಣ್ಯೈನಮಃ.

ಶ್ರೀಕೃಷ್ಣಾಯ ನಮೋನಮಃ.

# ಶ್ರೀಮದ್ಗೀತಾರ್ಥ ಸಾರದ ತೃತೀಯ ಸಂಪುಟದ

## ವಿಷಯ ಸೂಚಿಕೆಯು.



| ವಿಷಯಸಂಖ್ಯೆ. | ವಿಷಯಗಳು. | ಪುಟಸಂಖ್ಯೆ. |
|---|---|---|
| ೨೧ | ಜೀವಬ್ರಹ್ಮೈಕ್ಯನಿರಾಸವು ... | ೩೬ |
| ೨೨ | ಶ್ರೀರಾಮಾನುಜಸಿದ್ಧಾಂತದಲ್ಲಿ ಸರ್ವಶ್ರುತಿಗಳಿಗೂ ಅವಿರೋಧ ಸಾಧನವು ... | ೩೭ |
| ೨೩ | ವಿಶಿಷ್ಟಾದ್ವೈತ ಶಬ್ದಾರ್ಥವು | ೪೦ |
| ೨೪ | ಪರಮಾತ್ಮನಿಗೆ ಕಾರ್ಯಕಾರಣತ್ವಸ್ಥಾಪನವು | ೪೧ |
| ೨೫ | ಸುಗುಣ ನಿರ್ಗುಣ ಶ್ರುತಿಗಳ ತಾತ್ಪರ್ಯವು | ೪೨ |
| ೨೬ | ಬ್ರಹ್ಮಕ್ಕೆ ಕಲ್ಯಾಣಗುಣ ಸಿದ್ಧಿತ್ವಸ್ಥಾಪನವು | ,, |
| ೨೭ | ಅದ್ವೈತ ಶ್ರುತಿಗಳ ನಿರ್ವಾಹವು | ೪೩ |
| ೨೮ | ಚಿದಚಿದೀಶ್ವರರೆಂಬ ತತ್ವತ್ರಯಗಳ ಪರಸ್ಪರ ಭೇದವು | ,, |
| ೨೯ | ಕ್ಷೇತ್ರಕ್ಷೇತ್ರಜ್ಞಸ್ವರೂಪ ವಿವರಣಾರಂಭವು | ೪೪ |
| ೩೦ | ಪ್ರಕೃತಿಮಹದಹಂಕಾರಾದಿ ಕ್ಷೇತ್ರವಿಕಾರಗಳ ವರ್ಣನವು | ೫೦ |
| ೩೧ | ಅಮಾನಿತ್ವಾದಿ ಗುಣಗಳ ಸ್ವರೂಪ ಪ್ರದರ್ಶನವು | ೫೫ |
| ೩೨ | ಜ್ಞಾನಜ್ಞೇಯಗಳ ಸ್ವರೂಪವು | ೬೨ |
| ೩೩ | ಜ್ಞಾನಜ್ಞೇಯಗಳನ್ನು ತಿಳಿಯುವುದರಿಂದುಂಟಾದ ಫಲವು | ೭೯ |
| ೩೪ | ಜೀವನಿಂದ ಆಕ್ರಮಿಸಲ್ಪಟ್ಟ ಪ್ರಕೃತಿಗೇ ಕಾರಣತ್ವ ಪ್ರದರ್ಶನವು | ೮೩ |
| ೩೫ | ಜೀವನು ಪ್ರಕೃತಿ ಸಂಬಂಧದಿಂದಲೇ ವಿಷಯಾನುಭವವನ್ನು ಮಾಡುವ ವಿಷಯ | ೮೭ |
| ೩೬ | ಜೀವನು ಉಚ್ಚನೀಚಗಳಾದ ಜನ್ಮಗಳನ್ನು ಹೊಂದುವಿಕೆಗೆ ಕಾರಣವು | ೮೮ |
| ೩೭ | ತತ್ವತ್ರಯ ಪರಿಜ್ಞಾನದ ಫಲವು | ೯೫ |
| ೩೮ | ಆತ್ಮದರ್ಶನಕ್ಕೆ ಯೋಗ್ಯಗಳಾದ ಉಪಾಯಗಳು | ೧೦೦ |
| ೩೯ | ಅವಿದ್ಯಾನಿವರ್ತಕವಾದ ಆತ್ಮಜ್ಞಾನೋಪದೇಶವು | ೧೦೫ |
| ೪೦ | ಸರ್ವವಸ್ತುಗಳಲ್ಲಿರುವ ಪರಮಾತ್ಮನಿಗೆ ಏಕಾಕಾರತ್ವ ನಿರೂಪಣವು | ೧೦೭ |
| ೪೧ | ಬ್ರಹ್ಮಜ್ಞಾನದ ಫಲವು | ೧೦೮ |
| ೪೨ | ಸರ್ವಕಾರ್ಯಗಳೂ ಪ್ರಕೃತಿಯಿಂದ ಮಾಡಿಸಲ್ಪಡುವ ವಿಷಯವು | ೧೧೧ |
| ೪೩ | ದೇಹಸಂಬಂಧ ಪ್ರಯುಕ್ತಗಳಾದ ದೋಷಗಳು ಆತ್ಮವನ್ನಂಟಲಾರವೆಂಬ ವಿಷಯ | ೧೧೩ |

| ವಿಷಯಸಂಖ್ಯೆ. | ವಿಷಯಗಳು. | ಪುಟಸಂಖ್ಯೆ. |
|---|---|---|
| ೪೪ | ಕ್ಷೇತ್ರವನ್ನು ಕ್ಷೇತ್ರದಲ್ಲಿರುವ ಆತ್ಮನು ಪ್ರಕಾಶಪಡಿಸುವಿಕೆಯು | ೧೧೬ |
| ೪೫ | ಅದ್ವೈತಸಿದ್ಧಾಂತಾನುಸಾರಿಯಾದ ಸಂಗ್ರಹಶ್ಲೋಕವು | ೧೧೯ |
| ೪೬ | ಶ್ರೀಮದ್ಯಾಮುನಾಚಾರ್ಯರ ಸಂಗ್ರಹಶ್ಲೋಕವು | ೧೨೦ |
| ೪೭ | ಶ್ರೀಮದ್ವೇದಾಂತ ಮಹಾಗುರುಗಳ ಶ್ರೀಮದ್ಗೀತಾರ್ಥಸಂಗ್ರಹಗಾಥೆಯು | ೧೨೧ |
| ೪೮ | ೧೪ನೇ ಅಧ್ಯಾಯಾರಂಭವು | ೧೨೨ |
| ೪೯ | ,, ಶಂ॥ ಭಾ॥ ಪೀಠಿಕೆಯು | ,, |
| ೫೦ | ,, ರಾ॥ ಭಾ॥ ಪೀಠಿಕೆಯು | ,, |
| ೫೧ | ,, (ಶ್ರೀ॥ ಗೀ॥ ವಿ) ಇವರ ಪೀಠಿಕೆಯು | ,, |
| ೫೨ | ಬ್ರಹ್ಮಜ್ಞಾನಪ್ರಭಾವವು | ೧೨೪ |
| ೫೩ | ಕ್ಷೇತ್ರಜ್ಞರನ್ನು ಕ್ಷೇತ್ರಗಳೊಡನೆ ಸಂಬಂಧಿಸುವಿಕೆಯು | ೧೨೬ |
| ೫೪ | ಸಮಸ್ತವಾದ ಸೃಷ್ಟಿಗೂ ಪರಮಾತ್ಮನಿಗೇನೆ ಮುಖ್ಯಕಾರಣತ್ವಪ್ರದರ್ಶನವು | ೧೨೮ |
| ೫೫ | ಸತ್ವಾದಿಗುಣಗಳು ಜೀವನಿಗೆ ಬಂಧಕಗಳಾಗುವ ಪ್ರಕಾರದ ಉಪನ್ಯಾಸವು | ೧೨೮ |
| ೫೬ | ಸತ್ವಗುಣವ್ಯಾಪಾರವು | ೧೩೧ |
| ೫೭ | ರಜೋಗುಣವ್ಯಾಪಾರವು | ೧೩೩ |
| ೫೮ | ತಮೋಗುಣವ್ಯಾಪಾರವು | ೧೩೪ |
| ೫೯ | ಸತ್ವಾದಿಗುಣಗಳು ಅಭಿವೃದ್ಧಿಯಾಗುವಪ್ರಕಾರಗಳು | ೧೩೬ |
| ೬೦ | ಒಬ್ಬನಲ್ಲಿ ಸತ್ವಾದಿಗುಣಗಳು ಅಭಿವೃದ್ಧಿಯಾಗಿರುವುದನ್ನು ಕಂಡುಹಿಡಿಯುವಕ್ಕೆ ತಕ್ಕಗುರುತುಗಳು | ೧೩೮ |
| ೬೧ | ಸತ್ವಾದಿಗುಣಗಳು ಪ್ರಬಲವಾಗಿದ್ದಾಗ ಆಗತಕ್ಕ ಕಾರ್ಯಗಳ ನಿರೂಪಣವು | ೧೪೧ |
| ೬೨ | ಸತ್ವಾದಿಗುಣ ತ್ರಯಗಳನ್ನು ಅತಿಕ್ರಮಿಸುವ ಪ್ರಕಾರೋಪದೇಶವು | ೧೫೧ |
| ೬೩ | ಗುಣಾತೀತನ ನಡತೆಯು | ೧೫೩ |
| ೬೪ | ಅದ್ವೈತಸಿದ್ಧಾಂತಿಗಳ ೧೫ನೇ ಅಧ್ಯಾಯದ ಸಂಗ್ರಹಶ್ಲೋಕವು | ೧೫೯ |

ವಿಷಯ ಸೂಚಿಕಾ ಸಂಪೂರ್ಣವು.

ಶ್ರೀಯೈನಮಃ.

ಶ್ರೀಮತೇಶ್ರೀಪಾರ್ಥಸಾರಥಯೇನಮಃ.

# ಶ್ರೀಮದ್ಗೀತಾರ್ಥಸಾರೇತ್ರಯೋದಶಾಧ್ಯಾಯಪ್ರಾರಂಭಃ.

## ತೃತೀಯಷಟ್ಕಮ್.

**ಅರ್ಜುನಉವಾಚ ॥ ಪ್ರಕೃತಿಂಪುರುಷಂಚೈವಕ್ಷೇತ್ರಂಕ್ಷೇತ್ರಜ್ಞಮೇವಚ । ಏತದ್ವೇದಿತುಮಿಚ್ಛಾಮಿಜ್ಞಾನಂಜ್ಞೇಯಂಚಕೇಶವ ॥೧॥**

(ಗೀ॥ ವಿ॥ ಪಾಠಃ) ಪ॥ ಅರ್ಜುನಃ- ಉವಾಚ॥ ಪ್ರಕೃತಿಂ- ಪುರುಷಂ- ಚ- ಏವ- ಕ್ಷೇತ್ರಂ- ಕ್ಷೇತ್ರಜ್ಞಂ- ಏವ- ಚ । ಏತತ್- ವೇದಿತುಂ- ಇಚ್ಛಾಮಿ- ಜ್ಞಾನಂ- ಜ್ಞೇಯಂ- ಚ- ಕೇಶವ ॥

ಅ॥ ಅರ್ಜುನಉವಾಚ- ಅರ್ಜುನನು ಹೇಳಿದನು, ಹೇಕೇಶವ- ಎಲೈ ಶ್ರೀಕೃಷ್ಣಸ್ವಾಮಿಯೇ, ಪ್ರಕೃತಿಂ- ಪ್ರಕೃತಿಯನ್ನೂ, ಪುರುಷಂಚೈವ- ಪುರುಷನನ್ನೂ, ಕ್ಷೇತ್ರಂ- ಕ್ಷೇತ್ರವನ್ನೂ ಕ್ಷೇತ್ರಜ್ಞಮೇವಚ- ಕ್ಷೇತ್ರಜ್ಞನನ್ನೂ, ಜ್ಞಾನಂ- ಜ್ಞಾನವನ್ನೂ, ಜ್ಞೇಯಂಚ- ತಿಳಿಯತಕ್ಕದ್ದನ್ನೂ, ಏತತ್- ಇವುಗಳನ್ನು, ವೇದಿತುಂ- ತಿಳಿದುಕೊಳ್ಳುವದಕ್ಕಾಗಿ. ಇಚ್ಛಾಮಿ- ಇಚ್ಛೈಸುವೆನು ॥೧॥

(ಈ ಶ್ಲೋಕವು (ರಾ॥ ಶ್ರೀ॥ ಶಂ) ಮೊದಲಾದ ಯಾವ ಭಾಷ್ಯಗಳಲ್ಲಿಯೂ ವ್ಯಾಖ್ಯಾತವಾಗಲಿಲ್ಲವು. ಈ ಶ್ಲೋಕವು ಸೇರಿದರೆ ಶ್ರೀಭಗವದ್ಗೀತೆಯು (೭೦೧)ಶ್ಲೋಕಗಳಾಗುತ್ತವೆ. ಶಂ॥ಭಾ ಅವತಾರಿಕೆಯಲ್ಲಿಯೂ ೭ನೂರು ಶ್ಲೋಕಗಳೆ ಈ ಭಗವದ್ಗೀತಾ ಮಹಾ ಪ್ರಬಂಧದಲ್ಲಿರುತ್ತವೆ ಎಂಬದಾಗಿ ಸ್ಪಷ್ಟೀಕೃತವಾಗಿರುವುದು. ಆದರೂ ಕೆಲವು ಪುರಾತನ ಪುಸ್ತಕಗಳಲ್ಲಿರುವುದರಿಂದಲೂ (ಗೀ॥ ವಿ) ವ್ಯಾಖ್ಯಾತೃಗಳು ಇದನ್ನು ಸೇರಿಸಿ ವ್ಯಾಖ್ಯಾನ ಮಾಡಿರುವುದರಿಂದಲೂ ಇಲ್ಲಿ ಈ ಶ್ಲೋಕಕ್ಕೆ ವಿವೃತಿ ಮಾಡಲ್ಪಟ್ಟಿತು.)

(ಗೀ॥ ವಿ) ಪ್ರಥಮ ಷಟ್ಕದಲ್ಲಿ ಪ್ರಾಯಿಕವಾಗಿ ಜ್ಞಾನಸಾಧನವಾದದ್ದನ್ನೇ ("ತ್ರೈಗುಣ್ಯವಿಷಯಾವೇದಾಃ" ೨। ೪೫)ಇತ್ಯಾದಿಗಳಿಂದ

ಪ್ರತಿಪಾದಿಸಿದನು. ದ್ವಿತೀಯ ಷಟ್ಕದಲ್ಲಿ ಜ್ಞೇಯವಾದ (ತಿಳಿಯಲ್ಪಡತಕ್ಕ) ಪರಮಾತ್ಮ ಸ್ವರೂಪವನ್ನು ಹೇಳಿದನು. ೭ನೇ ಅಧ್ಯಾಯದಲ್ಲಿ "ಭೂಮಿರಾಪೋನಲೋವಾಯುಃ" ಎಂಬಿದೇ ಮೊದಲಾದ ಶ್ಲೋಕಗಳಿಂದ ಕ್ಷೇತ್ರಸ್ವರೂಪವನ್ನೂ "ನತ್ವೇವಾಹಂ,, (೨।೧೨) ಎಂಬಿದೇ ಮೊದಲಾದ ಶ್ಲೋಕಗಳಿಂದ ಜೀವಸ್ವರೂಪವನ್ನೂ ಹೇಳಿದನು. ಈ ರೀತಿಯಾಗಿ ಅಲ್ಲಲ್ಲಿ ಹೇಳಲ್ಪಟ್ಟ ಜ್ಞಾನಜ್ಞೇಯ ಕ್ಷೇತ್ರಜೀವರುಗಳ ಸ್ವರೂಪಗಳನ್ನು ಬುದ್ಧ್ಯಾರೋಹಾರ್ಥವಾಗಿ ಸಂಕ್ಷೇಪದಿಂದ ಈ ಅಧ್ಯಾಯದಲ್ಲಿ ಹೇಳುತ್ತಾನೆ. ಪುರುಷನೆಂದರೆ ಜೀವನು. ಜ್ಞಾನಂ-ಜ್ಞಾನ ಸಾಧನವು. ॥೧॥

(ಈ ಶ್ಲೋಕವು ಬೆಳಗಾಂನಲ್ಲಿ ಮುದ್ರಿತವಾದ ಗೀತಾವಿವೃತಿಯಲ್ಲಿ ಮಾತ್ರ ವ್ಯಾಖ್ಯಾನ ಮಾಡಲ್ಪಟ್ಟದ್ದರೂ ಈ ಗ್ರಂಥವನ್ನು ನೋಡುವಂತವರ ಸೌಕರ್ಯಾರ್ಥವಾಗಿ ಮುಂದಿನ ಶ್ಲೋಕದಿಂದಲೆ ಶ್ಲೋಕ ಸಂಖ್ಯಾರಂಭವು ಮಾಡಲ್ಪಡುವುದು.)

ಶ್ರೀಭಗವಾನುವಾಚ ॥ ಇದಂಶರೀರಂಕೌಂತೇಯ
ಕ್ಷೇತ್ರಮಿತ್ಯಭಿಧೀಯತೆ। ಏತದ್ಯೋವೇತ್ತಿತಂಪ್ರಾ
ಹುಃಕ್ಷೇತ್ರಜ್ಞಮಿತಿತದ್ವಿದಃ ॥೧॥

ಪ॥ ಇದಂ- ಶರೀರಂ- ಕೌಂತೇಯ- ಕ್ಷೇತ್ರಂ- ಇತಿ- ಅಭಿಧೀಯತೆ। ಏತತ್- ಯಃ- ವೇತ್ತಿ- ತಂ- ಪ್ರಾಹುಃ- ಕ್ಷೇತ್ರಜ್ಞಂ- ಇತಿ- ತದ್ವಿದಃ ॥

ಅ॥ ಇದಂ ಶರೀರಂ- ಈ ಶರೀರವು, ಹೇಕೌಂತೇಯ- ಎಲೈ ಕುಂತೀಕುಮಾರನಾದ ಅರ್ಜುನನೆ, ಕ್ಷೇತ್ರಮಿತಿ- ಕ್ಷೇತ್ರವೆಂಬದಾಗಿ, ಅಭಿಧೀಯತೆ- ಹೇಳಲ್ಪಡುವುದು. ಏತತ್- ಈ ಕ್ಷೇತ್ರವನ್ನು, ಯಃ- ಯಾವನು, ವೇತ್ತಿ- ತಿಳಿಯುತ್ತಾನೆಯೊ? ತಂ- ಅವನನ್ನು, ಕ್ಷೇತ್ರಜ್ಞಮಿತಿ- ಕ್ಷೇತ್ರಜ್ಞನೆಂಬದಾಗಿ, ತದ್ವಿದಃ- ಆ ಕ್ಷೇತ್ರಕ್ಷೇತ್ರಜ್ಞರನ್ನು ತಿಳಿದವರು, ಪ್ರಾಹುಃ- ಹೇಳುವರು. .. ... ॥೧॥

(ಶಂ॥ ಭಾ॥) ಏಳನೇ ಅಧ್ಯಾಯದಲ್ಲಿ ಈಶ್ವರನ ಪರಾಪರಗಳೆಂಬ ದ್ವಿವಿಧವಾದ ಪ್ರಕೃತಿಯು ತಿಳಿಸಲ್ಪಟ್ಟಿತು. ಅವುಗಳಲ್ಲಿ ಸಂಸಾರ ಹೇತುವಾಗುವುದರಿಂಧ ಅಪರಾ ಎನ್ನಲ್ಪಡುವುದಾಗಿಯೂ ತ್ರಿಗುಣಾತ್ಮಕವಾಗಿಯೂ ಇರುವ ಪ್ರಕೃತಿಯು ("ಭೂಮಿರಾಪೋನಲೋವಾಯುಃ"

ಇತ್ಯಾದಿಗಳಿಂದ) ಯೆಂಟು ವಿಧಗಳಾಗಿ ವಿಭಜಿಸಲ್ಪಟ್ಟಿತು. ಪರಾ ಎಂಬ ಪ್ರಕೃತಿಯಾದ ಕ್ಷೇತ್ರಜ್ಞನೆನ್ನಲ್ಪಡುವಂತವನು ಈಶ್ವರ ಸ್ವರೂಪಿಯಾದ ಜೀವನೆನ್ನಲ್ಪಡುವನೆಂದರಿಯಬೇಕು. ಈ ಯರಡು ಪ್ರಕೃತಿಗಳ ಮೂಲಕವಾಗಿಯೆ ಈಶ್ವರನು ಜಗದುತ್ಪತ್ತಿಸ್ಥಿತಿಲಯ ಕಾರಣತ್ವವನ್ನು ಹೊಂದಿರುವನು. ಕ್ಷೇತ್ರಕ್ಷೇತ್ರಜ್ಞರೂಪಗಳಾದ ಯರಡು ಪ್ರಕೃತಿಗಳನ್ನು ನಿರೂಪಿಸಿ ತದ್ದ್ವಾರಾ ಕ್ಷೇತ್ರಕ್ಷೇತ್ರಜ್ಞರಿಗಾಶ್ರಯವಾದ ಈಶ್ವರನ ಸ್ವರೂಪವನ್ನು ನಿಶ್ಚಯಿಸಿ ಹೇಳುವದಕ್ಕಾಗಿ ಕ್ಷೇತ್ರಾಧ್ಯಾಯವೆಂಬುವುದು ಆರಂಭಿಸಲ್ಪಡುವದು.

ಕಿಂಚ. ಹಿಂದಿನ (೧೨ನೆ) ಅಧ್ಯಾಯದಲ್ಲಿ „ಅದ್ವೇಷ್ಟಾಸರ್ವಭೂತಾನಾಂ” (೧೨॥ ೧೩॥) ಎಂಬೀ ಶ್ಲೋಕದ ಮೊದಲು ಆ ಅಧ್ಯಾಯದ ಪೂರ್ತಿಪರ್ಯಂತವಾಗಿ ಬ್ರಹ್ಮಜ್ಞಾನಿಗಳಾದ ಸನ್ಯಾಸಿಗಳ ನಿಷ್ಠೆಯು (ಅನುಷ್ಠಾನ ಪ್ರಕಾರವು) ಈ ರೀತಿಯಾಗಿರುವುದೆಂದು ಹೇಳಲ್ಪಟ್ಟಿತು. ಎಂತಹ ತತ್ವಜ್ಞಾನದೊಡನೆ ಕೂಡಿದವರಾಗಿ ಹಿಂದಿನ ಅಧ್ಯಾಯದಲ್ಲಿ ಹೇಳಲ್ಪಟ್ಟ ಧರ್ಮಗಳನ್ನನುಷ್ಠಿಸುವುದರಿಂದ ಭಗವಂತನಿಗೆ ಇಷ್ಟರೆನ್ನಲ್ಪಡುವರೊ ಆ ಅಂಶವನ್ನು ನಿರ್ಣಯಿಸಿ ಹೇಳುವುದಕ್ಕಾಗಿ ಈ ಅಧ್ಯಾಯವಾರಂಭಿಸಲ್ಪಡುವದು.

ಎಲೈ ಅರ್ಜುನನೆ! ತ್ರಿಗುಣಾತ್ಮಿಕೆಯಾದ ಪ್ರಕೃತಿಯು ಸಮಸ್ತಕಾರ್ಯ ಕಾರಣ ಸ್ವರೂಪಗಳಾಗಿ ಪರಿಣಮಿಸಿ ಜೀವಾತ್ಮನಿಗೆ ಭೋಗಮೋಕ್ಷಗಳೆಂಬ ಪ್ರಯೋಜನಗಳನ್ನುಂಟುಮಾಡುವದಕ್ಕಾಗಿ ದೇಹೇಂದ್ರಿಯಾದ್ಯಾಕಾರವಾಗಿ ಯೇರ್ಪಟ್ಟಿರುವುದು. ಈರೀತಿಯಾಗಿ ಯೇರ್ಪಟ್ಟಿರುವುದೇ ಶರೀರವೆನ್ನಲ್ಪಡುವುದು. ಅಂತಹ ಈ ಶರೀರವೇ ಕ್ಷೇತ್ರವೆನ್ನಲ್ಪಡುವುದು. ಆರೀತಿಯಾಗಿ ಈ ಶರೀರವೇ ಕ್ಷೇತ್ರವೆನ್ನಲ್ಪಡುವುದೆಂಬ ಸ್ವಭಾವಸಿದ್ಧವಾದ ಜ್ಞಾನದಿಂದಲಾದರೂ ಉಪದೇಶದಿಂದ ಲಭ್ಯವಾದ ಜ್ಞಾನದಿಂದಲಾದರೂ ಪಾದಾದಿ ಶಿರಃಪರ್ಯಂತವಾದ ಅವಯವಗಳೊಡನೆ ಕೂಡಿರುವ ಶರೀರವನ್ನು ತನಿಗಿಂತಲೂ ಬೇರೆ ಯೆಂಬದಾಗಿ ಯಾವನು ತಿಳಿಯುತ್ತಾನೋ ಅಂತಹ (ದೇಹಾತ್ಮವಿವೇಕವುಳ್ಳವನೆ) ಕ್ಷೇತ್ರಜ್ಞನೆನ್ನಲ್ಪಡುವನೆಂಬದಾಗಿ ಕ್ಷೇತ್ರಕ್ಷೇತ್ರಜ್ಞ ವಿಭಾಗಗಳನ್ನರಿತ ಋಷಿಯರು ಹೇಳುವರು. (ಕ್ಷೇತ್ರನಿರುಕ್ತಿ)— ಕ್ಷತ- ಪ್ರಹಾರಗಳ ದೆಸೆಯಿಂದ, ತ್ರ- ತಾ

ಮಾಡುವುದರಿಂದಲೂ, ಜೀವನು ಹೊರಗೆ ಹೊರಟು ಹೋದಮೇಲೆ ನಶಿಸಿ
ಹೋಗುವುದರಿಂದಲೂ ರೋಗಾದಿಗಳಿಂದ ಕ್ಷೀಣಿಸುವುದರಿಂದಲೂ, (ಕೃಶ
ವಾಗುವುದರಿಂದಲೂ) ಭೂಮಿಯಲ್ಲಿ ಹೇಗಾದರೆ ಬೀಜಗಳು ಹುಟ್ಟು
ವುವೋ ಅದರಂತೆ ಈ ಶರೀರದಲ್ಲಿ ಕರ್ಮರೂಪ ಫಲವು ಸಿದ್ಧಿಸುವುದರಿಂದಲೂ
(ಎಂದರೆ ಸಂಸಾರವೆಂಬ ವೃಕ್ಷಕ್ಕೆ ಉತ್ಪತ್ತಿ ಸ್ಥಾನವಾಗಿರುವುದರಿಂದಲೂ)
ಈ ಶರೀರವು ಕ್ಷೇತ್ರವೆನ್ನಲ್ಪಡುವುದೆಂದರಿಯಬೇಕು. ಇಲ್ಲಿನ ಇತಿಶ
ಬ್ದವು ಏವಂ ಶಬ್ದಾರ್ಥಕವಾಗಿರುವುದು. ಕ್ಷೇತ್ರಮಿತ್ಯೇವಮಭಿಧೀಯತೆ
(ಕ್ಷೇತ್ರವೆಂದೀರೀತಿಯಾಗಿ ಹೇಳಲ್ಪಡುವುದು) ಎಂದರಿಯಬೇಕು. ॥೧॥

(ಶ್ರೀ) ಭಕ್ತಾನಾಮಹಮುದ್ಧರ್ತಾ ಸಂಸಾರಾದಿತ್ಯವಾದಿಯತ್ । ತ್ರ
ಯೋದಶೇಥ ತತ್ಸಿದ್ಧ್ಯೈ ತತ್ವಜ್ಞಾನಮುದೀರ್ಯತೆ ॥ "ತೇಷಾಮಹಂ ಸಮುದ್ಧ
ರ್ತಾ ಮೃತ್ಯುಸಂಸಾರಸಾಗರಾತ್ । ಭವಾಮಿ" (೧೨॥೭॥) ಎಂಬದಾಗಿ ಪೂ
ರ್ವದಲ್ಲಿ ಸಂಸಾರಾಬ್ಧಿಯಿಂದ ಭಕ್ತರನ್ನು ತಾನು ಸಮುದ್ಧರಣ ಮಾಡುವೆ
ನೆಂಬದಾಗಿ ಪ್ರತಿಜ್ಞೆಯಂ ಮಾಡಿದನು. ತನ್ನಿಂದ ಪ್ರತಿಜ್ಞಾತವಾದ ಆ
ಸದುದ್ಧರಣವು ತತ್ವಜ್ಞಾನವಿಲ್ಲದಮೇಲೆ ಯೇರ್ಪಡುವುದಿಲ್ಲವಾದುದರಿಂದ
ತತ್ವಜ್ಞಾನಕ್ಕೋಸ್ಕರವಾಗಿ ಪ್ರಕೃತಿ ಪುರುಷ ವಿವೇಕವನ್ನುಂಟು ಮಾ
ಡುವ ಈ ಅಧ್ಯಾಯವಾರಂಭಿಸಲ್ಪಡುವುದೆಂದರಿಯಬೇಕು. ॥೧॥

(ರಾ॥ ಭಾ॥) ಮೊದಲನೇ ಷಟ್ಕದಲ್ಲಿ (೧ನೇ ಅಧ್ಯಾಯದ ಮೊ
ದಲು ೬ನೇ ಅಧ್ಯಾಯದವರೆಗೂ) ಪರಮಪ್ರಾಪ್ಯನಾಗಿಯೂ ಪರಬ್ರ
ಹ್ಮನಾಗಿಯೂ ಇರುವ ಭಗವದ್ವಾಸುದೇವನನ್ನು ಹೊಂದುವುದಕ್ಕೆ ಉ
ಪಾಯವಾದ ಭಕ್ತಿ ಎಂಬ ಭಗವದುಪಾಸನಕ್ಕೆ ಅಂಗಭೂತವಾದ ಪ್ರಾ
ಪ್ತೃ ಆಗಿರುವ ಪ್ರತ್ಯಗಾತ್ಮವಿಷಯವಾದ ವಾಸ್ತವಜ್ಞಾನವು ಜ್ಞಾನಯೋ
ಗ ಕರ್ಮಯೋಗಗಳೆಂಬ ಯರಡು ನಿಷ್ಠೆಗಳಿಂದ ಸಾಧಿಸಲ್ಪಡುವುದೆಂದು
ಹೇಳಲ್ಪಟ್ಟಿತು.

ಮಧ್ಯಮ ಷಟ್ಕದಲ್ಲಿಯೂ ಪರಮ ಪ್ರಾಪ್ಯನಾದ ಭಗವಂತನ
ತತ್ವಯಾಥಾತ್ಮ್ಯವೂ, ಅವನ ಮಹಿಮೆಗಳನ್ನೂ ತಿಳಿದು ಅನುಷ್ಠಿ
ಸುವ ಏಕಾಂತಿಕಾತ್ಯಂತಿಕ ಭಕ್ತಿಯೋಗನಿಷ್ಠೆಯೂ ಪ್ರತಿಪಾದಿಸಲ್ಪ
ಟ್ಟಿತು. ಅತಿಶಯಿತವಾದ ಐಶ್ವರ್ಯಾಪೇಕ್ಷೆಗಳಿಗೂ ಆತ್ಮಕೈವಲ್ಯಾಪೇಕ್ಷಿ

ಗಳಿಗೂ ಭಕ್ತಿಯೋಗವು ಅವರವರುಗಳ ಅಪೇಕ್ಷೆಗಳಿಗೆ ಸಾಧನವಾಗಿರುವುದೆಂಬದಾಗಿಯೂ ಪ್ರತಿಪಾದಿತವಾಯಿತು.

ಈಗ ಈ ಆರು ಅಧ್ಯಾಯಗಳಿಂದ ಹಿಂದಿನ ೧೨ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿರುವ ಪ್ರಕೃತಿಪುರುಷ ಸಂಸರ್ಗರೂಪವಾದ ಪ್ರಪಂಚವೇನು, ಈಶ್ವರನೇನು, ಇವರ ತತ್ವಸ್ಥಿತಿಯೂ, ಕರ್ಮಜ್ಞಾನ ಭಕ್ತಿಗಳ ಸ್ವರೂಪವೂ, ಇವುಗಳ ಅನುಷ್ಠಾನಪ್ರಕಾರವೂ ಎಂಬೀ ಪ್ರಕಾರದಿಂದ ಷಟ್ಕದ್ವಯೋಕ್ತನಾದ ಅರ್ಥಗಳು ಶೋಧಿಸಲ್ಪಡುವುವು.

ಈ ತ್ರಯೋದಶಾಧ್ಯಾಯದಲ್ಲಿ ದೇಹಾತ್ಮಗಳ ಸ್ವರೂಪವೂ ದೇಹದ ತತ್ವಸ್ಥಿತಿ ವಿಚಾರವೂ ದೇಹಕ್ಕಿಂತಲೂ ಭಿನ್ನನಾದ ಆತ್ಮನನ್ನು ಹೊಂದುವುದಕ್ಕೆ ತಕ್ಕ ಉಪಾಯವೂ ವಿಭಾಗಿಸಿ ತಿಳಿಯಬೇಕಾದ ಆ ಆತ್ಮನಸ್ವರೂಪಶೋಧನವೂ ಅಂತಹ ಆತ್ಮನಿಗೆ ಅಚೇತನದೊಡನೆ ಸಂಬಂಧವುಂಟಾಗುವುದಕ್ಕೆ ಕಾರಣವೂ ದೇಹಾತ್ಮ ವಿವೇಕಾನುಸಂಧಾನ ಪ್ರಕಾರವೂ ಹೇಳಲ್ಪಡುವುದೆಂದರಿಯಬೇಕು.

ಶ್ರೀಭಗವಾನುವಾಚ- ಶ್ರೀಭಗವಂತನು ಹೇಳಿದನು. ಎಲೈ ಅರ್ಜುನನೆ! ಈ ಶರೀರವು (ಎಂದರೆ ನಾನು ದೇವನು, ನಾನು ಮನುಷ್ಯನು ನಾನು ಸ್ಥೂಲನಾಗಿರುವೇನು, ನಾನಾಕೃಶನಾಗಿರುವೇನು, ಎಂಬದಾಗಿ ಭೋಕ್ತನಾದ ಆತ್ಮನೊಡನೆ ಏಕೀಭೂತವಾಗಿ ತೋರುವ ಈ ಶರೀರವು) ಇದಕ್ಕಿಂತಲೂ ಭಿನ್ನನಾಗಿ ಭೋಕ್ತೃವಾಗಿರುವ ಆತ್ಮನ ಭೋಗಾರ್ಥವಾಗಿ ಯೇರ್ಪಟ್ಟ ಕ್ಷೇತ್ರವೆಂಬದಾಗಿ ಶರೀರಯಾಥಾತ್ಮ್ಯವನ್ನರಿತವರಿಂದ ಹೇಳಲ್ಪಡುವುದು. (ಕುಂತೀಪುತ್ರನಾದ ಎಲೈ ಅರ್ಜುನನೆ? ಈ ಶರೀರವು ಭೋಕ್ತೃವಾದ ಜೀವಾತ್ಮನಿಗೆ ಸುಖದುಃಖಾನುಭವಸಾಧನವಾಗಿರುವುದರಿಂದ ಕ್ಷೇತ್ರವೆಂಬದಾಗಿ ಶರೀರವಾಸ್ತವಸ್ಥಿತಿಯನ್ನು ತಿಳಿದಿರುವ ಜ್ಞಾನಿಗಳಿಂದ ಹೇಳಲ್ಪಡುವುದು. ಈ ಶರೀರವನ್ನು ಯಾವ ಜೀವಾತ್ಮನಾದರೆ ಕಣ್ಣು ಕಾಲು ಕೈ ಕಿವಿ ಮೊದಲಾದ ಅವಯವಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿಯಾದರೂ ಇವುಗಳ ಸಮುದಾಯವನ್ನಾದರೂ ಇದನ್ನು ನಾನರಿಯುವನೆಂಬದಾಗಿ ತಿಳಿಯುತ್ತಾನೆಯೋ, ಆ ಜೀವಾತ್ಮನನ್ನು (ತಿಳಿಯಲ್ಪಡುವುದಾದ ಶರೀರಕ್ಕಿಂತಲೂ ಅರಿಯತಕ್ಕ ಆತ್ಮವಸ್ತುವು ಪೃಥಕ್ಕಾಗಿ

ತೋರುವುದರಿಂದ) ಕ್ಷೇತ್ರಜ್ಞನೆಂಬದಾಗಿ ಆತ್ಮಯಾಥಾತ್ಮ್ಯವೇದಿಗಳಾದವರು ಹೇಳುವರು. ದೇಹ ವ್ಯತಿರಿಕ್ತವಾದ ಘಟಾದಿಗಳನ್ನು ತಿಳಿಯುವ ಕಾಲದಲ್ಲಿ ದೇವನಾದ ನಾನು ಅಥವಾ ಮನುಷ್ಯನಾದ ನಾನು 'ಘಟವನ್ನು ತಿಳಿಯುವೆನು' ಎಂಬದಾಗಿ (ದೇಹವನ್ನೂ ಆತ್ಮವನ್ನೂ ಏಕವಾಗಿ ತಿಳಿದರೂ) ದೇಹಸಾಮಾನಾಧಿಕರಣ್ಯದಿಂದ ಜ್ಞಾತಾ ಆದ ಆತ್ಮನನ್ನು ತಿಳಿದರೂ ದೇಹಾನುಭವವೇಳೆಯಲ್ಲಿ ಘಟಾದಿಯನ್ನು ತಿಳಿಯುವಂತೆ ದೇಹವನ್ನು ಕೂಡ ಇದನ್ನು ನಾನರಿಯುವೆನು ಎಂಬದಾಗಿ ವೇದ್ಯವಾದ ಶರೀರವನ್ನು ವೇದಿತಾಆದ ಆತ್ಮನು ಅನುಭವಿಸುವುದರಿಂದ ವೇದಿತಾಆದ ಆತ್ಮನಿಗಿಂತಲೂ ವೇದ್ಯವಾದ ದೇಹವು ಘಟಾದಿಗಳಂತೆ ಭಿನ್ನಪಟ್ಟಿರುವುದೆಂತಲೆ (ಅರ್ಥಾಂತರಭೂತವೆಂತಲೆ) ತಿಳಿಯತಕ್ಕದ್ದಾಗಿರುವುದು. ಆದುದರಿಂದ ಘಟಾದಿಗಳಂತೆ ವೇದ್ಯಭೂತವಾದ ಶರೀರಕ್ಕಿಂತಲೂ ವೇದಿತಾಆದ ಕ್ಷೇತ್ರಜ್ಞನು ಭಿನ್ನಪಟ್ಟವನೆಂತಲೇ ತಿಳಿಯಬೇಕು. ಆದರೆ ದೇಹವೂ ಆತ್ಮನೂ ಏಕವಾಗಿ ತೋರುವುದಕ್ಕೆ ಕಾರಣವೇನೆಂದರೆ? ವಾಸ್ತವವಾಗಿ ಶರೀರಕ್ಕೆ ಗೋತ್ವಾದಿ ಧರ್ಮದಂತೆ ಗೋಶರೀರವು ಗೋತ್ವವೂ (ಎಂದರೆ ಪಶುವಿನ ಧರ್ಮವೂ) ಏಕವಾಗಿ ಕಾಣುವುದಲ್ಲದೆ ಪೃಥಕ್ಕಾಗಿ ಕಾಣುವುದಿಲ್ಲವಷ್ಟೆ, ಅದರಂತೆ ಆತ್ಮವನ್ನು ಬಿಟ್ಟು ಶರೀರವಿರುವುದೆ ಇಲ್ಲವಾದುದರಿಂದ ಶರೀರವೂ ಆತ್ಮನೂ ಒಂದಾಗಿ ಸೇರಿರುವುದಂ ಕಂಡು ಈ ಯರಡೂ ಒಂದೆಂಬದಾಗಿ ವ್ಯವಹರಿಸುವುದುಂಟೆಂದರಿಯಬೇಕು.

ಆದರೆ ತಿಳಿಯುವ ವಸ್ತು (ವೇದಿತಾ) ವಾದ ಇದರ ಸ್ವರೂಪವನ್ನು ಯೋಗಪರಿಶುದ್ಧವಾದ ಮನಸ್ಸಿನಿಂದ ತಿಳಿಯಬಹುದಲ್ಲದೆ ಪ್ರಾಕೃತವಾದ ಚಕ್ಷುರಾದೀಂದ್ರಿಯಗಳಿಂದ ತಿಳಿಯುವುದಕ್ಕೆ ಅಸಾಧ್ಯವಾಗಿರುವುದರಿಂದ ಮೂಢಜನರು ಪ್ರಕೃತಿ ವಿಕಾರವಾದ ಶರೀರವನ್ನೇ ಆತ್ಮನೆಂಬದಾಗಿ ತಿಳಿಯುತ್ತಾರೆ. ಈ ಪ್ರಕಾರವಾಗಿಯೆ ಮುಂದೆಯೂ "ಉತ್ಕ್ರಾಮಂತಂಸ್ಥಿತಂವಾಪಿಭುಂಜಾನಂವಾಗುಣಾನ್ವಿತಂ । ವಿಮೂಢಾನಾನುಪಶ್ಯಂತಿಪಶ್ಯಂತಿಜ್ಞಾನಚಕ್ಷುಷಃ" (೧೫॥೧೦॥) ಎಂಬದಾಗಿ ಹೇಳುತ್ತಾರೆ. ... ... ... ॥೧॥

(ಗೀ॥ ೩॥) ಪೂರ್ವೋಕ್ತಪ್ರಕಾರವಾಗಿ ಭಗವತ್ಸ್ವರೂಪ ಪರಿ

ಜ್ಞಾನವು ಮೋಕ್ಷಹೇತುವಾಗಿರುವುದರಿಂದ ಅದರ ನಿರೂಪಣವೇನೋ ಯುಕ್ತವೇಸರಿ. ಕ್ಷೇತ್ರಜ್ಞ ಸ್ವರೂಪನಿರೂಪಣದಿಂದ ಪ್ರಯೋಜನವಿಲ್ಲವಾದುದರಿಂದ ತನ್ನಿರೂಪಣವು ವ್ಯರ್ಥವೆಂಬೀ ಶಂಕಾಸಮಾಧಾನಾರ್ಥವಾಗಿ (ಕ್ಷೇತ್ರಜ್ಞತ್ವವಿಶಿಷ್ಟ ಭಗವದ್ಜ್ಞಾನೋಪಯುಕ್ತತ್ವೇನ ಕ್ಷೇತ್ರೋಕ್ತಿ ಎಂಬದಾಗಿ) ಕ್ಷೇತ್ರೋದ್ದೇಶಪೂರ್ವಕವಾಗಿ ಪರಮಾತ್ಮನಿಗೆ ಕ್ಷೇತ್ರಜ್ಞತ್ವವನ್ನು ಹೇಳುತ್ತಾನೆಂದರಿಯಬೇಕು. ಇದಂಶರೀರಂ ಎಂಬುವುದರಿಂದ ಈ ಶರೀರಕ್ಕೆ ಕಾರಣವಾದ ಅವ್ಯಕ್ತಮಹದಹಂಕಾರಾದಿಗಳು ಹೇಳಲ್ಪಟ್ಟವೆಂತಲೂ, ಈ ಅವ್ಯಕ್ತಾದಿಗಳೇ ಕ್ಷೇತ್ರವೆನ್ನಲ್ಪಡುವುವೆಂತಲೂ ತಿಳಿಯಬೇಕು. ಇವು ಕ್ಷೇತ್ರಜ್ಞನಾದ ಪರಮಾತ್ಮನಿಗೆ ವಾಸಸ್ಥಾನವಾದುದರಿಂದ ಕ್ಷೇತ್ರವೆನ್ನಿಸಿಕೊಂಡಿತು. ಈ ಕ್ಷೇತ್ರವಾದ ಅವ್ಯಕ್ತಾದಿಗಳನ್ನು ತಿಳಿಯುವಂತವನು (ಭಗವಂತನು) ಕ್ಷೇತ್ರಜ್ಞನು ಎಂಬದಾಗಿ ಕ್ಷೇತ್ರಕ್ಷೇತ್ರಜ್ಞರನ್ನರಿತವರು ಹೇಳುತ್ತಾರೆಂದರಿಯಬೇಕು. ... ... ... ॥೭॥

ಕ್ಷೇತ್ರಜ್ಞಂಚಾಪಿಮಾಂವಿದ್ಧಿ ಸರ್ವಕ್ಷೇತ್ರೇಷುಭಾರತ। ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂಯತ್ತದ್ಜ್ಞಾನಂಮತಂಮಮ ॥೨॥

ಪ॥ ಕ್ಷೇತ್ರಜ್ಞಂ- ಚ- ಅಪಿ- ಮಾಂ- ವಿದ್ಧಿ- ಸರ್ವಕ್ಷೇತ್ರೇಷು- ಭಾರತ। ಕ್ಷೇತ್ರಕ್ಷೇತ್ರಜ್ಞಯೋಃ- ಜ್ಞಾನಂ- ಯತ್- ತತ್- ಜ್ಞಾನಂ- ಮತಂ- ಮಮ ॥

(ಅ॥ ಶಂ॥ ಭಾ॥) ಹೇಭಾರತ- ಎಲೈ ಅರ್ಜುನನೇ! ಸರ್ವಕ್ಷೇತ್ರೇಷು ಚಾಪಿ- ಸರ್ವ ಶರೀರಗಳಲ್ಲಿಯೂ, ಮಾಂ- ನನ್ನನ್ನೇ, ಕ್ಷೇತ್ರಜ್ಞಂ- ಕ್ಷೇತ್ರಜ್ಞನೆಂಬದಾಗಿ, ಎಂದರೆ ಸಂಸಾರ ಸಂಬಂಧವಿಲ್ಲದ ಪರಮಾತ್ಮನೆಂಬದಾಗಿ, ವಿದ್ಧಿ- ತಿಳಿದುಕೊಳ್ಳು, ಕ್ಷೇತ್ರಕ್ಷೇತ್ರಜ್ಞಯೋಃ- ಶರೀರಾತ್ಮಗಳ, ಯದ್ಜ್ಞಾನಂ- ತಿಳಿಯುವಿಕೆ ಎಂಬುವುದು ಯಾವದುಂಟೋ, ತತ್- ಅದು, ಜ್ಞಾನಮಿತಿ- ಜ್ಞಾನವೆಂಬದಾಗಿ, ಮಮಮತಂ- ನನ್ನ ಇಚ್ಛೆಯು, ಶರೀರಾತ್ಮಗಳಂ ತಿಳಿಯುವಿಕೆಯೇ ಆತ್ಮಾನಾತ್ಮ ವಿವೇಕವೆಂಬದಾಗಿ ನನ್ನ ಅಭಿಪ್ರಾಯವು. ಈ ಪ್ರಕಾರದಿಂದ ಕ್ಷೇತ್ರಕ್ಷೇತ್ರಜ್ಞರು ಹೇಳಲ್ಪಟ್ಟಿರುವರು. ಇಷ್ಟುಮಾತ್ರವಾಗಿ ತಿಳಿದುಕೊಳ್ಳುವುದ

ರಿಂದಲೆ ಕ್ಷೇತ್ರಕ್ಷೇತ್ರಜ್ಞರು ತಿಳಿಯಲ್ಪಡತಕ್ಕವರೆ ಎಂದರೆ? ಅಷ್ಟು ಸು ಲಭವಾಗಿ ತಿಳಿಯಲಸಾಧ್ಯರೆನ್ನುತ್ತಾನೆ. ಏಕನಾಗಿಯೂ ಬ್ರಹ್ಮಾದಿ ಸ್ತಂಬಪರ್ಯಂತಗಳಾದ ಅನೇಕ ಕ್ಷೇತ್ರಗಳೆಂಬ ಉಪಾಧಿಗಳಲ್ಲಿ ಪ್ರತ್ಯೇ ಕಪ್ರತ್ಯೇಕವಾಗಿ ವಿಭಾಗಿಸಲ್ಪಟ್ಟಿರುವಂತೆ ಕಾಣಲ್ಪಡುವ ಕ್ಷೇತ್ರ ಜ್ಞನು ಪರಮಾರ್ಥವಾಗಿ ವಿಚಾರಿಸಿ ನೋಡಿದರೆ ಉಪಾಧಿಕೃತ ಭೇದ ವಿಲ್ಲದವನಾಗಿಯೂ, ಸದಸದಾದಿ ಶಬ್ದಗಳು ತಿಳಿದಮಾತ್ರದಲ್ಲಿಯೇ ತಿಳಿ ಯಲಶಕ್ಯನೆಂಬದಾಗಿಯೂ ತಿಳಿದುಕೊಳ್ಳು. ಎಲೈ ಅರ್ಜುನನೆ? ಕ್ಷೇತ್ರ ಕ್ಷೇತ್ರಜ್ಞೇಶ್ವರ ಯಾಥಾತ್ಮ್ಯಕ್ಕಿಂತಲೂ ಜ್ಞಾನವಿಷಯವಾದದ್ದು ಮತ್ತೊಂದು ಯಾವದೂ ಇಲ್ಲವಾದುದರಿಂದ ತಿಳಿಯತಕ್ಕ ಕ್ಷೇತ್ರಕ್ಷೇ ತ್ರಜ್ಞರನ್ನು ತಿಳಿದುಕೊಳ್ಳುವಿಕೆಯೇ ಶ್ರೇಷ್ಠವಾದ ಜ್ಞಾನವೆಂಬ ದಾಗಿ (ಎಂದರೆ ಹೇಗಾದರೆ ನಿಷ್ಕಾಮಕರ್ಮವೇ ನಿಜವಾದ ಕರ್ಮವೋ ಅ ದರಂತೆ ಕ್ಷೇತ್ರಕ್ಷೇತ್ರಜ್ಞವಿಷಯಕವಾದ ಜ್ಞಾನವೆ ನಿಜವಾದ ಜ್ಞಾನವೆಂಬದಾಗಿ) ಸರ್ವೇಶ್ವರನಾದ ವಿಷ್ಣುವೆನ್ನಲ್ಪಡುವ ನನ್ನ ಅಭಿ ಪ್ರಾಯವೆಂದರಿಯಬೇಕು.

ಆದರೆ ಸರ್ವಕ್ಷೇತ್ರಗಳಲ್ಲಿಯೂ ಈಶ್ವರನೊಬ್ಬನೆ ಭೋಕ್ತಾ ಆ ಗಿರುವುದರಿಂದ ಅವನಿಗಿಂತಲೂ ಬೇರೊಂದು ಚೇತನವಸ್ತುವೇ ಇಲ್ಲ ವೆಂದು ಹೇಳಿದಂತೆ ಆಯಿತು. ಆ ಪ್ರಕಾರವಾಗಿ ಹೇಳುವಪಕ್ಷದಲ್ಲಿ ಈ ಶ್ವರನಿಗೆ ಸಂಸಾರಿತ್ವವು ಪ್ರಾಪ್ತವಾಯಿತು. ಅಥವಾ ಈಶ್ವರನಿಗೆ ಸಂ ಸಾರಿತ್ವವಿಲ್ಲವೆನ್ನುವುದಾದರೆ ಈಶ್ವರಭಿನ್ನವಾದ ಚೇತನವಸ್ತುವಿಲ್ಲವಾ ದುದರಿಂದ ಸಂಸಾರವೇ ಇಲ್ಲವೆಂದು ಹೇಳಬೇಕಾಗಿ ಬರುವುದು. ಇದ ನ್ನಂಗೀಕರಿಸುವಪಕ್ಷದಲ್ಲಿ ಬಂಧಮೋಕ್ಷಗಳಿಗೆ ಕಾರಣಗಳಾದ ಶಾಸ್ತ್ರಗ ಳಿಗೆ ಆನರ್ಥಕ್ಯವು (ಪ್ರಯೋಜನವಿಲ್ಲದಿರುವಿಕೆಯು) ಬರುವುದು ಮಾ ತ್ರವಲ್ಲದೆ ಪ್ರತ್ಯಕ್ಷಾದಿ ಮೂರು ಪ್ರಮಾಣಗಳಿಗೂ ವಿರೋಧವು ಬರು ವುದು. ಆದುದರಿಂದ ಮೇಲೆ ವಿವರಿಸಿರುವ ಯರಡು ವಿಷಯಗಳೂ ಸ ಮ್ಮತಗಳಾಗಲಾರವು. ಏತಕ್ಕೆಂದರೆ? ಸುಖದುಃಖಗಳೂ ಅದಕ್ಕೆ ಕಾರ ಣವಾದ ಸಂಸಾರವೂ ಪ್ರತ್ಯಕ್ಷವಾಗಿಯೆ ಕಾಣುತಲಿವೆ. ಮತ್ತು ಜಗ ದ್ವೈಚಿತ್ರ್ಯವು ಕಾಣಲ್ಪಡುವುದರಿಂದ ಧರ್ಮಾಧರ್ಮನಿಮಿತ್ತವಾಗಿರುವ

ಸಂಸಾರವು ಅನುಭವಸಿದ್ಧವಾಗಿರುವುದು. (ಎಂದರೆ ಜೀವನಿಗೆ ಈಶ್ವರನಲ್ಲಿಯಾದರೂ ಈಶ್ವರನಿಗೆ ಜೀವನಲ್ಲಿಯಾದರೂ ಅಂತರ್ಭಾವವನ್ನು ಹೇಳುವ ಪಕ್ಷದಲ್ಲಿಯೂ ಜೀವಪರಮಾತ್ಮರಿಗೆ ಏಕತ್ವವನ್ನಂಗೀಕರಿಸುವ ಪಕ್ಷದಲ್ಲಿಯೂ ಅನುಪಪತ್ತಿಗಳುಂಟಾಗುವುವು. ಅಂತಹ ಅನುಪಪತ್ತಿಗಳ್ಯಾವವೆಂದರೆ? ಪರಮಾತ್ಮನಿಗೆ ಜೀವಾತ್ಮನಲ್ಲಂತರ್ಭಾವವನ್ನಂಗೀಕರಿಸುವಪಕ್ಷದಲ್ಲಿ ಈಶ್ವರಾಂತರ್ಭಾವಯುಕ್ತನಾದ ಜೀವಾತ್ಮನಿಗಿಂತಲೂ ವ್ಯತಿರಿಕ್ತವಾದ ವಸ್ತುವಿಲ್ಲವಾದುದರಿಂದಲೂ ಬೇರೆ ಸಂಸಾರಿಯಾದ ವಸ್ತುವಿಲ್ಲವಾದುದರಿಂದಲೂ ಅವನಿಗೆ ಸಂಸಾರವು ಅನಿಷ್ಟವಾಗಿರುವುದರಿಂದಲೂ ಸಂಸಾರವೇ ಲೋಕದಲ್ಲಿ ಇಲ್ಲವೆಂದಾಯಿತು. ಮತ್ತು ಜೀವಾತ್ಮನಿಗೆ ಪರಮಾತ್ಮ ವ್ಯತಿರಿಕ್ತತ್ವವನ್ನಂಗೀಕರಿಸದೇಹೋದರೆ ಸಂಸಾರಕ್ಕೆ ನಿರಾಲಂಬತ್ವರೂಪವಾದ ಅನುಪಪತ್ತಿಯಿಂದ ಪರಮಾತ್ಮನಿಗೇನೆ ಸಂಸಾರಿತ್ವಪ್ರಸಕ್ತಿಯುಂಟಾಗುವುದು. ಇದನ್ನಂಗೀಕರಿಸುವಪಕ್ಷದಲ್ಲಿ ಪರಮಾತ್ಮನಿಗೆ ಸಂಸಾರವನ್ನು ನಿಷೇಧಿಸುವ "ಅನಶ್ನನ್ನನ್ಯೋಽಭಿಚಾಕಶೀತಿ" ಎಂಬಿದೇ ಮೊದಲಾದ ಶ್ರುತಿಗಳು ವಿರುದ್ಧಾರ್ಥಗಳಂ ಪ್ರತಿಪಾದಿಸಿರುವಂತೆ ಹೇಳಿದಂತಾಗುವುದು. ಈ ವಿರೋಧಕ್ಕಾಗಿ ಸಂಸಾರವನ್ನೇ ಅಂಗೀಕರಿಸುವುದಿಲ್ಲವೆಂದರೆ ಸಂಸಾರ ಪ್ರತಿಪಾದಕವಾದ "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ" ಎಂಬದಾಗಿ ಸಂಸಾರಿಯಾದವನಿಗೆ ಕರ್ಮಫಲಭೋಕ್ತೃತ್ವವನ್ನು ಪ್ರತಿಪಾದಿಸುವ ಶ್ರುತಿವಿರೋಧವೂ ಬರುವುದು. ಆದುದರಿಂದ ಈಶ್ವರನಿಗೆ ಸಂಸಾರಿತ್ವವನ್ನಂಗೀಕರಿಸುವಪಕ್ಷದಲ್ಲಿ ಜ್ಞಾನಕಾಂಡಕ್ಕೂ ಸಂಸಾರವನ್ನೇ ಅಂಗೀಕರಿಸದೇಹೋದರೇ ಕರ್ಮಕಾಂಡಕ್ಕೂ ವಿರೋಧ ಬರುವುದೆಂಬಿದೇ ಮೊದಲಾದ ಕಾರಣಗಳಿಂದ ಸರ್ವಕ್ಷೇತ್ರಗಳಲ್ಲಿಯೂ ಈಶ್ವರನೊಬ್ಬನೇ ಭೋಕ್ತಾ ಆಗಿರುವುವನಲ್ಲದೆ ತದಿತರರು ಯಾರೂ ಇಲ್ಲವೆಂದು ಹೇಳುವುದು ಉಚಿತವಾಗಿಲ್ಲವೆಂಬಭಿಪ್ರಾಯವು.) ಆದುದರಿಂದಲೇ ಜೀವೇಶ್ವರೈಕ್ಯವನ್ನು ಹೇಳಕೂಡದೆಂದರೆ?

ಈ ಮೇಲಿನ ಪೂರ್ವಪಕ್ಷವು ಉಚಿತವಾದದ್ದಲ್ಲವು. ಜ್ಞಾನಾಜ್ಞಾನಗಳು ಭಿನ್ನಭಿನ್ನಗಳಾಗಿರುವುದರಿಂದ ಮೇಲೆ ಹೇಳಿರುವ ಜೀವೇಶ್ವರೈಕ್ಯಕ್ಕೆ ವಿರೋಧವುಂಟಾಗಲಾರದು. ಏತಕ್ಕೆಂದರೆ "ದೂರಮೇತೇ ವಿ

ಪರೀತೇವಿಷೂಚೀ ॥ ಅವಿದ್ಯಾಯಾಚವಿದ್ಯಾ" (ವಿದ್ಯಾವಿದ್ಯೆಗಳೆನ್ನಲ್ಪ ಡುವ ಈ ಯೆರಡೂ ಅತ್ಯಂತ ಪರಸ್ಪರ ವಿರುದ್ಧಗಳಾಗಿರುವುವು. ಮತ್ತು, ವಿಷೂಚೀ- ಭಿನ್ನವಾದ ಫಲಗಳಂ ಕೊಡುವುವು.) ಎಂಬೀ ಶ್ರುತಿಗಳಿಂದ ಜ್ಞಾನಾಜ್ಞಾನಗಳನ್ನು ಬೇರೆಬೇರೆಯಾಗಿ ಹೇಳಿ "ಶ್ರೇಯಶ್ಚಪ್ರೇಯಶ್ಚ" (ವಿದ್ಯೆಯಿಂದುಂಟಾಗುವುದು ಶ್ರೇಯಸ್ಸೆಂತಲೂ ಅವಿದ್ಯೆಯಿಂದುಂಟಾಗುವುದು ಸಂಸಾರವೆಂತಲೂ ಈ ವಾಕ್ಯಾರ್ಥವು) ಎಂಬೀ ಶ್ರುತಿವಾಕ್ಯದಿಂದ ವಿದ್ಯಾವಿದ್ಯೆಗಳಿಗೆ ಪರಸ್ಪರ ವಿರುದ್ಧಫಲಗಳು ಪ್ರತಿಪಾದಿಸಲ್ಪಟ್ಟಿರುವುವು. ಮತ್ತು "ದ್ವಾವಿಮಾವಥಪಂಥಾನೌ" ಎಂತಲೂ, "ಇಮೌದ್ವಾವೇವಪಂಥಾನೌ" ಎಂತಲೂ ಶ್ರೀವ್ಯಾಸರು ವಿದ್ಯಾವಿದ್ಯಾಮಾರ್ಗಗಳೆರಡೂ ಭಿನ್ನಭಿನ್ನವಾಗಿರುವುದೆಂದು ಬೋಧಿಸಿರುತ್ತಾರೆ. ಈ ಭಗವದ್ಗೀತಾಶಾಸ್ತ್ರದಲ್ಲಿಯೂ ವಿದ್ಯಾವಿದ್ಯೆಗಳನ್ನು ಕುರಿತು ಭಿನ್ನಭಿನ್ನಗಳಾಗಿಯೆ ಉಪದೇಶವು ಪ್ರಾಪ್ತವಾಗಿರುವುದು. ಮತ್ತು ಅವಿದ್ಯೆಯು ತನ್ನ ಕಾರ್ಯಗಳೊಡನೆ (ಅವಿದ್ಯೆಯಿಂದುಂಟಾಗುವುದು ಪ್ರಪಂಚಾದಿಭ್ರಮವು, ಅದಕ್ಕೆ ಕಾರಣವು ವಾಸನಾ, ಇವುಗಳೊಡನೆ) ವಿದ್ಯೆಯಿಂದಲೇ ಪರಿಹರಿಸಲ್ಪಡತಕ್ಕದ್ದೆಂಬದಾಗಿ ಶ್ರುತಿಸ್ಮೃತಿನ್ಯಾಯಗಳ ದೆಶೆಯಿಂದ ಸ್ಪಷ್ಟವಾಗಿರುವುದು. ಅಂತಹ ಶ್ರುತಿಗಳ್ಯಾವವೆಂದರೆ "ಇಹಚೇದವೇದೀದಥಸತ್ಯಮಸ್ತಿನಚೇದಿಹಾವೇದೀನ್ಮಹತೀವಿನಷ್ಟಿಃ" (ಈ ಜೀವಾವಸ್ಥೆಯಲ್ಲಿಯೇ ಅತಿದುರ್ಲಭವಾದ "ಅಹಂಬ್ರಹ್ಮಾಸ್ಮಿ" ನಾನೇ ಬ್ರಹ್ಮನಾಗಿರುವೆನೆಂಬ ನಿಶ್ಚಯಾನುಭವಜ್ಞಾನವುಳ್ಳವನಿಗೆ ಈ ಜನ್ಮದಲ್ಲಿಯೇ ಪುನರಾವೃತ್ತಿರಹಿತವಾದ ಕೈವಲ್ಯಪ್ರಾಪ್ತಿಯುಂಟಾಗುವುದು. ಅಂತಹ ಜ್ಞಾನವನ್ನು ಗುರೂಪದೇಶಪೂರ್ವಕವಾಗಿ ಹೊಂದದೆಹೋದರೆ ಜನ್ಮಮರಣಾದಿರೂಪವಾದ ಸಂಸಾರವು ಸಂತತವಾಗಿರುವುದು) ಎಂಬದಾಗಿ ಕೇನೋಪನಿಷತ್ ದ್ವಿತೀಯ ಖಂಡದ (೫)ನೇ ಅನುವಾಕದಲ್ಲಿ ಹೇಳಲ್ಪಟ್ಟಿರುವುದು. ಮತ್ತು ಈ ಪ್ರಕಾರವೆ (೧) ("ತಮೇವಂವಿದ್ವಾನಮೃತಇಹಭವತಿ- ನಾನ್ಯಃಪಂಥಾವಿದ್ಯತೇಯನಾಯ- (೨) ಆನಂದಂಬ್ರಹ್ಮಣೋವಿದ್ವಾನ್ನಬಿಭೇತಿಕುತಶ್ಚನ- (೩) ಅಥತಸ್ಯಾಭಯಂಭವತಿ- (೪) ಅವಿದ್ಯಾಯಾಮಂತರೇವರ್ತಮಾನಾಃ- (೫) ಬ್ರಹ್ಮವೇದಬ್ರಹ್ಮೈ

ವಭವತಿ- (೬) ಅನ್ಯೋಽಸಾವನ್ಯೋಽಹಮಸ್ಮೀತಿನಸವೇದಯಥಾಪಶುರೇ ವಂಸದೇವಾನಾಮಾತ್ಮವಿದ್ಯಸ್ಸಇದಂಸರ್ವಂಭವತಿಯದಾಚರ್ಮವತ್" (೧॥ ತಾ॥ ಪರಮಾತ್ಮನನ್ನು ಪ್ರತ್ಯಗಾತ್ಮತ್ವೇನ ಯಾವನಾದರೆ ಸಾಕ್ಷಾತ್ಕರಿಸುವನೋ ಅಂತಹ ದೇಹಿಯು ಜೀವನ್ಮುಕ್ತನಾಗುವನು. ಇಂತಹ ಜ್ಞಾನವನ್ನು ಬಿಟ್ಟರೆ ಬೇರೊಂದು ಮೋಕ್ಷ ಪ್ರಾಪಕವಾದ ಸಾಧನವಿಲ್ಲವು.) (೨) ಸ್ವಸ್ವರೂಪಾನುಭವವೆಂಬ ಬ್ರಹ್ಮಾನಂದಾನುಭವಶಾಲಿಯಾದವನಿಗೆ ಭಯಹೇತುವಾದ ಅವಿದ್ಯೆಯು ನಿವೃತ್ತವಾಗುವುದರಿಂದ ತಜ್ಜನ್ಯವಾದ ಸಂಸಾರವು ವಾಸನೆಗಳೊಡನೆ ತಾನಾಗಿಯೇ ನಿವೃತ್ತಿಸುವುದು. (೩) ಬ್ರಹ್ಮಜ್ಞಾನಶೂನ್ಯರಿಗೆ ಸಂಸಾರವೇ ನಿತ್ಯವೆಂಬ ಭ್ರಮವುಂಟಾಗಿರುವುದರಿಂದ ಅದನ್ನವರು ದಾಟಲಾರರು ಎಂದರೆ ಅಂತವರಿಗೆ ಸಂಸಾರವಿಮೋಚನವೇ ಇಲ್ಲವೆಂದರ್ಥವು. (೪) ಅವಿದ್ಯಾವಿಶಿಷ್ಟರಾದವರಿಗೆ ಸಂಸಾರ ಪಾತವುಂಟಾಗುವುದು. (೫) 'ಸೋಽಹಂಬ್ರಹ್ಮ' ಎಂಬೀ ಅನುಭವವುಳ್ಳವನು ಬ್ರಹ್ಮತ್ವವನ್ನು ಹೊಂದುವನು. (೬) ಈಶ್ವರನು ಬೇರೆ, ನಾನು ಬೇರೆ, ಎಂಬೀ ಅನುಸಂಧಾನದಿಂದ ಅನ್ಯದೇವತಾರಾಧನವನ್ನು ಮಾಡುವಂತವರು ಆ ದೇವತೆಗೆ ಪಶುವೆನ್ನಲ್ಪಡುವರು. ಅದು ಹೇಗೆಂದರೆ? ಲೋಕದಲ್ಲಿ ಒಬ್ಬ ಗೃಹಸ್ಥನು ಹಾಲಿನಲ್ಲಿ ತಾನಪೇಕ್ಷೆಯನ್ನಿಟ್ಟುಕೊಂಡು ತೃಣಾದ್ಯಾಹಾರಗಳನ್ನು ಹಾಕಿ ಪೋಷಿಸುವುದರಿಂದ ಪಶುವು ಹೇಗಾದರೆ ಆತನಿಗೆ ಸ್ವಾಧೀನಪಟ್ಟಿರುವುದೋ (ಎಂದರೆ ಅಂತವನು ತನ್ನ ಸ್ವಾಧೀನವನ್ನು ಬಿಡದೆ ಹೇಗಾದರೆ ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುವನೋ) ಆ ಪ್ರಕಾರವೇ ಹವಿರ್ಭಾಗಾದಿಗಳಲ್ಲ ಪೇಕ್ಷಾಯುಕ್ತರಾದ ದೇವತೆಗಳು ಧನಕನಕಾದಿ ಫಲಗಳನ್ನು ಕೊಡುತಾ ಮನುಷ್ಯನನ್ನು ಕರ್ಮಗಳಲ್ಲಿಯೇ ಪ್ರವರ್ತಿಸುವಂತೆ ಮಾಡುವರಲ್ಲದೆ ಬ್ರಹ್ಮಜ್ಞಾನಿಯಾಗುವುದಕ್ಕೆ ಅವಕಾಶವನ್ನು ಕೊಡುವುದಿಲ್ಲವು. ಬ್ರಹ್ಮಜ್ಞಾನಿಯಾಗಿ ಸಮಸ್ತವನ್ನು ಬ್ರಹ್ಮವನ್ನಾಗಿ ತಿಳಿಯುವಂತವನು ಬ್ರಹ್ಮತ್ವವನ್ನು ಹೊಂದುವನು. ಚರ್ಮವು ಸುತ್ತುವುದಕ್ಕೆ ಹೇಗಾದರೆ ಸಾಧ್ಯವಾಗುವುದೋ ಅದರಂತೆ ಆಕಾಶವು ಹೇಗಾದರೆ ಸುತ್ತಲ್ಪಡಲಾರದೋ ಅದೇ ರೀತಿಯಾಗಿ ಪ್ರಪಂಚಾನುಭವವನ್ನು ಹೊಂದಿರುವ ಕಾಲದಲ್ಲಿ ಸ್ವಸ್ವ

ರೂಪಾನುಭವವು ಅಸಾಧ್ಯವು.) ಈ ಪ್ರಕಾರವಾಗಿ ವಿದ್ಯಾವಿದ್ಯಾದಿ ವಿಷಯಕಗಳಾದ ಅನೇಕ ಸಹಸ್ರ ಶ್ರುತಿಗಳಿರುವುವು. ಈ ಪ್ರಕಾರವೆ ಸ್ಮೃತಿಗಳೂ "ಅಜ್ಞಾನೇನಾವೃತಂಜ್ಞಾನಂತೇನಮುಹ್ಯಂತಿಜಂತವಃ" (ಭಗವದ್ಗೀತಾ॥ ೫॥೧೫) ಇಹೈವತ್ಯೈರ್ಜಿತಸ್ಸರ್ಗೋಯೇಷಾಂಸಾಮ್ಯೇಸ್ಥಿತಂಮನಃ (೫॥೧೯) ಸಮಂಪಶ್ಯನ್ಹಿಸರ್ವತ್ರ" (೧೩॥೨೮) ಎಂಬದಾಗಿ ಅನೇಕಗಳಿರುವುವು. (ಇದರ ಅರ್ಥಗಳನ್ನು ಅಲ್ಲಿಯೇ ನೋಡಬಹುದು.)

ಅದರಂತೆ "ಸರ್ಪಾನ್ಕುಶಾಗ್ರಾಣಿತಥೋದಪಾನಂಜ್ಞಾತ್ವಾಮನುಷ್ಯಾಸ್ಸರಿವರ್ಜಯಂತಿ । ಅಜ್ಞಾನತಸ್ತತ್ರಪತಂತಿಕೇಚಿಜ್ಜ್ಞಾನೇಫಲಂಪಶ್ಯಯಥಾವಿಶಿಷ್ಟಂ" ॥ (ಜ್ಞಾನವುಳ್ಳ ಮನುಷ್ಯರು ಸರ್ಪಗಳನ್ನೂ ದರ್ಭಾಗ್ರಗಳನ್ನೂ ಭಾವಿಗಳನ್ನೂ ನೋಡಿ ಇವು ತನಿಗೆ ಭಯಹೇತುಗಳೆಂಬದಾಗಿ ತಿಳಿದು ಅವುಗಳನ್ನು ತಪ್ಪಿಸಿಕೊಳ್ಳುವರು. ಜ್ಞಾನಶೂನ್ಯತೆಯಿಂದ ಅವುಗಳಲ್ಲಿ ಬಿದ್ದು ಕೆಲವರು ಕಷ್ಟವಂ ಹೊಂದುವರು. ಆದುದರಿಂದ ಜ್ಞಾನವುಳ್ಳವರಿಗೆ ಯೆಂತಹ ವಿಶೇಷವುಂಟಾಗಿರುವುದೋ ಅದನ್ನು ನೋಡು.) ಎಂಬ ಲೋಕನ್ಯಾಯದಿಂದಲೂ ಈ ಅರ್ಥವು ಸಿದ್ಧವಾಗಿರುವುದು. ಆದುದರಿಂದ ದೇಹಾದಿಗಳಲಾತ್ಮಬುದ್ಧಿಯುಳ್ಳ ಅವಿವೇಕಿಯು ರಾಗದ್ವೇಷಾದಿಗಳಿಂದ ಕೂಡಿದವನಾಗಿಯೂ ಧರ್ಮಾಧರ್ಮಗಳನ್ನನುಷ್ಠಿಸುವಂತವನಾಗಿಯೂ ಇರುತ ಸರ್ವದಾ ಜನನಮರಣಗಳನ್ನು ಹೊಂದುತಲಿರುವನೆಂದು ತಿಳಿಯಬರುತ್ತದೆ. ಆತ್ಮವು ದೇಹಾದಿವ್ಯತಿರಿಕ್ತವಾಗಿರುವುದೆಂಬೀ ಜ್ಞಾನವುಳ್ಳವರು ರಾಗದ್ವೇಷಾದಿಗಳನ್ನು ನೀಗಿಸಬೇಕೆಂಬೀ ಅಪೇಕ್ಷೆಯಿಂದ ಧರ್ಮಾಧರ್ಮಪ್ರವೃತ್ತಿಗಳ ದಶೆಯಿಂದ ನಿವೃತ್ತರಾಗುವುದರಿಂದ ಮುಕ್ತರಾಗುವರು. ಈ ಸಂದರ್ಭವನ್ನು ಯಾವ ನ್ಯಾಯವಾದಿಯೂ ಅಸಂಗತವೆನ್ನಲಾರನು. (ಈ ಅಂಶಕ್ಕೆ ಅನ್ಯಥಾ ಸಿದ್ಧಿಸಾಧಕವಿಲ್ಲದೇ ಇರುವುದರಿಂದ ಯಾರಿಂದಲೂ ತಿರಸ್ಕಾರವು ಪ್ರಾಪ್ತವಾಗಲಾರದೆಂದರ್ಥವು.) ಈರೀತಿಯಾಗಿರುವುದರಿಂದಲೆ, ಈಶ್ವರನೇ ಕ್ಷೇತ್ರಜ್ಞನು, ಈ ಕ್ಷೇತ್ರಜ್ಞನೆ ಅವಿದ್ಯಾಮೂಲಕವಾಗಿ ಪ್ರಾಪ್ತವಾಗುವ ಉಪಾಧಿಭೇದಗಳ ದಶೆಯಿಂದ ದೇಹಾತ್ಮಭ್ರಮವನ್ನು ಹೊಂದಿ ಸಂಸಾರಿಗಳಂತೆ ತೋರಲ್ಪಡುವನು. ಸ್ತಂಭವನ್ನು ನೋಡಿ

ಇದು ಮನುಷ್ಯನೆಂಬ ಭ್ರಮವು ಹೇಗಾಪರೆ ಉಂಟಾಗುವುದೋ, ಆ ಪ್ರಕಾರವಾಗಿ ಅವಿದ್ಯಾಮಾಹಾತ್ಮ್ಯದಿಂದ ಅನಾತ್ಮಗಳಾದ ದೇಹಾದಿಗಳೇ ಆತ್ಮವೆಂಬ ನಿಶ್ಚಯಾತ್ಮಕಭ್ರಮವು ಸಮಸ್ತ ಪ್ರಾಣಿಗಳಿಗೂ ಉಂಟಾಗುವುದು. ಆದರೆ ಸ್ತಂಭವನ್ನು ನೋಡಿ ಇದು ಮನುಷ್ಯನೆಂಬದಾಗಿ ಭ್ರಮಪಟ್ಟಮಾತ್ರದಿಂದಲೆ ಮನುಷ್ಯ ಧರ್ಮಗಳೆಲ್ಲವೂ ಸ್ತಂಭದಲ್ಲಿಯಾದರೂ ಸ್ತಂಭಧರ್ಮಗಳೆಲ್ಲವೂ ಮನುಷ್ಯನಲ್ಲಿಯಾದರೂ ಉಂಟಾಗಲಾರವು. ಆರೀತಿಯಾಗಿಯೇ ಚೈತನ್ಯಸ್ವರೂಪವಾದ ಆತ್ಮಧರ್ಮಗಳು ದೇಹಕ್ಕಾದರೂ ದೇಹಧರ್ಮಗಳು ಆತ್ಮನಿಗಾದರೂ ಉಂಟಾಗಲಾರವು. ಆದುದರಿಂದ ಜರಾಮೃತ್ಯುಗಳಂತೆ ಸುಖದುಃಖಮೋಹಾತ್ಮಕತ್ವವೇ ಮೊದಲಾದ ಧರ್ಮಗಳೂ ಅವಿದ್ಯೆಯಿಂದುಂಟಾಗುವುವಲ್ಲದೆ ಆತ್ಮಧರ್ಮಗಳೆನ್ನಲಾಗುವುದಿಲ್ಲವು.

(ಪ್ರ) ಆದರೆ ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಭೇದವಿರುವುದರಿಂದ ನೀನು ಹೇಳಿದ್ದು ಯುಕ್ತವಲ್ಲವು. ಅದು ಹೇಗೆಂದರೆ? ಸ್ತಂಭವೂ ಮನುಷ್ಯನೂ ತಿಳಿಯಲ್ಪಡತಕ್ಕವರಾಗಿರುತಾ ಜ್ಞಾತಾ ಆದ ಮತ್ತೊಬ್ಬನಿಂದ ತನ್ನ ಜ್ಞಾನದ ದಶೆಯಿಂದ ಒಂದು ಮತ್ತೊಂದಾಗಿ ಕಾಣಲ್ಪಡುವುದು. ದೇಹಾತ್ಮಗಳ ವಿಷಯದಲ್ಲಿ ಒಂದು ಜ್ಞೇಯವಾಗಿಯೂ (ತಿಳಿಯಲ್ಪಡತಕ್ಕದ್ದಾಗಿಯೂ) ಮತ್ತೊಂದು (ತಿಳಿಯುವ ವಸ್ತುವಾಗಿಯೂ) ಜ್ಞಾತಾ ಆಗಿಯೂ ಇರುವುದು. ಅಂತಹ ಈ ಎರಡು ವಸ್ತುಗಳಲ್ಲಿ ಒಂದು ಮತ್ತೊಂದಾಗಿ ತಾನಾಗಿಯೇ ಭ್ರಮವನ್ನು ಹೊಂದಿರುವುದು. ಆದುದರಿಂದ ಮೇಲೆ ವಿವರಿಸಿರುವ ದೃಷ್ಟಾಂತವು ಯುಕ್ತವಾಗಿಲ್ಲವು. ಆದಕಾರಣ ದೇಹಧರ್ಮಗಳು ಜ್ಞೇಯಗಳಾಗಿದ್ದರೂ ಜ್ಞಾತಾ ಆದ ಆತ್ಮನಿಗುಂಟಾಗದೆ ಹೋಗಲಾರದೆಂದರೆ ಇದಕ್ಕುತ್ತರವು.

(ಸಿ) ಆರೀತಿಯಾಗಿ ಹೇಳಿದರೆ ಆತ್ಮನಿಗೆ ಅಚೇತನತ್ವವೆ ಮೊದಲಾದ ದೇಹಧರ್ಮಗಳು ಬರಬೇಕಾಗಿ ಪ್ರಾಪ್ತವಾಗುವುದರಿಂದ ಆಪ್ರಕಾರ ಹೇಳಕೂಡದು. ಅದು ಹೇಗೆಂದರೆ? ಜ್ಞೇಯವೂ ಕ್ಷೇತ್ರವೂ ಎನ್ನಲ್ಪಡುವ ದೇಹಾದಿಗಳ ಧರ್ಮಗಳಾದ ಸುಖದುಃಖಮೋಹೇಚ್ಛಾದಿಗಳು ಬಂದುವೇಳೆ ಜ್ಞಾತಾ ಆದ ಆತ್ಮನಿಗುಂಟಾಗುವಪಕ್ಷದಲ್ಲಿ ಜ್ಞೇಯವಾದ

ಕ್ಷೇತ್ರದ ಧರ್ಮಗಳಲ್ಲಿ ಕೆಲವು ಅವಿದ್ಯಾಧ್ಯಾರೋಪಿತಗಳಾಗಿ ಆತ್ಮಗತಗಳಾಗಿರುವುವೆಂದರೆ ಜರಾಮರಣಾದಿಗಳು ಆತ್ಮಧರ್ಮಗಳಾಗಿರಬಹುದು. ಜರಾಮರಣಾದಿಗಳಾತ್ಮ ಧರ್ಮಗಳಲ್ಲವೆನ್ನುವುದಕ್ಕೆ ಮಾತ್ರ ವಿಶೇಷ ಕಾರಣವಿರಬೇಕಲ್ಲವೆ? ಆದರೆ ಸುಖಾದಿಗಳಾತ್ಮ ಧರ್ಮಗಳಲ್ಲನೆನ್ನುವುದಕ್ಕೆ ಮಾತ್ರ ಹೇತುಗಳು ಯಾವವೂ ಇಲ್ಲವೆನ್ನುವಪಕ್ಷದಲ್ಲಿ ಅದಕ್ಕೆ ತಕ್ಕ ಕಾರಣಗಳಂ ವಿವರಿಸುವೆನು ಕೇಳು. „ಸುಖಾದಿಗಳಾತ್ಮಧರ್ಮಗಳಲ್ಲವು. ಅವಿದ್ಯಾಧ್ಯಾರೋಪಿತವಾಗಿರುವುದರಿಂದ, ಜರಾದಿಗಳಂತೆ.,, ಎಂಬೀ ಪ್ರಕಾರವಾದ ಅನುಮಾನದಿಂದ ಅದಂಸಾಧಿಸುವೆವು. ಮತ್ತು ಅವು ಬರುವುದು ಹೋಗುವುದಾಗಿರುವುದರಿಂದಲೂ ದೃಶ್ಯಗಳು (ಕಾಣಲ್ಪಡುವುವು) ಜಡಗಳಾಗಿರುವುವಾದುದರಿಂದಲೂ ಆತ್ಮಧರ್ಮಗಳಲ್ಲವೆನ್ನುವುದು ಯುಕ್ತವಾಗಿಯೇ ಇರುವುದು. („ಸುಖಾದಿಗಳಾತ್ಮಧರ್ಮಗಳಲ್ಲವು, ಬರುವುದು ಹೋಗುವುದಾಗಿರುವುದರಿಂದ, ಸಂಸಾರದಂತೆ,, ಎಂಬೀ ಅನುಮಾನಾಂತರ ಪ್ರಮಾಣವನ್ನೂ ಇಲ್ಲರಿಯಬೇಕು.) ಆ ಪ್ರಕಾರವಾಗಿ ಹೇಳುವುದಾದರೆ ಆತ್ಮನಿಗೆ ಸಂಸಾರಿತ್ವವು ಹೇಗೆ ಉಂಟಾಯಿತು? ಎಂದರೆ ಜ್ಞೇಯವಾದ ದೇಹಾದಿಕದಲ್ಲಿರುವ ಕರ್ತೃತ್ವ ಭೋಕ್ತೃತ್ವರೂಪವಾದ ಸಂಸಾರವು ಜ್ಞಾತೃವಾದ ಆತ್ಮನಲ್ಲಿ ಅವಿದ್ಯಾಧ್ಯಾರೋಪಿತವಾಗಿರುವುದರಿಂದ. ಇಲ್ಲಿ ಅಲ್ಲೆಂಬದಾಗಿ ಆಕಾಶದಲ್ಲಿ ಪ್ರದೇಶವಿರುವಂತೆಯೂ ಕಪ್ಪು ಮೊದಲಾದ ಬಣ್ಣಗಳಿರುವಂತೆಯೂ ಪಾಮರರು ಆರೋಪಿಸುವುದರಿಂದ ಆಕಾಶಕ್ಕೆ ಹೇಗಾದರೆ ದೋಷವು ಉಂಟಾಗಲಾರದೋ ಅದರಂತೆ ಜ್ಞಾತೃ ಆದ ಆತ್ಮನಿಗೆ ಅಂತಹ ಅಧ್ಯಾರೋಪದಿಂದ ಯಾವ ದೋಷಗಳೂ ಇರಲಾರವು. ಆದುದರಿಂದ ಸರ್ವಕ್ಷೇತ್ರಗಳಲ್ಲಿರುವಂತವನಾಗಿದ್ದರೂ ಕ್ಷೇತ್ರಜ್ಞನೆನ್ನಲ್ಪಡುವ ಈಶ್ವರನಿಗೆ ಸಂಸಾರಿತ್ವವೆಂಬ ಗಂಧವೂ ಕೂಡ ಶಂಕಿಸಲಾಗದು. ಲೋಕದಲ್ಲಿ ಅಜ್ಞಾನದಿಂದ ಅಧ್ಯಾಸಮಾಡಲ್ಪಟ್ಟ ಧರ್ಮದಿಂದ ಯಾವನಿಗಾದರೂ ಉಪಕಾರವಾದರೂ ಅಪಕಾರವಾದರೂ ಉಂಟಾಗಿರುವಂತೆ ಕಾಣಲ್ಪಡುವುದಿಲ್ಲವಷ್ಟೆ.

ಮತ್ತು ದೃಷ್ಟಾಂತವು ಯುಕ್ತವಾಗಿಲ್ಲವೆಂಬದಾಗಿ ಶಂಕಿಸಿರುತ್ತೀಯಲ್ಲವೆ? ಅದೂ ಯುಕ್ತವಲ್ಲವು. ಅದು ಹೇಗೆಂದರೆ? ದೃಷ್ಟಾಂತದಾ

ರ್ಷ್ಟಾಂತಿಕಗಳಲ್ಲಿ ಅವಿದ್ಯಾಧ್ಯಾಸವೆಂಬೀ ಅಂಶಮಾತ್ರವೇ ಸಮಾನಧರ್ಮವಾಗಿ ಸ್ವೀಕರಿಸಲ್ಪಟ್ಟಿರುವುದು. ಅದಕ್ಕೆ ಯಾವಬಾಧೆಯೂ ಇಲ್ಲವು. ಆದರೂ ದೃಷ್ಟಾಂತದಲ್ಲಂತೆ ದಾರ್ಷ್ಟಾಂತಿಕದಲ್ಲಿ ಜ್ಞೇಯಗಳಾದ ಯೆರಡು ವಸ್ತುಗಳಲ್ಲಿ ಒಂದರಲ್ಲಿರುವ ಧರ್ಮಗಳು ಮತ್ತೊಂದರಲ್ಲಿ ಸಂಕ್ರಮಿಸುವಂತೆ ತಿಳಿದುಕೊಳ್ಳುವ ಜ್ಞಾತಾಆದವನು ಪ್ರತ್ಯೇಕನಾಗಿಲ್ಲವಾದುದರಿಂದ ಬಾಧೆಯುಂಟಾಗಲಾರದೊ? ಎಂದರೆ ಅಂತಹಾ ಬಾಧೆಯು ಯಾವದೂ ಉಂಟಾಗಲಾರದು. ಹೇಗೆಂದರೆ ಜ್ಞೇಯವಾದ ಒಂದರಲ್ಲಿರುವ ಧರ್ಮಗಳನ್ನು ಜ್ಞಾತಾಆದವನಲ್ಲಿ ಧ್ಯಾಸಮಾಡುವಿಕೆಯು ಯುಕ್ತವಾಗಲಾರದೆಂಬುದಾಗಿ ಯೆಲ್ಲಾದರೂ ನಿಯಮವುಂಟಾಗಿರುವದೊ? ಆದುದರಿಂದ ತಾವನ್ಮಾತ್ರದಿಂದಲೆ ದೃಷ್ಟಾಂತ ದಾರ್ಷ್ಟಾಂತಿಕಗಳಿಗೆ ಸಾಧರ್ಮ್ಯವಿಲ್ಲವೆನ್ನುವುದಕ್ಕೆ ಸಾಧನವಿಲ್ಲವು. ಜರಾದಿಗಳುಂಟಾಗುವುದನ್ನವಲಂಬಿಸಿ ಅವಿದ್ಯಾದೂಷಿತನಾಗುವನಾದುದರಿಂದ ಕ್ಷೇತ್ರಜ್ಞನಿಗೆ ಸಂಸಾರಿತ್ವವು ತಪ್ಪಲಾರದೆಂದರೆ ಆ ಪ್ರಕಾರವಾಗಿ ಹೇಳುವುದು ಸರಿಯಾದದ್ದಲ್ಲವು. ಅವಿದ್ಯೆಯೆಂಬುವುದು ಒಂದು ವಸ್ತುವನ್ನು ಮತ್ತೊಂದನ್ನಾಗಿಗ್ರಹಿಸುವಿಕೆಯೊ? ಅಥವಾ ಅನಾದಿಯಾಗಿಯೂ ಅನಿರ್ವಾಚ್ಯವಾಗಿಯೂ ಇರುವ ಅಜ್ಞಾನವೋ? ಇವುಗಳಲ್ಲಿ ಮೊದಲನೇದೆನ್ನುವುದಕ್ಕಾಗುವುದಿಲ್ಲವು. ಏತಕ್ಕೆಂದರೆ ಒಂದು ವಸ್ತುವನ್ನು ಮತ್ತೊಂದುವಸ್ತುವಿನಂತೆ ಗ್ರಹಿಸುವಿಕೆಯು ತಮಸ್ಸೆನ್ನಲ್ಪಡುವ ಅನಿರ್ವಾಚ್ಯಾಜ್ಞಾನದ್ದಶೆಯಿಂದುಂಟಾಗುವ ಅನುಭವ ವಿಶೇಷವು. ತಮೋಗುಣಜನ್ಯವಾಗಿರುವ ತಾಮಸವಾದ ಅನುಭವವು ಆವರಣ ಸ್ವರೂಪವಾಗಿರುವುದರಿಂದ ಅವಿದ್ಯಾಕಾರ್ಯವಾದ ಒಂದು ವಸ್ತುವನ್ನು ಮತ್ತೊಂದುವಸ್ತುವನ್ನಾಗಿ ಗ್ರಹಿಸುವಿಕೆಯೆಂಬ ವಿಪರೀತ ಗ್ರಹಣವನ್ನೂ ಸಂಶಯವನ್ನೂ ಉಂಟುಮಾಡುವಂಥಾದ್ದಾದರೂ ಅಂತಹ ಗ್ರಹಣಸ್ವರೂಪವಾಗಿಯಾದರೂ ಇರುವುದು. ಅದು ಹೇಗೆಂದರೆ? ವಿವೇಕಪ್ರಕಾಶವುಂಟಾದ ಕಾಲದಲ್ಲಿ ಅವಿವೇಕವು ಹೋಗುವುದರಿಂದಲೂ ತಮೋಗುಣಜನ್ಯವಾದ ಆವರಣರೂಪವಾಗಿರುವ ತಿಮಿರದೋಷವುಂಟಾದಕಾಲದಲ್ಲಿ ಅಜ್ಞಾನವೂ ಮಿಥ್ಯಾ ಬುದ್ಧಿಯೂ ಸಂಶಯವೂ ಎಂಬೀ ಅವಿದ್ಯಾತ್ರಯವುಂಟಾಗುವುದರಿಂದಲೂ ಆಯಾಕಾರಣ

ಗಳಿಂದ ಉಂಟಾಗುವುದೂ ಹೋಗುವುದೂ ಆಗಿರುವ ಅವಿದ್ಯಾಮೂಲವಾದ ಸಂಸಾರಿತ್ವವು ಆತ್ಮಧರ್ಮವೆನ್ನಲ್ಪಡಲಾರದು. ಆದರೆ ಅನಿರ್ವಾಚ್ಯಾವಿದ್ಯೆಗೆ ದೋಷವೆ ಕಾರಣವಾಗಿರುವುದರಿಂದಲೂ ಹುಟ್ಟುವಂತಹ ಪ್ರತಿ ವಸ್ತುವಿಗೂ ಭಾವ (ಸ್ಥಿರವಾಗಿರುವ) ವಸ್ತುವೇ ಉಪಾದಾನಕಾರಣವಾಗಬೇಕಾಗಿರುವುದರಿಂದಲೂ (ಘಟರೂಪವಾದ ಕಾರ್ಯಕ್ಕೆ ಮೃತ್ತು ಉಪಾದಾನಕಾರಣವು. ಘಟಕ್ಕೆ ಮಣ್ಣಿನಂತೆ ಯಾವಪದಾರ್ಥವು ಯಾವ ವಸ್ತುವಾಗಿ ರೂಪಾಂತರಪರಿಣಾಮದಿಂದುಂಟಾಗುವುದೋ ಆ ಪದಾರ್ಥವು ಆ ವಸ್ತುವಿಗೆ ಉಪಾದಾನವು. ಮಣ್ಣಿನ ರೂಪಾಂತರ ಪರಿಣಾಮವುವೆ ಘಟವು. ಆದುದರಿಂದ ಘಟಕ್ಕೆ ಮೃತ್ತು ಉಪಾದಾನವು.) ಅಂತಹಾ ಅವಿದ್ಯೆಯಿಂದುಂಟಾಗುವ ವಿಪರೀತಜ್ಞಾನಾದಿಗಳಿಗೆ ಆತ್ಮನೇ ಉಪಾದಾನಕಾರಣವಾಗಬೇಕಲ್ಲವೆ? ಎಂದರೆ ಆಪ್ರಕಾರವಾಗಲಾರದು. ಏತಕ್ಕೆಂದರೆ ತಿಮಿರದೋಷಾದಿಗಳು ಕಣ್ಣಿನಲ್ಲಿ ಉಂಟಾಗಿರುವಂತೆ ಸ್ಪಷ್ಟವಾಗಿ ತಿಳಿಯಬರುವುದರಿಂದ ವಿಪರೀತ ಜ್ಞಾನಾದಿಗಳಿಗೆ ಅಂತಃಕರಣವೆ ಉಪಾದಾನಕಾರಣವೆಂಬದಾಗಿ ಹೇಳಬಹುದು. ಸತ್ಯವಾದ ವಸ್ತುವಿಗೆ ಸತ್ಯವಾದವಸ್ತುವೆ ಉಪಾದಾನವಾಗಬೇಕು. ದೋಷಕ್ಕೆ ಆತ್ಮನು ಉಪಾದಾನವಾದರೆ ದೋಷವು ಸತ್ಯವಾಗಬೇಕಾಗಿಬರುವುದು. ಆದುದರಿಂದ ಅಂಶಹಾವಿಪರೀತಜ್ಞಾನಾದಿಗಳಿಗೆ ಅವಿದ್ಯೋಪಾಧಿಜನ್ಯವಾದ ಅಂತಃಕರಣವೇ ಕಾರಣವಾಗಿರುವುದೆಂದು ಹೇಳುವುದು ಉಚಿತವಾಗಿಯೇ ಇರುವುದು. ಮತ್ತು ಜ್ಞಾತಾ ಆದ ಆತ್ಮನಿಗೆ ಅವಿದ್ಯೆಯುಂಟಾಗಿದ್ದರೂ ಆತ್ಮನು ಅಸಂಸಾರಿಯಾಗಿರುವುದರಿಂದ ಭಗ್ನದಂಷ್ಟ್ರವಾದ ಸರ್ಪದಂತೆ ಅವಿದ್ಯೆಯು ಏನು ಮಾಡುವುದು? ಎಂದರೆ ಆಪ್ರಕಾರ ಹೇಳುವುದು ಯುಕ್ತವಲ್ಲವು. ಅವಿದ್ಯಾಧರ್ಮಗಳೊಡನೆ ಸೇರಿರುವಿಕೆಯು ಸಂಸಾರಿತ್ವವಲ್ಲದೆ ಅವಿದ್ಯಾಭಿನ್ನವಾಗಿ ಸಂಸಾರಿತ್ವವೆ ಇಲ್ಲವಷ್ಟೆ? ಇಷ್ಟುಮಾತ್ರವಲ್ಲದೆ ಈಶ್ವರನು ಕ್ಷೇತ್ರಜ್ಞನಲ್ಲದೆ ಸಂಸಾರಿಯಲ್ಲವೆನ್ನುವುದು ಯುಕ್ತವಲ್ಲವೆಂದು ನೀನು ಪೂರ್ವಪಕ್ಷವನ್ನು ಮಾಡಿರುತ್ತೀಯಲ್ಲವೆ? ಅದೂ ಸರಿಯಾದದ್ದಲ್ಲವು. ಏಕ್ಕೆಂದರೆ ಚಕ್ಷುರಿಂದ್ರಿಯದಲ್ಲಿ ವಿಪರೀತವಾಗಿ ಕಾಣಿಸಲ್ಪಡುವುದೇಮೊದಲಾದ ದೋಷಗಳುಂಟಾಗಿರುವುದರಿಂದ ಆರೀತಿಯಾಗಿ ವಿಪರೀತ ಗ್ರಹಣವಾದ

ರೂ ಅದಕ್ಕೆ ಕಾರಣವಾದ ತಿಮಿರಾದಿ ದೋಷಗಳಾದರೂ ಗ್ರಹಿಸುವಂತವನಿಗಿರುವುದೆಂದು ಹೇಳುವುದು ಉಚಿತವೋ? ಏತಕ್ಕೆ ಉಚಿತವಲ್ಲವೆಂದರೆ? ನೇತ್ರವೈದ್ಯದಿಂದ ತಿಮಿರದೋಷವು ನಾಶಿತವಾದರೆ ಗ್ರಹಿಸುವಂತವನಲ್ಲಂತಹ ದೋಷವು ಇಲ್ಲದೆಇರುವುದರಿಂದ ಅದು ಗ್ರಹೀತಾಆದವನ ಧರ್ಮವೆಂಬುವುದು ಹೇಗಾದರೆ ಅಸಂಭಾವಿತವೋ ಅದರಂತೆಯೆ ತಿಳಿದುಕೊಳ್ಳದೆ ಇರುವಿಕೆಯೂ ಬೇರೊಂದಾಗಿ ತಿಳಿದುಕೊಳ್ಳುವಿಕೆಯೂ ಸಂಶಯವನ್ನು ಹೊಂದುವಿಕೆಯೂ ಎಂಬೀ ತ್ರಿವಿಧಾನುಭವಗಳೂ ಅವುಗಳಿಂದುಂಟಾಗುವ ಧರ್ಮಗಳೂ ಯಾವದೊಬಂದು ಇಂದ್ರಿಯದ ಸಂಬಂಧಿಗಳೆಂದು ತಿಳಿಯಬೇಕಲ್ಲದೆ ಜ್ಞಾತಾಆದ ಕ್ಷೇತ್ರಜ್ಞನಧರ್ಮಗಳೆಂದು ಹೇಳುವುದಕ್ಕವಕಾಶವೇಇಲ್ಲವು. ಆದರೆ ಆಧರ್ಮಗಳು ಸಂವೇದ್ಯಗಳಲ್ಲವೆ? ಎಂದರೆ ಸಂವೇದ್ಯವೆಂಬಕಾರಣದಿಂದಲೆ ಆತ್ಮಧರ್ಮಗಳೆಂದು ಹೇಳುವುದಕ್ಕೆ ಅವಕಾಶವುಂಟಾಗುವುದೋ? (ಸಂವೇದ್ಯವೆಂದರೆ ತಿಳಿಯಲ್ಪಡತಕ್ಕದ್ದು) ಉಂಟಾಗಲಾರದು. ಎಂದರೆ ದೀಪವು ಹೇಗಾದರೆ ತನಿಗಿಂತಲೂ ಭಿನ್ನವಾದವುಗಳಿಂದ ತಿಳಿಯಲ್ಪಡತಕ್ಕದ್ದಾಗಿರುವುದೋ ಅದರಂತೆಯೆ ಯಾವಯಾವ ವಸ್ತುಗಳು ಸಂವೇದ್ಯಗಳೋ ಅವೆಲ್ಲವೂ ತನಿಗಿಂತಲೂ ಭಿನ್ನವಾದ ವಸ್ತುಗಳಿಂದ ತಿಳಿಯಲ್ಪಡತಕ್ಕವುಗಳಾಗಿಯೆ ಇರುವುವು. ಆದುದರಿಂದ ವಿಪರೀತಗ್ರಹಣಾದಿ ಧರ್ಮಗಳು ಸಂವೇದ್ಯಗಳೇ ಆಗಿರುವುದರಿಂದ ತಿಳಿಯಲ್ಪಡತಕ್ಕ ಧರ್ಮಗಳು ತಿಳಿದುಕೊಳ್ಳುವಂತಹ ವಸ್ತುವಿನಲ್ಲಿರಲಾರವು. ಶಂಕೆ. ಸರ್ವೇಂದ್ರಿಯ ಸಂಬಂಧಗಳು ತಪ್ಪಿದಮೇಲೆ ಕೈವಲ್ಯಾನುಭವದಲ್ಲಿ ಆತ್ಮನಿಗೆ ಅವಿದ್ಯಾದಿದೋಷ ಸಂಪರ್ಕವಿಲ್ಲವೆಂಬೀ ಅಂಶವನ್ನು ಸರ್ವರೂ ಅಂಗೀಕರಿಸಿರುತ್ತಾರಲ್ಲವೆ? ಆದರೆ ಅಗ್ನಿಗೆ ಉಷ್ಣಧರ್ಮವು ಹೇಗಾದರೆ ಸ್ವಧರ್ಮವೋ ಅದರಂತೆ ಅವಿದ್ಯೆಯೇನು, ಅದರಿಂದುಂಟಾಗುವ ಧರ್ಮಗಳೇನು, ಇವು ಸ್ವತಸ್ಸಿದ್ಧಗಳೆಂದರೆ ಬಾಧಕವೇನು? ಎಂದರೆ ಇವು ಸ್ವತಸ್ಸಿದ್ಧಗಳಾಗಿದ್ದರೆ ಆತ್ಮನನ್ನು ಯಾವಾಗಲೂ ಬಿಡದೇನೆ ಇರಬೇಕಾಗಿ ಬರುವುದು. ಸಮ್ಮತವೆನ್ನುವುದಾದರೆ ಅವಿದ್ಯಾದಿನಿರ್ಮುಕ್ತರಹಿತನಿಗೆ ಮೋಕ್ಷವೆಂಬುವುದು ತಾನೆ ಹೇಗೆ? ಇದರಿಂದ ಮೋಕ್ಷವೇ ಇಲ್ಲವೆಂದು ಹೇಳಿದಂತೆ ಆಗುವುದು. ಆದುದರಿಂದ ಅವಿಕಾರಿಯೂ, ಆಕಾಶದಂತೆ ಸ

ರ್ವಗತನೂ ಆದ ಅಮೂರ್ತ ವಸ್ತುವಾಗಿರುವ ಆತ್ಮನಿಗೆ ಯಾವ ಧರ್ಮಗಳೊಡನೆಯೂ ಸಂಯೋಗವಿಯೋಗಗಳುಂಟೆನ್ನುವುದಕ್ಕೆ ಯಾವ ವಿಧದಲ್ಲಿಯೂ ಸಾಧನವಿಲ್ಲವು. ಆದುದರಿಂದ ಕ್ಷೇತ್ರಜ್ಞನಿಗೆ ಈಶ್ವರತ್ವವು ನಿತ್ಯವಾಗಿರುವುದೆಂತಲೆ ಸಿದ್ಧವಾಯಿತು. ಮತ್ತು ಈ ಅಂಶವು „ಅನಾದಿತ್ವಾನ್ನಿರ್ಗುಣತ್ವಾತ್" (೧೩॥೩೧॥) ಎಂಬೀ ಈಶ್ವರವಚನದಿಂದಲೂ ಸಿದ್ಧವಾಗಿರುವುದು.

ಆದರೆ ನೀನು ಹೇಳಿದಂತೆ ಸಂಸಾರಿತ್ವವಿಲ್ಲದೆ ಹೋದರೆ ಶಾಸ್ತ್ರಗಳಿಗೆ ಆನರ್ಥಕ್ಯಗಳುಂಟಾಗುವುದರಿಂದ ಅವನಿಗೆ ಸಂಸಾರಿತ್ವವನ್ನಂಗೀಕರಿಸಬೇಕಾಗಿ ಬರುವುದು. ಅಂಗೀಕರಿಸದೇ ಹೋದರೆ ದೋಷಗಳುಂಟಾಗುವುದಿಲ್ಲವೆ?.

ಎಂದರೆ ಈ ವಿಷಯವು ಸರ್ವರಿಂದಲೂ ಅಂಗೀಕೃತವಾಗಿರುವುದರಿಂದ ಸರ್ವರಿಂದಲೂ ಅಂಗೀಕರಿಸಲ್ಪಟ್ಟ ದೋಷವನ್ನು ಪರಿಹರಿಸುವ ಬಾಧ್ಯತೆಯು ಒಬ್ಬನಿಗೆ ಇರಲಾರದಷ್ಟೆ? ಆದರ ಸರ್ವರೂ ಹೇಗೆ ಈ ದೋಷವನ್ನಂಗೀಕರಿಸಿರುತ್ತಾರೆಂದರ? ಅದನ್ನು ಕೇಳು:— ಮೋಕ್ಷವನ್ನು ಹೊಂದಿರುವಂತವರಿಗೆ ಸಂಸಾರ ಸಂಸಾರಿತ್ವ ವ್ಯವಹಾರವಿಲ್ಲವೆನ್ನುವುದಂ ಆಸ್ತಿಕರೆಲ್ಲರೂ ಅಂಗೀಕರಿಸಿಯೇ ಇರುತ್ತಾರಲ್ಲವೆ? ಅಂತಹ ಸಂದರ್ಭದಲ್ಲಿ ಅಂತವರಿಗೆ ಶಾಸ್ತ್ರಗಳು ವ್ಯರ್ಥವಾಗುವುದರಿಂದ ಹೇಗಾದರೆ ದೋಷವಿಲ್ಲವೊ ಅದರಂತೆಯೇ ಕ್ಷೇತ್ರಜ್ಞರಾದ ನಮ್ಮಗಳಿಗೆ ಪರಮಾತ್ಮನೊಡನೆ ಐಕ್ಯವನ್ನುಂಟುಮಾಡುವ ಜ್ಞಾನದ ದಶೆಯಲ್ಲಿ ಶಾಸ್ತ್ರಾನರ್ಥಕ್ಯ ವುಂಟಾದಮಾತ್ರದಲ್ಲಿಯೆ ಅದರಿಂದೇನು ಬಾಧಕವು? ಅಜ್ಞಾನದಶೆಯಲ್ಲಿ ಶಾಸ್ತ್ರಗಳು ಸಾರ್ಥಕಗಳಾಗಿಯೆ ಇರುವುವು. ಭೇದವಾದಿಗಳಾದ ಸರ್ವರಿಗೂ ಬದ್ಧಾವಸ್ಥೆಯಲ್ಲಿ ಶಾಸ್ತ್ರಗಳು ಹೇಗಾದರೆ ಸಪ್ರಯೋಜನಗಳೊ ಮುಕ್ತಾವಸ್ಥೆಯಲ್ಲಿ ಹೇಗಾದರೆ ನಿಷ್ಪ್ರಯೋಜನಗಳೊ; ಅದರಂತೆಯೆ ಅದ್ವೈತಸಿದ್ಧಾಂತಿಗಳಿಗೆಂತಲೂ ತಿಳಿಯಬೇಕು.

ಇಲ್ಲಿ ಭೇದವಾದಿಯ ಪೂರ್ವಪಕ್ಷವು.

ಭೇದವನ್ನು ಪ್ರತಿಪಾದಿಸುವ ನಮ್ಮ ಸಿದ್ಧಾಂತದಲ್ಲಿ ಆತ್ಮನಿಗೆ ಬದ್ಧಮುಕ್ತಾವಸ್ಥೆಗಳೆರಡೂ ಪರಮಾರ್ಥವಾಗಿರುವುದರಿಂದ ಇವುಗಳ

ಲ್ಲಿಂದು ಬಿಡಲ್ಪಡತಕ್ಕದ್ದಾಗಿಯೂ ಯಾವದನ್ನು ಅಪೇಕ್ಷಿಸತಕ್ಕದ್ದಾಗಿಯೂ ಇರುವದರಿಂದ ಶಾಸ್ತ್ರಗಳಿಗೆ ನಮ್ಮ ಸಿದ್ಧಾಂತಾನುಸಾರವಾಗಿ ಸಾರ್ಥಕ್ಯವುಂಟಾಗಬಹುದು. ನಿಮ್ಮ ಅದ್ವೈತಮತದಲ್ಲಿಯೋ, ಭೇದವು ಅಪರಮಾರ್ಥವಾಗಿರುವದರಿಂದಲೂ ಅವಿದ್ಯಾಕಲ್ಪಿತವಾಗಿರುವದರಿಂದಲೂ ಬದ್ಧಾವಸ್ಥೆಯೇ ಆತ್ಮನಿಗೆ ಅಪರಮಾರ್ಥವಾಗಿರುವದರಿಂದ ಶಾಸ್ತ್ರಕ್ಕೆ ವಿಷಯವೇ ಇಲ್ಲವಾಗಿರುವಕಾರಣ ಶಾಸ್ತ್ರವೈಯರ್ಥ್ಯಕ್ಕೆ ಪರಿಹಾರವೇ ಇಲ್ಲವೆಂಬ ಆಕ್ಷೇಪಕ್ಕೆ,,

### ಅದ್ವೈತಸಿದ್ಧಾಂತಿಯ ಸಮಾಧಾನವು.

ಆತ್ಮನಿಗವಸ್ಥಾ ಭೇದವನ್ನಂಗೀಕರಿಸುವದಕ್ಕೇನೆ ಸಾಧನವಿಲ್ಲವು. ಅಂಗೀಕರಿಸುವಪಕ್ಷದಲ್ಲಿ ಈ ಬದ್ಧಮುಕ್ತಾವಸ್ಥೆಗಳೆಂಬುವದು ಆತ್ಮನಿಗೆ ಏಕಕಾಲದಲ್ಲಿಯೆ ಉಂಟಾಗುವದೋ? ಅಥವಾ ಒಂದವಸ್ಥೆಯುಂಟಾದ ಮೇಲೆ ಮತ್ತೊಂದವಸ್ಥೆಯುಂಟಾಗುವದೋ? ಇದನ್ನು ವಿಚಾರಿಸಬೇಕು. ಒಂದು ವಸ್ತುವಿಗೆ ಏಕಕಾಲದಲ್ಲಿ ಸ್ಥಿತಿಗತಿಗಳು (ನಡೆಯುವಿಕೆ ನಿಂತಿರುವಿಕೆಗಳು) ಹೇಗಾದರೆ ಸಂಭವಿಸಲಾರವೋ ಆರೀತಿಯಾಗಿ ಆತ್ಮನಿಗೂ ಬದ್ಧಮುಕ್ತಾವಸ್ಥೆಗಳೆರಡೂ ಏಕಕಾಲದಲ್ಲಿ ಸಂಭವಿಸಲಾರದಷ್ಟೆ. ಮತ್ತು ಬಂಧಾವಸ್ಥೆಯು ಪ್ರಾಪ್ತವಾದಮೇಲೆ ಮತ್ತೊಂದು ಅವಸ್ಥೆಯು ಕ್ರಮವಾಗಿ ಬರುವದೆಂದರೆ ಅಂತಹ ಅವಸ್ಥೆಯು ನಿಷ್ಕಾರಣವಾಗಿ ಉಂಟಾಗುತ್ತದೆಯೇ? ಅಥವಾ ಒಂದು ಕಾರಣದಿಂದುಂಟಾಗುತ್ತದೆಯೇ? ನಿಷ್ಕಾರಣವಾಗಿ ಉಂಟಾಗುವಪಕ್ಷದಲ್ಲಿ ನಿಯಮವಿಲ್ಲದೇನೆ ಅವರ ಇಷ್ಟಾನುಸಾರ ಉಂಟಾಗುತಲಿರುವದರಿಂದ ಮೋಕ್ಷವೇ ಇಲ್ಲವಾಗಿ ಬರುವದು. ಇತರ ಕಾರಣಗಳಿಂದುಂಟಾಗುವದೆಂದರೆ ಸ್ವತಸ್ಸಿದ್ಧವಲ್ಲದೆ ಇರುವದು ಸಹಜವಲ್ಲವಾದುದರಿಂದ ಅಪರಮಾರ್ಥವಾಗುತ ಇಲ್ಲವೆಂತಲೇ ಹೇಳದಂತೆ ಆಗುವದು. ಆದುದರಿಂದ ಬದ್ಧಮುಕ್ತಾವಸ್ಥೆಗಳಿಗೆ ಸತ್ಯತ್ವವನ್ನಂಗೀಕರಿಸುವ ನಿಮ್ಮ ವಾದವು ಯುಕ್ತವಾಗಿರಲಾರದು. ಮತ್ತೂ, ಬದ್ಧಮುಕ್ತಾವಸ್ಥೆಗಳಲ್ಲಿ ಒಂದಾದಮೇಲೆ ಮತ್ತೊಂದು ಬರುವದೆಂಬುವ ಪಕ್ಷದಲ್ಲಿ ಮೊದಲು ಬದ್ಧಾವಸ್ಥೆಯಲ್ಲವೇ ಪ್ರಾಪ್ತವಾಗಿರಬೇಕು. ಆ ಪ್ರಕಾರವಾದರೆ ಬಂಧಕ್ಕೆ ಅನಾದಿತ್ವವೂ ಅನಂತತ್ವವೂ ಹೇಳಬೇಕು.

“ಆದಿರಹಿತವಾದ ವಸ್ತುವೆಲ್ಲವೂ ನಿತ್ಯವೆ, ಆತ್ಮನಂತೆ, ಎಂಬೀ ವ್ಯಾಪ್ತಿಗೆ ವಿರುದ್ಧವಾಗಿರುವುದರಿಂದ ಬಂಧಾವಸ್ಥೆಯು ಶಾಸ್ತ್ರಸಮ್ಮತವಾಗಲಾರದು. ಅಪ್ರಕಾರವೇ ಮೋಕ್ಷಾವಸ್ಥೆಯೂ ಜ್ಞಾನಾದಿ ಸಾಧ್ಯವಾಗಿರುವುದರಿಂದ ಸಾದಿಯಾಗಿಯೂ ಪುನರಾವೃತ್ತಿ ಶೂನ್ಯವಾಗಿರುವುದರಿಂದ ಅಂತವಿಲ್ಲದೆಯೂ ಇರುವುದರಿಂದ ಆ ಮೋಕ್ಷಾವಸ್ಥೆಯೂ (ಆದಿಯುಳ್ಳ ವಸ್ತುಗಳೆಲ್ಲವೂ ಅನಿತ್ಯಗಳೆ, ಘಟಾದಿಗಳಂತೆ,, ಎಂಬೀ ವ್ಯಾಪ್ತಿಗೆ ವಿರುದ್ಧವಾಗಿರುವುದರಿಂದ ಇದೂ ಶಾಸ್ತ್ರವಿರುದ್ಧವೇ ಆಗುವುದು. ಕ್ರಮಪ್ರಾಪ್ತವಾಗುವ ಈ ಅವಸ್ಥೆಗಳಲ್ಲಿ ಆತ್ಮನಿಗೆ ಸಂಬಂಧವುಂಟೆ? ಇಲ್ಲವೆ? ಎಂದರೆ ಪೂರ್ವಾವಸ್ಥೆಯೊಡನೆ ಯುರಡನೆ ಅವಸ್ಥೆಗೆ ಆತ್ಮನು ಪ್ರವೇಶಿಸುವುದಾದರೆ ಪೂರ್ವಾವಸ್ಥೆಯನ್ನು ತ್ಯಾಗಮಾಡುವುದರಿಂದ ಮೋಕ್ಷಪ್ರಾಪ್ತಿಗೆ ಅವಕಾಶವೇ ಇಲ್ಲವು. ಅಥವಾ ಪೂರ್ವಾವಸ್ಥೆಯನ್ನು ಬಿಟ್ಟು ಉತ್ತರಾವಸ್ಥೆಗೆ ಬರುವಪಕ್ಷದಲ್ಲಿ ಬಂದವಸ್ಥೆಯನ್ನು ಬಿಟ್ಟು ಮತ್ತೊಂದವಸ್ಥೆಯನ್ನಂಗೀಕರಿಸುವುದರಿಂದ ಆತ್ಮನನ್ನು ನಿರ್ವಿಕಾರಿಯೆಂತಲೂ ನಿತ್ಯನೆಂತಲೂ ಹೇಳುವುದಕ್ಕೀನೆ ಅವಕಾಶವಿರಲಾರದು. ಆದುದರಿಂದ ಆತ್ಮನಿಗೆ ಅನಿತ್ಯತ್ವಾದಿದೋಷಪರಿಹಾರಾರ್ಥವಾಗಿ ಬಂಧಮುಕ್ತಾವಸ್ಥಾರೂಪಭೇದವನ್ನು ಕಲ್ಪಿಸದೇ ಇರುವುದೆ ಯುಕ್ತವಾಗಿ ಕಾಣಲ್ಪಡುತ್ತದೆ. ಈಪ್ರಕಾರವಾಗಿ ಭೇದವಾದಿಗಳಿಗೂ ಕೂಡ ಮುಕ್ತಾವಸ್ಥೆಯಲ್ಲಿ ಶಾಸ್ತ್ರಾನರ್ಥಕ್ಯರೂಪವಾದ ದೋಷವು ಅನಿವಾರ್ಯವೇ ಆಗಿರುವುದರಿಂದ ಎಲ್ಲರಿಗೂ ಸಮಾನವಾಗಿರುವ ಶಾಸ್ತ್ರಾನರ್ಥಕ್ಯದೋಷವನ್ನು ಅದ್ವೈತವಾದಿಯೇ ಪರಿಹರಿಸಬೇಕೆಂಬ ನಿರ್ಬಂಧವು ಅನಾವಶ್ಯಕವು. ಇಷ್ಟುಮಾತ್ರವಲ್ಲದೆ ಕೇವಲವಾಗಿ ಶಾಸ್ತ್ರಕ್ಕೆ ಆನರ್ಥಕ್ಯವೂ ಇಲ್ಲವು. ಅಜ್ಞಾನಿಗಳಾದ ಪುರುಷರ ವಿಷಯದಲ್ಲಿ ಶಾಸ್ತ್ರಕ್ಕೆ ವಿನಿಯೋಗವಿರುವುದರಿಂದ ಶಾಸ್ತ್ರವೂ ಸಪ್ರಯೋಜನವೆ. ಅದು ಹೇಗೆಂದರೆ, ಅಜ್ಞಾನಿಗಳಿಗೆ ಅನಾತ್ಮಗಳಾದ ಫಲಹೇತುಗಳಲ್ಲಿ ಆತ್ಮಬುದ್ಧಿಯುಂಟಾಗುವುದಷ್ಟೆ. ಫಲವೆಂದರೆ ಭೋಕ್ತೃತ್ವವು. ಹೇತುವೆಂದರೆ ಕರ್ತೃತ್ವವು. ಅಥವಾ ಫಲವೆಂದರೆ ದೇಹವಿಶೇಷವು. ಹೇತುವೆಂದರೆ ಅದೃಷ್ಟವು. ಅಂತಹ ಫಲಹೇತುಗಳು ಆತ್ಮವಾದರೆ ‘ನಾನು ಕರ್ತಾ, ನಾನುಭೋಕ್ತಾ, ನಾನು ಮನುಷ್ಯನು’ ಎಂಬಿವೇ ಮೊದ

ಲಾದವುಗಳಲ್ಲಿ ಆತ್ಮತ್ವದರ್ಶನವಂ ಮಾಡುತಲಿರುವ ಅಜ್ಞಾನಿಗಳ ವಿಷಯವಾಗಿ ವಿಧಿನಿಷೇಧಾತ್ಮಕವಾದ ಶಾಸ್ತ್ರವು ಪ್ರವರ್ತಿಸಬಹುದು. ಆದರೆ ಜ್ಞಾನಿಗಳಿಗೆ ಮಾತ್ರ 'ನಾನು ಮನುಷ್ಯನು' ಎಂಬಿವೇ ಮೊದಲಾದ ವ್ಯವಹಾರಗಳಿಲ್ಲವೆ? ಆದುದರಿಂದ ಜ್ಞಾನಿಗಳ ವಿಷಯದಲ್ಲಿಯೂ ಶಾಸ್ತ್ರಗಳು ಯೇತಕ್ಕೆ ಪ್ರವರ್ತಿಸಲಾರವು? ಎಂದರೆ ಕೇಳು. ಕರ್ತೃತ್ವಭೋಕ್ತೃತ್ವಾದಿಗಳು ದೇಹಧರ್ಮಗಳೆಂತಲೂ ಅವುಗಳಿಗಿಂತ ಆತ್ಮನು ಭಿನ್ನನೆಂತಲೂ ತಿಳಿದಿರುವ ಜ್ಞಾನಿಯಾದವನಿಗೆ ಕರ್ತೃತ್ವಭೋಕ್ತೃತ್ವಗಳು ನನ್ನದೆಂಬದಾಗಿ ತಿಳಿಯುವುದಕ್ಕೇನೆ ಅವಕಾಶವುಂಟಾಗಲಾರದು. ಲೋಕದಲ್ಲಿ ಯೆಂತಹ ವಿವೇಕಶೂನ್ಯನಿಗೂ ಅತ್ಯಂತೋನ್ಮತ್ತನಿಗೂ ಜಲಾಗ್ನಿಗಳೇನು, ಛಾಯಾಪ್ರಕಾಶಗಳೇನು, ಇವುಗಳ ವೈಲಕ್ಷಣ್ಯಜ್ಞಾನವುಂಟಾಗುವಲ್ಲಿ ಜ್ಞಾನಿಯಾದವನು ಆ ಪ್ರಕಾರವಾಗಿ ತಿಳಿಯಲಾರನೆಂಬುವುದನ್ನು ಪ್ರತ್ಯೇಕಸಿ ಹೇಳಬೇಕೆ? ಆದುದರಿಂದ ವಿಧಿನಿಷೇಧರೂಪವಾದ ಶಾಸ್ತ್ರವು ಕರ್ತೃತ್ವಭೋಕ್ತೃತ್ವಗಳಿಗೂ ಆತ್ಮನಿಗೂ ಸಂಬಂಧವಿಲ್ಲವೆಂದು ತಿಳಿದಿರುವ ಜ್ಞಾನಿವಿಷಯವೆ ಆಗಲಾರದು. ಲೋಕದಲ್ಲಿ ಒಬ್ಬನು ದೇವದತ್ತನೆಂಬ ಪುರುಷನನ್ನು ನೋಡಿ, ಯೆಲೈ ದೇವದತ್ತನೆ? ನೀನು ಈ ಕಾರ್ಯವನ್ನು ಮಾಡೆಂದು ಆಜ್ಞಾಪಿಸುವ ಕಾಲದಲ್ಲಿ ದೇವದತ್ತನಿರುವ ಸ್ಥಳದಲ್ಲಿ ನಿಂತಿರುವ ವಿಷ್ಣುಮಿತ್ರನು ಆ ಆಜ್ಞಾವಾಕ್ಯವನ್ನು ಕೇಳಿ ನಾನು ಈ ಆಜ್ಞಾವಾಕ್ಯವನ್ನು ಕೇಳಿಕೊಂಡಿರುವುದರಿಂದ ನಾನೇ ಆಜ್ಞಾಪಿಸಲ್ಪಟ್ಟೆನೆಂದು ನೆನೆಸುತ್ತಾನೆಯೆ? ಇಲ್ಲವು. ಒಂದುವೇಳೆ ದೇವದತ್ತನು ಆಜ್ಞಪ್ತನಾಗಿದ್ದರೂ ಭ್ರಮದಿಂದ, ತಾನೆ ಆಜ್ಞಾಪಿಸಲ್ಪಟ್ಟಿರುವಂತೆ ವಿಷ್ಣುಮಿತ್ರನು ಗ್ರಹಿಸಬಾರದೋ? ಎಂದರೆ! ಸತ್ಯವು. ಆಜ್ಞಾಪಿಸಲ್ಪಟ್ಟವನು ದೇವದತ್ತನಲ್ಲದೆ ನಾನಲ್ಲವೆಂಬೀ ಜ್ಞಾಪಕವಿಲ್ಲದ ಕಾಲದಲ್ಲಿ ತಾನೆ ಆಜ್ಞಾಪಿಸಲ್ಪಟ್ಟಿರುವಂತೆ ಅಜಾಗರೂಕತೆಯಿಂದ ತಿಳಿಯಬಹುದು. ಅದರಂತೆ ಕರ್ತೃತ್ವಭೋಕ್ತೃತ್ವಗಳು ತನ್ನವೆಂಬುದಾಗಿ ಭ್ರಮಿಸುತಲಿರುವ ಅವಿದ್ವಾಂಸನ ವಿಷಯದಲ್ಲಿ ಶಾಸ್ತ್ರಗಳು ಪ್ರವರ್ತಿಸುವುವೆಂಬುದಾಗಿ ಹೇಳಬೇಕಾಗಿರುವುದು.

ಈ ಪ್ರಕಾರವಾಗಿ ವಿಧಿನಿಷೇಧರೂಪವಾಗಿರುವ ಶಾಸ್ತ್ರವು ಅವಿದ್ಯ

ದ್ವಿಷಯವೆಂಬದಾಗಿ ಹೇಳಿ ಶಾಸ್ತ್ರಾನರ್ಥಕ್ಯಕ್ಕೆ ಸಮಾಧಾನವು ಹೇಳಲ್ಪಟ್ಟಿತು. ಇನ್ನು ಮುಂದೆ ಶಾಸ್ತ್ರಕ್ಕೆ ಜ್ಞಾನಿವಿಷಯದಲ್ಲಿಯೂ ಕೂಡ ಸಾರ್ಥಕ್ಯವನ್ನು ಸಾಧಿಸುವುದಕ್ಕೆ ಸಾಧನವಿರುವುದೆಂದು ಪೂರ್ವಪಕ್ಷಿಯು ಶಂಕಿಸುತ್ತಾನೆಂದರಿಯಬೇಕು.

ಅವಿದ್ಯೆಯಿಂದುಂಟಾಗುವ ದೇಹಾದ್ಯಭಿಮಾನ ರೂಪವಾದ ಸಂಬಂಧವು ಜ್ಞಾನೋತ್ಪತ್ತಿಯಾಗುವುದಕ್ಕೆ ಪೂರ್ವದಲ್ಲಿಯೆ ಅನುಭವಿಸಲ್ಪಟ್ಟಿರುವುದು. ಅಂತಹಾ ಸಂಬಂಧದಲ್ಲಿ ಅಪೇಕ್ಷೆಯಿಂದಲೆ ವಿಧಿಯನ್ನನುಸರಿಸಿ ಪ್ರವರ್ತಿಸಿರುವೆವು, ನಿಷೇಧವನ್ನನುಸರಿಸಿಯೇ ನಿವೃತ್ತಿಸಿರುವೆವೆಂಬ ಜ್ಞಾನೋತ್ಪತ್ತಿಯುಂಟಾದನಂತರವೂ ಕೂಡ ವಿಧಿ ನಿಷೇಧವಿಷಯವಾದ ಬುದ್ಧಿಯುಂಟಾಗಬಹುದಾದುದರಿಂದ ಅಂತಹಾ ವಿಧಿನಿಷೇಧರೂಪವಾದ ಶಾಸ್ತ್ರದ ಸಂಬಂಧವು ಜ್ಞಾನಿಗೆ ಉಂಟಾಗಬಹುದೆಂಬದಾಗಿ ಹೇಳುವೆವು. ಅದುಹೇಗೆಂದರೆ ಲೋಕದಲ್ಲಿ ತಂದೆಮಗನೆಂಬ ಇಬ್ಬರಲ್ಲಿ ಒಬ್ಬನಿಗಿಂತಲೂ ಒಬ್ಬನು ಭಿನ್ನನೆಂದು ತಿಳಿದುಕೊಂಡಿದ್ದರೂ ತಂದೆಯು ಮಾಡಬೇಕೆಂಬದಾಗಿ ನಿರ್ಣಯಿಸಲ್ಪಟ್ಟ ಕಾರ್ಯಗಳನ್ನು ತಂದೆಯು ಅಶಕ್ತನಾದಕಾಲದಲ್ಲಿ ತಂದೆಗೂ ತನಿಗೂ ಇರುವ ಸಂಬಂಧಜ್ಞಾನದಿಂದ ಮಗನೂ; ಈ ಪ್ರಕಾರವೆ ಮಗನು ಮಾಡಬೇಕೆಂಬದಾಗಿ ಯೇರ್ಪಟ್ಟಿರುವ ಕಾರ್ಯಗಳನ್ನು ಮಗನು ಅಶಕ್ತನಾದಮೇಲೆ ಕುಮಾರನಿಗೂ ತನಿಗೂ ಇರುವ ಸಂಬಂಧಜ್ಞಾನದಿಂದ ತಂದೆಯೂ ಹೇಗಾದರೆ ಮಾಡುತ್ತಾನೆಯೊ ಅಪ್ರಕಾರವೆ ಕರ್ತೃತ್ವಭೋಕ್ತೃತ್ವಾದಿಗಳಿಗೂ ಆತ್ಮನಿಗೂ ಸಂಬಂಧವಿಲ್ಲವೆಂಬ ಜ್ಞಾನವುಳ್ಳವನಾಗಿದ್ದರೂ ಅವಿದ್ಯಾ ಸಂಬಂಧವುಳ್ಳ ಶರೀರದ ಸಂಪರ್ಕವಿರುವವರೆಗೂ ಶರೀರ ಸಂಬಂಧಾಧೀನವಾದ ವಿಧಿ ನಿಷೇಧಗಳೊಡನೆ ಸಂಬಂಧವಿರುವುದರಿಂದ ಜ್ಞಾನಿಯಾದವನಿಗೂ ಶಾಸ್ತ್ರವು ಆವಶ್ಯಕವೆಂತಲೆ ತಿಳಿಯಬೇಕು. ಎಂಬೀ ಪೂರ್ವಪಕ್ಷಕ್ಕೆ ಸಿದ್ಧಾಂತಿಯು ಪ್ರತ್ಯುತ್ತರವನ್ನು ಹೇಳುತ್ತಾನೆ.

ಆ ರೀತಿಯಾಗಿ ಹೇಳಕೂಡದು. ಏತಕ್ಕೆಂದರೆ? ತಂದೆಗೂ ಮಗನಿಗೂ ಪರಸ್ಪರವಾಗಿ ದೇಹವಿಷಯವಾದ ಮಿಥ್ಯಾಭಿಮಾನವಿರುವುದರಿಂದ ಒಬ್ಬರುಮಾಡುವ ಕಾರ್ಯವನ್ನು ಮತ್ತೊಬ್ಬರು ಮಾಡುವುದು ಸಹಜ

ವಾಗಿಯೇ ಕಾಣುವುದು. ಜ್ಞಾನಿಗೆ ದೇಹವಿಷಯವಾದ ಅಂತಹಾ ಅಭಿಮಾನವಿದ್ದದ್ದೇ ಆದರೆ ಆ ಪ್ರಕಾರವಾಗಿ ಹೇಳಬಹುದು. ಈಗೀತಾಶಾಸ್ತ್ರದ (೧೨॥೧೫)ನೇ ಶ್ಲೋಕದಲ್ಲಿ ವಿವರಿಸಲ್ಪಟ್ಟಿರುವಂತೆ ದೇಹಾಭಿಮಾನವನ್ನು ವಾಸನೆಗಳೊಡನೆ ತ್ಯಾಗಮಾಡಿರುವಂತಹನೆ ಪೂರ್ಣಜ್ಞಾನಿಯೆನ್ನಲ್ಪಡುವನಾದುದರಿಂದ ಅವಿದ್ಯಾಜನ್ಯವಾದ ಶರೀರವನ್ನು ಕುರಿತು ಪ್ರವರ್ತಿಸಿರುವ ವಿಧಿನಿಷೇಧಾತ್ಮಕವಾದ ಶಾಸ್ತ್ರದಿಂದ ಜ್ಞಾನಿಯಾದವನಿಗೆ ಜ್ಞಾನೋತ್ಪತ್ತಿಯಾದಮೇಲೆ ಪ್ರಯೋಜನವಿಲ್ಲವೆಂತಲೂ ಶಾಸ್ತ್ರವು ಅಜ್ಞಾನಿವಿಷಯವೆಂತಲೂ ಹೇಳಿರುವ ಅಂಶಕ್ಕೆ ಯಾವಕೊರತೆಯೂ ಉಂಟಾಗಲಾರದು.

(ಇದನ್ನು ಕೇಳಿ ಪುನಃ ಪೂರ್ವಪಕ್ಷಿಯು ಪ್ರಶ್ನೆಮಾಡುತ್ತಾನೆ) "ಜ್ಯೋತಿಷ್ಟೋಮೇನಸ್ವರ್ಗಕಾಮೋಯಜೇತ॥" ಈವಾಕ್ಯದ ಅರ್ಥವು. (ಸ್ವರ್ಗಾಪೇಕ್ಷೆಯುಳ್ಳವನು ಜ್ಯೋತಿಷ್ಟೋಮಯಾಗದಿಂದ ಪರಮಾತ್ಮನನ್ನಾರಾಧಿಸಬೇಕು)"ನಕಲಂಜಂಭಕ್ಷಯೇತ್." (ಕಲಂಜ ಭಕ್ಷಣವನ್ನು ಮಾಡಬಾರದು) ಎಂಬೀಪ್ರಕಾರವಾದ ವಿಧಿನಿಷೇಧಗಳ ವಿಷಯವಾಗಿ, ಆತ್ಮನು ದೇಹಾದಿಗಳಿಗಿಂತಲೂ ವ್ಯತಿರಿಕ್ತನೆಂಬದಾಗಿ ತಿಳಿದಿರುವಂತಹವರೂ ದೇಹಾದಿಗಳೇ ಆತ್ಮವೆಂಬದಾಗಿ ತಿಳಿದಿರುವಂತಹವರೂ ಪ್ರವರ್ತಿಸುವದು ಶಕ್ಯವಾಗಲಾರದಾದುದರಿಂದ ಕರ್ತೃ ಇಲ್ಲದೆ ಇರುವುದರಿಂದ ಶಾಸ್ತ್ರಕ್ಕೆ ವೈಯರ್ಥ್ಯವೇ ಸಿದ್ಧಿಸುವದು. ಅದುಹೇಗೆಂದರೆ? ದೇಹಾತಿರಿಕ್ತಾತ್ಮಜ್ಞಾನವುಳ್ಳವನಿಗೆ ದೇಹದೊಡನೆ ಅಲ್ಪಕಾಲಮಾತ್ರದಲ್ಲಿ ಅನುಭವಿಸಬೇಕಾದ ಸ್ವರ್ಗಾದಿಫಲದಲ್ಲಿ ಪ್ರವೃತ್ತಿಯುಂಟಾಗುವುದೇ ಇಲ್ಲವಾದುದರಿಂದ ಅದಕ್ಕಾಗಿ ಶಾಸ್ತ್ರಾನುವೃತ್ತಿಯು ಅಂತಹವರಿಗೆ ಅನಾವಶ್ಯಕವು. ಮತ್ತು ದೇಹಾತ್ಮ ಭ್ರಮವುಳ್ಳವರಿಗೂ ದೇಹವು ಇಲ್ಲಿಯೆ ಹೋಗುವುದರಿಂದ ಅನಂತರದಲ್ಲಿ ಅನುಭವಿಸಬೇಕಾದದ್ದೇನೂ ಇಲ್ಲವೆಂಬೀ ನಿಶ್ಚಯವುಂಟಾಗಿರುವ ಕಾರಣದಿಂದ ಶಾಸ್ತ್ರಾರ್ಥದಲ್ಲಿ ಪ್ರವೃತ್ತಿಯೆ ಉಂಟಾಗಲಾರದು, ಎಂಬೀ ಪೂರ್ವಪಕ್ಷಕ್ಕೆ ಸಿದ್ಧಾಂತಿಯು ಸಮಾಧಾನವಂ ಹೇಳುತ್ತಾನೆ. ನೀನು ಮಾಡಿರುವ ಪೂರ್ವಪಕ್ಷವು ಯುಕ್ತವಾದದ್ದಲ್ಲವು. ಶಾಸ್ತ್ರಾಭಿಪ್ರಾಯವನ್ನನುಸರಿಸಿರುವಂತಹವರಿಗೇನೆ ವಿಧಿನಿಷೇಧಗಳ ವಿಷಯವಾಗಿ ಪ್ರವೃ

ತ್ತಿ ನಿವೃತ್ತಿಗಳುಂಟಾಗುವವು. ಎಂದರೆ ಈಶ್ವರಕ್ಷೇತ್ರಜ್ಞರಿಗೆ ಐಕ್ಯವೆಂಬೀ ನಿಶ್ಚಯಜ್ಞಾನಾನುಭವವುಳ್ಳ ಬ್ರಹ್ಮವೇತ್ತನು ವಿದ್ವಾಂಸನಾದುದರಿಂದ ಅಂತವನಿಗೆ ವಿಧಿನಿಷೇಧಗಳಿಂದ ಪ್ರಯೋಜನವಿಲ್ಲವು. ಪರಲೋಕವಿಲ್ಲವೆಂತಲೂ ದೇಹಕ್ಕಿಂತಲೂ ಭಿನ್ನನಾದ ಆತ್ಮನಿಲ್ಲವೆಂತಲೂ ತಿಳಿದಿರುವ ನಾಸ್ತಿಕನು ತಿಳಿಯದ ಅವಿವೇಕಿಯಾದುದರಿಂದ ಅಂತವನಿಗೆ ಶಾಸ್ತ್ರದಿಂದ ಪ್ರಯೋಜನವಿಲ್ಲವೆಂಬಿದೇನೊ ಸತ್ಯವೆ. ಆದರೆ ಮತ್ತೆ ಯಾರಿಗೆ ಶಾಸ್ತ್ರಪ್ರಯೋಜನವಿರುವುದೆಂದರೆ ಶಾಸ್ತ್ರಾನುಸಾರಿಯಾದವನಿಗೆ ಪ್ರಯೋಜನವುಂಟು. ಶಾಸ್ತ್ರಾನುಸಾರಿಗಳು ಯಾರು ಎಂದರೆ? ವಿಧಿನಿಷೇಧಶಾಸ್ತ್ರಗಳಂ ತಿಳಿದಿರುವುದರಿಂದ ಅಂತಹ ಶಾಸ್ತ್ರದಲ್ಲಿ ಅಭಿಮಾನವುಳ್ಳವನಾಗಿ ದೇಹಕ್ಕಿಂತಲೂ ಆತ್ಮನು ಪೃಥಕ್ಕಾಗಿರುವನೆಂದು ಸಾಮಾನ್ಯಜ್ಞಾನವುಂಟಾಗಿ ಆತ್ಮಸ್ವರೂಪವನ್ನು ಸಂಪೂರ್ಣವಾಗಿ ಸ್ವಾನುಭವದಿಂದ ತಿಳಿಯದವನು ಕರ್ಮಫಲದಲ್ಲಪೇಕ್ಷೆಯುಳ್ಳವನಾಗಿ ಅಪರ ಅನುಷ್ಠಾನದಲ್ಲಿ ಶ್ರದ್ಧೆಯೊಡನೆ ಅಂತಹ ವಿಧಿಬಲದಿಂದ ಪ್ರವರ್ತಿಸುತ್ತಾನೆ. ನಿಷಿದ್ಧಕರ್ಮಗಳಂಮಾಡದೆ ನಿವರ್ತಿಸಿರುವನೆಂಬೀ ಅಂಶವು ನಮ್ಮಗಳಿಗೆಲ್ಲರಿಗೂ ಪ್ರತ್ಯಕ್ಷವಾಗಿಯೇ ಕಂಡುಬರುವುದು. ಆದುದರಿಂದ ಶಾಸ್ತ್ರಗಳಿಗಾನರ್ಥಕ್ಯಶಂಕಾವಕಾಶವಿರಲಾರದೆಂದರಿಯಬೇಕು.

(ಇದನ್ನು ಕೇಳುತಲೆ ಪುನಶ್ಚ ಪೂರ್ವಪಕ್ಷಿಯು ಬೇರೊಂದುಪ್ರಕಾರವಾಗಿ ಈ ಅಂಶದಲ್ಲಿಯೆ ಶಂಕಿಸುತ್ತಾನೆ.) ದೇಹಾತಿರಿಕ್ತಾತ್ಮಜ್ಞಾನಿಗಳಿಗೂ ಕೇವಲ ನಾಸ್ತಿಕನಿಗೂ ಶಾಸ್ತ್ರಗಳಿಂದ ಪ್ರಯೋಜನವಿಲ್ಲವೆಂಬ ಈ ಅಂಶವೇನೊ ಅಂಗೀಕರಿಸಲ್ಪಡಬೇಕಾದದ್ದೆ, ಆದರೆ ಶಾಸ್ತ್ರಜ್ಞಾನವುಂಟಾಗಿ ಜ್ಞಾನಿಗಳನ್ನಾಶ್ರಯಿಸಿದವರು“ ಯದ್ಯದಾಚರತಿಶ್ರೇಷ್ಠ॥” (ಶ್ಲೋ॥ ೨೧॥) ಎಂಬೀನ್ಯಾಯದಿಂದ ಜ್ಞಾನಿಗಳು ಶಾಸ್ತ್ರತ್ಯಾಗವಂ ಮಾಡಿರುತ್ತಾರೆಂದು ಅಜ್ಞಾನಿಗಳೂ ಶಾಸ್ತ್ರತ್ಯಾಗವಂ ಮಾಡುತ್ತಾರಾದ್ದರಿಂದ ಶಾಸ್ತ್ರವಿಷಯವಾದ ಅಧಿಕಾರಿಯೇ ಇಲ್ಲವು. ಆದುದರಿಂದ ಶಾಸ್ತ್ರಕ್ಕೆ ಆನರ್ಥಕ್ಯವು ಬರುವುದಿಲ್ಲವೆ? ಎಂಬೀ ಶಂಕೆಗೆ ಸಿದ್ಧಾಂತಿಯು ಸಮಾಧಾನವನ್ನು ಹೇಳುತ್ತಾನೆ. ಎಲೈ ಪೂರ್ವಪಕ್ಷಿಯೆ? ಸರ್ವರೂ ವಿವೇಕಿಗಳಾಗಿ ಶಾಸ್ತ್ರದಲ್ಲಿ ಪ್ರವರ್ತಿಸುವಂತವರಾಗಿಲ್ಲವಾದುದರಿಂದ ಶಾಸ್ತ್ರಕ್ಕೆ ವೈಯರ್ಥ್ಯವೆ?

ಅಥವಾ ಯಾವನೋ ಒಬ್ಬನೆ ವಿವೇಕಿಯಾಗಿದ್ದರೂ ಅವನನ್ನನುವರ್ತಿಸು ವಂತವರೆಲ್ಲರೂ ಪ್ರವರ್ತಿಸುವುದಿಲ್ಲವಾದುದರಿಂದ ಶಾಸ್ತ್ರಕ್ಕೆ ವೈಯರ್ಥ್ಯ ವೆ? ಎಂಬೀ ವಿಷಯವನ್ನು ವಿಚಾರಿಸಬೇಕು. ‹‹ಮನುಷ್ಯಾಣಾಂಸಹಸ್ರೇ ಷು॥›› (೭॥ ೩॥) ಎಂಬೀನ್ಯಾಯದಿಂದ ಅನೇಕಪ್ರಾಣಿಗಳಲ್ಲಿ ಯಾವನೋ ಒಬ್ಬನೆ ವಿವೇಕಿಯಾಗುತ್ತಾನೆ. ಅದೇನೋ ಈಗಿನ ಕಾಲದಲ್ಲಿಯೂ ಪ್ರ ತ್ಯಕ್ಷವಾದ ಅಂಶವೆ. ಅಂತವರನ್ನನುಸರಿಸಿ ಲೋಕರೆಲ್ಲರೂ ಶಾಸ್ತ್ರದಲ್ಲಿಪ್ರ ವರ್ತಿಸಲಾರರೆನ್ನುವುದು ಅಸಾಧ್ಯವಾದ ಅಂಶವೆ., ಯಾತಕ್ಕೆಂದರೆ? ರಾ ಗದ್ವೇಷಗಳಿಂದ ಕೂಡಿರುವಂತವರಾಗಿರುವುದರಿಂದ ಸಾಧಾರಣವಾಗಿ ಮೂಢರೆಲ್ಲರೂ ವಿವೇಕಿಯನ್ನನುಸರಿಸಲಾರರು. ನಿಷಿದ್ಧದಲ್ಲಿ ವಿವೇಕಿಗಳು ಪ್ರವರ್ತಿಸದೇ ಹೋದರೂ ಮೂಢಜನಗಳು ಸಂಹಾರಸಾಧನವಾದ ಶ್ಯೇ ನಯಾಗಾದ್ಯಾಚರಣವನ್ನು ಬಿಡಲಾರರಲ್ಲವೆ? ಇಷ್ಟುಮಾತ್ರವಲ್ಲದೆ ಇಂ ತಹ ಅಲ್ಪಫಲಪ್ರದಗಳಾದ ಕರ್ಮಗಳ ವಿಷಯವಾಗಿ ಪ್ರವರ್ತಿಸುವಿಕೆಯುಸ್ವ ಭಾವವೆನ್ನಲ್ಪಡುವ ಅಜ್ಞಾನಕ್ಕೆ ಲಕ್ಷಣವು ‹‹ಸ್ವಭಾವಸ್ತುಪ್ರವರ್ತತೇ॥›› (೫॥೧೪॥) ಎಂಬದಾಗಿ ಹೇಳಲ್ಪಟ್ಟಿರುತ್ತದೆಯಲ್ಲವೆ. ಆದುದರಿಂದ ಪ್ರ ವೃತ್ತಿಯು ಅಜ್ಞಾನಜನ್ಯವಾದಾಗ ವಿಧಿನಿಷೇಧಾಧೀನವಾದ ಪ್ರವೃತ್ತಿ ನಿವೃತ್ತ್ಯಾತ್ಮಕಬಂಧವು ಅವಿದ್ಯಾಮಾತ್ರವೆ ಆಗುವುದರಿಂದ ಸಂಸಾರವು ಕೇವಲದೃಶ್ಯ ಪದಾರ್ಥವನ್ನನುಸರಿಸುವ ಅವಿದ್ಯಾವಿಷಯವೆಂತಲೇ ತಿಳಿ ಯಬೇಕು. ಅತ್ಯಂತ ನಿರ್ಮಲನಾದ ಕ್ಷೇತ್ರಜ್ಞನಿಗೆ ಅವಿದ್ಯೆಯೂ ಅವಿದ್ಯಾ ಜನ್ಯವಾದ ಸಂಸಾರವೂ ಇಲ್ಲವು. ಮಿಥ್ಯಾಜ್ಞಾನವು ಸತ್ಯವಸ್ತುವನ್ನು ಕೆಡಿಸಲಾರದಲ್ಲವೆ? ಅದುಹೇಗೆಂದರೆ:— ಲೋಕದಲ್ಲಿ ಊಷರಪ್ರದೇಶವು ಮರೀಚಿಕೆಯಲ್ಲಿ ತೋರುವ ಜಲದಿಂದ ನೆನೆಯುವಿಕೆಯಿಂದಲಿ ಕೆಸರಾಗಿ ಮಾಡುವುದಕ್ಕೆ ಶಕ್ಯವಾದೀತೆ? ಅದರಂತೆ ಅವಿದ್ಯೆಯೂ ಕ್ಷೇತ್ರಜ್ಞನನ್ನು ಯೇನೂ ಮಾಡಲಾರದು. ಆದುದರಿಂದಲೆ ಶ್ರೀ ಕೃಷ್ಣಪರಮಾತ್ಮನು ‹‹ ಕ್ಷೇತ್ರಜ್ಞಂ ಚಾಪಿಮಾಂವಿದ್ಧಿ ॥ ಅಜ್ಞಾನೇನಾವೃತಂಜ್ಞಾನಂ॥ ›› (೫॥ ೧೫॥) ಎಂಬದಾಗಿಉಪದೇಶಿಸಿರುತ್ತಾನೆ.

ಆದರೆ:— ಆತ್ಮನಿಗೆ ವಾಸ್ತವವಾಗಿ ಸಂಸಾರಸಂಬಂಧವಿಲ್ಲವೆಂದರೆ ವಿದ್ವದನುಭವ ವಿರೋಧ ವುಂಟಾಗಲಾರದೊ? ನಾನಿಂತಾ ದೋಷ್ಟವನು,

ಈ ಸಮಸ್ತ ಕ್ಷೇತ್ರ ಕಳತ್ರಾದಿಗಳೆಲ್ಲವೂ ನನ್ನದೆ ಎಂಬೀ ಬುದ್ಧಿಯು ಸಂಸಾರಿಗಳಿಗುಂಟಾಗುವಂತೆ ಪಂಡಿತರಿಗೂ ಸಂಸಾರಿತ್ವ ಪ್ರಸಿದ್ಧಿಯುಂಟಾಗಲಿಲ್ಲವೆ? ಎಂಬೀ ಶಂಕಾಸಮಾಧಾನಾರ್ಥವಾಗಿ ಪೂರ್ವಪಕ್ಷಿಯು ಹೇಳಿರುವ ಪಾಂಡಿತ್ಯಶಬ್ದವನ್ನು ವಿಚಾರಿಸುತ್ತಾರೆಂದು ತಿಳಿಯಬೇಕು. ಪಾಂಡಿತ್ಯವೆಂದರೆ ದೇಹಾದಿಗಳೇ ಆತ್ಮವೆಂದು ತಿಳಿಯುವಿಕೆಯೋ? ಅಥವಾ ಕೂಟಸ್ಥಾತ್ಮ ದರ್ಶನವೋ? ಅಥವಾ ನಾನು ಸಂಸಾರಿಯೆಂಬ ಬುದ್ಧಿಯೋ? ಎಂಬೀ ಅಂಶವನ್ನು ವಿಚಾರಿಸಬೇಕು. ಇವುಗಳಲ್ಲಿ ದೇಹಾದಿಗಳೇ ಆತ್ಮವೆಂಬೀ ಪ್ರಥಮಪಕ್ಷವು ಯುಕ್ತವಲ್ಲವು. ಏತಕ್ಕೆಂದರೆ? ದೇಹಾದಿಗಳಲ್ಲಿ ಕ್ಷೇತ್ರ ವ್ಯತಿರಿಕ್ತವಾಗಿ ಆತ್ಮನಿರುವನೆಂಬ ಸ್ವಾನುಭವವುಳ್ಳವಿಕೆಯು ಪಾಂಡಿತ್ಯವೆನ್ನಲ್ಪಡುವುದು. ಕೂಟಸ್ಥಾತ್ಮ ದರ್ಶನವೆ ಪಾಂಡಿತ್ಯವೆಂಬೀ ಯರಡನೇ ಪಕ್ಷವೂ ಯುಕ್ತವಾದದ್ದಲ್ಲವು. ಏತಕ್ಕೆಂದರೆ? ಕ್ಷೇತ್ರಕ್ಕಿಂತಲೂ ಪೃಥಕ್ಕಾಗಿ ಅವಿಕಾರಿಯಾದ ಕ್ಷೇತ್ರಜ್ಞನಿರುವನೆಂಬುದಾಗಿ ಸ್ವಾನುಭವದಿಂದ ತಿಳಿಯುವಂತವರು ಭೋಗಕರ್ಮಗಳು ನಮಗುಂಟಾಗಲೆಂಬುದಾಗಿ ಅಪೇಕ್ಷಿಸುವುದೇ ಇಲ್ಲವು. ಭೋಗಕರ್ಮಗಳೆಂದರೆ ವಿಕಾರವನ್ನು ಹೊಂದುವಿಕೆಯಲ್ಲವೆ? ಆದುದರಿಂದ ಅವಿದ್ವಾಂಸನು ಸ್ವರ್ಗಾದ್ಯಲ್ಪ ಫಲಗಳನ್ನು ಅಪೇಕ್ಷಿಸುತ್ತಾನಾದುದರಿಂದ ಭೋಗಕರ್ಮಗಳ ವಿಷಯವಾಗಿ ಪ್ರವರ್ತಿಸುತ್ತಾನೆ. ನಿರ್ವಿಕಾರವಾದ ಸ್ವಸ್ವರೂಪಾನುಭವವನ್ನು ಅನುಭವಿಸುವ ಜ್ಞಾನಿಯಾದವನಿಗೆ ಫಲಾಪೇಕ್ಷೆಯೇ ಇಲ್ಲವಾದುದರಿಂದ ಅದಕ್ಕಾಗಿ ಪ್ರವೃತ್ತಿಯೇ ಇರುವುದಿಲ್ಲವು. ಆದುದರಿಂದ ಕಾರ್ಯಕರಣ ಸಂಘಾತಗಳ ವ್ಯಾಪಾರಗಳು ವಿರಾಮವನ್ನು ಹೊಂದುವುವು. ಅಂತಹ ಅವಸ್ಥೆಯು ನಿವೃತ್ತಿಯೆಂತಿರುವುದು. ಅಂತಹ ಅವಸ್ಥೆಯೇ ಪಾಂಡಿತ್ಯವೆನ್ನಲ್ಪಡುವುದು. ಆದುದರಿಂದ ಸರ್ವೇಂದ್ರಿಯ ವ್ಯಾಪಾರಗಳನ್ನು ವಿರಾಮಹೊಂದುವಂತೆ ಮಾಡಿ ಅಮನಸ್ಕಾವಸ್ಥೆಯಲ್ಲಿರುವಂತವನಿಗೆ ಮಾಯೋಪಾಧಿವಿಶಿಷ್ಟನಾದ ಕೂಟಸ್ಥಾತ್ಮನ ದರ್ಶನಕ್ಕೆ ಅವಕಾಶವೇ ಇಲ್ಲವು.

ಹಿಂದೇ ವಿವರಿಸಿರುವ ಮೂರನೆದಾದ ಸಂಸಾರಿಯೆಂಬ ಬುದ್ಧಿಯೇ ಪಾಂಡಿತ್ಯವೆಂಬೀವಾದವೂ ಯುಕ್ತವಾದದ್ದಲ್ಲವು. ಈಶ್ವರನೇ ಕ್ಷೇತ್ರಜ್ಞನು, ಕ್ಷೇತ್ರಜ್ಞಭಿನ್ನವೇ ಕ್ಷೇತ್ರವು. ಅದು ಕ್ಷೇತ್ರಜ್ಞನಿಗೆ ವಿಷ

ಯುವನಾಗಿರುವನು. ಅಹಂ (ನಾನು) ಎಂಬ ಬುದ್ಧಿಗೆ ವೇದ್ಯನಾದ ನಾನು ಸಂಸಾರಿಯು, ಸುಖಿಯು, ದುಃಖಿಯು, ಅಜ್ಞಾನಿಯು, ಹುಟ್ಟಿರುವೆನು, ಮರಣವನ್ನು ಹೊಂದುವೆನು, ವಿಯೋಗವನ್ನು ಹೊಂದಿರುವೆನು, ಕೃಶನಾಗಿರುವೆನು, ಮೂಢನಾದೆನು ಎಂಬೀ ಅಹಂಕಾರ ಮಮಕಾರಗಳೆಲ್ಲವೂ ಆತ್ಮನಲ್ಲಾರೋಪಿಸಲ್ಪಟ್ಟಿರುವುವು. ನಾನು ಸಂಸಾರದಿಂದ ವಿರಾಮವನ್ನು ಹೊಂದಬೇಕು, ಕ್ಷೇತ್ರಕ್ಷೇತ್ರಜ್ಞಜ್ಞಾನದ್ವಾರಾ ಧ್ಯಾನವನ್ನು ಮಾಡಿ ಕ್ಷೇತ್ರಜ್ಞನಾದ ಈಶ್ವರನನ್ನು ಸಾಕ್ಷಾತ್ಕರಿಸಿ ಸಂಸಾರಾಬ್ಧಿಯಿಂ ದಾಟುವೆನು, ಎಂಬೀ ಕ್ರಿಯಾರಹಿತವಾದ ಪಾಂಡಿತ್ಯವು ಕೆಲವರಿಗುಂಟಾಗಿ ಆ ಪ್ರಕಾರವಾಗಿ ನಟನೆ ಮಾಡುವಂಥವನನ್ನೂ, ನೀನು ಕ್ಷೇತ್ರಜ್ಞನಲ್ಲವು. ನಿನಗಿಂತಲೂ ಬೇರೆಯೊಬ್ಬನು ಕ್ಷೇತ್ರಜ್ಞನಿರುವನೆಂಬುದಾಗಿ ತನಗನುಭವವಿಲ್ಲದೆ ಇದ್ದರೂ ಅನ್ಯರಿಗೆ ಇಂತಹ ಉಪದೇಶವನ್ನು ಮಾಡುವಂತವನನ್ನೂ, ನೀಚಪಂಡಿತನೆಂದರಿಯಬೇಕು. ಏತಕ್ಕೆಂದರೆ? ಸಂಸಾರಮೋಕ್ಷಗಳಿಗೂ ಶಾಸ್ತ್ರಗಳಿಗೂ ಸಾರ್ಥಕ್ಯವನ್ನುಂಟುಮಾಡುವೆನೆಂದು ತಿಳಿದು ಸ್ವಸ್ವರೂಪ ಜ್ಞಾನಶೂನ್ಯನಾದ ಇಂತಹ ಆತ್ಮಘಾತುಕನು ಶಾಸ್ತ್ರಾರ್ಥಸಂಪ್ರದಾಯಾನಭಿಜ್ಞನಾದುದರಿಂದ ತಾನೂ ಮೋಸಹೋಗುತ್ತಾನೆ. ತಾನು ಮೋಸಹೋಗುವುದಲ್ಲದೆ ಅನ್ಯರನ್ನೂ ಮೋಸಪಡಿಸುವುದಕ್ಕೆ ಸಿದ್ಧನಾಗಿರುವನು. "ಅಯಮಾತ್ಮಾ ಬ್ರಹ್ಮ" ಇತ್ಯಾದ್ಯನೇಕ ಶ್ರುತಿಗಳಿಂದ ಉಪದೇಶಿಸಲ್ಪಡುವ ಬ್ರಹ್ಮಾತ್ಮೈಕ್ಯವನ್ನು ಕೆಡಿಸಿದವನೂ ಶಾಸ್ತ್ರವಿರುದ್ಧವಾದ ಭೇದವನ್ನು ಕಲ್ಪಿಸಿದವನೂ ಆಗಿರುವುದರಿಂದ ವೇದಾಂತ ಸಂಪ್ರದಾಯವನ್ನು ತಿಳಿದವನಲ್ಲವು. ಇತರಗಳಾದ ಸಮಸ್ತ ಶಾಸ್ತ್ರಗಳನ್ನು ತಿಳಿದವನಾಗಿದ್ದರೂ ಅಂತವನು ಮೂರ್ಖನೆಂಬದಾಗಿ ಉಪೇಕ್ಷಿಸಲ್ಪಡತಕ್ಕವನಾಗಿರುವನು. ಆದುದರಿಂದ ಸಂಸಾರಿ ಎಂಬದಾಗಿ ತಿಳಿದುಕೊಳ್ಳುವಿಕೆಯೂ ಪಾಂಡಿತ್ಯವಲ್ಲವು.

ಮತ್ತು ಅಸ್ಥಿರಗಳಾದ ದೇಹಾದಿಗಳಿಗೆ ಕ್ಷೇತ್ರಜ್ಞನಾದ ಈಶ್ವರನೊಡನೆ ಐಕ್ಯವು ಹೇಳುವಪಕ್ಷದಲ್ಲಿ ಸಂಸಾರಿತ್ವವು ತಟಸ್ಥವಾಗುವುದು. ಅಥವಾ ಕ್ಷೇತ್ರಜ್ಞನಿಗೂ ಈಶ್ವರನಿಗೂ ಐಕ್ಯವೇ ಎಂದರೆ ಸಂಸಾರಿಯೇ ಲೋಕದಲ್ಲಿಲ್ಲವಾದುದರಿಂದ ಸಂಸಾರವೇ ಇಲ್ಲವೆಂತಲಾದರೂ ಹೇಳ

ದಂತೆ ಆಗುವುದೆಂಬದಾಗಿ ನೀನು ಹಿಂದೆ ಆಕ್ಷೇಪಿಸಿರುವ ಅಂಶಗಳಿಗೆ ಸಮಾಧಾನವಂ ಹೇಳುವೆನು ಕೇಳು. ವಿದ್ಯಾವಿದ್ಯೆಗಳಿಗೆ ವೈಲಕ್ಷಣ್ಯವನ್ನಂಗೀಕರಿಸುವುದರಿಂದ ಇಂತಹ ಆಕ್ಷೇಪಗಳು ಬರಲಾರವೆಂದು ಹಿಂದೆಯೇ ಪ್ರತ್ಯುತ್ತರವನ್ನು ಹೇಳಿರುವೆನು. ಅದು ಹೇಗೆಂದರೆ? ಅವಿದ್ಯಾಪರಿಕಲ್ಪಿತವಾಗಿರುವ ಸಂಸಾರರೂಪದೋಷದಿಂದ ಸಂಸಾರಕಲ್ಪನಕ್ಕೆ ಅಧಿಷ್ಠಾನವಾದ ಪರಮಾರ್ಥ ವಸ್ತುವಿಗೆ ಬಾಧೆಯುಂಟಾಗಲಾರದು. ಅದಕ್ಕೆ ಕಲ್ಪಿತವಾದ ಮರೀಚಿಕಾ (ಬಿಸಲ್‌ಕುದರೆ) ಎಂಬ ನೀರಿನಿಂದ ಊಷರಕ್ಷೇತ್ರವು ಹೇಗಾದರೆ ನೆನೆಯಲ್ಪಡುವುದಕ್ಕೆ ಆಗುವುದಿಲ್ಲವೊ ಎಂಬ ದೃಷ್ಟಾಂತವನ್ನೂ ಹೇಳಿರುವೆನು. ಸಂಸಾರಿಯೇ ಇಲ್ಲವಾದ್ದರಿಂದ ಸಂಸಾರವೇ ಇಲ್ಲವೆಂಬೀ ದೋಷಕ್ಕೆ ಸಂಸಾರ ಸಂಸಾರಿ ಎಂಬೀ ವ್ಯವಹಾರಗಳೆಲ್ಲವೂ ಅವಿದ್ಯಾಕಲ್ಪಿತಗಳೇ ಆಗಿರುವುದರಿಂದ ವ್ಯವಹಾರಾನುಗುಣಗಳಾದ ವಿಕಲ್ಪಗಳಿದ್ದರೂ ಪರಮಾರ್ಥದಿಂದ ವಿಚಾರಿಸಿ ನೋಡಿದರೆ ಅಂತಹ ವಿಕಲ್ಪಗಳ್ಯಾವವೂ ಇಲ್ಲವೆಂಬೀ ಸಮಾಧಾನವನ್ನು ಹೇಳಿರುವೆನು.

ಆದರೆ ಅವಿದ್ಯಾಸಂಬಂಧವುಂಟಾಗಿರುವಿಕೆಯೇ ಕ್ಷೇತ್ರಸಿಗೆ ಸಂಸಾರಿತ್ವ ದೋಷವಿರುವುದಾಗಿ ಹೇಳುವೆವು. ಸಂಸಾರಿತ್ವದಿಂದುಂಟಾಗುವ ದುಃಖಿತ್ವಾದಿಗಳು ಪ್ರತ್ಯಕ್ಷವಾಗಿ ಕಾಣುತಲೇ ಇರುವುವು. ಅವಿದ್ಯಾಸಂಬನ್ಧನಾಗಿರುವಿಕೆಗೆ ಅವಿದ್ಯೆಯೇ ಕಾರಣವೆಂಬದಾಗಿ ಹೇಳಿದರೆ ಅನವಸ್ಥಾ ದೋಷವು ಪ್ರಾಪ್ತವಾಗುವುದು. ಎಂಬೀ ಪೂರ್ವಪಕ್ಷವನ್ನು ಕೇಳಿ ಸಿದ್ಧಾಂತಿಯು ಸಮಾಧಾನವನ್ನು ಹೇಳುತ್ತಾನೆ. ಜ್ಞೇಯಗಳೆಲ್ಲವೂ ಕ್ಷೇತ್ರಧರ್ಮಗಳೆಂಬದಾಗಿ ಹಿಂದೆಯೇ ವಿವರಿಸಿರುವೆವಾದುದರಿಂದ ಜ್ಞಾತಾ ಆದ ಕ್ಷೇತ್ರಜ್ಞನಿಗೆ ಕ್ಷೇತ್ರಜಗಳಾದ ದೋಷಗಳು ಸಂಬಂಧಿಸಲಾರವು. ಕ್ಷೇತ್ರಜ್ಞನಿಗೆ ಇಲ್ಲದೆ ಇರುವ ಯೆಷ್ಟು ದೋಷಸಮೂಹಗಳನ್ನು ಅಂಟಿಸಿದರೂ ಅವೆಲ್ಲವೂ ಜ್ಞೇಯಗಳಲ್ಲದೆ ಹೋಗಲಾರವು. ಆದುದರಿಂದ ಅವು ಕ್ಷೇತ್ರಧರ್ಮಗಳಲ್ಲದೆ ಕ್ಷೇತ್ರಜ್ಞ ಧರ್ಮಗಳಾಗಲಾರವು. ಜ್ಞೇಯಗಳು ಕ್ಷೇತ್ರಧರ್ಮಗಳಾಗಿದ್ದರೂ ಕ್ಷೇತ್ರದ್ವಾರಾ ಕ್ಷೇತ್ರಜ್ಞನಿಗೆ ಇದರಿಂದುಂಟಾಗುವ ದೋಷಗಳು ತಟಸ್ಥ ಪಡಲಾರವೊ? ಎಂದರೆ ಅವು ಉಂಟಾಗಲಾರವು. ಜ್ಞೇಯವಾದ ಧರ್ಮಕ್ಕೂ ಜ್ಞಾತಾ ಆಗಿರುವಂಥವನಿಗೂ ಸಂಬಂಧ

ಮುಂಟಾಗುವುದಕ್ಕೇನೆ ಅವಕಾಶವಿಲ್ಲವಷ್ಟೆ? ಕ್ಷೇತ್ರವೂ ಜ್ಞೇಯಕೋಟಿಯಲ್ಲೇ ಸೇರಿರುವುದರಿಂದ ಅದರೊಡನೆ ಚಿದ್ವಸ್ತುವಿಗೆ ಸಂಪರ್ಕವುಂಟಾಗಲಾರದು. ಒಂದುವೇಳೆ ಉಂಟಾಗಿರುವ ಪಕ್ಷದಲ್ಲಿ ಕ್ಷೇತ್ರವು ಜ್ಞೇಯವಾಗುವುದಕ್ಕೇನೆ ಆಗಲಾರದು. ಏತಕ್ಕಾಗಲಾರದು? ಕ್ಷೇತ್ರಕ್ಷೇತ್ರರಿಗೆ ಧರ್ಮಧರ್ಮಿತ್ವದಿಂದ ಸಂಪರ್ಕ ಉಂಟಾಗಿದ್ದರೂ ಕ್ಷೇತ್ರವು ಜ್ಞೇಯವಾಗುವುದಕ್ಕೆ ಯಾವ ಆಕ್ಷೇಪವೂ ಇರಲಾರದಲ್ಲವೆ? ಎಂದರೆ ಅದು ಯುಕ್ತವಲ್ಲವು. ಆತ್ಮಧರ್ಮವು ಆತ್ಮನಿಂದ ಜ್ಞೇಯವಾದಾಗ ಧರ್ಮದೊಡನೆ ಧರ್ಮಿಯೂ ಜ್ಞೇಯವಾಗದೇ ಹೋಗಲಾರದಾದುದರಿಂದ ಜ್ಞಾತೃಜ್ಞೇಯಗಳಿಗೆ ಐಕ್ಯವು ಸಿದ್ಧವಾಗುವುದು. ಕರ್ತೃಕರ್ಮಗಳಿಗೆ ಏಕತ್ವವು ಸಿದ್ಧಿಸಲಾರದಷ್ಟೆ. ಆದುದರಿಂದ ಮೇಲೆ ನೀನು ಹೇಳಿರುವ ಆಕ್ಷೇಪವು ಸಮ್ಮತವಾಗಲಾರದು. ಮತ್ತು “ಮಹಾಭೂತಾನ್ಯಹಂಕಾರಃ॥” ಎಂಬದಾಗಿ ಈ ಅಧ್ಯಾಯದ ೬ನೇ ಶ್ಲೋಕದ ಮೊದಲು ಜ್ಞೇಯವಾದದ್ದೆಲ್ಲವೂ ಕ್ಷೇತ್ರಸಂಜ್ಞೆಯುಳ್ಳದ್ದೆಂತಲೆ ಹೇಳಲ್ಪಡುವುದರಿಂದ ಅವಿದ್ಯಾದಿಗಳು ಕ್ಷೇತ್ರಜ್ಞಧರ್ಮಗಳಾಗಲಾರವು. ಏತಕ್ಕಾಗಲಾರವೆಂದರೆ? “ಏತದ್ಯೋವೇತ್ತಿ॥” (೧೩॥೨॥) ಎಂಬದಾಗಿ ಹೇಳಿರುವುದರಿಂದ ಕ್ಷೇತ್ರಜ್ಞನೆ ಜ್ಞಾತಾ ಎಂಬದಾಗಿ ನಿರ್ಣಯಿಸಲ್ಪಟ್ಟಿರುವುದು. ಆದುದರಿಂದ ಅದರಲ್ಲಿ ಜ್ಞೇಯಗಳು ಯಾವವೂ ಸೇರುವುದಕ್ಕೆ ತಕ್ಕ ಸಾಧನವಿಲ್ಲವು. ಆದುದರಿಂದ ಅವಿದ್ಯಾದುಃಖಿತ್ವಾದಿಗಳು ಕ್ಷೇತ್ರಜ್ಞನ ವಿಶೇಷಣಗಳೆಂತಲೂ ಕ್ಷೇತ್ರಜ್ಞಧರ್ಮಗಳೆಂತಲೂ ಅಂತಹ ಕ್ಷೇತ್ರಜ್ಞಧರ್ಮಗಳು ಪ್ರತ್ಯಕ್ಷವಾಗಿಯೆ ಕಾಣಲ್ಪಡುವುವೆಂತಲೂ ಪರಸ್ಪರ ವಿರುದ್ಧವಾಗಿ ಹೇಳುವುದಂ ನೋಡಿದರೆ ಈ ಪ್ರಕಾರವಾಗಿ ಹೇಳುವುದಕ್ಕೆ ಅಜ್ಞಾನವೆ ಮುಖ್ಯ ಕಾರಣವೆಂದು ನಿರ್ಣಯಿಸಲ್ಪಡಬೇಕಾಗಿರುವುದು.

ಒಳ್ಳೇದು; ಯಾವ ಅವಿದ್ಯೆಯು ವಿರುದ್ಧಗಳಾದ ವಾದಗಳಂ ಹೇಳಿಸುವುದಕ್ಕೆ ಉದ್ಯುಕ್ತವಾಗಿರುತ ಅದನ್ನು ನಿರ್ವಹಿಸುವುದಕ್ಕೂ ಸಮರ್ಥವಾಗಿರುವುದೋ ಅಂತಹ ಅವಿದ್ಯೆಯು ಸ್ವತಂತ್ರವಲ್ಲವಾದುದರಿಂದಲೂ ಚಿತ್ತಿಗಿಂತಲೂ ಅನ್ಯವಾದದ್ದು ಬೇರೊಂದಿಲ್ಲವಾದುದರಿಂದಲೂ ಅದು ಚಿತ್ತನ್ನೇ (ಚಿತ್ ಎಂದರೆ ಆತ್ಮವಸ್ತುವು) ಆಶ್ರಯಿಸಿರುತ್ತದೆಯೆ? ಅಥವಾ ಮತ್ತೆ

ಯಾವದನ್ನು ಆಶ್ರಯಿಸಿರುವುದು? ಎಂಬದಾಗಿ ನೀನು ಪ್ರಶ್ನೆಮಾಡುವುದಾದರೆ ಅದಕ್ಕೆ ಪ್ರತ್ಯುತ್ತರವನ್ನು ಹೇಳುವೆನು ಕೇಳು. ಆದರೆ ಅದಕ್ಕೆ ತಕ್ಕ ಸಮಾಧಾನವೇನೂ ಹೇಳಲ್ಪಡುವುದು. ಆದರೂ ನಿನ್ನ ಅಭಿಪ್ರಾಯವು ಸ್ವಲ್ಪ ತಿಳಿಯಬೇಕಾಗಿರುವುದರಿಂದ ಇಲ್ಲಿ ಪ್ರಶ್ನೆಯನ್ನು ಮಾಡುವೆನು. ಅವಿದ್ಯೆಯೆಂಬುವುದು ದೃಶ್ಯವೆ? ಅದೃಶ್ಯವೆ? ಹೇಳು. ದೃಶ್ಯವೆಂದು ಹೇಳುವುದಾದರೆ ಅಸ್ವತಂತ್ರವೇ ಆಗಿರುವುದರಿಂದ ಯಾವದಾದರೊಂದನ್ನಾಶ್ರಯಿಸಿಯೇ ಕಾಣಲ್ಪಡಬೇಕಾಗಿರುವುದಲ್ಲವೆ? ಆದುದರಿಂದ ಅದಕ್ಕಾಶ್ರಯವು ಕಾಣಲ್ಪಟ್ಟ ಮೇಲೆ ಅವಿದ್ಯೆಯು ಯಾವದನ್ನಾಶ್ರಯಿಸಿಕೊಂಡಿರುವುದೆಂಬದಾಗಿ ಪ್ರಶ್ನೆಮಾಡುವುದಕ್ಕೇನೆ ಅವಕಾಶವಿಲ್ಲವು. ಅದೃಶ್ಯವೆಂಬುವ ಪಕ್ಷದಲ್ಲಿ ಅದು ಅಪ್ರಕಾಶವಾಗಿರುವುದರಿಂದ ಅದಿರುವುದೆಂತಲೆ ಹೇಳಲಾಗುವುದಿಲ್ಲವು. ಆಶ್ರಯವು ತಾನಾಗಿಯೆ ಕಾಣಲ್ಪಟ್ಟರೆ ಅದು ಯಾರದೆಂದು ಕೇಳಬೇಕಾದ ಅವಶ್ಯಕತೆಯೇ ಇರಲಾರದು. ಏತಕ್ಕೆಂದರೆ? ಹಸುಗಳ ಹಿಂದೆ ಗೋಪಾಲಕನು ಕಾಣಲ್ಪಟ್ಟಮೇಲೆ ಈ ಹಸುಗಳು ಯಾರವೆಂದು ಕೇಳಬೇಕೆ?

(ಇದರ ಮೇಲೆ ಪೂರ್ವಪಕ್ಷಿಯು ಶಂಕಿಸುತ್ತಾನೆ) ನೀನು ಹೇಳಿರುವ ದೃಷ್ಟಾಂತವು ಯುಕ್ತವಾದದ್ದಲ್ಲವು. ಏತಕ್ಕೆಂದರೆ! ಗೋವುಗಳೂ ಅದಂ ರಕ್ಷಿಸುವಂತವನೂ ಪ್ರತ್ಯಕ್ಷವಾಗಿ ಕಾಣಲ್ಪಡುವುದರಿಂದ ಇವುಗಳಿಗಿರುವ ಸಂಬಂಧವು ಪ್ರತ್ಯಕ್ಷವಾಗಿರುವುದರಿಂದಲೂ ಪ್ರಶ್ನೆಗೆ ಅವಕಾಶವಿಲ್ಲವೆಂತಲೂ ಪ್ರಶ್ನೆಯೂ ನಿರರ್ಥಕವೆಂತಲೂ ಹೇಳಬಹುದು. ಈ ಪ್ರಕಾರವಾಗಿ ಅವಿದ್ಯೆಯೂ ಅದರ ಆಶ್ರಯವೂ ಅಪ್ರತ್ಯಕ್ಷಗಳಾಗಿರುವುದರಿಂದ ಪ್ರಶ್ನವು ಸಾರ್ಥಕವೆ. (ಇನ್ನು ಮುಂದೆ ಪೂರ್ವಪಕ್ಷಿ ಸಿದ್ಧಾಂತಿಗಳ ಪ್ರಶ್ನೋತ್ತರಗಳು ವಿವರಿಸಲ್ಪಡುವುವು) ಇದನ್ನು ಕೇಳಿ ಸಿದ್ಧಾಂತಿಯು ಪ್ರಶ್ನೆ ಮಾಡುತ್ತಾನೆ.

ಅಪ್ರತ್ಯಕ್ಷವಾಗಿರುವ ಅವಿದ್ಯಾವಂತನಿಗು ಅವಿದ್ಯೆಗು ಇರುವ ಸಂಬಂಧವು ತಿಳಿದಮಾತ್ರದಿಂದ ನಿನಗೇನು ಪ್ರಯೋಜನವು;

(ಪೂ॥ಉ) ಅವಿದ್ಯೆಯು ಅನರ್ಥಗಳಿಗೆ ಮೂಲವಾಗಿರುವುದರಿಂದ ಅದನ್ನು ಪರಿಹರಿಸಿಕೊಳ್ಳುವಿಕೆಯೆ ಪ್ರಯೋಜನವು.

(ಶಿ॥ಪ್ರ) ನೀನು ಹೇಳುವಂತೆ ಆಗುವಪಕ್ಷದಲ್ಲಿ ಯಾವನಿಗೆ ಅವಿದ್ಯಾಸಂಬಂಧವಿರುವುದೋ ಅವನದನ್ನು ಪರಿಹರಿಸಿಕೊಳ್ಳಲಿ, ಈ ವಿಚಾರದಿಂದ ನಿನಿಗೇನು?

(ಶ್ರೀ॥ಉ) ಅವಿದ್ಯೆಯು ನನ್ನದೆ, ಅದನ್ನು ನಾನು ಪರಿಹರಿಸಿಕೊಳ್ಳಬೇಕು.

(ಶಿ॥ಪ್ರ॥) ಆ ಪ್ರಕಾರವಾದರೆ ಅವಿದ್ಯೆಯನ್ನೂ ತದಾಶ್ರಯವಾದ ಆತ್ಮವನ್ನೂ ನೀನು ತಿಳಿದಿರುತ್ತೀಯೋ?

(ಶ್ರೀ॥ಉ) ತಿಳಿದಿರುವೆನು, ಆದರೆ ಪ್ರತ್ಯಕ್ಷವಾಗಿ ಕಾಣಲಿಲ್ಲವು.

(ಶಿ॥ಪ್ರ) ಪ್ರತ್ಯಕ್ಷದಿಂದ ಕಾಣದಿದ್ದರೆ ಅನುಮಾನದಿಂದ ಕಂಡಿರುವಿಯೊ? ಹಾಗಾದರೂ ಆಶ್ರಯಾಶ್ರಯಿಗಳಿಗಿರುವ ಸಂಬಂಧವನ್ನು ಗ್ರಹಿಸುವುದು ಹೇಗೆ? ಜ್ಞಾತಾಆದ ಆತ್ಮನೇ ತನ್ನ ಅವಿದ್ಯಾಸಂಬಂಧವನ್ನು ತಿಳಿದುಕೊಳ್ಳುವನೋ? ಅಥವಾ ಬೇರೊಬ್ಬ ಜ್ಞಾತಾಆದವನು ತಿಳಿದುಕೊಳ್ಳುವನೋ? ಜ್ಞಾತಾಆದ ನಿನಿಗೆ ಜ್ಞೇಯವಾದ ಅವಿದ್ಯೆಯೊಡನೆ ಕೂಡಿರುವ ಸಂಬಂಧವನ್ನು (ತಾನವಿದ್ಯೆಯನ್ನು ಕುರಿತು ಜ್ಞಾತಾಆಗಿರುವ ಅವಸ್ಥೆಯಲ್ಲಿ) ಗ್ರಹಿಸುವುದಕ್ಕೆ ಯತ್ನವಿಲ್ಲವು. ಏತಕ್ಕೆಂದರೆ? ಅವಿದ್ಯೆಯು ತನಿಗೆ ವಿಷಯವಾಗಿಯಲ್ಲವೆ ಉಪಯೋಗಿಸುತಲಿರುವುದು. ವಿಷಯವನ್ನು ಗ್ರಹಿಸುವವೇಳೆಯಲ್ಲಿ ವಿಷಯಕ್ಕೂ ಅದಂ ಗ್ರಹಿಸುವಂತವನಿಗೂ ಸಂಬಂಧವು (ಏಕತ್ವವು) ಹೇಗೆ ಅಂಗೀಕರಿಸಲ್ಪಡುವುದು. ಒಂದನುಭವದಲ್ಲಿ ಬಾಹ್ಯ ವಸ್ತುವು ಕರ್ತಾಆಗಿಯೂ ಕರ್ಮವಾಗಿಯೂ ಇರುವುದಕ್ಕೆ ಸಾಧ್ಯವಾಗುತ್ತದೆಯೆ? ಇದ್ದುಮಾತ್ರವಲ್ಲದೆ ಜ್ಞಾತಾ ಆದವನಿಗೂ ಅವಿದ್ಯೆಗೂ ಇರುವ ಸಂಬಂಧವನ್ನು ಗ್ರಹಿಸುವಂಥಾ ಗ್ರಹೀತಾಆದವನು ಮತ್ತೊಬ್ಬನಾಗಿಯೂ ಅಂತಹ ಜ್ಞಾತಾಆದವನಿಗೂ ಅವಿದ್ಯೆಗೂ ಇರುವ ಸಂಬಂಧವನ್ನು ತಿಳಿಯುವುದಕ್ಕೆ ಸಾಧನವಾಗಿ ಮತ್ತೊಂದು ಜ್ಞಾನವು ಸಂಭವಿಸಲಾರದು. ಏತಕ್ಕೆಂದರೆ? ಅನವಸ್ಥಾದೋಷಗಳುಂಟಾಗುವುವು. ಅದು ಹೇಗೆಂದರೆ? ಜ್ಞಾತಾಆದವನೂ ಜ್ಞೇಯಸಂಬಂಧವೂ ತಿಳಿಯಲ್ಪಟ್ಟಕಾಲದಲ್ಲಿ ಮತ್ತೊಂದು ಜ್ಞಾತೃವಸ್ತುವನ್ನು ಅಂಗೀಕರಿಸುವ ಪಕ್ಷದಲ್ಲಿ ಅಂತಹ ಜ್ಞಾತೃವಸ್ತುವೂ ತಿಳಿಯಲ್ಪಡತಕ್ಕ ಜ್ಞಾತೃವಸ್ತುವೂ ಮ

ತ್ತೊಬ್ಬನಿಂದ ತಿಳಿಯಲ್ಪಡತಕ್ಕ ಜ್ಞಾತೃವಸ್ತುವೂ ಇನ್ನೆಲ್ಲವೂ ಮತ್ತೊಬ್ಬ ಜ್ಞಾತೃವಿನಿಂದಲೂ ಎಂಬೀ ಪ್ರಕಾರವಾಗಿ ಜ್ಞಾತೃಗಳ ಸಮೂಹಕ್ಕೆ ಕೊನೆಯೆ ಇಲ್ಲದೆ ಹೋಗುವುದು. ಇದೆ ಅನವಸ್ಥೆಯೆನ್ನಲ್ಪಡುವುದು. ಅದು ಸಮ್ಮತವಾಗಲಾರದು. ಮತ್ತೂ ಜ್ಞೇಯವು ಅವಿದ್ಯೆಯಾದರೂ ಮತ್ತೊಂದಾದರೂ ಯಾವ ರೀತಿಯಿಂದಲಾದರೂ ಜ್ಞೇಯವು ಹೇಗಾದರೆ ಜ್ಞೇಯವೆ ಆಗುವುದೋ ಅದರಂತೆ ಜ್ಞಾತಾ ಆದವನು ಯಾವಾಗಲೂ ಜ್ಞಾತಾ ಆಗಿರುವನಲ್ಲದೆ ಜ್ಞೇಯವಾಗಲಾರನು. ಆದುದರಿಂದ ಜ್ಞೇಯಗಳಾದ ಅವಿದ್ಯಾದುಃಖತ್ವಾದಿಗಳೆಂಬ ದೋಷಗಳು ಜ್ಞಾತಾ ಆದ ಕ್ಷೇತ್ರಜ್ಞನನ್ನೆಷ್ಟುಮಾತ್ರವು ಸ್ಪರ್ಶಿಸಲಾರವು.

(ಪ್ರ॥ಪ) ದೋಷಮುಳ್ಳ ಕ್ಷೇತ್ರಗಳನ್ನು ತಿಳಿದುಕೊಳ್ಳುವಂತವನಾಗುವಿಕೆಯೂ ದೋಷವಲ್ಲವೆ?

(ಸಿ॥ಉ) ದೋಷವಲ್ಲವು. ಲೋಕದಲ್ಲಿ ಒಂದು ವಸ್ತುವು ಅಗ್ನಿಸಂಪರ್ಕದಿಂದ ಉಷ್ಣವಾಗಿದ್ದ ಕಾಲದಲ್ಲಿ ಅದು ಅಗ್ನಿಯಂತೆ ಸುಟ್ಟುಕೊಂಡಿರುವುದು. ಆ ಉಷ್ಣವು ಕಮ್ಮಿಯಾದಮೇಲೆ ಯಾವಾಗಲೂ ಇರುವಂತೆ ಶೀತಲವಾಗಿಯೆ ಇರುವುದು. ಆದುದರಿಂದ ಅಗ್ನಿಯಲ್ಲಿರುವ ಉಷ್ಣಗುಣವು ಇತರ ವಸ್ತುಗಳಲ್ಲಿ ಹೇಗಾದರೆ ಆಗಂತುಕವೋ ಅದರಂತೆ ಈಶ್ವರನಲ್ಲಿ ಸಂಸಾರವು ಆರೋಪಿತವಾಗಿರುವುದು. ಅದಕ್ಕೆ ಅವಿದ್ಯೆಯೇ ಮೂಲವಾಗಿರುವುದು. ಆದುದರಿಂದ ಬಂಧಮೋಕ್ಷಗಳು ಈಶ್ವರನಲ್ಲಾರೋಪಿತಗಳೆಂತಲೂ ಸಹಜವಾಗಿ ಅವಿಕ್ರಿಯನೆಂತಲೂ ತಿಳಿಯಲ್ಪಡುತ್ತದೆ. ಆದುದರಿಂದಲೇ ಈ ಗೀತಾಶಾಸ್ತ್ರದಲ್ಲಿ ಶ್ರೀಕೃಷ್ಣಸ್ವಾಮಿಯು ಈಶ್ವರನಿಗೆ ಕರ್ತೃತ್ವಭೋಕ್ತೃತ್ವಗಳಿಲ್ಲವೆಂದು ಸ್ಪಷ್ಟವಾಗಿ ಉಪದೇಶಿಸಿರುತ್ತಾನೆ. ಅವಿದ್ಯಾರೋಪಿತಗಳಾದ ಕರ್ತೃತ್ವಾದಿಗಳೇ ಈಶ್ವರನಂತೆ ಎಣಿಸಲ್ಪಡುವುವು. ಈ ಸಂದರ್ಭವು ,,ಯಏನಂವೇತ್ತಿಹಂತಾರಂ॥'' (೨॥೧೯) ,,ಪ್ರಕೃತೇಃಕ್ರಿಯಮಾಣಾನಿಗುಣೈಃಕರ್ಮಾಣಿಸರ್ವಶಃ॥'' (೩॥೨೭) ,,ನಾದತ್ತೇಕಸ್ಯಚಿತ್ಪಾಪಂ॥'' (೫॥೧೫) ಎಂಬಿವೇ ಮೊದಲಾದ ಸ್ಥಲಗಳಲ್ಲಿ ನಿರೂಪಿತವಾಗಿರುವುದು. ಈ ಶ್ಲೋಕಗಳಿಗೆ ಇಲ್ಲಿ ಹಿಂದೆ ಹೇಳಿರುವ ಅರ್ಥಾನುಗುಣವಾಗಿಯೇ ವ್ಯಾಖ್ಯಾನ ಮಾಡಲ್ಪಟ್ಟಿರುವುದು. ಇನ್ನು

ಮುಂದೆಯೂ ಈ ಅಂಶವು ವಿಶದವಾಗಿ ತೋರಿಸಲ್ಪಡುವುದು.

(ಪ್ರ॥ಪ್ರ) ಇಲ್ಲಿ ನೀವು ಹೇಳಿರುವುದು ಸಕಲವೂ ಸರಿಯೆ? ಆದರೂ ಈ ಪ್ರಶ್ನೆಗಳಿಗೆ ಉತ್ತರವನ್ನು ಕೊಡಬೇಕು. ಆತ್ಮನಿಗೆ ಕರ್ತೃತ್ವಭೋಕ್ತೃತ್ವಾದಿಗಳು ಸಹಜಗಳಲ್ಲದೆ ಅವಿದ್ಯಾರೋಪಿತಗಳಾಗಿದ್ದರೆ ಕರ್ಮಗಳು ಅಜ್ಞಾನಿಗಳಿಂದ ಮಾತ್ರವೇ ಅನುಷ್ಠಿಸಲ್ಪಡಬೇಕಲ್ಲದೆ ಜ್ಞಾನಿಗಳಿಗಾವಶ್ಯಕವಿಲ್ಲವೆಂದು ಹೇಳಿದಂತೆ ಆಗುವುದಲ್ಲವೆ? ಇದು ಯುಕ್ತವೇನೋ?

(ಸಿ॥ಉ) ಈ ಅಂಶವೇ ‹‹ನಹಿದೇಹಭೃತಾಶಕ್ಯಂ॥'' (೧೮॥೧೧॥) ಎಂಬೀ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ ವಿವರಿಸಲ್ಪಡುವುದು. ಮತ್ತು ಸಮಸ್ತವಾದ ಗೀತಾಶಾಸ್ತ್ರಾರ್ಥವನ್ನು ಉಪಸಂಹಾರ ಮಾಡುವ ಪ್ರಕರಣಕ್ಕೆ ಸೇರಿದ ‹‹ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ॥'' (೧೮॥೫೦) ಎಂಬೀ ಶ್ಲೋಕದಲ್ಲಿ ವಿಶೇಷವಾಗಿ ವಿವರಿಸಲ್ಪಡುವುದರಿಂದ ಇಲ್ಲಿ ಇಷ್ಟರಲ್ಲಿಯೇ ವಿರಾಮವಂ ಸ್ವೀಕರಿಸುವೆವು. ॥೩॥

(ರಾ॥ಭಾ॥) ಹೇ ಭಾರತ– ಭರತವಂಶಪ್ರಸೂತನಾದ ಎಲೈ ಅರ್ಜುನನೆ! ಸರ್ವಕ್ಷೇತ್ರೇಷು– ದೇವಮನುಷ್ಯಾದಿಗಳಾದ ಸರ್ವಶರೀರಗಳಲ್ಲಿಯೂ, ಕ್ಷೇತ್ರಜ್ಞಂಚಾಪಿ– ತಿಳಿಯುವಿಕೆಎಂಬ ಏಕಾಕಾರವುಳ್ಳ ಕ್ಷೇತ್ರಜ್ಞನನ್ನೂ, ಮಾಂವಿದ್ಧಿ– ನನ್ನನ್ನು ಆತ್ಮನಾಗಿಉಳ್ಳವನಂತೆ ತಿಳಿದುಕೊಳ್ಳುವಂತವನಾಗು. ಅಪಿಶಬ್ದದಿಂದ ಕ್ಷೇತ್ರಕ್ಕೂ ಕೂಡ ತಾನು ಆತ್ಮನಾಗಿರುವಿಕೆಯು ಬೋಧಿತವಾಗುವುದೆಂದರಿಯಬೇಕು. ಹೇಗಾದರೆ ಕ್ಷೇತ್ರವಾದ ಶರೀರವು (ಕ್ಷೇತ್ರಜ್ಞವಿಶೇಷಣೈಕಸ್ವಭಾವವಾಗಿರುವುದರಿಂದಲೂ ಕ್ಷೇತ್ರಜ್ಞನಾದ ಆತ್ಮನನ್ನು ಬಿಟ್ಟು ಪೃಥಕ್ಕಾಗಿರುವುದಿಲ್ಲವಾದುದರಿಂದಲೂ ಅಂತಹ ಕ್ಷೇತ್ರಜ್ಞಾತ್ಮರೊಡನೆ) ಸಮಾನಾಧಿಕರಣನಿರ್ದೇಶಕ್ಕೆ ಅರ್ಹವೊ ಅದರಂತೆ ಕ್ಷೇತ್ರಜ್ಞಾತ್ಮವಸ್ತುವೂ ಭಗವದ್ವಿಶೇಷಣೈಕಸ್ವಭಾವವಾಗಿರುವುದರಿಂದಲೂ ಭಗವತ್ಸ್ವರೂಪವಂ ಬಿಟ್ಟು ಪೃಥಕ್ಕಾಗಿರುವುದಿಲ್ಲವಾದುದರಿಂದಲೂ ಸಮಾನಾಧಿಕರಣನಿರ್ದೇಶಾರ್ಹವಾಗಿರುವುದೆಂದರಿಯಬೇಕು. ಆದುದರಿಂದ ಕ್ಷೇತ್ರವಾದ ಶರೀರವೂ ಕ್ಷೇತ್ರಜ್ಞನಾದ ಜೀವನೂ ನನಗೆ ಶರೀರವಾಗಿ ನನ್ನನ್ನು ಬಿಟ್ಟು ಪೃಥಕ್ಕಾಗಿರುವುದಿ

ಲ್ಲವಾದುದರಿಂದ ಆ ಯೆರಡು ವಸ್ತುವೂ ನಾನೆ ಎಂದು ಹೇಳಲು ಯೋಗ್ಯವಾಗಿರುವುದೆಂದರಿಯಬೇಕೆಂದರ್ಥವು. (ಈ ಗೀತಾಶಾಸ್ತ್ರದಲ್ಲಿಯೇ ಬದ್ಧಮುಕ್ತೋಭಯಾವಸ್ಥೆಗಳೊಡನೆ ಕೂಡಿರುವ ಕ್ಷರಾಕ್ಷರಶಬ್ದನಿರ್ದಿಷ್ಟನಾದ ಕ್ಷೇತ್ರಜ್ಞನಿಗಿಂತಲೂ ಪರಬ್ರಹ್ಮಭೂತನಾದ ವಾಸುದೇವನಿಗೆ ಅತ್ಯಂತ ವೈಲಕ್ಷಣ್ಯವನ್ನು (ಭೇದವನ್ನು) "ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ । ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ವೇದೇ ಲೋಕೇ ಚ ಪ್ರಥಿತಃ ಪುರುಷೋತ್ತಮಃ ॥" (೧೫ನೆ ಅಧ್ಯಾಯದಲ್ಲಿ ೧೬ನೆ ಶ್ಲೋಕದಿಂದ ೧೮ನೆ ಶ್ಲೋಕದವರಿಗೆ) ಸ್ಪಷ್ಟವಾಗಿ ಹೇಳಿರುತ್ತಾನೆ.) ಇಲ್ಲಿ ಜೀವನಿಗೂ ಶರೀರಕ್ಕೂ ಸಾಮಾನಾಧಿಕರಣ್ಯ ಹೇಳುವುದಕ್ಕೆ ಯಾವ ಅಪೃಥಕ್ ಸ್ಥಿತಿಯು ಹೇತುವಾಗಿರುವುದೋ ಆ ಹೇತುವೇ ಜೀವಪರಮಾತ್ಮರ ಸಾಮಾನಾಧಿಕರಣ್ಯಕ್ಕೆ ಹೇತುವೆಂದರಿಯಬೇಕು. ಆದರೆ ಇಲ್ಲಿ ಕ್ಷೇತ್ರಜ್ಞವಿಶೇಷಣತ್ವವೇನೊ ಪ್ರತ್ಯಕ್ಷಸಿದ್ಧವಾಗಿರುವುದರಿಂದ ಸ್ವೀಕರಿಸಲ್ಪಡಬಹುದು. ಕ್ಷೇತ್ರಕ್ಷೇತ್ರಜ್ಞರಿಗೆ ಪರಮಾತ್ಮನನ್ನು ಕುರಿತು ವಿಶೇಷಣತ್ವವು ಸ್ಫುಟವಾಗಿ ಕಾಣಲ್ಪಡುವುದಿಲ್ಲವು. ಕ್ಷೇತ್ರಜ್ಞನೂ ಘಟಪಟಾದಿಗಳೂ ಸ್ವತಂತ್ರವಾಗಿಯೆ ಕಾಣಲ್ಪಡುತಲಿರುತ್ತಾರೆ. ಆದುದರಿಂದ ಇಲ್ಲಿ ಸಾಮಾನಾಧಿಕರಣ್ಯವು ಅಮುಖ್ಯವೆಂತಲೇ ಹೇಳಲ್ಪಡಬೇಕಾಗಿರುವುದೆಂದರೆ ವಿಶೇಷ್ಯಾಂಶವು ಅಪ್ರತ್ಯಕ್ಷವಾಗಿರುವುದರಿಂದ ವೇದಾಂತಶ್ರವಣವಿಲ್ಲದವನಿಗೆ ಶಾಸ್ತ್ರಮುಖವಾಗಿಯಾದರೂ ಈ ಅಂಶವನ್ನು ನಿರ್ಧರಿಸಿಕೊಳ್ಳುವುದು ಕಷ್ಟಸಾಧ್ಯವಾಗಿರುವುದೆಂದರಿಯಬೇಕು. ಆದರೆ ಶ್ರುತವೇದಾಂತರಾದ ನೀವು ಇದನ್ನು ಶಾಸ್ತ್ರಮುಖವಾಗಿ ಹೇಗೆ ನಿರ್ಧರಿಸುತ್ತೀರೋ ಅದನ್ನು ಉಪಪಾದನೆ ಮಾಡಿಕೊಡಬೇಕೆಂದರೆ ಕೇಳು. ಪೃಥಿವ್ಯಾದಿಭೂತಗಳಿಗೆ ಪರಮಾತ್ಮ ಶರೀರತ್ವವು ವೇದಾಂತಗಳಲ್ಲಿ ಸಿದ್ಧವಾಗಿರುವುದರಿಂದಲೆ ಪೃಥಿವ್ಯಾದಿಭೂತಸಂಘಾತರೂಪಗಳಾದ ದೇವಮನುಷ್ಯಾದಿ ಪಿಂಡಗಳಿಗೂ ಪರಮಾತ್ಮ ಶರೀರತ್ವವು ಹೇಳಲ್ಪಟ್ಟಿತು. ಪೃಥಿವ್ಯಾದಿ ಭೂತಸಂಘಾತ

ರೂಪವಾದ ಶರೀರಕ್ಕೂ ಅದಕ್ಕಿಂತಲೂ ಭಿನ್ನನಾದ ಜೀವಾತ್ಮನಿಗೂ ಪರಮಾತ್ಮ ಶರೀರತ್ವವೇ ಸಿದ್ಧವಾಗಿರುವುದರಿಂದ) (ಆರೀತಿಯಾಗಿರುವುದೇ ಸ್ವರೂಪವಾಗಿಯೂ ಸ್ವಭಾವವಾಗಿಯೂ ಇರುವುದರಿಂದ ಶರೀರಾತ್ಮಗಳು ಭಗವದ್ರೂಪಗಳೆಂಬದಾಗಿ ‟ಯಃಪೃಥಿವ್ಯಾಂತಿಷ್ಠನ್ಪೃಥಿವ್ಯಾಅಂತರೋಯಂಪೃಥಿವೀನವೇದಯಸ್ಯಪೃಥಿವೀಶರೀರಂ ಯಃಪೃಥಿವೀಮನ್ತರೋಯಮಯತಿಸತಆತ್ಮಾಂತರ್ಯಾಮ್ಯಮೃತಃ” ಎಂಬದಾಗಿ ಉಪಕ್ರಮಿಸಿ ‟ಯಆತ್ಮನಿತಿಷ್ಠನ್ನಾತ್ಮನೋಂತರೋಯಮಾತ್ಮಾನವೇದಯಸ್ಯಾತ್ಮಾಶರೀರಂ ಯಆತ್ಮಾನಮಂತರೋಯಮಯತಿಸತಆತ್ಮಾಂತರ್ಯಾಮ್ಯಮೃತಃ” ಇತ್ಯಾದಿ ಶ್ರುತಿಗಳು ಹೇಳುವುವು. ಈ ಪ್ರಕಾರವಾಗಿ ಪರಮಾತ್ಮನು ಜೀವಾತ್ಮರಿಗೆ ಅಂತರ್ಯಾಮಿಯಾಗಿ ಇರುವಿಕೆಯೆ, ಸಮಾನಾಧಿಕರಣನಿರ್ದೇಶಕ್ಕೆ ಕಾರಣವೆಂಬದಾಗಿ ಬೋಧಿಸುವುದಕ್ಕಾಗಿಯೆ ‟ಅಹಮಾತ್ಮಾಗುಡಾಕೇಶಸರ್ವಭೂತಾಶಯಸ್ಥಿತಃ॥” (೧೦॥೨೦) ‟ನತದಸ್ತಿವಿನಾಯತ್ಸ್ಯಾನ್ಮಯಾಭೂತಂಚರಾಚರಂ” (೧೦॥೩೯) ‟ವಿಷ್ಟಭ್ಯಾಹಮಿದಂಕೃತ್ಸ್ನಮೇಕಾಂಶೇನಸ್ಥಿತೋಜಗತ್” (೧೦॥೪೨) ಎಂಬದಾಗಿ ಮುಂದೆಯೂ ಹಿಂದೆಯೂ ತಾನೆ ಹೇಳಿ ಮಧ್ಯದಲ್ಲಿಯೂ ‟ಆದಿತ್ಯಾನಾಮಹಂವಿಷ್ಣುಃ” ಇತ್ಯಾದಿಗಳಲ್ಲಿ ವಿಭೂತಿಗಳಿಗೂ ತನಗೂ ಏಕತ್ವವನ್ನು ದೃಢಪಡಿಸಿ ಹೇಳಿರುತ್ತಾನೆ. ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ- ಕ್ಷೇತ್ರವಾದ ಶರೀರಕ್ಕೂ ಕ್ಷೇತ್ರಜ್ಞನಾದ ಆತ್ಮನಿಗೂ ಪೃಥಗ್ಭಾವವನ್ನೂ ಈ ಯೆರಡು ವಸ್ತುಗಳಿಗೂ ನಾನಾತ್ಮನಾಗಿರುವಿಕೆಯನ್ನೂ ವಿಷಯವಾಗಿಉಳ್ಳದ್ದು ಯಾವ ಜ್ಞಾನವೋ, ತತ್- ಅದೆ, ಜ್ಞಾನಂ- ಜ್ಞಾನವೆಂಬದಾಗಿ, ಮಮ- ನನಗೆ, ಮತಂ- ಸಮ್ಮತವು. ಮುಮುಕ್ಷುಗಳಾದವರಿಗೆ ತಿಳಿಯಬೇಕಾಗಿರುವ ಜ್ಞಾನಗಳಲ್ಲಿ ದೇಹಾತ್ಮಗಳ ಪೃಥಗ್ಭಾವವೂ ಆ ದೇಹಾತ್ಮಗಳು ಭಗವಚ್ಛರೀರಗಳಾಗಿರುವಿಕೆಯೂ ಪ್ರಧಾನಗಳೆಂದು ತಾತ್ಪರ್ಯವು.

ಈ ಪ್ರಕಾರವಾಗಿ ಈ ಶ್ಲೋಕಕ್ಕೆ ಶ್ರುತಿಸ್ಮೃತಿಪೂರ್ವಾಪರಾವಿರುದ್ಧವಾದ ಅರ್ಥವನ್ನು ಹೇಳಿ ನಿರೂಪಕಾಭಾಸರಾದ ಕುದೃಷ್ಟಿಗಳು ಹೇಳಿರುವ ಶ್ರುತ್ಯಾದಿವಿರುದ್ಧವಾದ ಅರ್ಥಗಳನ್ನು ದೂಷಣಮಾಡುವ

ಕ್ರಮಿಸುತ್ತಾರೆಂದರಿಯಬೇಕು. ಇಲ್ಲಿ ಕೆಲವರು ಕ್ಷೇತ್ರಜ್ಞನೂನಾನೆ ಎಂದು ತಿಳಿದುಕೊಳ್ಳೆಂಬದಾಗಿ ಈ ಶ್ಲೋಕದಲ್ಲಿ ಪರಮಾತ್ಮನು ಹೇಳಿರುವುದರಿಂದ (ಸಾಮಾನಾಧಿಕರಣ್ಯದಿಂದ) ಜೀವಪರಮಾತ್ಮರಿಗೆ ಐಕ್ಯವು ತೋರುತ್ತದೆ. ಆದುದರಿಂದ ಈಶ್ವರನಾಗಿದ್ದರೂ ಪರಬ್ರಹ್ಮವು ಅಜ್ಞಾನದಿಂದ ಕ್ಷೇತ್ರಜ್ಞನಾದ ಜೀವನಂತೆ ತೋರಲ್ಪಡುವನು. ಅಂತಹ ಜೀವಭಾವವನ್ನು ನಿವೃತ್ತಿಸಿಕೊಳ್ಳುವುದಕ್ಕಾಗಿಯೆ ಈ ಪ್ರಕಾರವಾಗಿ ಜೀವಪರಮಾತ್ಮರಿಗೆ ಐಕ್ಯವನ್ನುಪದೇಶಿಸುತ್ತಾನೆ. ಈರೀತಿಯಾಗಿ ಆಪ್ತತಮನಾದ ಭಗವಂತನ ಉಪದೇಶದಿಂದ (ರಜ್ಜುವನ್ನು ನೋಡಿ ಸರ್ಪವೆಂಬದಾಗಿ ಭ್ರಮಿಸುವಂತವನಿಗೆ ಇದು ಸರ್ಪವಲ್ಲವು ರಜ್ಜುವೆ ಎಂಬದಾಗಿ ಹೇಳುವ ಆಪ್ತನ ಉಪದೇಶದಿಂದ ಸರ್ಪತ್ವಭ್ರಮವು ನಿವೃತ್ತಿಸುವಂತೆ) ಜೀವನೆಂಬ ಭ್ರಾಂತಿಯು ನಿವೃತ್ತಿಸುವುದೆಂಬದಾಗಿ ಹೇಳುವರು.

ಈ ಪ್ರಕಾರವಾಗಿ ಹೇಳುವಂತವರನ್ನು ಕೇಳುವೆವು. ಇಲ್ಲಿ ಉಪದೇಶವಂ ಮಾಡುವ ಭಗವಂತನಾದ ಪರಮೇಶ್ವರನಿಗೆ ಆತ್ಮಸ್ವರೂಪ ಜ್ಞಾನವುಂಟಾಗಿ ಅದರಿಂದ ಅಜ್ಞಾನವು ನಿವೃತ್ತವಾಗಿರುವುದೋ? ಅಥವಾ ಇಲ್ಲವೋ? ಆತ್ಮಸ್ವರೂಪ ಜ್ಞಾನವುಂಟಾಗಿ ಅದರಿಂದ ಅಜ್ಞಾನನಿವೃತ್ತಿ ಎಂದರೆ (ಯಾವದೊಂದು ವಿಶೇಷವೂ ಇಲ್ಲದೆ ಜ್ಞಾನಮಾತ್ರವಾಗಿಯೆ ಇರುವ) ನಿರ್ವಿಶೇಷಚಿನ್ಮಾತ್ರೈಕಸ್ವರೂಪನಾದ ಆತ್ಮನಲ್ಲಿ ಅದಕ್ಕೆ ವಿರೋಧವಾದ ಸ್ಥಿತಿಯುಂಟಾಗುವುದಕ್ಕೆ ಅವಕಾಶವಿಲ್ಲವಾದುದರಿಂದ ಕುಂತೀಪುತ್ರಾದಿಗಳನ್ನು ಕುರಿತು ಭೇದದಿಂದ ನೋಡುವಿಕೆಯೂ, ಅದಕ್ಕನುಗುಣವಾದ ಉಪದೇಶಾದಿವ್ಯಾಪಾರಗಳೂ ಕೂಡುವುದಿಲ್ಲವು. ಆತ್ಮಸಾಕ್ಷಾತ್ಕಾರವಿಲ್ಲದೇ ಇರುವುದರಿಂದ ವಾಸುದೇವನಿಗೆ ಅಜ್ಞಾನನಿವೃತ್ತಿ ಇಲ್ಲವೆನ್ನುವುದಾದರೆ ಅಜ್ಞಾನಿಯಾದವನು ಉಪದೇಶಾದಿಕಾರ್ಯಗಳಂ ಮಾಡುವುದೇ ಉಚಿತವಲ್ಲವು. ತತ್ವಸಾಕ್ಷಾತ್ಕಾರವುಳ್ಳವರಿಗೆನೆ ಉಪದೇಷ್ಟೃತ್ವವಿರುವುದೆಂಬೀ ಅಂಶವು ‘‘ಉಪದೇಕ್ಷ್ಯಂತಿತೇಜ್ಞಾನಂ ಜ್ಞಾನಿನಸ್ತತ್ವದರ್ಶಿನಃ॥’’ ಎಂಬೀ ಭಗವದ್ವಾಕ್ಯದಿಂದಲೂ ಸಿದ್ಧವಾಗಿರುವುದು. ಆದುದರಿಂದ ಪರಮಾತ್ಮನಿಗೆ ಅಜ್ಞಾನನಿವೃತ್ತಿರಾಹಿತ್ಯದಿಂದ ಅವನು ಭೇದೋಪದೇಶವಂ ಮಾಡುತ್ತಾನೆಂಬುವುದು ಉಚಿತವಲ್ಲವು. ಅಜ್ಞಾ

ನಾಪವನು ಉಪದೇಶಿಸುವುದು ತಾನೇ ಹೇಗೆ? ಆದುದರಿಂದ ಇವೇ ಮೊದಲಾದ ವಾದಗಳು ಶ್ರುತಿಸ್ಮೃತೀತಿಹಾಸಪುರಾಣಾರ್ಥಗಳ ಪರಿಶೀಲನವಿಲ್ಲದೆ ಇರುವುದರಿಂದ ನ್ಯಾಯವಿರೋಧವೂ ತಮ್ಮಗಳ ವಾಕ್ಯಗಳಲ್ಲಿಯೆ ಪೂರ್ವಾಪರ ವಿರೋಧವೂಉಳ್ಳ ವಾದಿಗಳಿಂದ ಜಗನ್ಮೋಹನಾರ್ಥವಾಗಿ ಪ್ರವರ್ತಿಸಲ್ಪಟ್ಟಿರುವುವೆಂಬುದಾಗಿ ಅನಾದರ ಯೋಗ್ಯಗಳಾಗಿರುವುವು.

ಆದರೆ ನಿಮ್ಮ ಸಿದ್ಧಾಂತದಲ್ಲಿ ನ್ಯಾಯವಿರೋಧವೂ ಪೂರ್ವಾಪರ ವಿರೋಧವೂ ಇಲ್ಲವೆ? ಎಂದರೆ ನಮ್ಮ ಸಿದ್ಧಾಂತಾರ್ಥಗಳ ಅಪರಿಚಯದಿಂದ ನಿಮ್ಮಗಳಿಗೆ ವಿರೋಧವು ಕಂಡುಬರುವುದಲ್ಲದೆ ವಾಸ್ತವವಾಗಿ ವಿಚಾರಿಸಿನೋಡಿದರೆ ಅಸ್ಮತ್ಸಿದ್ಧಾಂತದಲ್ಲಿ ಯಾವದೋಷವೂ ಇಲ್ಲವು. ಆ ರೀತಿಯಾಗಿದ್ದರೆ ನಿಮ್ಮಸಿದ್ಧಾಂತಾರ್ಥಗಳನ್ನು ಉಪನ್ಯಾಸಮಾಡಬೇಕೆಂಬ ಪಕ್ಷದಲ್ಲಿ ಪ್ರಾಮಾಣಿಕಾರ್ಥವನ್ನು ಉಪನ್ಯಸಿಸುವೆನು ಕೇಳು. ಅಚಿತ್ತೂ, ಚಿತ್ತೂ, ಬ್ರಹ್ಮವೂ ಯಥಾಕ್ರಮವಾಗಿ ಭೋಗ್ಯವೂ ಭೋಕ್ತನೂ ಈಶನೂ ಎಂಬದಾಗಿ ಅವುಗಳ ಸ್ವರೂಪವನ್ನು ಪೃಥಕ್ಕಾಗಿ ಕೆಲವು ಶ್ರುತಿಗಳು ಪ್ರತಿಪಾದಿಸುವವು. ಅಂತಹಾ ಶ್ರುತಿಗಳ್ಯಾವವೆಂದರೇ "ಅಸ್ಮಾನ್ಮಾಯೀಸೃಜತೇವಿಶ್ವಮೇತತ್ತಸ್ಮಿಂಶ್ಚಾನ್ಯೋಮಾಯಯಾಸನ್ನಿರುದ್ಧಃ ॥ ಮಾಯಾಂತುಪ್ರಕೃತಿಂವಿದ್ಯಾನ್ಮಾಯಿನಂತುಮಹೇಶ್ವರಂ ॥ ಕ್ಷರಂಪ್ರಧಾನಮಮೃತಾಕ್ಷರಂಹರಃಕ್ಷರಾತ್ಮಾನಾವೀಶತೇದೇವಏಕಃ ॥ ಸಕಾರಣಂಕರಣಾಧಿಪಾಧಿಪೋನತಸ್ಯಕಶ್ಚಿಜ್ಜನಿತಾನಚಾಧಿಪಃ ॥ ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ ॥ ಪತಿಂವಿಶ್ವಸ್ಯಾತ್ಮೇಶ್ವರಂಶಾಶ್ವತಂಶಿವಮಚ್ಯುತಂ ॥ ಜ್ಞಾಜ್ಞೌದ್ವಾವಜಾವೀಶಾನೀಶೌ ॥ ನಿತ್ಯೋನಿತ್ಯಾನಾಂಚೇತನಶ್ಚೇತನಾನಾಮೇಕೋಬಹೂನಾಂಯೋವಿದಧಾತಿಕಾಮಾನ್ ॥ ಭೋಕ್ತಾಭೋಗ್ಯಂಪ್ರೇರಿತಾರಂಚಮತ್ವಾ ॥ ಪೃಥಗಾತ್ಮಾನಂಪ್ರೇರಿತಾರಂಚಮತ್ವಾಜುಷ್ಟಸ್ತತಸ್ತೇನಾಮೃತತ್ವಮೇತಿ ॥ ತಯೋರನ್ಯಃಪಿಪ್ಪಲಂಸ್ವಾದ್ವತ್ತ್ಯನಶ್ನನ್ನನ್ಯೋಅಭಿಚಾಕಶೀತಿ ॥ ಅಜಾಮೇಕಾಂಲೋಹಿತಶುಕ್ಲಕೃಷ್ಣಾಂಬಹ್ವೀಂಪ್ರಜಾಂಜನಯಂತೀಂಸರೂಪಾಂ ॥ ಅಜೋಹ್ಯೇಕೋಜುಷಮಾಣೋನುಶೇತೇಜಹಾತ್ಯೇನಾಂಭುಕ್ತಭೋಗಾಮಜೋನ್ಯಃ ಗೌರನಾದ್ಯಂತವತೀಸಾಜನಿತ್ರೀಭೂತಭಾವನೀ ॥ ಸಮಾನೇವೃಕ್ಷೇಪುರುಷೋನಿಮಗ್ನೋನೀಶಯಾಮುಹ್ಯತಿ

ಶೋಚತಿಮಾನಃ ॥ ಜುಷ್ಟಂಯದಾಪಶ್ಯತ್ಯನ್ಯಮೀಶಮಸ್ಯಮಹಿಮಾನಮಿತಿ ವೀತಶೋಕಃ ॥" ಇತ್ಯಾದಿಗಳ. ಇಲ್ಲಿ ಭೇದಶ್ರುತಿಗಳಿಗೆ ಅವಿರೋಧದಿಂದ ಐಕ್ಯಪ್ರತಿಪಾದಕಗಳಾದ ಶ್ರುತಿಗಳ ಅರ್ಥವನ್ನು ಸ್ಥಾಪಿಸುವುದಕ್ಕಾಗಿಯೆಮೊದಲುಭೇದಶ್ರುತಿಗಳನ್ನುದಹರಿಸಿರುತ್ತಾರೆಂದರಿಯಬೇಕು. "ಅಸ್ಮಾನ್ಮಾಯಿ" ಎಂಬ ಪ್ರದೇಶದಲ್ಲಿ 'ಅಸ್ಮಾತ್, ಎಂಬದಾಗಿ ಹೇಳಿರುವುದರಿಂದ ಅಚಿದ್ದ್ರವ್ಯಕ್ಕೆ ಸಾಕ್ಷಾದ್ವಿಕಾರಾಶ್ರಯತ್ವವು ಸಿದ್ಧವಾಯಿತು. ಈ ಶ್ರುತಿಯಲ್ಲಿಯೇ 'ಅನ್ಯೋವಮಾಯಯಾಸನ್ನಿರುದ್ಧಃ, ಎಂಬುವದಾಗಿ ಹೇಳಿರುವುದರಿಂದ ಬ್ರಹ್ಮಕ್ಕೇನೇ ಜೀವತ್ವಮುಂಟಾಗುವುದೆಂಬಿದೇ ಮೊದಲಾದಪ್ರಲಾಪವು ನಿರ್ಮೂಲಿತವಾಯಿತೆಂದರಿಯಬೇಕು. ಈಶ್ರುತಿಯಲ್ಲಿ ಅಸ್ಮಾತ್ ಎಂಬದಾಗಿ ಪ್ರಕೃತಿತತ್ವವನ್ನು ಹೇಳಿ 'ಮಾಯಿಮಾ, ಎಂಬುವುದರಿಂದ ಮಾಯಾಶರೀರಕನಾದ ಪರಮಾತ್ಮನು ಪ್ರತಿಪಾದಿಸಲ್ಪಟ್ಟು ಅನಂತರದಲ್ಲಿ 'ಅನ್ಯಃ' ಎಂಬುವುದರಿಂದ ಪೂರ್ವಪ್ರತಿಪಾದಿತರಾದ ಮಾಯಾಪರಮಾತ್ಮರಿಬ್ಬರಿಗಿಂತಲೂ ಅನ್ಯನಾದ ಜೀವಾತ್ಮನಿಗೆ ಮಾಯಾಸನ್ನಿರೋಧವು ಪ್ರತಿಪಾದಿಸಲ್ಪಟ್ಟಿರುವುದರಿಂದ ಜೀವಬ್ರಹ್ಮೈಕ್ಯವನ್ನು ಹೇಳಲು ಅವಕಾಶವಿಲ್ಲವು. ಆದರೆ ಮಾಯಾಶಬ್ದದಿಂದ ಪ್ರಧಾನವು ಹೇಗೆ ಹೇಳಲ್ಪಟ್ಟಿತೆಂದರೆ ಅದಕ್ಕಾಗಿ "ಮಾಯಾಂತುಪ್ರಕೃತಿಂವಿಂದ್ಯಾತ್" ಎಂಬ ಶ್ರುತಿಯು ಉಪನ್ಯಾಸವು. ಈಪ್ರಕಾರವಾಗಿ ಇಲ್ಲುದಾಹರಿಸಲ್ಪಡುವ ಶ್ರುತಿಗಳಿಗೆ ಆಯಾ ಅರ್ಥಾನುಗುಣವಾದ ಉಪಯೋಗವಿಶೇಷಗಳನ್ನು ಗ್ರಹಿಸಬೇಕು. ಈಪ್ರಕಾರವೆ ಈ ಗೀತಾಶಾಸ್ತ್ರದಲ್ಲಿಯೂ "ಅಹಂಕಾರಇತೀಯಂಮೆ ಭಿನ್ನಾಪ್ರಕೃತಿರಷ್ಟಧಾ । ಅಪರೇಯಮಿತಸ್ತ್ವನ್ಯಾಂಪ್ರಕೃತಿಂವಿದ್ಧಿಮೇಪರಾಂ ॥ ಜೀವಭೂತಾಂ ॥ ಸರ್ವಭೂತಾನಿಕೌಂತೇಯಪ್ರಕೃತಿಂಯಾಂತಿ ಮಾಮಿಕಾಂ ॥ ಕಲ್ಪಕ್ಷಯೇಪುನಸ್ತಾನಿಕಲ್ಪಾದೌವಿಸೃಜಾಮ್ಯಹಂ ॥ ಪ್ರಕೃತಿಂಸ್ವಾಮವಷ್ಟಭ್ಯವಿಸೃಜಾಮಿಪುನಃಪುನಃ । ಭೂತಗ್ರಾಮಮಿಮಂಕೃತ್ಸ್ನಮವಶಂಪ್ರಕೃತೇರ್ವಶಾತ್। ಮಯಾಧ್ಯಕ್ಷೇಣಪ್ರಕೃತಿಸ್ಸೂಯತೆಸಚರಾಚರಂ ॥ ಹೇತುನಾನೇನಕೌಂತೇಯಜಗದ್ವಿಪರಿವರ್ತತೇ ॥ ಪ್ರಕೃತಿಂಪುರುಷಂಚೈವವಿದ್ಧ್ಯನಾದೀಉಭಾವಪಿ ॥ ಮಮಯೊನಿರ್ಮಹದ್ಬ್ರಹ್ಮತಸ್ಮಿನ್ಗರ್ಭಂದಧಾಮ್ಯಹಂ । ಸಂಭವಸ್ಸರ್ವಭೂತಾನಾಂತತೋಭ

ವತಿಭಾರತ ॥ ” ಎಂಬದಾಗಿ ಹೇಳಲ್ಪಟ್ಟಿರುವುದು. ಈಪ್ರಕಾರವಾಗಿ ಭೋಕ್ತೃಆಗಿಯೂ ಭೋಗ್ಯವಾಗಿಯೂಇರುವ ಚಿತ್ತೂ ಅಚಿತ್ತೂ ಸರ್ವಾವಸ್ಥೆಗಳಲ್ಲಿಯೂ ಪರಮಪುರುಷನಿಗೆ ಶರೀರವಾಗಿ ಅವನಿಂದ ನಿಯಮಿಸಲ್ಪಡುವುದಾಗಿರುವುದರಿಂದ ಅವನಂ ಬಿಟ್ಟು ಪೃಥಕ್ಕಾಗಿರಲಾರವೆಂತಲೂ ಪರಮಪುರುಷನು ಅವುಗಳಿಗೆ ಆತ್ಮನಾಗಿರುವನೆಂತಲೂ ಕೆಲವು ಶ್ರುತಿಗಳು ಹೇಳುವುವು. ಅವು ಯಾವವೆಂದರೆ? “ ಯಃಪೃಥಿವ್ಯಾಂತಿಷ್ಠನ್ ಪೃಥಿವ್ಯಾಅಂತರೋಯಂಪೃಥಿವೀನವೇದಯಸ್ಯಪೃಥಿವೀಶರೀರಂ ಯಃಪೃಥಿವೀಮಂತರೋಯಮಯತಿ” ಎಂಬದಾಗಿ ಉಪಕ್ರಮಿಸಿ “ಯಆತ್ಮನಿತಿಷ್ಠನ್ನಾತ್ಮನೋಂತರೋಯಮಾತ್ಮಾನವೇದಯಸ್ಯಾತ್ಮಾಶರೀರಂ ಯಆತ್ಮಾನಮಂತರೋಯಮಯತಿಸತಆತ್ಮಾಂತರ್ಯಾಮ್ಯಮೃತಃ” ಎಂಬದಾಗಿಯೂ, ಆ ಪ್ರಕಾರವೇ “ಯಃಪೃಥಿವೀಮಂತರೇಸಂಚರನ್ಯಸ್ಯಪೃಥಿವೀಶರೀರಂಯಂಪೃಥಿವೀನವೇದ” ಎಂಬದಾಗಿಉಪಕ್ರಮಿಸಿ “ಯೋಕ್ಷರಮಂತರೇಸಂಚರನ್ ಯಸ್ಯಾಕ್ಷರಂಶರೀರಂಯಮಕ್ಷರಂನವೇದ-ಯೋಮೃತ್ಯುಮಂತರೇಸಂಚರನ್ಯಸ್ಯಮೃತ್ಯುಶ್ಶರೀರಂ ಯಂಮೃತ್ಯುರ್ನವೇದ ಏಷಸರ್ವಭೂತಾಂತರಾತ್ಮಾ ಅಪಹತಪಾಪ್ಮಾದಿವ್ಯೋದೇವಏಕೋನಾರಾಯಣಃ” ಎಂಬದಾಗಿಯೂ ” ಅತಃಪ್ರವಿಷ್ಟಶ್ಶಾಸ್ತಾಜನಾನಾಂಸರ್ವಾತ್ಮಾ ” ಇತ್ಯಾದಿಗಳೇ. ಇಲ್ಲಿ ಮೃತ್ಯುಶಬ್ದದಿಂದ ತಮಶ್ಶಬ್ದ ವಾಚ್ಯವಾಗಿರುವ ಸೂಕ್ಷ್ಮಾವಸ್ಥವಾದ ಅಚಿದ್ವಸ್ತುವು ಹೇಳಲ್ಪಡುವದು.

ಈರೀತಿಯಾಗಿ ಸರ್ವಾವಸ್ಥೆಗಳಲ್ಲಿಯೂ ಚೇತನಾಚೇತನಗಳನ್ನು ಶರೀರವಾಗಿ ಉಳ್ಳವನಾಗಿ ಅವುಗಳನ್ನು ಪ್ರಕಾರವಾಗಿ ಸ್ವೀಕರಿಸಿರುವ ಪರಮ ಪುರುಷನೆ ಕಾರ್ಯಕಾರಣಾವಸ್ಥೆಗಳಲ್ಲಿ ಜಗದ್ರೂಪಿಯಾಗಿರುವನೆಂಬೀಅರ್ಥವನ್ನು ತಿಳಿಸುವುದಕ್ಕಾಗಿಯೆ ಕೆಲವು ಶ್ರುತಿಗಳು (ಕಾರ್ಯಾವಸ್ಥೆಯಲ್ಲಿಯೂ ಕಾರಣಾವಸ್ಥೆಯಲ್ಲಿಯೂ ಇರುವ ಜಗತ್ತು ಆಪರಮಾತ್ಮನೆ ಎಂಬದಾಗಿ) ಹೇಳುವವು. “ಅವುಯಾವವೆಂದರೆ? “ಸದೇವಸೋಮ್ಯೇದಮಗ್ರಆಸೀತ್। ಏಕಮೇವಾದ್ವಿತೀಯಂ। ತದೈಕ್ಷತಬಹುಸ್ಯಾಂಪ್ರಜಾಯೇಯೇತಿ ತತ್ತೇಜೋಸೃಜತ ” ಎಂಬದಾಗಿ ಉಪಕ್ರಮಿಸಿ“ ಸನ್ಮೂಲಾಸ್ಸೋಮ್ಯೇಮಾಸ್ಸರ್ವಾಃಪ್ರಜಾಸ್ಸದಾಯತನಾಸ್ಸತ್ಪ್ರತಿಷ್ಠಾ ಐತದಾತ್ಮ್ಯಮಿದಂಸರ್ವಂ

ತತ್ಸತ್ಯಂಸಆತ್ಮಾತತ್ವಮಸಿಶ್ವೇತಕೇತೋ" ಎಂಬದಾಗಿಯೂ, ಅಪ್ರಕಾ
ರವೇ "ಸೋಕಾಮಯತಬಹುಸ್ಯಾಂ ಪ್ರಜಾಯೇಯೇತಿಸತಪೋತಪ್ಯತ
ಸತಪಸ್ತಪ್ತ್ವಾಇದಂಸರ್ವಮಸೃಜತ" ಎಂಬದಾಗಿ ಉಪಕ್ರಮಿಸಿ "ಸತ್ಯಂ
ಚಾನೃತಂಚಸತ್ಯಮಭವತ್" ಎಂಬದಾಗಿಯೂ "ಹಂತಾಹಮಿಮಾಸ್ತಿ
ಸ್ರೋದೇವತಾ ಅನೇನಜೀವೇನಾತ್ಮನಾನುಪ್ರವಿಶ್ಯನಾಮರೂಪೇವ್ಯಾಕರ
ವಾಣಿ ॥ ತತ್ಸೃಷ್ಟ್ವಾತದೇವಾನುಪ್ರಾವಿಶತ್ ವಿಜ್ಞಾನಂಚಾವಿಜ್ಞಾನಂಚ
ಸತ್ಯಂಚಾನೃತಂಚಸತ್ಯಮಭವತ್" ಎಂಬದಾಗಿಯೂ ಹೇಳಲ್ಪಡುವುವು. ಆ
ದುದರಿಂದ ಕಾರ್ಯಾವಸ್ಥೆಯಿಂದ ಕೂಡಿದವನೂ ಕಾರಣಾವಸ್ಥೆಯಿಂದಕೂ
ಡಿದವನೂ ಸ್ಥೂಲವಾಗಿಯೂಸೂಕ್ಷ್ಮವಾಗಿಯೂ ಇರುವ ಚೇತನಾಚೇತ
ನಗಳನ್ನು ಶರೀರವಾಗಿ ಉಳ್ಳವನೂ ಪರಮಪುರುಷನೆ. ಆದುದರಿಂದ ಕಾ
ರಣಕ್ಕಿಂತಲೂ ಕಾರ್ಯವು ಬೇರೆ ಅಲ್ಲವಾದುದರಿಂದ ಕಾರಣವನ್ನು ತಿಳಿದ
ಮಾತ್ರದಲ್ಲಿ ಕಾರ್ಯವನ್ನು ತಿಳಿದವನಾಗಬಹುದಾಗಿರುವುದರಿಂದ ಏಕವಿ
ಜ್ಞಾನೇನಸರ್ವವಿಜ್ಞಾನ ಪ್ರತಿಪಾದಕವಾದಶ್ರುತಿತಾತ್ಪರ್ಯವು ಅತ್ಯಂತವಾ
ಗಿ ಸುಸಂಗತವಾಗುವದು. (ಏಕವಿಜ್ಞಾನೇನಸರ್ವ ವಿಜ್ಞಾನವೆಂದರೆ ಒಂದಾ
ದ ಬ್ರಹ್ಮಜ್ಞಾನದಿಂದಲೆ ಸಮಸ್ತವಾದ ಪ್ರಪಂಚವನ್ನು ತಿಳಿದವನಾಗು
ತ್ತಾನೆಂಬುವುದು.)

"ಹಂತಾಹಮಿಮಾಸ್ತಿಸ್ರೋದೇವತಾಅನೇನಜೀವೇನಾತ್ಮನಾನುಪ್ರ
ವಿಶ್ಯನಾಮ ರೂಪೇವ್ಯಾಕರವಾಣಿ" ಎಂಬೀಸ್ಥಳದಲ್ಲಿ 'ತಿಸ್ರೋದೇವತಾಃ
ಎಂಬದಾಗಿ ಸಮಸ್ತವಾದ ಅಚಿದ್ವಸ್ತುಗಳನ್ನೂ ಹೇಳಿ ಅವುಗಳಲ್ಲಿ ಪರಮಾ
ತ್ಮಶರೀರನಾದ ಜೀವಾತ್ಮನ ಅಂತಃಪ್ರವೇಶದಿಂದ ನಾಮರೂಪಗಳನ್ನು
ಏರ್ಪಡಿಸುವುದಾಗಿ ಹೇಳುವುದರಿಂದ ಸಮಸ್ತವಾದ ವಾಚಕಗಳೂ ಅಚಿತ್
ಚಿತ್ ಇವುಗಳೊಡನೆ ಕೂಡಿರುವ ಪರಮಾತ್ಮನನ್ನೇ ಪ್ರತಿಪಾದಿಸುವುವು.
ಆದುದರಿಂದ ಕಾರಣಾವಸ್ಥಾವಸ್ಥಿತನಾದ ಪರಮಾತ್ಮನಿಗೆ ವಾಚಕಗಳಾ
ದ ಶಬ್ದಗಳನ್ನು ಕಾರ್ಯವಾಚಕ ಶಬ್ದಗಳೊಡನೆ ಏಕೀಭವಿಸುವಂತೆ ಮಾ
ಡುವುದು ಮುಖ್ಯವೃತ್ತವಾಗಿರಬಹುದು. ಆದುದರಿಂದ ಸ್ಥೂಲವೂ ಸೂ
ಕ್ಷ್ಮವೂಆದ ಚಿದಚಿತ್ತುಗಳನ್ನು ಪ್ರಕಾರವಾಗಿಯುಳ್ಳ ಬ್ರಹ್ಮವೇ ಕಾರ್ಯ
ವೂ ಕಾರಣವೂ ಆಗಿರುವುದರಿಂದ ಜಗತ್ತಿಗೆ ಬ್ರಹ್ಮವು ಉಪಾದಾನಕಾರಣ

ವು. (ಘಟಕ್ಕೆ ಮಣ್ಣೂ ಪಟಕ್ಕೆ ಧಾರವೂ ಉಪಾದಾನ ಕಾರಣವಾಗಿರುವುದು.) ಸೂಕ್ಷ್ಮವಾದ ಚಿದಚಿತ್ತುಗಳನ್ನು ಶರೀರವಾಗಿ ಸ್ವೀಕರಿಸಿಯೇ ಬ್ರಹ್ಮವು ಕಾರಣವಾಗುವುದರಿಂದ ಜಗತ್ತಿಗೆ ಬ್ರಹ್ಮವು ಉಪಾದಾನ ಕಾರಣವಾದರೂ ವಿಶಿಷ್ಟವಸ್ತುವು ಕಾರಣವಾಗಿರುವುದರಿಂದ ಚಿದಚಿತ್ತುಗಳಿಗೂ ಬ್ರಹ್ಮಕ್ಕೂ, ಸ್ವಭಾವ ಸಾಂಕರ್ಯವಿಲ್ಲವೆಂಬುವುದು ಅತ್ಯಂತೋಚಿತವಾಗಿಯೇ ಇರುವುದು. ಲೋಕದಲ್ಲಿ ಬಾಲನಿಗೆ ಯುವತ್ವೋಪತ್ತಿ ಯುಂಟಾದ ಮೇಲೆ ಬಾಲಶರೀರಕ್ಕೂ ಅದಕ್ಕೆ ಅಭಿಮಾನಿಯಾದ ಚೇತನನಿಗೂ ಹೇಗಾದರೆ ಸ್ವಭಾವ ಸಾಂಕರ್ಯವಿಲ್ಲವೂ ಅದರಂತೆಯೇ ಇಲ್ಲಿಯೂ ನೋಡಬಹುದು. ಮತ್ತು ಚಿತ್ರವಸ್ತ್ರವು, ಬಿಳುಪು ಕಪ್ಪು ಕೆಂಪು ಮೊದಲಾದ ಧಾರಗಳನ್ನು ಸೇರಿಸುವುದರಿಂದುಂಟಾಗಿದ್ದರೂ ಆಯಾ ಧಾರಗಳಲ್ಲಿರುವ ಬಣ್ಣವು ಆಯಾ ಧಾರಗಳಿರುವ ಪ್ರದೇಶಗಳಲ್ಲಿ ಮಾತ್ರವೇ ಇರುವುದಲ್ಲದೆ ಕಾರ್ಯವಾದ ವಸ್ತ್ರಗಳಿಗೆಲ್ಲವು ಆ ಧಾರಗಳಲ್ಲಿರುವ ಬಣ್ಣಗಳು ಸಂಕರಿಸಲಾರವಷ್ಟೆ, ಅದರಂತೆ ಜಗದ್ರೂಪವಾದ ಕಾರ್ಯವು ಚಿದಚಿದೀಶ್ವರ ಸಂಘಾತೋಪಾದಾನಕವಾಗಿದ್ದರೂ ಭೋಕ್ತೃತ್ವಭೋಗ್ಯತ್ವನಿಯಂತೃತ್ವಾದಿಗಳಿಗೆ ಸಾಂಕರ್ಯವಿಲ್ಲವು. ... ... ... *

ಆದರೆ ಪ್ರತ್ಯೇಕಸಿರುವಂಥಾ ಶಕ್ತಿಯೊಡನೆ ಕೂಡಿರುವ ಧಾರಗಳೆ ಒಂದುಕಾಲ ವಿಶೇಷದಲ್ಲಿ ಪುರುಷನ ಇಚ್ಛೆಯಿಂದ ಒಂದಾಗಿ ಸೇರಿಸಲ್ಪಟ್ಟು ಕಾರ್ಯವಾಗಿಯೂ, ಕಾರಣವಾಗಿಯೂ ಇರುವುದು; ಇಲ್ಲಿಯೊ ಚಿದಚಿತ್ತುಗಳು ಸರ್ವಾವಸ್ಥೆಗಳಲ್ಲಿಯೂ ಪರಮ ಪುರುಷನಿಗೆ ಶರೀರವಾಗಿದ್ದುಕೊಂಡೆ ಅವನಿಗೆ ಪ್ರಕಾರವಾಗಿ ಒಂದೇ ಪದಾರ್ಥವಾಗಿರುವುದರಿಂದ ಅವುಗಳಿಗೆ ಪ್ರಕಾರಿಯಾದ ಪರಮ ಪುರುಷನು ತಾನು ಕಾರ್ಯವಾಗಿಯೂ, ಕಾರಣವಾಗಿಯೂ, ಸಕಲ ಶಬ್ದಗಳಿಗೂ ವಾಚ್ಯನಾಗುತ್ತಾನೆ. ಇದೊಂದು ವಿಶೇಷವಲ್ಲದೆ ಸ್ವಭಾವ ಭೇದವೂ ಅವುಗಳ ಸಾಂಕರ್ಯವಿಲ್ಲದಿರುವಿಕೆಯೂ, ಅಲ್ಲಿಯೂ, ಇಲ್ಲಿಯೂ, ಸಮಾನವಾಗಿಯೇ ಇರುವುದು. ಈ ಪ್ರಕಾರವಾಗಿದ್ದ ಮೇಲೆ ಪರಬ್ರಹ್ಮನಿಗೆ ಕಾರ್ಯದಲ್ಲನುಪ್ರವೇಶವಿದ್ದರೂ ಸ್ವರೂಪಕ್ಕೆ ಅನ್ಯಥಾ ಭಾವವಿಲ್ಲದ್ದರಿಂದ ಅವಿಕಾರಿತ್ವವು ಉಪಪನ್ನವಾಗಿಯೇ ಇರುವುದು. ಸ್ಥೂಲಾವಸ್ಥಾಪ[illegible]

ರುವ ನಾಮರೂಪಗಳಿಂದ ವಿಭಕ್ತವಾದ ಚಿದಚಿತ್ತುಗಳಿಗೂ ಆತ್ಮನಾಗಿ ರುವುದರಿಂದ ಕಾರ್ಯತ್ವವೂ ಯುಕ್ತವಾಗಿರುವುದು. ಕಾರ್ಯತ್ವವು ಯಾವದೆಂದರೆ ಒಂದು ಸ್ಥಿತಿಯಿಂದ ಮತ್ತೊಂದು ಸ್ಥಿತಿಗೆ ಬರುವುದೆ ಕಾರ್ಯತ್ವವು. ... ... ... *

ಕಿಂಚ, ನಮ್ಮಸಿದ್ಧಾಂತದಲ್ಲಿ ಪರಬ್ರಹ್ಮಕ್ಕೆ ಹೇಯಗುಣಗಳಾದ ಗುಣಗಳನ್ನು ನಿಷೇಧಿಸುವುದರಿಂದ ನೈರ್ಗುಣ್ಯವಾದವೂ ಸಂಗತವೇ ಆಗಿರುವುದು. ಅದು ಹೇಗೆಂದರೆ, "ಅಪಹತಪಾಪ್ಮಾವಿಜರೋವಿಮೃತ್ಯುರ್ವಿಶೋಕೋವಿಜಿಘತ್ಸೋಪಿಪಾಸಃ" ಎಂಬದಾಗಿ ಹೇಯಗುಣಗಳನ್ನು ಹೊರಪಡಿಸಿ "ಸತ್ಯಕಾಮಸ್ಸತ್ಯಸಂಕಲ್ಪಃ" ಎಂಬದಾಗಿ ಕಲ್ಯಾಣಗುಣಗಳನ್ನು ವಿಧಿಸುವ ಶ್ರುತಿಯೆ ಮತ್ತೊಂದುಸ್ಥಳದಲ್ಲಿ ಸಾಮಾನ್ಯತ್ವೇನ ಗುಣಗಳಿಲ್ಲವೆಂದರೆ (ಅದಕ್ಕೆ ಕಲ್ಯಾಣಗುಣಗಳನ್ನು ಪ್ರತಿಪಾದಿಸುವ ಶ್ರುತಿಗೆ ಅವಿರುದ್ಧವಾಗಿ) ಅಂತಹ ನಿಷೇಧವು ಹೇಯಗುಣವಿಷಯವೆಂಬದಾಗಿ ವ್ಯವಸ್ಥೆ ಮಾಡಬೇಕಾಗಿರುವುದಲ್ಲವೆ?

ಜ್ಞಾನಸ್ವರೂಪವಾಗಿರುವುದು ಬ್ರಹ್ಮವು ಎಂಬೀವಾದವೂ ಸರ್ವಜ್ಞವಾಗಿಯೂ ಸರ್ವಶಕ್ತವಾಗಿಯೂ ಅಖಿಲಹೇಯಪ್ರತ್ಯನೀಕಕಲ್ಯಾಣಗುಣಗಳಿಗೆ ಮುಖ್ಯಸ್ಥಾನಭೂತವಾಗಿಯೂ ಇರುವ ಬ್ರಹ್ಮಸ್ವರೂಪವು ಜ್ಞಾನೈಕನಿರೂಪಣೀಯವಾಗಿರುವುದೆಂತಲೂ ಸ್ವಯಂ ಪ್ರಕಾಶವಾಗಿರುವುದರಿಂದ (ತನಗೆ ತಾನೆ ಪ್ರಕಾಶಿಸುವುದರಿಂದ) ಜ್ಞಾನಸ್ವರೂಪವೆಂತಲೂ ಅಂಗೀಕರಿಸುವುದರಿಂದ ಸಂಗತವಾಗಿಯೇ ಇರುವುದು. "ಯಸ್ಸರ್ವಜ್ಞಸ್ಸರ್ವವಿತ್- ಪರಾಸ್ಯಶಕ್ತಿರ್ವಿವಿಧೈವಶ್ರೂಯತೆಸ್ವಾಭಾವಿಕೀಜ್ಞಾನಬಲಕ್ರಿಯಾಚ-ವಿಜ್ಞಾತಾರ ಮರೆಕೇನವಿಜಾನೀಯಾತ್" ಇತ್ಯಾದಿ ಶ್ರುತಿಗಳನೋ ಜ್ಞಾತಾಎಂಬೀ ಅಂಶವನ್ನುಸ್ಪಷ್ಟವಾಗಿ ತೋರಿಸುವುವು. "ಸತ್ಯಂಜ್ಞಾನಂ" ಇತ್ಯಾದಿ ಶ್ರುತಿಗಳೋ ಜ್ಞಾನವನ್ನು ಸ್ವೀಕರಿಸಿಯೆ ನಿರೂಪಿಸಲ್ಪಡತಕ್ಕದ್ದಾಗಿಯೂ ತನಗೆತಾನೆ ಪ್ರಕಾಶಿಸುವುದಾಗಿಯೂ ಇರುವುದರಿಂದ ಜ್ಞಾನಸ್ವರೂಪತ್ವವನ್ನು ತೋರಿಸುವುವು. "ಸೋಕಾಮಯತ ಬಹುಸ್ಯಾಂತದೈಕ್ಷತಬಹುಸ್ಯಾಂ- ತನ್ನಾಮರೂಪಾಭ್ಯಾಂವ್ಯಾಕ್ರಿಯತ- ಆತ್ಮನಿಖಲ್ವರೆದೃಷ್ಟೇಶ್ರುತೇಮತೇ ನಿಜ್ಞಾತೆ ಇದಂ ಸರ್ವಂವಿದಿತಂಭವತಿ- ಸರ್ವಂತಂ ಪರಾದಾದ್ಯೋನ್ಯತ್ರ

ದಾತ್ಮನಸ್ಸರ್ವಂವೇದ ತಸ್ಯಹವಾಏತಸ್ಯ ಮಹತೋಭೂತಸ್ಯ ನಿಶ್ವಸಿತಮೇತದ್ಯ ದೃಗ್ವೇದಃ॥,, ಎಂಬೀ ಶ್ರುತಿಗಳು ಬ್ರಹ್ಮವೇತನ್ನ ಸಂಕಲ್ಪದಿಂದ ವಿಚಿತ್ರವಾಗಿರುವ ಸ್ಥಾವರ ಜಂಗಮಾತ್ಮಕವಾದ ಪದಾರ್ಥಸ್ವರೂಪವಾಗಿಯೂ ನಾನಾಪ್ರಕಾರವಾಗಿಯೂ ಇರುವುದರಿಂದ ಅದಕ್ಕೆ ವಿರುದ್ಧವಾಗಿ ಅಬ್ರಹ್ಮಾತ್ಮಕವಾಗಿರುವ ಬೇರೊಂದುವಸ್ತುವು ನಾನಾವಿಧವಾಗಿರುವುದೆಂಬುವುದು ತಕ್ಕುದಲ್ಲವೆಂಬೀ ಅಂಶವನ್ನು ಬೋಧಿಸುವುವು. ಅಬ್ರಹ್ಮಾತ್ಮಕ ವಸ್ತುಗಳಂ ನಿಷೇಧಿಸುವ ಶ್ರುತಿಗಳ್ಯಾವುವೆಂದರೆ “ಮೃತ್ಯೋಸ್ಸಮೃತ್ಯುಮಾಪ್ನೋತಿ ಯಇಹನಾನೇವ ಪಶ್ಯತಿ ॥ ನೇಹನಾನಾಸ್ತಿಕಿಂಚನ ॥ ಯತ್ರಹಿದ್ವೈತಮಿವಭವತಿ॥ತದಿತರ ಇತರಂಪಶ್ಯತಿ ಯತ್ರತ್ವಸ್ಯ ಸರ್ವಮಾತ್ಮೈವಾ ಭೂತ್ತತ್ಕೇನ ಕಂಪಶ್ಯೇತ್ ,,ಇತ್ಯಾದಿಗಳೆ. ಇಷ್ಟುಮಾತ್ರವಲ್ಲದೆ “ಬಹುಸ್ಯಾಂಪ್ರಜಾಯೇಯ,, ಇತ್ಯಾದಿ ಶ್ರುತಿಸಿದ್ಧವಾಗಿಯೂ ತನ್ನ ಸಂಕಲ್ಪದಿಂದ ಮಾಡಲ್ಪಟ್ಟದ್ದಾಗಿಯೂಇರುವ (ನಾಮರೂಪಗಳುಳ್ಳವಿಕೆಯಿಂದ ಪ್ರಾಪ್ತವಾಗಿರುವ, ನಾನಾಪ್ರಕಾರತ್ವವನ್ನು ಬ್ರಹ್ಮಕ್ಕೆ ನಿಷೇಧಿಸಲಿಲ್ಲವು. ನಾನಾತ್ವ ನಿಷೇಧವನ್ನು ಮಾಡಿರುವ “ಯತ್ರತ್ವಸ್ಯ,, ಇತ್ಯಾದಿಶ್ರುತಿಗಳು ಅಬ್ರಹ್ಮಾತ್ಮಕ ಸ್ವತಂತ್ರವಸ್ತು ನಾನಾತ್ವ ನಿಷೇಧಕಗಳೆಂದರಿಯಬೇಕು. ಈಅರ್ಥವು ನಿಷೇಧವಾಕ್ಯಾರಂಭದಲ್ಲಿಯೂ “ಸರ್ವಂತಂ ಪರಾದಾದ್ಯೋನ್ಯತ್ರಾತ್ಮನಸ್ಸರ್ವಂವೇದ,, ಇತ್ಯಾದಿಗಳಿಂದ ಸ್ಥಾಪಿತವಾಗಿರುವುದು.

ಈಪ್ರಕಾರವಾಗಿ ಚಿತ್ತಿಗೂ ಅಚಿತ್ತಿಗೂ ಈಶ್ವರನಿಗೂ ಸ್ವರೂಪಭೇದವನ್ನೂ ಸ್ವಭಾವಭೇದವನ್ನೂ ಹೇಳುವಂತಾದ್ದಾಗಿಯೂ,ಕಾರ್ಯಕಾರಣ ಭಾವವನ್ನೂ ಕಾರ್ಯಕಾರಣಗಳಿಗೆ ಅನನ್ಯತ್ವವನ್ನು ಹೇಳುವಂತವುಗಳಾಗಿಯೂ ಇರುವ ಸಮಸ್ತಗಳಾದ ಶ್ರುತಿಗಳಿಗೂಅವಿರೋಧವು ಶ್ರುತಿಗಳಿಂದಲೆ ತಿಳಿಯಲ್ಪಡುವು ವೆಂಬದಾಗಿ ಸಿದ್ಧವಾಗಿರುವುದರಿಂದ ಬ್ರಹ್ಮಕ್ಕೆ ಅಜ್ಞಾನವನ್ನು ಹೇಳುವವಾದವೂ ಬ್ರಹ್ಮಕ್ಕೆ ಉಪಾಧಿಯಿಂದುಂಟಾಗುವುದು ಜೀವತ್ವವೆಂಬಿದೇ ಮೊದಲಾದ ಅನೇಕ ಅಸದ್ವಾದಗಳೂ ಅಪನ್ಯಾಯಮೂಲವಾಗಿಯೂಶ್ರುತಿವಿರುದ್ಧಗಳಾಗಿಯೂ ಇರುವುದರಿಂದ ಅವುಗಳಿಗೆ ಸ್ವಲ್ಪವೂ ಅವಕಾಶ ದೊರಲಾರದೇದು ಆತಿ

ವಿಸ್ತಾರ ಪ್ರಸಂಗದಿಂದ ಸಾಕೆಂಬದಾಗಿವಿರಾಮವಂಹೊಂದುವೆವು॥೧॥

(ಗೀ॥ ವಿ॥) ಜೀವಾತ್ಮನಿಗೂ ಸ್ವಲ್ಪಮಟ್ಟಿಗೆ ಕ್ಷೇತ್ರಜ್ಞಾನವಿರುವುದರಿಂದ ಅವನೂ ಕ್ಷೇತ್ರಜ್ಞನಾಗಬಹುದೊ ಎಂದರೆ ಅದಕ್ಕುತ್ತರವನ್ನು ಹೇಳುತ್ತಾನೆ. ಹೇ ಭಾರತ ಭರತಕುಲ ಪ್ರಸೂತನಾದ ಎಲೈ ಅರ್ಜುನನೆ, ಸರ್ವಕ್ಷೇತ್ರೇಷು- ಸಮಸ್ತಗಳಾದ ಕ್ಷೇತ್ರಗಳಲ್ಲಿಯೂ, ಮಾಂ- ನನ್ನನ್ನು, ಕ್ಷೇತ್ರಜ್ಞಂಚಾಪಿ- ಕ್ಷೇತ್ರಜ್ಞನನ್ನಾಗಿ, ವಿದ್ಧಿ ತಿಳಿದುಕೊಳ್ಳು. ಜೀವನು ಕೆಲವು ಕ್ಷೇತ್ರಸ್ವರೂಪವನ್ನು ತಿಳಿದಿರುವನಲ್ಲದೆ ಸರ್ವಕ್ಷೇತ್ರಜ್ಞನಲ್ಲವು. ಅಂತವನು ಕ್ಷೇತ್ರಜ್ಞನಾದಾನೊ ಎಂಬ ಶಂಕಾ ಪರಿಹಾರಾರ್ಥವಾಗಿ ನಾನೆ ಕ್ಷೇತ್ರಜ್ಞನೆಂದು ಹೇಳಿದನೆಂದಭಿಪ್ರಾಯವು, ಕ್ಷೇತ್ರಕ್ಷೇತ್ರಜ್ಞಯೋಃ- ಕ್ಷೇತ್ರಕ್ಷೇತ್ರಜ್ಞರುಗಳ, ಯದ್ಜ್ಞಾನಂ- ಯಾವಜ್ಞಾನವುಂಟೊ, ತತ್- ಆಜ್ಞಾನವು, ಮಮಜ್ಞಾನಂ- ನನ್ನ ವಿಷಯವಾದ ಜ್ಞಾನವೆಂಬದಾಗಿ, ಮತಂ- ಸಮ್ಮತವಾಗಿರುವುದು. ಪರಮಾತ್ಮನು ಕ್ಷೇತ್ರಜ್ಞನೆಂಬ ಜ್ಞಾನವುಕ್ಷೇತ್ರಸ್ವರೂಪಜ್ಞಾನವಿಲ್ಲದೆ ಉಂಟಾಗಲಾರದು. ಆದುದರಿಂದ ಕ್ಷೇತ್ರಜ್ಞತ್ವ ವಿಶಿಷ್ಟ ಪರಮಾತ್ಮಜ್ಞಾನಕ್ಕೆ ಸಾಧನವಾಗಿರುವುದೆಂಬ ಕಾರಣದಿಂದ ಪರಮಾತ್ಮಜ್ಞಾನವಾವಶ್ಯಕವೆಂದಭಿಪ್ರಾಯವು.॥೨॥

ಶ್ಲೋ॥ ತತ್ಕ್ಷೇತ್ರಂಯಚ್ಚಯಾದೃಕ್ಚಯದ್ವಿಕಾರಿಯತ
ಶ್ಚಯತ್ | ಸಚಯೋಯತ್ಪ್ರಭಾವಶ್ಚತತ್ಸಮಾಸೇನಮೇ
ಶೃಣು ॥ ... ... ... ॥೩॥

ಪ॥ ತತ್-ಕ್ಷೇತ್ರಂ-ಯತ್-ಚ-ಯಾದೃಕ್-ಚ-ಯದ್ವಿಕಾರಿ-ಯತಃ-ಚ-ಯತ್। ಸಃ-ಚ-ಯಃ-ಯತ್ಪ್ರಭಾವಃ-ಚ-ತತ್-ಸಮಾಸೇನ-ಮೇ-ಶೃಣು॥

ಅ॥ ತತ್ಕ್ಷೇತ್ರಂ-ಆಕ್ಷೇತ್ರವು, (ಗೀ॥ ವಿ॥) ಆ ಅವ್ಯಕ್ತಮಹದಾದಿಗಳು, ಯಚ್ಚ-ಯೆಂತಹಸ್ವರೂಪವುಳ್ಳದ್ದೊ, ಯಾದೃಕ್ಚ-ಯೆಂತಹಗುಣಗಳುಳ್ಳದ್ದೊ, ಯಾವವಸ್ತುಗಳಿಗೆ ಆಶ್ರಯವಾಗಿರುವುದೊ, ಯದ್ವಿಕಾರಿ-ಯೆಂತಹ ವಿಕಾರವುಳ್ಳದ್ದೊ, ಯತಶ್ಚ-ಯಾವದರಿಂದುಂಟಾಗಿರುವುದೊ, ಯತ್-ಯೆಂತಹಸ್ವರೂಪವುಳ್ಳದ್ದೊ.(ಮ॥ಗೀ॥ ವಿ) ಯಾವಪುರುಷನಿಂದ ನಡೆಸಲ್ಪಡುವುದಾಗಿರುವುದೊ, ಸಚ-ಆಕ್ಷೇತ್ರ

ಜ್ಞನೂ, (ಗೀ||ವಿ) ಆರೀತಿಯಾಗಿ ನಡೆಸುವಂತವನೂ, ಯಾ-ಯಂತ ಹಸ್ವರೂಪವುಳ್ಳವನೂ, ಯತ್ಪ್ರಭಾವಶ್ಚ - ಯೆಂತಹವಹಿಮೆಯುಳ್ಳವನೊ, (ಶಂ) ಯೆಂತಹ ಉಪಾಧಿಕೃತವಾದ ಶಕ್ತಿಯುಳ್ಳವನೊ,ತತ್-ಅದನ್ನು, (ಶಂ) ಕ್ಷೇತ್ರಕ್ಷೇತ್ರಜ್ಞರ ಸ್ವರೂಪವನ್ನು, ಸಮಾಸೇನ-ಸಂಕ್ಷೇಪದಿಂದ, ಮೇ-ನನ್ನದೆಶೆಯಿಂದ, ಶೃಣು-ಕೇಳು. ||೩||

(ರಾ||ಭಾ||)ತತ್ಕ್ಷೇತ್ರಂ-ಆಕ್ಷೇತ್ರವೆಂಬಶರೀರವು,ಯಚ್ಚ-ಯಾವ ದ್ರವ್ಯವೊ, ಯಾದೃಕ್ಚ- ಯಾವವಸ್ತುಗಳಿಗಾಶ್ರಯವಾಗಿರುವುದೋ, ಯದ್ವಿಕಾರಿ-ಯಾವ ವಿಕಾರಗಳುಳ್ಳದ್ದಾಗಿರುವುದೋ, ಅದರ ವಿಕಾರಗಳ್ಯಾವವೊ ಎಂದರ್ಥವು,ಯತಶ್ಚ-ಯಾವ ಹೇತುವಿನಿಂದ ಅದುಂಟಾಗಿರುವುದೋ, ಯಾವ ಪ್ರಯೋಜನಕ್ಕಾಗಿ ಉಂಟಾಯಿತೋ ಎಂದರ್ಥವು, ಯತ್-ಯೆಂತಹ ಸ್ವರೂಪವುಳ್ಳದ್ದೊ, ಸಚಯಃ-ಅಕ್ಷೇತ್ರಜ್ಞನಾದ ಆತ್ಮನೂ ಎಂತಹ ಸ್ವರೂಪವುಳ್ಳವನೊ, ಯತ್ಪ್ರಭಾವಶ್ಚ-ಎಂತಹ ಪ್ರಭಾವ ವುಳ್ಳವನೊ, ಅವನ ಪ್ರಭಾವಗಳೆಂತವುಗಳೊಂದರ್ಥವು, ತತ್-ಅದನ್ನು ಪೂರ್ಣವಾಗಿ, ಸಮಾಸೇನ-ಸಂಕ್ಷೇಪದಿಂದ, ಮೇ-ನನ್ನ ದಶೆಯಿಂದ, ಶೃಣು-ಕೇಳು. ... ||೩||

ಶ್ಲೋ|| ಋಷಿಭಿರ್ಬಹುಧಾಗೀತಂಛಂದೋಭಿರ್ವಿವಿಧೈಃ
ಪೃಥಕ್ | ಬ್ರಹ್ಮಸೂತ್ರಪದೈಶ್ಚೈವಹೇತುಮದ್ಭಿರ್ವಿನಿ
ಶ್ಚಿತೈಃ|| ... ||೪||

ಪ|| ಋಷಿಭಿಃ- ಬಹುಧಾ-ಗೀತಂ- ಛಂದೋಭಿಃ- ವಿವಿಧೈಃ- ಪೃಥಕ್| ಬ್ರಹ್ಮಸೂತ್ರಪದೈಃ- ಚ- ಏವ- ಹೇತುಮದ್ಭಿಃ- ವಿನಿಶ್ಚಿತೈಃ||

ಅ|| ಬಹುಧಾ- ನಾನಾಪ್ರಕಾರವಾಗಿ, ಋಷಿಭಿಃ- ಋಷಿಗಳಿಂದಲೂ, ಪೃಥಕ- ಪ್ರತ್ಯೇಕವಾಗಿ, ವಿವಿಧೈಃ- ನಾನಾವಿಧಗಳಾದ, ಛಂದೋಭಿಃ- ವೇದಗಳಿಂದಲೂ, ಹೇತುಮದ್ಭಿಃ- ಯುಕ್ತಿಗಳಿಂದ ಕೂಡಿರುವ, ವಿನಿಶ್ಚಿತೈಃ- ಸಂದೇಹವಿಲ್ಲದೆ ಅರ್ಥಗಳನ್ನು ಸ್ಥಾಪಿಸುವ, ಬ್ರಹ್ಮಸೂತ್ರಪದೈಶ್ಚೈವ- ವೇದಾಂತಸೂತ್ರ ಪದಗಳಿಂದಲೂ, ಗೀತಂ-ಹೇಳಲ್ಪಟ್ಟಿರುವುದು. ... ||೪||

(ಶ್ರೀ) ಕ್ಷೇತ್ರಕ್ಷೇತ್ರಜ್ಞ ಸ್ವರೂಪಾದಿಗಳು ವಸಿಷ್ಠಾದಿ ಮಹರ್ಷಿಗಳಿಂದ ಯೋಗಶಾಸ್ತ್ರದಲ್ಲಿ ಧ್ಯಾನಧಾರಣಾದಿ ವಿಷಯಗಳಿಗೆ ಯೊ

ಸ್ಯಗಳೆಂಬದಾಗಿ ಹೇಳಲ್ಪಟ್ಟಿರುವುವು. ವಿರಾಡ್ರೂಪವೇ ಮೊದಲಾದ ನಾನಾರೂಪಗಳಾಗಿಯೂ ಹೇಳಲ್ಪಟ್ಟಿರುವುವು.

ವಿವಿಧೈಶ್ಛಂದೋಭಿಃ- ನಿತ್ಯಕರ್ಮ ಪ್ರತಿಪಾದಕಗಳಾಗಿಯೂ, ಈಪ್ರಕಾರವೇ ಕಾಮ್ಯವೇ ಮೊದಲಾದ ಕರ್ಮಗಳಿಗೆ ಪ್ರತಿಪಾದಕಗಳಾಗಿಯೂ ಇರುವ ನಾನಾವೇದಗಳಿಂದ, ಪೃಥಕ್-ಕ್ಷೇತ್ರವು ನಾನಾಕರ್ಮಾನುಷ್ಠಾನಕ್ಕೆ ಯೋಗ್ಯವಾಗಿರುವುದೆಂತಲೂ ಕ್ಷೇತ್ರಜ್ಞನುಯಜ್ಞಾದಿ ಕರ್ಮಾನುಷ್ಠಾನಗಳಲ್ಲಿ ನಾನಾದೇವತಾರೂಪಿಯಾಗಿರುವನೆಂತಲೂ ಹೇಳಲ್ಪಟ್ಟಿರುವುದು.

ಬ್ರಹ್ಮಸೂತ್ರಪದೈಶ್ಚೈವ- ಬ್ರಹ್ಮಸೂತ್ರವೆಂಬುವುದು ಬ್ರಹ್ಮಸ್ವರೂಪಪ್ರಕಾಶಕಗಳಾದ ಉಪನಿಷತ್ತುಗಳಲ್ಲಿ ತಟಸ್ಥಲಕ್ಷಣಗಳಾದ (ತಟಸ್ಥ ಲಕ್ಷಣವೆಂದರೆಕೆಲವುಕಾಲದಲ್ಲಿರುವಂತಾದ್ದಾಗಿಯೂ ಕೆಲವುಕಾಲದಲ್ಲಿಲ್ಲದೆ ಇರುವಂತಾದ್ದಾಗಿಯೂ ಇರುವ)ಸಗುಣ ಬ್ರಹ್ಮಲಕ್ಷಣಗಳಾದ ಯತೋವಾ ಇಮಾನಿಭೂತಾನಿಜಾಯಂತೆ "ಇತ್ಯಾದಿ ವಾಕ್ಯಗಳು. ಪದವೆಂಬುವುದು ಸ್ವರೂಪಲಕ್ಷಣಗಳಾದ,, ಸತ್ಯಂಜ್ಞಾನಮನಂತಂ,, ಇತ್ಯಾದಿ ವಾಕ್ಯಗಳು. (ಅಥವಾ) ವೇದವ್ಯಾಸರಿಂದ ಮಾಡಲ್ಪಟ್ಟಿರುವ ವೇದಾಂತಸೂತ್ರಗಳು. (ಸ್ವರೂಪಲಕ್ಷಣವೆಂದರೆ ಯೆಂದಿಗೂ ವ್ಯತ್ಯಾಸವಾಗದ ನಿರ್ಗುಣಬ್ರಹ್ಮಲಕ್ಷಣವು.) ಇವುಗಳಿಂದಕ್ಷೇತ್ರಜ್ಞನನ್ನು ಕುರಿತು ಬಹುಪ್ರಕಾರವಾಗಿ ಹೇಳಲ್ಪಟ್ಟಿರುವುದು. ಈ ಪ್ರಕಾರವಾಗಿ ವಿಸ್ತರಿಸಿ ಹೇಳಲ್ಪಟ್ಟಿರುವುದರಿಂದ ನಾನೀಗ ಸಂಕ್ಷೇಪವಾಗಿ ನಿನಿಗುಪದೇಶಿಸುವೆನು ಕೇಳು. ॥೪॥

(ರಾ॥ ಭಾ॥) ಈಕ್ಷೇತ್ರಜ್ಞರ ಸ್ವರೂಪವು, ಋಷಿಭಿರ್ಬಹುಧಾಗೀತಂ- ಶ್ರೀ ಪರಾಶರಾದಿ ಮಹರ್ಷಿಗಳಿಂದ ಬಹುಪ್ರಕಾರವಾಗಿ ಹೇಳಲ್ಪಟ್ಟಿರುವುದು. ಎಲ್ಲಿಂದರೇ "ಅಹಂತ್ವಂಚತಥಾನ್ಯೇಚಭೂತೈರೂಹ್ಯಾ ಮಪಾರ್ಥಿವ । ಗುಣಪ್ರವಾಹಪತಿತೋಭೂತವರ್ಗೋಪಿಯಾತ್ಯಯಂ॥ ಕರ್ಮವಶ್ಯಾಗುಣಾಹ್ಯೇತೆಸತ್ವಾದ್ಯಾಃಪೃಥಿವೀಪತೆ! ಅವಿದ್ಯಾಸಂಚಿತಂಕರ್ಮತಚ್ಚಾಶೇಷೇಷುಜಂತುಷು ॥ ಆತ್ಮಾಶುದ್ಧೋಕ್ಷರಶ್ಶಾಂತೋನಿರ್ಗುಣಃಪ್ರಕೃತೇಃಪರಃ,,ಎಂತಲೂ"ಪಿಂಡಃಪೃಥಗ್ಯತಃ ಪುಂಸಶ್ಶಿರಃಪಾಣ್ಯಾದಿಲಕ್ಷಣಃ।ತತೋಹಮಿತಿಕುತ್ರೈತಾಂಸಂಜ್ಞಾಂರಾಜನ್ಕರೋಮ್ಯ

ಹಂ,, ಎಂತಲೂ “ ಕಿಂತ್ವಮೇತಚ್ಛಿರಃಕಿಂನ್ನು ಉರಸ್ತವತಥೋದರಂ । ಕಿಮುಪಾದಾದಿಕಂತ್ವಂವೈತವೈತತ್ಕಿಂಮಹೀಪತೇ ॥ ಸಮಸ್ತಾವಯವೇಭ್ಯಸ್ತ್ವಂಪೃಥಗ್ಭೂಯವ್ಯವಸ್ಥಿತಃ । ಕೋಹಮಿತ್ಯೇವನಿಪುಣೋಭೂತ್ವಾಚಿಂತಯಪಾರ್ಥಿವ ॥ ,, ಎಂಬದಾಗಿಯೂ ಹೇಳಲ್ಪಟ್ಟಿರುವುದು. ಈ ಪ್ರಕಾರವಾಗಿ ವಿಭಕ್ತವಾಗಿರುವ ಶರೀರವೂ ಆತ್ಮವೂ “ಇಂದ್ರಿಯಾಣಿ ಮನೋಬುದ್ಧಿಸ್ಸತ್ವಂತೇಜೋಬಲಂಧೃತಿಃ । ವಾಸುದೇವಾತ್ಮಕಾನ್ಯಾಹುಃ ಕ್ಷೇತ್ರಂಕ್ಷೇತ್ರಜ್ಞಮೇವಚ॥ ,, ಎಂಬದಾಗಿ ಶ್ರೀವಾಸುದೇವರೂಪಗಳೆಂತಲೂ ಹೇಳಲ್ಪಟ್ಟಿರುವುದು.

ಇಲ್ಲಿ ಮೊದಲು ಉದಾಹರಿಸಲ್ಪಟ್ಟ ಪ್ರಮಾಣಗಳು ಶ್ರೀವಿಷ್ಣುಪುರಾಣದಲ್ಲಿ ಎರಡನೆ ಅಂಶದ ಹದಿಮೂರನೆ ಅಧ್ಯಾಯದಲ್ಲಿ (೬೬)ನೇ ಶ್ಲೋಕದ ಮೊದಲು ಇರುವುವು. ಅವುಗಳ ತಾತ್ಪರ್ಯವೇನೆಂದರೆ ? ಎಲೈ ರಾಜನೆ ನಾನೂ ನೀನೂ ಅನ್ಯರೂ ದೇಹರೂಪದಿಂದಿರುವ ಪೃಥಿವೀ ಮೊದಲಾದ ಪಂಚಭೂತಗಳಿಂದ ಹೊರಲ್ಪಟ್ಟಿರುವೆವು. ಈ ಭೂತವರ್ಗವೂ ಗುಣಗಳ ಪ್ರವಾಹದಲ್ಲಿ ಬಿದ್ದು ಅದರ ವಶದಿಂದ ನಡೆಯಿಸಲ್ಪಡುವುದೇ ಮೊದಲಾದ ವ್ಯಾಪಾರಗಳನ್ನು ಹೊಂದಿರುವುದು. ಸತ್ವವೇ ಮೊದಲಾದ ಆ ಗುಣಗಳೂ ಕರ್ಮಗಳಿಗೆ ವಶಪಟ್ಟಿರುವುವು. ಆ ಕರ್ಮಗಳೂ ಅವಿದ್ಯಾ ಸಂಚಿತಗಳಾಗಿರುವುವು. ಆ ಅವಿದ್ಯೆಯು ಸರ್ವಪ್ರಾಣಿಗಳಲ್ಲಿಯೂ ಇರುವುದು. ಆತ್ಮನೋ ಶುದ್ಧನಾಗಿಯೂ ನಾಶರಹಿತನಾಗಿಯೂ ಹಶಿವು ಮೊದಲಾದ ಷಡೂರ್ಮಿಗಳಿಲ್ಲದವನಾಗಿಯೂ, ಸತ್ವಾದಿ ಗುಣರಹಿತನಾಗಿಯೂ, ಗುಣಮಯವಾದ ಪ್ರಕೃತಿಗಿಂತಲೂ ಭಿನ್ನನಾಗಿಯೂ ಇರುವನು ಅದೇ ಅಧ್ಯಾಯದಲ್ಲಿ ದೇಹವಿಷಯವಾಗಿ ೪೯ನೇ ಶ್ಲೋಕವು ಪ್ರವೃತ್ತವಾಗಿರುವುದು. ಅದರ ತಾತ್ಪರ್ಯವೇನೆಂದರೆ ? ದೇಹವನ್ನೇ ಆತ್ಮನೆಂಬುವ ಪಕ್ಷದಲ್ಲಿ ಅದೇಹವು ತಲೆ ಕೈ, ಕಾಲು ಮೊದಲಾದ ಅನೇಕ ವಸ್ತು ರೂಪವಾಗಿರುವುದರಿಂದ ಯಾವ ಅವಯವದಲ್ಲಿ ಅಂತಹ ಮಾತನ್ನು ಪಯೋಗಿಸಬಹುದು ? ಮತ್ತು ಅದೇ ಅಧ್ಯಾಯದಲ್ಲಿ (೧೦೨ । ೧೦೩) ನೇ ಶ್ಲೋಕಗಳ ತಾತ್ಪರ್ಯವೇನೆಂದರೆ ? ನೀನು ಯಾರು ? ಶಿರಸ್ಸೇ ? ಅಥವಾ ಕುತ್ತಿಗೆಯೇ ? ಹೊಟ್ಟೆಯೋ ? ಅಥವಾ ಕಾಲು ಮೊದಲಾವುಗಳಲ್ಲಿ ಯಾವದಾದರೊಬ್ಬನೆ ?

ಹೇಳು. ಈ ದೇಹಕ್ಕೆ ನೀನು ಯಾರು? ನಿನಿಗೆ ಈ ದೇಹವೇನಾಗ ಬೇಕು. ಎಲೈ ರಾಜನೆ ಈ ರೀತಿಯಾಗಿ ಸರ್ವಾವಯವಗಳಿಗೂ ಭಿನ್ನ ನಾಗಿರುವ ನೀನು ಚೆನ್ನಾಗಿ ಆಲೋಚಿಸಿ ನಾನು ಯಾರೆಂಬುವುದನ್ನು ನಿಶ್ಚಯಿಸಿಕೊಳ್ಳು. "ಇಂದ್ರಿಯಾಣಿ" ಎಂಬೀವಚನವು ಮಹಾಭಾರತದಲ್ಲಿ ಸಹಸ್ರನಾಮಾಧ್ಯಾಯದಲ್ಲಿ ಪಠಿತವಾಗಿರುವುದು. ಇಂದ್ರಿಯಾದಿಯಾದ ಸಕಲವೂ ವಾಸುದೇವ ಸ್ವರೂಪವೆಂದು ಹೇಳಲ್ಪಟ್ಟಿರುವುದು. ಈ ಪ್ರಕಾರವಾಗಿಯೇ ಋಷಿಗಳಿಂದ ಬಹುಪ್ರಕಾರವಾಗಿ ಹೇಳಲ್ಪಟ್ಟಿರುವುದು.

ವಿವಿಧೈಶ್ಛಂದೋಭಿಃಪೃಥಗ್ಗೀತಂ-ಋಗ್ಯಜುಸ್ಸಾಮಾಥರ್ವಣಗಳೆಂಬದಾಗಿ ನಾನಾವಿಧಗಳಾಗಿರುವ ವೇದಗಳಿಂದ ಕ್ಷೇತ್ರಸ್ವರೂಪವು ಬೇರೆಯೆಂತಲೂ ಕ್ಷೇತ್ರಜ್ಞಸ್ವರೂಪವು ಬೇರೆಯೆಂತಲೂ ಹೇಳಲ್ಪಟ್ಟಿರುವುದು. ಅದು ಎಲ್ಲೆಂದರೆ ತಸ್ಮಾದಾತ್ಮನಆಕಾಶಸ್ಸಂಭೂತಃ-ಆಕಾಶಾದ್ವಾಯುಃ- ವಾಯೋರಗ್ನಿಃ- ಅಗ್ನೇರಾಪಃ - ಅದ್ಭ್ಯಃಪೃಥಿವೀ ಪೃಥಿವ್ಯಾಓಷಧಯಃ-ಓಷಧೀಭ್ಯೋನ್ನಂ-ಅನ್ನಾತ್ಪುರುಷಃ- ಸವಾಏಷ ಪುರುಷೋನ್ನರಸಮಯಃ ಎಂಬದಾಗಿ ಶರೀರ ಸ್ವರೂಪವನ್ನು ಹೇಳಿ ಅದರೊಳಗೆ ಪ್ರಾಣಮಯವನ್ನೂ ಅದರೊಳಗೆ ಮನೋಮಯವನ್ನೂ ಹೇಳಿ ಅನಂತರದಲ್ಲಿ ತಸ್ಮಾದ್ವಾಏತಸ್ಮಾನ್ಮನೋಮಯಾತ್- ಅನ್ಯೋನ್ತರ ಆತ್ಮಾವಿಜ್ಞಾನಮಯಃ,,ಎಂಬದಾಗಿ ಕ್ಷೇತ್ರಜ್ಞಸ್ವರೂಪವನ್ನೂ ಹೇಳಿ ತದನಂತರದಲ್ಲಿ "ತಸ್ಮಾದ್ವಾ ಏತಸ್ಮಾದ್ವಿಜ್ಞಾನ ಮಯಾತ್-ಅನ್ಯೋಂತರ ಆತ್ಮಾನಂದಮಯಃ,,ಎಂಬದಾಗಿ ಕ್ಷೇತ್ರಜ್ಞನಾದ ಜೀವಾತ್ಮನಿಗೂ ಅಂತರಾತ್ಮನೆಂಬದಾಗಿ ಆನಂದಮಯನಾದ ಪರಮಾತ್ಮನು ಹೇಳಲ್ಪಟ್ಟನು. (ಈತೈತ್ತಿರೀಯ ಶ್ರುತಿ ಸಂದರ್ಭಗಳ್ಯಾವವೆಂದರೆ; ಆದಿಯಲ್ಲಿ "ಬ್ರಹ್ಮವಿದಾಪ್ನೋತಿಪರಂ,, ಎಂಬೀ ಬ್ರಾಹ್ಮಣದಲ್ಲಿಯೂ "ಸತ್ಯಂಜ್ಞಾನಂ ಅನಂತಂಬ್ರಹ್ಮ,, ಎಂಬೀ ಮಂತ್ರದಲ್ಲಿಯೂ, ಬ್ರಹ್ಮವೇ ಸಕಲ ಜಗತ್ತಿಗೂ ಕಾರಣವೆಂಬದಾಗಿಯೂ ಸಕಲ ಜಗತ್ತಿನಲ್ಲಿಯೂ ಆ ಬ್ರಹ್ಮವೇ ಅಂತರ್ಯಾಮಿಯಾಗಿರುವುದೆಂತಲೂ ಸಿದ್ಧವಾಯಿತು. ಆದರೆ ಈ ಆತ್ಮವ್ಯಾವದೆಂಬದಾಗಿ ಪ್ರಶ್ನೆಯುಂಟಾಗಲು ಅದಕುತ್ತರವನ್ನು ಹೇಳುದಕ್ಕಾಗಿ ಮುಂದಿನ ವಾಕ್ಯಗಳೇರ್ಪಟ್ಟಿತು.

ಅಲ್ಲಿ ಆನಂದಮಯನೇ ಆತ್ಮನೆಂಬದಾಗಿ ತೋರಿಸುವ ಉದ್ದೇಶ್ಯದಿಂದ (ಅರುಂಧತೀನಕ್ಷತ್ರವನ್ನು ನೋಡಲಪೇಕ್ಷಿಸುವಂತವನಿಗೆ ಆನಕ್ಷತ್ರವು ಅತಿ ಸೂಕ್ಷ್ಮವಾಗಿರುವುದರಿಂದ ಅದರ ಸಮೀಪದಲ್ಲಿರುವ ನಕ್ಷತ್ರಗಳನ್ನೇ ಅರುಂಧತೀನಕ್ಷತ್ರವೆಂಬದಾಗಿ ಮೊದಲು ತೋರಿಸಿ ಆಪರಿಚಯದಾರ್ಢ್ಯದಿಂದ ಅದಕ್ಕೆ ಸಮೀಪದಲ್ಲಿರುವ ಸಣ್ಣ ನಕ್ಷತ್ರವೆ ಅರುಂಧತೀನಕ್ಷತ್ರವೆಂಬದಾಗಿ ತೋರಿಸುವಂತೆ) ಇಲ್ಲಿಯೂ ಆಕಾಶಾದಿ ಪಂಚಭೂತಸಂಘಾತಾತ್ಮಕವಾದ ದೇಹಸ್ವರೂಪವನ್ನು ಮೊದಲು ಹೇಳಿ ಈ ದೊಡ್ಡದಾದಶರೀರದಲ್ಲಿರುವ ಪ್ರಾಣಮಯನನ್ನೇ ಆತ್ಮನೆಂಬದಾಗಿ ಮೊದಲು ಹೇಳಿತು. ಯಾವನಾದರೆ ಅನ್ನವನ್ನು ಬ್ರಹ್ಮವೆಂಬದಾಗಿ ಧ್ಯಾನಮಾಡುತ್ತಾನೆಯೋ ಅವನು ತನ್ನ ಇಚ್ಛಾನುಸಾರವಾಗಿ ಅನ್ನವನ್ನು ಹೊಂದುತ್ತಾನೆ, ಆದರೆ ಅನ್ನವನ್ನು ಬ್ರಹ್ಮವೆಂಬದಾಗಿ ಹೇಳಬಹುದೋ? ಎಂದರೆ ಹೇಗಾದರೆ ಬ್ರಹ್ಮವು ಸೃಷ್ಟಿಸ್ಥಿತಿಲಯಗಳಿಗೆ ಕಾರಣವೋ ಅದರಂತೆ ಅನ್ನವೂ ಅವುಗಳಿಗೆ ಕಾರಣವಾಗಿರುವುದರಿಂದ ಬ್ರಹ್ಮವೆಂಬದಾಗಿ ಧ್ಯಾನಿಸಬಹುದೆಂತಲೂ ಈ ಪ್ರಕಾರವೇ ಪ್ರಾಣಮಯ ಮನೋಮಯನಾದ ಜೀವಾತ್ಮನನ್ನು ಹೇಳಿ ಅವನಿಗಿಂತಲೂ ಅನ್ಯನಾದವನು ಆನಂದಮಯನಾದ ಪರಮಾತ್ಮನು ಎಂಬದಾಗಿಯೂ ಹೇಳಿತು. ಈವಿವರಗಳನ್ನು ಆ ಶ್ರುತಿಗಳಲ್ಲಿಯೇ ವಿಸ್ತಾರವಾಗಿ ನೋಡಬಹುದು. ಅಲ್ಲಿ ಶರೀರಾತ್ಮಗಳನ್ನು ಬೇರೆಬೇರೆಯಾಗಿ ಶ್ರುತಿಗಳು ಹೇಳಿರುವ ಅಂಶಗಳು ಮಾತ್ರವೇ ಉಪಯುಕ್ತಗಳಾಗಿರುವುವು.) ಈ ಪ್ರಕಾರವೇ ಋಕ್ಸಾಮಾಥರ್ವವೇದಗಳಲ್ಲಿಯೂ, ಅಲ್ಲಲ್ಲಿ ಕ್ಷೇತ್ರಕ್ಷೇತ್ರಜ್ಞರಿಗೆ ಪೃಥಗ್ಭಾವವೂ ಅವುಗಳಿಗೆ ಬ್ರಹ್ಮಾತ್ಮಕತ್ವವೂ ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು.

ಹೇತುಮದ್ಭಿರ್ವಿನಿಶ್ಚಿತೈ ಬ್ರಹ್ಮಸೂತ್ರಪದೈಶ್ಚೈವೇತಂ– ಪೂರ್ವಪಕ್ಷಸಿದ್ಧಾಂತಹೇತುಗಳನ್ನೂ ಅವುಗಳ ಬಲಾಬಲಗಳನ್ನೂ ಪ್ರತಿಪಾದಿಸಿಕೊಂಡು ನಿರ್ಣಯಕಾಲದಲ್ಲಿ ಈ ಅರ್ಥವು ಹೀಗೆಯೇ ಆಗುವುದೆಂಬದಾಗಿ ವಿಶೇಷಿಸಿ ನಿಶ್ಚಯವನ್ನು ಪ್ರತಿಪಾದಿಸುತಲಿರುವ ಬ್ರಹ್ಮಪ್ರತಿಪಾದಕಗಳಾದ ಸೂತ್ರರೂಪಗಳಾಗಿರುವ ಪದಗಳಿಂದಲೂ ಪ್ರತಿಪಾದಿಸಲ್ಪಟ್ಟಿರುವುದು. ಬ್ರಹ್ಮಸೂತ್ರಗಳಲ್ಲಿ ‘‘ನವಿಯದಶ್ರುತೇಃ,, ಎಂಬದಾಗಿ ಕ್ಷೇತ್ರಸ್ವರೂಪವೂ ‘‘ ನಾತ್ಮಾಶ್ರುತೇರ್ನಿತ್ಯತ್ವಾಚ್ಚ

ತಾಭ್ಯಃ ,, ಎಂಬದಾಗಿ ಉಪಕ್ರಮಿಸಿ “ ಜ್ಯೋತಿಷಾಂ ,, ಇತ್ಯಾದಿ ಗಳಿಂದ ಕ್ಷೇತ್ರಜ್ಞನ ವಾಸ್ತವವಾದ ಸ್ಥಿತಿಯು ನಿಶ್ಚಯಿಸಲ್ಪಟ್ಟಿತು ಅದು “ ಪರಾತ್ತುತಚ್ಛ್ರುತೇಃ ,, ಎಂಬದಾಗಿ ಪರಮಾತ್ಮನಿಂದ ಪ್ರವರ್ತಿಸಲ್ಪಡುವುದರಿಂದ ಭಗವದಾತ್ಮಕವಾಗಿರುವುದೆಂಬೀ ಅಂಶವೂ ಹೇಳಲ್ಪಟ್ಟಿತು. ಈ ಪ್ರಕಾರವಾಗಿ ಶ್ರುತ್ಯಾದಿಗಳಲ್ಲಿ ಅತಿವಿಸ್ತಾರದಿಂದ ಹೇಳಲ್ಪಟ್ಟಿರುವ ಕ್ಷೇತ್ರಕ್ಷೇತ್ರಜ್ಞರ ವಾಸ್ತವ ಸ್ಥಿತಿಯನ್ನು ನಾನೀಗ ನಿನಿಗೆ ಸಂಗ್ರಹವಾಗಿ ಉಪದೇಶಿಸುವೆನು ಕೇಳೆಂದು ಶ್ರೀಕೃಷ್ಣನು ಬೋಧಿಸಿದನು. ... ... ॥೪॥

ಶ್ಲೋ॥ ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವಚ । ಇಂದ್ರಿಯಾಣಿದಶೈಕಂಚಪಂಚಚೇಂದ್ರಿಯಗೋಚರಾಃ ॥೫॥ ಇಚ್ಛಾದ್ವೇಷಸ್ಸುಖಂದುಃಖಂ ಸಂಘಾತಶ್ಚೇತನಾಧೃತಿಃ । ಏತತ್ಕ್ಷೇತ್ರಂ ಸಮಾಸೇನ ಸವಿಕಾರ ಮುದಾಹೃತಂ॥ ... ... ॥೬॥

ಪ॥ ಮಹಾಭೂತಾನಿ- ಅಹಂಕಾರಃ- ಬುದ್ಧಿಃ- ಅವ್ಯಕ್ತಂ- ಏವ- ಚ। ಇಂದ್ರಿಯಾಣಿ-ದಶ- ಏಕಂ-ಚ- ಪಂಚ- ಚ- ಇಂದ್ರಿಯಗೋಚರಾಃ ॥ ಇಚ್ಛಾ- ದ್ವೇಷಃ- ಸುಖಂ- ದುಃಖಂ- ಸಂಘಾತಃ- ಚೇತನಾ- ಧೃತಿಃ । ಏತತ್- ಕ್ಷೇತ್ರಂ- ಸಮಾಸೇನ- ಸವಿಕಾರಂ- ಉದಾಹೃತಂ ॥

ಅ॥ ಮಹಾಭೂತಾನಿ- ಆಕಾಶಾದಿ ಪಂಚಭೂತಗಳು, ಅಹಂಕಾರಃ-ಅಹಂಕಾರತತ್ವವು, ಬುದ್ಧಿಃ-ಮಹತ್ತತ್ವವು, ಅವ್ಯಕ್ತಮೇವಚ- ಮೂಲಪ್ರಕೃತಿಯೂ, ದಶೇಂದ್ರಿಯಾಣಿ - ಜ್ಞಾನ ಕರ್ಮ ಇಂದ್ರಿಯಗಳು ಹತ್ತು, ಏಕಂಚ- ಮನಸ್ಸೆಂಬ ಇಂದ್ರಿಯವು ಒಂದು, ಪಂಚಚ ಇಂದ್ರಿಯಗೋಚರಾಃ- ಇಂದ್ರಿಯಗಳ ವಿಷಯಗಳೆಂಬ ಶಬ್ದಸ್ಪರ್ಶರೂಪರಸಗಂಧಗಳು ಐದು, ಇಚ್ಛಾ-ಇಚ್ಛೆಯು, ದ್ವೇಷಃ- ದ್ವೇಷವು, ಸುಖಂ-ಸುಖವು, ದುಃಖಂ-ದುಃಖವು, ಸಂಘಾತಃ- ಶರೀರವು, ಚೇತನಾ-ಜ್ಞಾನಾತ್ಮಕವಾದ ಮನೋವೃತ್ತಿಯು, ಧೃತಿಃ- ಧೈರ್ಯವು, ಸವಿಕಾರಂ-ಇಂದ್ರಿಯಗಳೆಮೊದಲಾದ ಇಂತಹವಿಕಾರಗಳೊಡನೆಕೂಡಿರುವ,ಏತತ್ ಕ್ಷೇತ್ರಂ - ಈ ಕ್ಷೇತ್ರವು, ಸಮಾಸೇನೋದಾಹೃತಂ- ಸಂಕ್ಷೇಪದಿಂದ ಹೇಳಲ್ಪಟ್ಟಿತು ॥೫॥೬॥

(೬೦। ಭಾ॥) ಕ್ಷೇತ್ರಾದಿ ಯಾಥಾತ್ಮ್ಯವನ್ನು ಸ್ತುತಿಮಾಡುವುದರಿಂದ ಅವುಗಳನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲವುಳ್ಳ ಅರ್ಜುನನಿಗೆ ಕ್ಷೇತ್ರಕ್ಷೇತ್ರಜ್ಞರ ಸ್ವರೂಪವನ್ನು ಉಪದೇಶಿಸುವುದಕ್ಕಾಗಿ ಶ್ರೀಕೃಷ್ಣನುಪಕ್ರಮಿಸುತ್ತಾನೆಂದರಿಯಬೇಕು. ಸಕಲವಿಧಗಳಾದವಿಕಾರಗಳಲ್ಲಿಯೂ ವ್ಯಾಪಿಸಿರುವುದರಿಂದ ಮಹಾಭೂತಗಳೆಂಬದಾಗಿ ಇಲ್ಲಿ ಹೇಳಲ್ಪಟ್ಟಿತು. ಮುಂದೆ ಇಂದ್ರಿಯಗೋಚರ ಶಬ್ದದಿಂದ ಸ್ಥೂಲಭೂತಗಳು ಹೇಳಲ್ಪಟ್ಟಿರುವುದರಿಂದ ಇಲ್ಲಿನಮಹಾಭೂತಶಬ್ದದಿಂದ ಸೂಕ್ಷ್ಮಭೂತಗಳೇ ಹೇಳಲ್ಪಡುವುವು. ಇಲ್ಲಿ ಪಂಚಭೂತತನ್ಮಾತ್ರೆಗಳೂ, ಮತ್ತು ಮಹಾ ಭೂತಗಳಿಗೆ ಕಾರಣವೂ ಸಾತ್ವಿಕಾದಿಭೇದದಿಂದ ತ್ರಿವಿಧವೂ ನಾನೆಂಬಅಭಿಮಾನಕ್ಕೆ ವಿಷಯವೂ ಆಗಿರುವ ಅಹಂಕಾರತತ್ವವೂ, ಕ್ಷೇತ್ರವೆನ್ನಲ್ಪಡುವುದು. ಅಹಂಕಾರತತ್ವಕ್ಕೆ ಕಾರಣವಾಗಿಯೂ ನಿಶ್ಚಯಾತ್ಮಕವಾದ ಬುದ್ಧಿಯೆನ್ನಲ್ಪಡುವುದಾಗಿಯೂ ಇರುವ ಮಹತ್ತತ್ವವೂ, ಮಹತ್ತತ್ವಕ್ಕೆ ಕಾರಣವೂ, ಕಾರಣಲ್ಪಡದೇ ಇರುವುದರಿಂದ ಅವ್ಯಕ್ತಶಬ್ದವಾಚ್ಯವೂ ಆದ ಅವ್ಯಾಕೃತವು ಈಶ್ವರಶಕ್ತಿ ಮಾಯಾಎಂಬೀ ಹೆಸರುಳ್ಳದ್ದಾಗಿಯೂ ಸಪ್ತಮಾಧ್ಯಾಯದ ನಾಲ್ಕನೆ ಶ್ಲೋಕದಲ್ಲಿ ಯೆಂಟು ವಿಧಗಳಾಗಿರುವಂತೆ ಹೇಳಲ್ಪಟ್ಟದ್ದಾಗಿಯೂ ಇರುವ ಮೂಲಪ್ರಕೃತಿಯೂ ಕ್ಷೇತ್ರವೆನ್ನಲ್ಪಡುವುವು. ಕರ್ಮಗಳನ್ನು ಮಾಡುವುದಕ್ಕೆ ಯೋಗ್ಯವಾದ ಜ್ಞಾನಗಳನ್ನುಂಟುಮಾಡುವುದರಿಂದ ಜ್ಞಾನೇಂದ್ರಿಯಗಳೆನ್ನಲ್ಪಡುವ ಕಿವಿಮೊದಲಾದಪಂಚೇಂದ್ರಿಯಗಳೂ, ಕಾರ್ಯಗಳನ್ನು ಮಾಡುವುದಕ್ಕೆ ಸಾಧನವಾಗಿರುವುದರಿಂದ ಕರ್ಮೇಂದ್ರಿಯಗಳೆನ್ನಲ್ಪಡುವ ವಾಕ್ಕು ಮೊದಲಾದ ಪಂಚೇಂದ್ರಿಯಗಳೂ ಈ ಹತ್ತು ಇಂದ್ರಿಯಗಳಿಗೂ ಪ್ರವರ್ತಕವಾಗಿಯೂ ಸಂಕಲ್ಪವಿಕಲ್ಪಾತ್ಮಕವಾಗಿಯೂ ಇರುವ ಮನಸ್ಸೂ, ಶಬ್ದಸ್ಪರ್ಶರೂಪರಸಗಂಧಗಳೆಂಬೀ ಐದುವಿಷಯಗಳೂ, ಕ್ಷೇತ್ರವೆನ್ನಲ್ಪಡುವುವು. ಸಂಕ್ಷೈಮಾಡಿದರೆ ಅವುಗಳೆ ಇಪ್ಪತ್ತುನಾಲ್ಕು ತತ್ವಗಳಾಗುವುದರಿಂದ ಈ ಮಹಾಭೂತಾದಿ ಳನ್ನೆ ಚತುರ್ವಿಂಶತಿತತ್ವಗಳೆಂದು ಸಾಂಖ್ಯರುಹೇಳುವರು. ।೬। ಇಚ್ಛೆಯೇ ಮೊದಲಾದಧೃತ್ಯ ಪರ್ಯಂತವಾಗಿರುವಮನಗುಣಗಳನ್ನು ಆತ್ಮ [illegible] ತ್ತಾರೆ

ಯೂ ಅವೆಲ್ಲವೂ ಕ್ಷೇತ್ರಧರ್ಮಗಳಲ್ಲದೆ ಕ್ಷೇತ್ರಜ್ಞಧರ್ಮಗಳಲ್ಲವೆಂಬದಾಗಿ ಶ್ರೀಕೃಷ್ಣನು ಉಪದೇಶಿಸುತ್ತಾನೆ. ಸುಖಕರವಾಗಿರುವುದೆಂಬದಾಗಿ ಇದುವರೆಗೂ ಯಾವ ಪದಾರ್ಥವನ್ನು ತಿಳಿದುಕೊಂಡು ಇದ್ದನೊ ಪುನಃ ಅಂತಹ ಪದಾರ್ಥವನ್ನು ಸುಖಕರವಾಗಿರುವುದೆಂಬೀ ಚಿಂತೆಯಿಂದ ಸ್ವೀಕರಿಸುವುದಕ್ಕಾಗಿ ಇಚ್ಛೈಸುವಿಕೆಯನ್ನು ಇಚ್ಛೆಯೆನ್ನುವರು. ಈ ಪ್ರಕಾರವೆ ದುಃಖಕರವೆಂಬದಾಗಿ ಇದುವರೆಗೂ ಯಾವವಿಧವಾದ ಪದಾರ್ಥವನ್ನು ತಿಳಿದುಕೊಂಡಿರುವನೊ ಪುನಃ ಅಂತಹ ಪದಾರ್ಥವು ತಟಸ್ಥವಾದಾಗ ದುಃಖಕರವಿದೆಂಬೀ ಚಿಂತೆಯಿಂದ ಅದನ್ನು ದ್ವೇಷಿಸುವುದಕ್ಕೆ ದ್ವೇಷವೆನ್ನುವರು. ಪ್ರತಿಪ್ರಾಣಿಗಳಿಗೂ ಅನುಕೂಲವಾಗಿಯೂ ಪ್ರಸನ್ನವಾಗಿಯೂ ಸತ್ವಸ್ವರೂಪವಾಗಿಯೂ ಇರುವುದು ಸುಖವು. ಈ ಪ್ರಕಾರವೆ ಪ್ರತಿಕೂಲಾತ್ಮಕವಾಗಿಯೂ ಕಠಿನವಾಗಿಯೂ ಇರುವುದು ದುಃಖವು. ಈ ಯರಡೂ ಜ್ಞೇಯವಾಗಿರುವುದರಿಂದ ಕ್ಷೇತ್ರವೆಂತಲೆ ಹೇಳಲ್ಪಡುವುದು. ದೇಹೇಂದ್ರಿಯಗಳ ಸಮುದಾಯವು ಸಂಘಾತವೆನ್ನಲ್ಪಡುವುದು. ಅಗ್ನಿತಪ್ತವಾದ ಲೋಹಪಿಂಡದಲ್ಲಿ ಅಗ್ನಿಯು ಕಾಣಲ್ಪಡುವಂತೆ ದೇಹೇಂದ್ರಿಯ ಸಮುದಾಯದಲ್ಲಿ ಬುದ್ಧಿವೃತ್ತಿಯೂ ಕಾಣಲ್ಪಡುವುದು. ಅಲ್ಲಿ ಕಾಣಲ್ಪಡುವ ಅಗ್ನಿಯು ಲೋಹಪಿಂಡವೆ ಅಗ್ನಿಯೆಂಬ ಪ್ರತ್ಯಯವನ್ನು ಹೇಗಾದರೆ ಉಂಟುಮಾಡಿಸುವುದೋ ಅದರಂತೆ ಆತ್ಮಚೈತನ್ಯವು ಅಂತಃಕರಣವೃತ್ತಿಯಲ್ಲಿ ಸಂಕ್ರಮಿಸಿರುವುದರಿಂದ ಅಂತಹ ಅಂತಃಕರಣವೃತ್ತಿಯೆ ಆತ್ಮನೆಂಬದಾಗಿ ಹೇಳುವಂತೆ ಆಗುವುದು. ಅಂತಹ ಭ್ರಾಂತಿಯುಳ್ಳ ಅಂತಃಕರಣವೃತ್ತಿಯೆ ಇಲ್ಲಿ ಚೇತನಾ ಎಂಬದಾಗಿ ಹೇಳಲ್ಪಡುವುದು. ಆಪತ್ತು ತಟಸ್ಥವಾದಾಗ ಅದಕ್ಕೆ ಒಳಪಟ್ಟಿರುವ ದೇಹೇಂದ್ರಿಯಗಳನ್ನು ಧಾರಣ ಮಾಡುವುದಕ್ಕೆ ಯೋಗ್ಯವಾದ ಶಕ್ತಿಯನ್ನೆ ಧೃತಿಯೆನ್ನುವರು. ಅಂತಹ ಇಚ್ಛಾದಿ ಸಕಲಾಂತಃಕರಣ ಧರ್ಮಗಳೂ ಕ್ಷೇತ್ರಗಳೆನ್ನಲ್ಪಡುವುವು. ಆದರೆ ಸಂಕಲ್ಪಾದಿಗಳಾದ ಮನೋಧರ್ಮಗಳೆಲ್ಲವೂ ಇಲ್ಲಿ ಹೇಳಲ್ಪಡಬೇಕಾಗಿರುವಲ್ಲಿ ಅವುಗಳನ್ನು ಯೇತಕ್ಕೆ ಹೇಳಲಿಲ್ಲವೆಂದರೆ ಜ್ಞೇಯಗಳಾದ ಅವೆಲ್ಲವೂ ಕ್ಷೇತ್ರವೆ ಎಂಬ ಅಂಶವನ್ನು ತೋರಿಸುವುದಕ್ಕಾಗಿಯೇ ಉಪಲಕ್ಷಣತ್ವೇನ ಇಚ್ಛಾದಿಗಳನ್ನು ಮಾತ್ರ ಇಲ್ಲಿ ಹೇಳಿರುವೆ

ಪ್ರ. ಆದರೆ "ಇದಂಶರೀರಂ,, ಎಂಬದಾಗಿ ಈ ಅಧ್ಯಾಯದ ಯರಡ
ನೇ ಶ್ಲೋಕದಲ್ಲಿಶರೀರವೆಕ್ಷೇತ್ರವೆಂಬದಾಗಿ ಹೇಳಲ್ಪಟ್ಟಿರುತ್ತದೆ ಯಲ್ಲ
ವೇ? ಎಂದರೆ? ಸತ್ಯವೆ! ಇಂತಹ ಮಹಾ ಭೂತಾದಿಕ್ಷೇತ್ರ ಸಮುದಾ
ಯವೇತಾನೆ ಶರೀರವೆನ್ನಲ್ಪಡುವುದು: ಆದುದರಿಂದ "ಇದಂಶರೀರಂ,,
ಎಂಬಶ್ಲೋಕದಲ್ಲಿ ಶರೀರವು ಕ್ಷೇತ್ರವೆನ್ನಲ್ಪಡುವುದೆಂಬದಾಗಿ ಹೇಳಿರು
ವುದರಿಂದ ಕ್ಷೇತ್ರಸ್ವರೂಪವು ಸಂಗ್ರಹವಾಗಿ ಉಪದೇಶಿಸಲ್ಪಟ್ಟಿತೆಂತ
ಲೂ ಶರೀರವೂಕೂಡ ಕ್ಷೇತ್ರವೆನ್ನಲ್ಪಡುವುದೆಂಬದಾಗಿ ಹೇಳಲ್ಪಟ್ಟಿ
ತೆಂತಲೂ ತಿಳಿಯಬೇಕು. ಇದುಕ್ಷೇತ್ರಸ್ವರೂಪ ನಿರೂಪಣವೆಂದರಿ
ಯಬೇಕು. ||೬||೭||

(ರಾ||ಭಾ||) ಮಹಾಭೂತಾನಿ- ಅಹಂಕಾರಃ- ಬುದ್ಧಿಃ- ಅವ್ಯ
ಕ್ತಮೇವಚ - ಇಲ್ಲಿ ಇವುಗಳು ಕ್ಷೇತ್ರಾರಂಭಕವಾದ ದ್ರವ್ಯಗಳೆಂದು
ಸೇರಿಸಿಕೊಳ್ಳಬೇಕು. ಪೃಥಿವೀ-ಅಪ್-ತೇಜಸ್ಸು-ವಾಯು ಆಕಾಶವೆಂ
ಬಿವುಗಳೆ ಮಹಾಭೂತಗಳು. ವೈಕಾರಿಕವೆಂತಲೂ ತೈಜಸವೆಂತಲೂ
ಭೂತಾದಿಯೆಂತಲೂ ಅಹಂಕಾರಗಳು ಮೂರುವಿಧಗಳಾದುದರಿಂದಲೂ
ಅವುಗಳಲ್ಲಿ ವೈಕಾರಿಕಾಹಂಕಾರವು ಇಂದ್ರಿಯಗಳಿಗೆ ಕಾರಣವಾಗಿ
ರುವುದರಿಂದಲೂ ತೈಜಸಾಹಂಕಾರವು ವೈಕಾರಿಕ ಭೂತಾದಿಗಳೆಂಬೀ
ಯರಡಕ್ಕೂ ಅನುಗ್ರಾಹಕ ವಾಗಿರುವುದರಿಂದಲೂ ಮೂರನೇದಾದ
ಭೂತಾದಿ ಎಂಬ ಅಹಂಕಾರವೂ ಬುದ್ಧಿಯೆಂಬದಾಗಿ ವ್ಯವಹರಿಸಲ್ಪ
ಡುವ ಮಹತ್ತತ್ವವೂ ಅವ್ಯಕ್ತವೆನ್ನಲ್ಪಡುವ ಮೂಲಪ್ರಕೃತಿಯೂ
ಕ್ಷೇತ್ರವೆನ್ನಲ್ಪಡುವ ಶರೀರಕ್ಕೆ ಕಾರಣದ್ರವ್ಯಗಳಾಗುವುವು. ಇಂ
ದ್ರಿಯಾಣಿದಶೈಕಂಚ ಇಂದ್ರಿಯಗೋಚರಾಃ ಪಂಚಚ- ಇಲ್ಲಿ ಇವಾ
ಸಿಕ್ಷೇತ್ರಾಶ್ರಿತಾನಿ ಎಂಬದಾಗಿ ಸೇರಿಸಿಕೊಳ್ಳಬೇಕು. ದಶೇಂದ್ರಿ
ಯಗಳೂ ಮನಸ್ಸೂ ಶಬ್ದಾದಿ ವಿಷಯಗಳೂ ಕ್ಷೇತ್ರವನ್ನು ಆಶ್ರಯಿ
ಸಿರುವ ತತ್ವಗಳೆಂದರಿಯಬೇಕು. ಕಿವಿಯೂ, (ಉಷ್ಣವು ಶೀತವು
ಮೊದಲಾದ ಸ್ಪರ್ಶಗಳನ್ನು ಗ್ರಹಿಸುತಾ ದೇಹವೆಲ್ಲವೂ ಪೂರ್ಣವಾಗಿ
ವ್ಯಾಪಿಸಿರುವ) ತ್ವಗಿಂದ್ರಿಯವೂ, ಕಣ್ಣೂ, ನಾಲಿಗೆಯೂ, ಮೂಗೂ,
ಎಂಬೀ ಐದೂ ಜ್ಞಾನೇಂದ್ರಿಯಗಳೆನ್ನಲ್ಪಡುವುವು. ವಾಕ್ಕು, ಕೈ,
ಕಾಲು, ಮಲಮೂತ್ರಾಪಾನವಾಯುಗಳ ಉತ್ಸರ್ಗಕ್ಕೆ ಕಾರಣವಾದ

ಪಾಯುವೆಂಬ ಇಂದ್ರಿಯವೂ, ಶುಕ್ಲೋತ್ಸರ್ಗಮೂಲಕವಾದ ಆನಂದವನ್ನುಂಟುಮಾಡುವ ಉಪಸ್ಥವೆಂಬೀ ಐದೂ ಕರ್ಮೇಂದ್ರಿಯಗಳೆನ್ನಲ್ಪಡುವುವು. (ಇದರಿಂದ, ಜ್ಞಾನೇಂದ್ರಿಯ ಕರ್ಮೇಂದ್ರಿಯ ಭೇದದಿಂದ ಇಂದ್ರಿಯಗಳು ಹತ್ತು ಎಂಬದಾಗಿ ಸಿದ್ಧವಾಯಿತು.) ಮನಸ್ಸೊಂದು. ಇಂದ್ರಿಯಗಳಿಂದ ಗ್ರಹಿಸಲ್ಪಡುವ ಶಬ್ದ ಸ್ಪರ್ಶ ರೂಪ ರಸಗಂಧಗಳೆಂಬೀ ಐದೂ ಸ್ಪರ್ಶಗಳು. ಇಚ್ಛಾ ದ್ವೇಷ ಸುಖ ದುಃಖಗಳೆಂಬಿವು ಕ್ಷೇತ್ರಕಾರ್ಯಗಳು, ಕ್ಷೇತ್ರವಿಕಾರಗಳೆನ್ನಲ್ಪಡುವುವು. ಇಚ್ಛಾದಿಗಳು ಆತ್ಮಧರ್ಮಗಳಾಗಿದ್ದರೂ ಆತ್ಮನಿಗೆ ಕ್ಷೇತ್ರದೊಡನೆ ಸಂಬಂಧವಿರುವುದರಿಂದುಂಟಾಗುವುವಾದುದರಿಂದ ಕ್ಷೇತ್ರಕಾರ್ಯಗಳೆಂಬದಾಗಿ ಅದರ ವಿಕಾರಗಳು ಹೇಳಲ್ಪಡುವುವು. ಅವು ಆತ್ಮ ಧರ್ಮಗಳೆಂಬೀ ಅಂಶವನ್ನು "ಪುರುಷಸ್ಸುಖದುಃಖಾನಾಂಭೋಕ್ತೃತ್ವೇಹೇತುರುಚ್ಯತೇ ॥"॥(೧೩॥೨೧) ಎಂಬದಾಗಿ ಮುಂದೆ ವಿವರಿಸುತ್ತಾರೆ. ಚೇತನಾಧೃತಿ ಸ್ಸಂಘಾತಃ-ಸುಖವನ್ನೂ ದುಃಖವನ್ನೂ ಅನುಭವಿಸುತಲೂ ಭೋಗಾಪವರ್ಗಗಳನ್ನು ಸಾಧಿಸುತಲೂ ಇರುವ ಚೇತನನಾದ ಆತ್ಮನಿಗೆ ಆಧಾರವಾಗಿರುವಪೃಥಿವ್ಯಾದಿ ಭೂತಗಳ ಸಮುದಾಯವು, ಏತತ್- ಈಪೂರ್ವೋಕ್ತವಾದ ವಸ್ತುಸಮುದಾಯವು, ಕ್ಷೇತ್ರಂ- ಕ್ಷೇತ್ರವೆನ್ನಲ್ಪಡುವುದೆಂದು ಸಮಾಸೇನ-ಸಂಗ್ರಹವಾಗಿ, ಸವಿಕಾರಂ- ಕ್ಷೇತ್ರಕಾರ್ಯದೊಡನೆಕೂಡ, ಉದಾಹೃತಂ- ಹೇಳಲ್ಪಟ್ಟಿತು. ಪ್ರಕೃತ್ಯಾದಿ ಪೃಥಿವ್ಯಂತವಾದ ದ್ರವ್ಯಗಳಿಂದುಂಟಾಗಿಯೂ, ಇಂದ್ರಿಯಗಳಿಗೆ ಆಧಾರವಾಗಿಯೂ ಇಚ್ಛಾದ್ವೇಷ ಸುಖದುಃಖ ವಿಕಾರಭೂತ ಸಂಘಾತರೂಪವಾಗಿಯೂ, ಇರುತ ಚೇತನನ ಸುಖದುಃಖ ಭೋಗಗಳಿಗೆ ಆಧಾರವಾಗಿರುವಿಕೆಯನ್ನೇ ಫಲವಾಗಿ ಉಳ್ಳದ್ದು ಕ್ಷೇತ್ರವೆನ್ನಲ್ಪಡುವುದೆಂದರಿಯಬೇಕು. ॥೫॥೬॥

(ಮ॥ ಗೀ॥ ವಿ॥) ಇಚ್ಛಾದಿಗಳು ಕ್ಷೇತ್ರವಿಕಾರಗಳೆಂದರಿಯಬೇಕು. (ಗೀ॥ ವಿ॥) ಮಹಾಭೂತಾದಿ ಕ್ಷೇತ್ರಾಭಿಮಾನಿ ದೇವತೆಗಳನ್ನು ತಿಳಿಯಬೇಕಾಗಿರುವುದು ಅವಶ್ಯಕವಾಗಿರುವುದರಿಂದ ಅವುಗಳನ್ನು ವಿವರಿಸುವೆವು. ಆಕಾಶಾಭಿಮಾನಿಯು ವಿಘ್ನೇಶ್ವರನು, ವಾಯುವಿಗೆ ಮುಖ್ಯವಾಯುವಿನಿಂದುಂಟಾಗಿರುವ ಮರೀಚಿಯೂ,

ತೇಜಸ್ಸಿಗೆ ವಹ್ನಿದೇವತೆಯೂ, ಜಲಕ್ಕೆ ವರುಣನೂ. ಭೂಮಿಗೆ ಭೂದೇವಿಯೂ, ಅಹಂಕಾರ ತತ್ವಕ್ಕೆ ಶಿವನೂ, ಮಹತ್ತತ್ವಕ್ಕೆ ಚತುರ್ಮುಖನೂ, ಬುದ್ಧಿತತ್ವಕ್ಕೆ ಉಮಾದೇವಿಯೂ. ಅವ್ಯಕ್ತಕ್ಕೆ ಲಕ್ಷ್ಮೀದೇವಿಯೂ, ಮನಸ್ಸಿಗೆ ಸ್ಕಂದ ಇಂದ್ರ ಅನಿರುದ್ಧರೂ, ಶ್ರೋತ್ರ (ಕಿವಿ)ಕ್ಕೆ ಚಂದ್ರನೂ, ತ್ವಗಿಂದ್ರಿಯಕ್ಕೆ ವಾಯುಪುತ್ರನಾದ ಮರುತ್ತೂ.ಚಕ್ಷುರಿಂದ್ರಿಯಕ್ಕೆ ಸೂರ್ಯನೂ, ಜಿಹ್ವೇಂದ್ರಿಯಕ್ಕೆ ವರುಣನ ಬೇರೊಂದು ರೂಪವೂ, ಘ್ರಾಣೇಂದ್ರಿಯಕ್ಕೆ ಅಶ್ವಿನೀ ದೇವತೆಗಳೂ, ವಾಗಿಂದ್ರಿಯಕ್ಕೆ ಅಗ್ನಿದೇವತೆಯೂ, ಕೈಗಳಿಗೆ ವಾಯುವಿನ ಕುಮಾರರಾದ ಯಿರಡು ಮರುತ್ತುಗಳೂ, ಪಾದಗಳಿಗೆ ವಿಷ್ಣುವಿನ ಆವೇಶವುಳ್ಳವರಾಗಿಯೂ ಶಚೀದೇವಿಯ ಕುಮಾರರಾಗಿಯೂ ಇರುವ ಯಜ್ಞನೂ ಶಂಭುವೂ,ಪಾಯು ಎಂಬ ಇಂದ್ರಿಕ್ಕೆ ಯಮನೂ,ಉಪಸ್ಥಕ್ಕೆ ಶಿವನೂ ಮನುವೂ, ಶಬ್ದಾದಿ ವಿಷಯಗಳಿಗೆ ಶಿವಪುತ್ರರಾದ ಐದುದೇವತೆಗಳೂ, ಇಚ್ಛೆಗೆ ಶ್ರೀಲಕ್ಷ್ಮೀಭಾರತಿ ( ವಾಯುಪತ್ನಿ ) ಗಳೂ, ದ್ವೇಷದುಃಖಗಳಿಗೆ ಕಲಿದ್ವಾಪರಗಳೂ, ಸುಖಕ್ಕೆ ಮುಖ್ಯವಾಯುವೂ, ಧೃತಿಗೆ ಸರಸ್ವತೀ ಭಾರತಿ ( ವಾಯುಪತ್ನಿ) ಗಳೂ, ಚೇತನೆಗೆ ಶ್ರೀ ಲಕ್ಷ್ಮಿದೇವಿಯೂ, (ಸಂಘಾತಕ್ಕೆ ಅನೇಕರುಂಟು) ಅಭಿಮಾನಿ ದೇವತೆಗಳೆಂದರಿಯಬೇಕು. ಪರಮಾತ್ಮನಿಗೆ ವಾಸಸ್ಥಾನವಾಗಿರುವುದರಿಂದ ಕ್ಷೇತ್ರವೆಂತಲೂ ಹೇಳಲ್ಪಟ್ಟಿರುವುದು. ॥೬॥೭॥

ಶ್ಲೋ ॥ ಅಮಾನಿತ್ವಮದಂಭಿತ್ವಮಹಿಂಸಾಕ್ಷಾಂತಿರಾರ್ಜವಂ । ಆಚಾರ್ಯೋಪಾಸನಂಶೌಚಂಸ್ಥೈರ್ಯಮಾತ್ಮವಿನಿಗ್ರಹಃ ॥ ೭ ॥ ಇಂದ್ರಿಯಾರ್ಥೇಷುವೈರಾಗ್ಯಮನಹಂಕಾರಏವಚ । ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಂ ॥ ೮ ॥ ಅಸಕ್ತಿರನಭಿಷ್ವಂಗಃಪುತ್ರದಾರಗೃಹಾದಿಷು।ನಿತ್ಯಂಚಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೯ ॥ ಮಯಿಚಾನನ್ಯಯೋಗೇನಭಕ್ತಿರವ್ಯಭಿಚಾರಿಣೀ।ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ॥೧೦॥ ಅಧ್ಯಾತ್ಮಜ್ಞಾನನಿತ್ಯತ್ವಂತತ್ತ್ವಜ್ಞಾನಾರ್ಥ(ಚಿಂತನಂ)

ದರ್ಶನಂ |ಏತದ್ಜ್ಞಾನಮಿತಿಪ್ರೋಕ್ತಮಜ್ಞಾನಂಯದತೋಽನ್ಯಥಾ ‖ ... ... ‖೧೧‖

ಪ‖ ಅಮಾನಿತ್ವಂ- ಅದಂಭಿತ್ವಂ- ಅಹಿಂಸಾ ಕ್ಷಾಂತಿಃ- ಆರ್ಜವಂ | ಆಚಾರ್ಯೋಪಾಸನಂ- ಶೌಚಂ- ಮೌನಂ- ಆತ್ಮವಿನಿಗ್ರಹಃ ‖ ಇಂದ್ರಿಯಾರ್ಥೇಷು- ವೈರಾಗ್ಯಂ- ಅನಹಂಕಾರಃ- ಏವ-ಚ| ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಂ‖ಅಸಕ್ತಿಃ- ಅನಭಿಷ್ವಂಗಃ- ಪುತ್ರದಾರಗೃಹಾದಿಷು | ನಿತ್ಯಂ- ಚ- ಸಮಚಿತ್ತತ್ವಂ- ಇಷ್ಟಾನಿಷ್ಟೋಪಪತ್ತಿಷು ‖ ಮಯಿ- ಚ- ಅನನ್ಯಯೋಗೇನ- ಭಕ್ತಿಃ- ಅವ್ಯಭಿಚಾರಿಣೀ | ವಿವಿಕ್ತದೇಶಸೇವಿತ್ವಂ- ಅರತಿಃ- ಜನಸಂಸದಿ ‖ ಅಧ್ಯಾತ್ಮಜ್ಞಾನನಿತ್ಯತ್ವಂ- ತತ್ವಜ್ಞಾನಾರ್ಥಚಿಂತನಂ | ಏತತ್-ಜ್ಞಾನಂ- ಇತಿ- ಪ್ರೋಕ್ತಂ- ಅಜ್ಞಾನಂ-ಯತ್- ಅತಃ- ಅನ್ಯಥಾ‖

ಅ‖ ಅಮಾನಿತ್ವಂ- (ಶಂ‖ ಶ್ರೀ‖ ಗೀ‖ ವಿ‖) ತನ್ನ ಗುಣಾದಿಗಳನ್ನು ಶ್ಲಾಘಿಸಿಕೊಳ್ಳದೇ ಇರುವಿಕೆಯು, (ರಾ) ವಿದ್ಯೆಯೇನು, ಜಾತ್ಯಭಿಮಾನವೇನು, ಧನಾದಿ ಸಂಪತ್ತಿ ಏನು, ಇವುಗಳ ಮೂಲಕವಾಗಿ ಶ್ರೇಷ್ಠರಾದವರನ್ನು ಅವಮಾನಪಡಿಸುವುದಕ್ಕೆ ಕಾರಣವಾದ ಗರ್ವವೇ ಇಲ್ಲಿ ಮಾನಶಬ್ದದಿಂದ ಹೇಳಲ್ಪಡುವುದು. ಅಂಥಾ ಮಾನವಿಲ್ಲದೇಇರುವಿಕೆಯು ಅಮಾನಿತ್ವವು. ಅದಂಭಿತ್ವಂ- (ಶಂ) ತಾನುಮಾಡಿರುವ ಧರ್ಮಗಳನ್ನು ಪ್ರಕಟನೆ ಮಾಡುವುದೆಂಬ ಡಂಭವಿಲ್ಲದೇ ಇರುವಿಕೆಯು, (ರಾ) ತಾನು ಮಹಾ ಧಾರ್ಮಿಕನೆಂಬದಾಗಿ ಖ್ಯಾತಿಯನ್ನು ಪಡೆಯುವುದಕ್ಕಾಗಿ ಧರ್ಮಾನುಷ್ಠಾನವಂ ಮಾಡುವುದು ಡಂಭವು,ಅದಿಲ್ಲದೆ ಧರ್ಮಾನುಷ್ಠಾನವಂ ಮಾಡುವಿಕೆಯು ಅದಂಭಿತ್ವವು, (ಮ‖ ಗೀ‖ ವಿ‖) ತಾನು ಅಲ್ಪಜ್ಞನಾದರೂ ಸರ್ವಜ್ಞನಂತೆ ತೋರಿಸದೆ ಇರೋಣವು. ಅಹಿಂಸಾ- ಪರಹಿಂಸೆಯನ್ನು ಮಾಡದೆಇರುವಿಕೆಯು, (ರಾ) ವಾಙ್ಮನಶ್ಶರೀರಗಳಿಂದ ಅನ್ಯರಿಗೆ ಹಿಂಸೆಯನ್ನು ಮಾಡದೇಇರುವಿಕೆಯು,ಕ್ಷಾಂತಿಃ-ಕ್ಷಮೆಯು,(ರಾ‖ಶಂ‖)ಅನ್ಯರಿಂದ ತಾನುಪೀಡಿಸಲ್ಪಟ್ಟರೂ ಅವರಲ್ಲಿ ಮನೋವಿಕಾರವಿಲ್ಲದೆಇರುವಿಕೆಯು, ಆರ್ಜವಂ-ಕಾಪಟ್ಯವಿಲ್ಲದೇ ಇರುವಿಕೆಯು, (ಶಂ‖ ಶ್ರೀ) ಸರಿಯಾದ ಮಾರ್ಗದಲ್ಲಿರುವಿಕೆಯು, (ರಾ‖ ಮ) ಅನ್ಯರವಿಷಯದಲ್ಲಿ ಮನೋವಾಕ್ ದೇಹಗಳಿಂದ ಏಕರೂಪವಾಗಿರುವಿಕೆಯು. "ಮನಸ್ಯೇಕಂವಚಸ್ಯೇಕಂ ಕರ್ಮಣ್ಯೇಕಂದುರಾತ್ಮನಾಂ,, ಎಂಬನ್ಯಾಯದಂತೆ ಇಲ್ಲದೆ " ಮನಸ್ಯೇಕಂವಚಸ್ಯೇ ಕಂಕರ್ಮಣ್ಯೇಕಂ ಮಹಾ

ತ್ಮನಾಂ,, ಎಂಬೀಪ್ರಕಾರವಾಗಿ ಮನೋವಾಕ್ಕಾಯಗಳಿಂದ ಏಕರೂಪವಾಗಿರುವಿಕೆಯು ಆರ್ಜವವೆನ್ನಲ್ಪಡುವುದು. (ಗೀ॥ವಿ) ಸದ್ವ್ಯಾಪಾರಗಳಲ್ಲಿ ಮನೋವಾಕ್ಕಾಯಗಳಿಂದ ಏಕರೂಪವಾಗಿರುವಿಕೆಯು. ಆಚಾರ್ಯೋಪಾಸನಂ- ಸದ್ಗುರೂಪಸೇವನವು. (ಶಂ) ಮೋಕ್ಷಸಾಧನವಾದ ಜ್ಞಾನವನ್ನು ಉಪದೇಶಿಸಿರುವ ಗುರುವಿನ ಸೇವೆಯು, (ರಾ) ತನಗೆ ಜ್ಞಾನೋಪದೇಶವಂಮಾಡಿದ ಗುರುವಿನಲ್ಲಿ ನಮಸ್ಕಾರವಂ ಮಾಡಿ ತನ್ನಿಂದ ಮಾಡಲ್ಪಡಬೇಕಾದ್ದನ್ನು ಕೇಳಿ ತಿಳಿದುಕೊಂಡು ಆ ಗುರುವಿನ ಸರ್ವವಿಧ ಕೈಂಕರ್ಯಗಳನ್ನು ಮಾಡುವಿಕೆಯು.(ಗೀ॥ವಿ॥) ಜ್ಞಾನಿಗಳ ಸೇವೆಯು, ಶೌಚಂ - ಮನಶ್ಶುದ್ಧಿ, ಅಥವಾ ಶರೀರಶುದ್ಧಿಯು, (ಶಂ) ಮಣ್ಣಿನಿಂದಲೂ ಜಲದಿಂದಲೂ ದೇಹದಲ್ಲಿರುವ ಮಾಲಿನ್ಯವನ್ನು ಶುದ್ಧಿಮಾಡಿಕೊಳ್ಳುವುದೂ, ಕಾಮ ಕ್ರೋಧಾದಿಗಳನ್ನು ಬಿಟ್ಟು ನಿರ್ಮಲವಾಗಿರುವುದೂ ಶೌಚವೆನ್ನಲ್ಪಡುವುದು. (ಶ್ರೀ) ಬಾಹ್ಯಾಂತರಶುದ್ಧಿಯು, " ಶೌಚಂತು ದ್ವಿವಿಧಂಪ್ರೋಕ್ತಂ ಬಾಹ್ಯಮಾಭ್ಯಂತರಂತಥಾ। ಮೃಜ್ಜಲಾಭ್ಯಾಂ ಸ್ಮೃತಂಬಾಹ್ಯಂ ಭಾವಶುದ್ಧಿಸ್ತಥಾಂತರಂ,, ಜಲಾದಿಗಳಿಂದ ದೇಹಶುದ್ಧಿಯೆಂತಲೂ ಕಾಮಾದಿತ್ಯಾಗದಿಂದ ಮನಶ್ಶುದ್ಧಿಯೆಂತಲೂ ದ್ವಿವಿಧವಾಗಿ ಬಾಹ್ಯಾಂತರಶುದ್ಧಿಯು ಹೇಳಲ್ಪಟ್ಟಿರುವುದೆಂದರ್ಥವು. (ರಾ) ಶಾಸ್ತ್ರಸಿದ್ಧವಾಗಿಯೂ ಆತ್ಮಜ್ಞಾನ ತತ್ಸಾಧನ ಯೋಗ್ಯತಾರೂಪವಾಗಿಯೂ ಇರುವ ಮನೋವಾಕ್ಕಾಯ ಶುದ್ಧಿಯು, ಅಲ್ಲಿ ಪರಹಿಂಸೆಯನ್ನೂ ಪರದ್ರವ್ಯವನ್ನೂ ಪರಸ್ತ್ರೀಯರೆ ಮೊದಲಾದವರನ್ನು ಚಿಂತಿಸದೇ ಸರ್ವಕಾಲದಲ್ಲಿಯೂ ಭಗವತ್ಕಲ್ಯಾಣಗುಣ ದಿವ್ಯಮಂಗಳ ವಿಗ್ರಹಗಳನ್ನು ಚಿಂತಿಸುವುದು ಮನಶ್ಶುದ್ಧಿಯೆಂತಲೂ, ಅನ್ಯರ ದೋಷಗಳನ್ನು ಹೇಳುವಿಕೆಯು,ಕೇಳುವಂತವರ ಕಿವಿಯು ಸುಟ್ಟುಹೋಗುವಂತೆ ಕಠಿನೋಕ್ತಿಗಳನ್ನುಹೇಳುವಿಕೆಯೂ ಕ್ಷುದ್ರವಾತುಗಳನ್ನು ಹೇಳುವಿಕೆಯೂ ಅತಿವಾದವನ್ನು ಮಾಡುವುದೂ ಅಸಂಬದ್ಧಪ್ರಲಪನವೂ ಅಸತ್ಸಂಭಾಷಣವೂ, ಎಂಬಿವೆ ಮೊದಲಾದವುಗಳನ್ನು ಬಿಟ್ಟಿರುವುದು ವಾಕ್ಶುದ್ಧಿ ಎಂತಲೂ, ಜಾತಿದುಷ್ಟಗಳಾದ ಕಳಂಜ ಲಶುನಾದಿ (ಈರುಳ್ಳಿ ಬೆಳ್ಳುಳ್ಳಿ ಮುಲ್ಲಂಗಿಗಡ್ಡೆ ಮೊದಲಾದವು) ಗಳನ್ನು ಭಕ್ಷಿಸದೇ ಇರುವಿಕೆಯೂ ತಾಮ್ರಪಾತ್ರದ

ಲ್ಲಿರುವ ಹಾಲು ಮೊದಲಾದ ಆಶ್ರಯ ದುಷ್ಟಗಳನ್ನು ಸ್ವೀಕರಿಸದೇ ತ್ಯಾಗಮಾಡುವುದೂ, ಶೂದ್ರೋಚ್ಛಿಷ್ಟ ಶೂದ್ರದೃಷ್ಟಾನ್ನಾದಿಯಾದ ನಿಮಿತ್ತ ದುಷ್ಟಾನ್ನಾದಿಗಳನ್ನು ಭೋಜನಮಾಡದೇ ಬಿಡುವುದೂ, ಮನುಷ್ಯ ಮಾತ್ರಕ್ಕಾಗಿಯೂ ತನಿಗಾಗಿಯೂ ಅಡಿಗೆಮಾಡಲ್ಪಟ್ಟ ಕ್ರಿಯಾದುಷ್ಟವಾದ ಅನ್ನಾದಿಗಳನ್ನು ತ್ಯಾಗಮಾಡುವುದೂ, ನೊಣ ಕ್ರಿಮಿ ಧಾರ ಕೂದಲು ಇವು ಮೊದಲಾದವುಗಳಿಂದ ಕೂಡಿರುವ ಸಂಸರ್ಗ ದುಷ್ಟಾನ್ನತ್ಯಾಗವೂ ಸಪ್ತಮೀ ಭಾನುವಾರಾದಿಗಳಲ್ಲಿ ನೆಲ್ಲೀಕಾಯಿ ಮೊದಲಾದ ಕಾಲ ದುಷ್ಟ ಪದಾರ್ಥಗಳ ತ್ಯಾಗವೂ,ಭಗವತ್ಸಮರ್ಪಿತವಾಗಿಯೂವೈಶ್ವದೇವ ಶಿಷ್ಟವಾಗಿಯೂಇರುವ ಜಾತ್ಯಾಶ್ರಯ ನಿಮಿತ್ತ ಕ್ರಿಯಾಸಂಸರ್ಗ ಕಾಲಾದಿಗಳಿಂದ ದುಷ್ಟಗಳಾಗದ ಅನ್ನಾದಿಗಳನ್ನು ಭುಜಿಸುವಿಕೆಯೂ ಅನಿಷಿದ್ಧಗಳಾದ ದಿನಗಳಲ್ಲಿ ಕ್ಷ್ನಾರಾಭ್ಯಂಜನಗಳಿಂದ ದೇಹಮಾಲಿನ್ಯಗಳನ್ನು ಹೋಗಲಾಡಿಸಿ ಕೊಳ್ಳುವಿಕೆಯೂ, ಕಿವಿ ಮೂಗು ಮುಖವು ಹಲ್ಲುಗಳು ಗುದಸ್ಥಾನವು ಇದೇ ಮೊದಲಾದ ಮಲಗಳನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ವಿಧಿಪ್ರಕಾರದಿಂದ ಮಣ್ಣಿನಿಂದಲೂ ನೀರಿನಿಂದಲೂ ಮಾಡಲ್ಪಡುವ ಶೌಚವೂ ಭಗವತ್ಸಮರ್ಪಿತವಾದ ಚಂದನ ಪುಷ್ಪಾದಿಗಳನ್ನು ಧರಿಸಿಕೊಳ್ಳುವಿಕೆಯೂ, ಭಗವನ್ನಿವೇದಿತವಾಗಿರುವ ಯೇಲಾಲವಂಗಾದಿ ಯುಕ್ತ ತಾಂಬೂಲವನ್ನು ಮಹಾಪ್ರಸಾದವೆಂಬ ಪ್ರತಿಪತ್ತಿಯಿಂದ ಸ್ವೀಕರಿಸುವಿಕೆಯೂ ಶರೀರ ಶುದ್ಧಿಯೆಂದರಿಯಬೇಕು. ಸ್ಥೈರ್ಯಂ - ಸನ್ಮಾರ್ಗದಲ್ಲಿ ಸ್ಥಿರವಾದ ಪ್ರಯತ್ನವು. (ಶಂ) ಮೋಕ್ಷ ಸಾಧನವಾದ ಪ್ರಯತ್ನದಲ್ಲಿಯೆ ಸ್ಥಿರವಾಗಿರುವಿಕೆಯು, (ರಾ) ವೇದಾಂತ ಶಾಸ್ತ್ರೋಕ್ತವಾದ ಅರ್ಥವಿಶೇಷದಲ್ಲಿ ಸಂಶಯವಿಲ್ಲದೇಇರುವಿಕೆಯು. (ಗೀ॥ವಿ॥) ಭಯಾದಿಗಳಿಂದ ಸ್ವಧರ್ಮತ್ಯಾಗವನ್ನು ಮಾಡದೇಇರುವಿಕೆಯು, ಆತ್ಮವಿನಿಗ್ರಹಃ- ದೇಹಸ್ವಾಧೀನವು,(ಶಂ) ಅನ್ಯವಿಷಯದಲ್ಲಿರುವ ದೇಹೇಂದ್ರಿಯಾದಿ ಸಮೂಹವನ್ನು ಮೋಕ್ಷಸಾಧನವಾದ ಕಾರ್ಯದಲ್ಲಿಯೆ ಉಪಯೋಗಿಸುವುದು. (ರಾ) ಶಬ್ದಾದಿವಿಷಯಗಳಲ್ಲಿ ವ್ಯಾಪೃತವಾದ ಮನಸ್ಸನ್ನು ಅವುಗಳಿಂದ ನಿವೃತ್ತಿಸಿ ಆತ್ಮಸ್ವರೂಪದಲ್ಲಿಯೆ ನಿಲ್ಲಿಸುವುದು. (ಗೀ॥ ವಿ॥) ವಿಶೇಷವಾದ ಮನೋನಿಗ್ರಹವು. ॥೮॥ ಇಂದ್ರಿ

ಯೇಂದ್ರಿಯಾರ್ಥೇಷುವೈರಾಗ್ಯಂ- ಇಂದ್ರಿಯಗಳಿಂದನುಭವಿಸಲ್ಪಡುವ ಶಬ್ದಾದಿವಿಷಯಗಳಲ್ಲಿ ವೈರಾಗ್ಯವು. (ಶಂ)ಇಷ್ಟವಾದ ಇಹಪರ ವಿಷಯಗಳಲ್ಲಿ ಅಪೇಕ್ಷಾರಾಹಿತ್ಯವು. (ರಾ) ಆತ್ಮ ವ್ಯತಿರಿಕ್ತಗಳಾದ ಪ್ರಾಕೃತ ಭೋಗಗಳಲ್ಲಿರುವ ಅಲ್ಪತ್ವಾಸ್ಥಿರತ್ವ ದುಃಖಮೂಲತ್ವ ದುಃಖಮಿಶ್ರತ್ವ ದುಃಖೋದರ್ಕತ್ವ ವಿಪರೀತಾಭಿಮಾನ ಮೂಲತ್ವ ಸ್ವಾಭಾವಿಕಾನಂದ ವಿರುದ್ಧತ್ವಗಳೆಂಬ ದೋಷ ಸಪ್ತಕಗಳನ್ನು ತಿಳಿದು ಅವು ತನಿಗೆ ಕೆಡಕನ್ನುಂಟುಮಾಡುವುದೆಂಬ ಬುದ್ಧಿಯಿಂದಭಯಪಟ್ಟು ಅವುಗಳಲ್ಲಿ ಸಂಬಂಧಶೂನ್ಯನಾಗಿರುವಿಕೆಯು. ಅನಹಂಕಾರಃ- ಅಹಂಕಾರರಾಹಿತ್ಯವು, (ರಾ) ಆತ್ಮ ವ್ಯತಿರಿಕ್ತವಾದ ದೇಹದಲ್ಲಿ ಆತ್ಮಾಭಿಮಾನವನ್ನು ಬಿಡುವಿಕೆಯೇ ಸರ್ವಗುಣಗಳಲ್ಲಿಯೂ ಮುಖ್ಯ ವೆಂತಲೂ, ಅಂತಹ ಆತ್ಮಾಭಿ ಮಾನವಿದ್ದರೆ ಇತರ ಸದ್ಗುಣಗ ಳ್ಯಾವವಿದ್ದರೂ ಅವೆಲ್ಲವೂ ಗು ಣ ಗ ಳಾ ಗ ಲಾ ರ ವೆಂ ಬೀ ಅರ್ಥವು ದ್ಯೋತಿತವಾಗುವುದು. ತ ನ್ನ ಸ್ವ ರೂ ಪ ವೂ ಕೂ ಡ ಪ ರ ಮಾ ತ್ಮ ಶೇ ಷ ಭೂತವಾಗಿರುವುದರಿಂದ ತನ್ನದೆನ್ನಲ್ಪಡುವ ಯಾವ ವಸ್ತುವಿನಿಂದಲೂ ಶೂನ್ಯನಾದ ಇವನು ಆತ್ಮೀಯವಲ್ಲದ ಯಾವ ವಸ್ತುವನ್ನೂ ತನ್ನ ದೆಂಬದಾಗಿ ತಿಳಿಯಲವಕಾಶವಿಲ್ಲದೇ ಇರುವುದರಿಂದ ಆ ಪ್ರಕಾರವಾಗಿ ಅನಾತ್ಮೀಯ ವಸ್ತುಗಳಲ್ಲಿ ಆತ್ಮೀಯ ಭ್ರಮತ್ಯಾಗವೂ ಇಲ್ಲಿ ವಿವಕ್ಷಿತವಾಗಿರುವುದು. (ಗೀ॥ವಿ) ತನ್ನಲ್ಲಿಲ್ಲದ ಗುಣಗಳನ್ನು ತನ್ನಲ್ಲಿರುವುದಾಗಿ ತಿಳಿದು ಅಜ್ಞಾನವಂ ಹೊಂದದೇ ಇರುವಿಕೆಯು, ಜನ್ಮಮೃತ್ಯು ಜರಾವ್ಯಾಧಿ ದುಃಖದೋಷಾನುದರ್ಶನಂ-(ಶಂ) ಉತ್ಪತ್ತಿ ಲಯ ವಾರ್ಧಕ ದುಃಖಗಳಲ್ಲಿ ದೋಷವನ್ನು ತಿಳಿಯುವಿಕೆಯು, ಜನನದಲ್ಲಿರುವ ದೋಷಗಳು ಗರ್ಭವಾಸಾದಿಕ್ಲೇಶಗಳು, ಲಯದಲ್ಲಿರುವ ದೋಷಗಳು ಮರಣ ವೇದನಾದಿಗಳು, ವಾರ್ಧಕದಲ್ಲಿರುವ ದೋಷಗಳು ಜ್ಞಾಪಕಶಕ್ತಿ ರಾಹಿತ್ಯವು ಬಲಹೀನತೆಯು ಸ್ವಜನಾವ ಮಾನವೇ ಮೊದಲಾದವುಗಳು. ಈ ಪ್ರಕಾರವೇಶರೀರಾವಯವಗಳಲ್ಲುಂಟಾಗುವ ವ್ಯಾಧ್ಯಾದಿಗಳಿಂದುಂಟಾದುವ ಕಷ್ಟಗಳನ್ನು (ಆಧ್ಯಾತ್ಮ ಆಧಿಭೌತಿಕ ಆಧಿದೈವಿಕಾದಿಗಳಿಂದುಂಟಾಗುವ ದುಃಖಗಳನ್ನು) ತಿಳಿಯಬೇಕು. (ರಾ) ದೇಹವಿರುವವರಿಗೂ ಜನ್ಮ ಮೃತ್ಯುಜರಾ (ವಾರ್ಧಕ) ವ್ಯಾಧ್ಯಾದಿಗಳಲ್ಲಿ

ರುವ ದೋಷಗಳು ಬಿಡಲಾರವೆಂಬ ಅನುಸಂಧಾನ ಯುಕ್ತನಾಗಿರು ವಿಕೆಯು. ॥೮॥ ಅಸಕ್ತಿಃ-ಆತ್ಮವ್ಯತಿರಿಕ್ತವಾದ ಪರಿಗ್ರಹಗಳಲ್ಲಿ ವಿಶ್ವಾಸಶೂನ್ಯತೆಯು, ಪುತ್ರದಾರಗೃಹಾದಿಷು - ಪುತ್ರನೆಂದರೆ ಮಗನು, ದಾರ ಎಂದರೆ ಹೆಂಡತಿಯು, ಗೃಹ ಎಂದರೆ ಮನೆಯು, ಇವೇ ಮೊದಲಾದವುಗಳಲ್ಲಿ, ಅನಭಿಷ್ವಂಗಃ-ಅಭಿಮಾನ ಶೂನ್ಯನಾಗಿರುವಿಕೆಯು, (ರಾ) ಮಕ್ಕಳಲ್ಲಿಯೂ ಹೆಂಡತಿಯಲ್ಲಿಯೂ ಗೃಹಕ್ಷೇತ್ರಾದಿಗಳಲ್ಲಿಯೂ ಶಾಸ್ತ್ರೀಯ ಕರ್ಮಾನುಷ್ಠಾನಕ್ಕೆ ಇವರು ಉಪಕರಣ ಭೂತರೆಂಬ ಬುದ್ಧಿಯಿಂದ ಇತರ ಕಾಲಗಳಲ್ಲಿಇವರಲ್ಲುದಾಸೀನ ನಾಗಿರುವಿಕೆಯು.ಇಷ್ಟಾನಿಷ್ಟೋಪಪತ್ತಿಷು ನಿತ್ಯಂ ಸಮಚಿತ್ತತ್ವಂಚ-(ರಾ) ದೇಹಾಭಿಮಾನ ಮೂಲಕವಾಗಿ ಸಂತೋಷ ಕಾರಣಗಳುಂಟಾದರೂ ವ್ಯಸನ ಕಾರಣಗಳುಂಟಾದರೂ ಆನಂದದುಃಖಗಳನ್ನು ಬಿಟ್ಟಿರುವಿಕೆಯು. ॥೯॥ಮಯಿ-ಸರ್ವೇಶ್ವರನಾದ ನನ್ನಲ್ಲಿ, ಅನನ್ಯ ಯೋಗೇನ ಅವ್ಯಭಿಚಾರಿಣೀ ಭಕ್ತಿಶ್ಚ- (ರಾ) ದೇವತಾಂತರ ಸಂಬಂಧವನ್ನು ಬಿಟ್ಟು ಯಾವಾಗಲೂ ದೃಢವಾಗಿರುವ ಭಕ್ತಿಯೂ,(ಶಂ)ಶ್ರೀವಾಸುದೇವನಿಗಿಂತಲೂ ಉತ್ತಮವಾದ ಬೇರೊಂದು ವಸ್ತುವಿಲ್ಲವೆಂಬ ನಿಶ್ಚಯ ಭಕ್ತಿಯೊಡನೆ ಕೂಡಿರುವ ಅಭೇದ ಸಮಾಧಿಯಿಂದ ಮಾಡುವ ಅಸ್ಖಲಿತ ಭಜನವು. (ಗೀ॥ ವಿ॥ ) ಲಕ್ಷ್ಮೀಬ್ರಹ್ಮಾದಿಗಳ್ಯಾರೂ ಸ್ವತಂತ್ರರಲ್ಲವು. ಈಶ್ವರನೇ ಸ್ವತಂತ್ರನೆಂಬ ಬುದ್ಧಿಯಿಂದ ಏಕಾಂತ ಭಕ್ತಿಯನ್ನು ಮಾಡುವಿಕೆಯು. ವಿವಿಕ್ತ ದೇಶಸೇವಿತ್ವಂ- (ರಾ) ನಿರ್ಜನ ಪ್ರದೇಶದಲ್ಲಿ ವಾಸಮಾಡುವಿಕೆಯು, (ಶ್ರೀ) ಚಿತ್ತಶುದ್ಧಿಯನ್ನುಂಟು ಮಾಡುವ ದೇಶದಲ್ಲಿ ವಾಸಮಾಡುವಿಕೆಯು, (ಶಂ) ಸ್ವಭಾವದಿಂದಲಾದರೂ ಶುದ್ಧಿಮಾಡುವುದರಿಂದಲಾದರೂ ಶುದ್ಧವಾಗಿಯೂ, ಕಳ್ಳರು ದುಷ್ಟಜಂತುಗಳು ಮೊದಲಾದವರಿಲ್ಲದೆಯೂ ಇರುವ ಅರಣ್ಯ ನದೀದೇವಾಲಯವೇ ಮೊದಲಾದ ಸ್ಥಲಗಳಲ್ಲಿ ವಾಸಮಾಡುವಿಕೆಯು, (ಗೀ॥ವಿ) ಜನವರ್ಜಿತವಾಗಿಯೂ ಶುದ್ಧವಾಗಿಯೂ ಇರುವ ಸ್ಥಲದಲ್ಲಿ ವಾಸಮಾಡುವಿಕೆಯು. ಜನಸಂಸದಿ-(ಶಂ)ಮೂಢರಾಗಿಯೂ ಅಶುದ್ಧರಾಗಿಯೂ ವಿನಯಾದಿ ಶೂನ್ಯರಾಗಿಯೂ ಇರುವ ಪ್ರಾಕೃತ ಜನಸಮೂಹದಲ್ಲಿ, ಅರತಿಃ- (ಶಂ॥ ಶ್ರೀ॥ ರಾ॥ ) ಪ್ರೀತಿಶೂನ್ಯನಾಗಿರುವಿಕೆಯೂ. ॥೧೦॥

ಅಧ್ಯಾತ್ಮಜ್ಞಾನ ನಿತ್ಯತ್ವಂ- (ರಾ) ಆತ್ಮಜ್ಞಾನದಲ್ಲಿಯೇ ಸರ್ವದಾಸ್ಥಿರ ಮನಸ್ಕನಾಗಿರುವಿಕೆಯು, (ಗೀ॥ ವಿ) ಪರಮಾತ್ಮಜ್ಞಾನ ಸಂಪಾದನ ದಲ್ಲಿಯೇ ಯಾವಾಗಲೂ ಸ್ಥಿರಚಿತ್ತನಾಗಿರುವಿಕೆಯು, ತತ್ವಜ್ಞಾನಾರ್ಥ ದರ್ಶನಂ- (ಶಂ) ಪೂರ್ವೋಕ್ತವಾದ ಅಮಾನಿತ್ವಾದಿಗಳಿಂದುಂಟಾಗು ವತತ್ವಜ್ಞಾನಕ್ಕೆ ಉತ್ತಮವಾದ ಫಲವು ಮೋಕ್ಷವೆಂದರಿಯುವಿಕೆಯು, (ಮ॥ ಗೀ॥ ವಿ॥) ತತ್ವಜ್ಞಾನ ಸಂಪಾದನೆ ಗೋಸ್ಕರ ಶಾಸ್ತ್ರವಿಚಾರ ಮಾಡುವಿಕೆಯು, (ಅಥವಾ) (ಗೀ॥ ವಿ) ತತ್ವಜ್ಞಾನಕ್ಕೆ ವಿಷಯನಾಗಿ ರುವ ವಿಷ್ಣುವಿನ ದರ್ಶನವು. (ರಾ) ತತ್ವಜ್ಞಾನಾರ್ಥಚಿಂತನಂ-ಸರ್ವ ಕಾಲದಲ್ಲಿಯೂ ತತ್ವಜ್ಞಾನದ ಪ್ರಯೋಜನವನ್ನು ಚಿಂತಿಸುವಿಕೆಯೂ, ಇತಿ-ಈ ಪ್ರಕಾರವಾಗಿ, ಪ್ರೋಕ್ತಂ- 'ಅಮಾನಿತ್ವ ಮದಂ ಭಿತ್ವಂ, ಎಂಬದಾಗಿ ಉಪಕ್ರಮಿಸಿ 'ತತ್ವಜ್ಞಾನಾರ್ಥ ಚಿಂತನಂ, ಎಂಬೀ ಪರ್ಯಂ ತವಾಗಿ ನಮ್ಮಿಂದ ಹೇಳಲ್ಪಟ್ಟಿರುವ, ಏತತ್-ಈ ಅಮಾನಿತ್ವಾದಿ ಗುಣ ಸಮೂಹವೆ, ಜ್ಞಾನಂ-ಆತ್ಮಜ್ಞಾನಕ್ಕೆ ಅತ್ಯಂತ ಸಾಧನವು (ಶಂ) ಏತದ್ಜ್ಞಾನಮಿತಿಪ್ರೋಕ್ತಂ- ಅಮಾನಿತ್ವಾದಿ ಇಪ್ಪತ್ತು ಗುಣಗಳೂ ಜ್ಞಾನಕ್ಕೆ ಕಾರಣಗಳಾಗಿರುವುದರಿಂದ ಅವುಗಳನ್ನನುಷ್ಠಿಸಬೇಕೆಂಬು ವುದನ್ನು ದೃಢಪಡಿಸುವುದಕ್ಕಾಗಿ ಜ್ಞಾನಸಾಧನವಾದ ಅವುಗಳೇ ಜ್ಞಾನ ವೆನ್ನಲ್ಪಟ್ಟತೆಂದರಿಯಬೇಕು. (ಗೀ॥ ವಿ॥) ಅಮಾನಿತ್ವಾದಿಗಳು ಜ್ಞಾನ ವೂ ಜ್ಞಾನಸಾಧನವೂ ಆಗಿರುವುವು. ಅತಃ ಅನ್ಯಥಾಯತ್ ತದ ಜ್ಞಾನಂ-ಈ ಜ್ಞಾನಕ್ಕಿಂತಲೂ ಭಿನ್ನಪಟ್ಟು ಆತ್ಮನಿಗೆ ಕ್ಷೇತ್ರಸಂಬಂಧ ದಿಂದುಂಟಾಗಿರುವುದೆಲ್ಲವೂ ಆತ್ಮಜ್ಞಾನ ವಿರೋಧಿಯಾಗಿರುವುದರಿಂದಅ ಜ್ಞಾನವೆನ್ನಲ್ಪಡುವುದು. ಶಂ॥ ಶ್ರೀ)ಅಮಾನಿತ್ವಾದಿಗಳಾದಜ್ಞಾನಕಾರಣ ಗಳಿಗೆ ಪ್ರತಿಕೂಲವಾಗಿರುವ ಅಜ್ಞಾನಗಳ್ಯಾವವೋ,ಅವೆಲ್ಲವೂ(ಅಜ್ಞಾನ ವೇ ದುಃಖಗಳನ್ನು ಕೊಡುವುವಾದುದರಿಂದ ಅವುಗಳನ್ನು ನಿವರ್ತಿಸಿ ಕೊಳ್ಳುವುದಕ್ಕಾಗಿ ) ತಿಳಿಯಲ್ಪಡಬೇಕು. ( ಇಲ್ಲಿ ಅಮಾನಿತ್ವಾದಿ ಗುಣಸ್ವೀಕಾರಕ್ಕೆ " ಮಾನಾಪಮಾನೀ ದುಃಖೀಸ್ಯಾನ್ನೈರದ ಸಾಧಾ ರಣೋಜನಃ।ಅತೋದುಃಖನಿದಾನತ್ವಾನ್ಮಾನಂಯೋಗೀಪರಿತ್ಯಜೇತ್॥ಕೃ ತಂದಂಭಾದದಂಭಾದ್ವಾ ಕರ್ಮತುಲ್ಯಫಲಂಭವೇತ್। ಕ್ರಮೈಕಫಲ ಮಾದ್ಯಂಸ್ಯಾ ದ್ವಿತೀಯಂ ಸುಖಸಾಧನಂ ॥ ಸ್ವಯಂಬಿಭೇಮಿಹಿಂ

ಸ್ರೇಭ್ಯಸ್ಸಾರ್ವ ಪಾಪಾಸ್ವೇದ್ಮಿತ್ರೈರ್ಹರ್ತೃಃ । ಸುಖೀಸ್ಯಾವಿತಿವಿಜ್ಞಾಯಪರ ಪೀಡಾಂವಿವರ್ಜಯೇತ್ ॥,, ಇತ್ಯಾದಿಗಳನ್ನು ಅನುಸಂಧಿಸಬೇಕು.) ... ... ... ... ॥ ೧೧ ॥

ಶ್ಲೋ॥ ಜ್ಞೇಯಂಯತ್ತತ್ಪ್ರವಕ್ಷ್ಯಾಮಿಯಜ್ಞಾತ್ವಾಽಮೃತಮಶ್ನುತೇ । ಅನಾದಿಮತ್ಪರಂಬ್ರಹ್ಮನಸತ್ತನ್ನಾಸದುಚ್ಯತೇ ॥ ... ॥೧೨॥

ಪ॥ ಜ್ಞೇಯಂ- ಯತ್- ತತ್ ಪ್ರವಕ್ಷ್ಯಾಮಿ- ಯತ್- ಜ್ಞಾತ್ವಾ- ಅಮೃತಂ- ಅಶ್ನುತೇ। (ರಾ) ಅನಾದಿ- ಮತ್ಪರಂ- (ಶಂ)ಅನಾದಿಮತ್-ಪರಂಬ್ರಹ್ಮ-ನ-ಸತ್-ತತ್-ನ- ಅಸತ್- ಉಚ್ಯತೇ॥

(ಶಂ॥ ಭಾ॥) ಜ್ಞೇಯಂ-ತಿಳಿಯತಕ್ಕದ್ದು, ಯತ್-ಯಾವುದೊ, ಯತ್-ಯಾವದನ್ನು, ಜ್ಞಾತ್ವಾ-ತಿಳಿದು, ಅಮೃತಂ-ಮೋಕ್ಷವನ್ನು, ಅಶ್ನುತೆ-ಹೊಂದುತ್ತಾನೆಯೊ, ತತ್-ಅದನ್ನು, ಪ್ರವಕ್ಷ್ಯಾಮಿ-ಹೇಳುವೆನು, ಅನಾದಿಮತ್-ಆದಿರಹಿತವಾದ, ಪರಂಬ್ರಹ್ಮ - ಪರಬ್ರಹ್ಮವೆನ್ನಲ್ಪಡುವ, ತತ್-ಆ ವಸ್ತುವು, ಸತ್-ಸತ್ತೆಂತಲೂ, ನೋಚ್ಯತೆ-ಹೇಳಲ್ಪಡುವುದಿಲ್ಲವು, ಅಸತ್ನ-ಅಸತ್ತೆಂತಲೂ ಹೇಳಲ್ಪಡುವುದಿಲ್ಲವು. ಈ ಪ್ರಕಾರವಾಗಿ ಹಿಂದೇ ಹೇಳಲ್ಪಟ್ಟ ಜ್ಞಾನದಿಂದ ತಿಳಿಯತ್ತಕ್ಕದ್ದು ಯಾವದೊ ಅದನ್ನು ಹೇಳುವೆನು ಕೇಳು. ಇಲ್ಲಿ ಪೂರ್ವಪಕ್ಷಿಯು ಶಂಕಿಸುತ್ತಾನೆ. ಅಮಾನಿತ್ವಾದಿಗಳು ಯಮನಿಯಮಾದಿಗಳೆನ್ನಲ್ಪಡುವುವಲ್ಲದೆ ಅವುಗಳಿಂದ ತಿಳಿಯಲ್ಪಡತಕ್ಕ ವಸ್ತುವು ಹೇಗೆ ತಿಳಿಯಲ್ಪಡುವುದು ? ಅಮಾನಿತ್ವಾದಿಗಳೊಂದು ವಸ್ತುಸ್ವರೂಪವನ್ನು ತಿಳಿಸುವ ಗುಣಗಳಲ್ಲವಷ್ಟೆ ? ಲೋಕದಲ್ಲಿ ಸರ್ವತ್ರ ವಸ್ತು ವಿಷಯಕವಾದ ಜ್ಞಾನವು ಯಾವದೊ ಅಂತಹ ಜ್ಞಾನವೆ ಅಂತಹ ವಸ್ತುವನ್ನು ತಿಳಿಸುವುದು; ಒಂದು ವಸ್ತುವಿಷಯವಾದ ಜ್ಞಾನವು ಮತ್ತೊಂದು ವಸ್ತುವನ್ನು ತಿಳಿಸಲಾರದು. ಲೋಕದಲ್ಲಿ ಘಟವಿಷಯಕವಾದ ಜ್ಞಾನದಿಂದ ಬೆಂಕಿಯನ್ನು ಹೇಗೆ ತಿಳಿದುಕೊಳ್ಳಬಹುದು ? ಆದುದರಿಂದ ಅಮಾನಿತ್ವಾದಿಗಳು ಒಂದು ವಸ್ತುವನ್ನು ಬೋಧಿಸುವ ಜ್ಞಾನವೆನ್ನಲ್ಪಡಲಾರದೆಂದರೆ? ಅದಕ್ಕೆ ಸಿದ್ಧಾಂತಿಯ ಪ್ರತ್ಯುತ್ತರವು. ಆ ಪ್ರಕಾರವಾಗಿ ಹೇಳುವುದರಿಂದ ದೋಷವಿಲ್ಲವು, ಅದು ಹೇಗೆಂದರೆ ? ಜ್ಞಾನವನ್ನುಂಟುಮಾಡು

ವುದರಿಂದಲೂ ಜ್ಞಾನದೊಡನೆ ಕೂಡಿ ಜ್ಞಾನಿಯಲ್ಲಿ ಮುಖ್ಯವಾಗಿರುವು ದಾದುದರಿಂದಲೂ ಜ್ಞಾನವೆಂದು ಹೇಳಬಹುದು. ಇಂತಹ ಜ್ಞಾನದೃಶ ಯಿಂದ ತಿಳಿಯತಕ್ಕ ವಸ್ತುವನ್ನು ವಿವರಿಸಿ ಹೇಳುವೆನು (ಕೇಳುವಂ ತವರಿಗೆ ಶ್ರದ್ಧಾಜನನಾರ್ಥವಾಗಿ ಅದರಿಂದುಂಟಾಗುವ ಫಲವಿಶೇಷ ವನ್ನು ಮೊದಲು ತಿಳಿಸುತ್ತಾರೆ.) ತಿಳಿಯತಕ್ಕ ಅಂತಹ ಪದಾರ್ಥವನ್ನು ತಿಳಿದುಕೊಂಡರೆ ಜನನಮರಣರಾಹಿತ್ಯ ಮುಂ ಟಾಗುವುದು. ಆಪ್ರಕಾರವಾಗಿ ತಿಳಿಯಬೇಕಾದದ್ದು ಯಾವದೆಂದರೆ ಆದಿಯಿಲ್ಲದ್ದು, ಎಂದರೆ ಯಾವಾಗಲೂ ಇರುವಂತಾದ್ದಾ ಗಿಯೂ ಸರ್ವೋತ್ಕೃಷ್ಟವಾಗಿಯೂ ಇರುವ ಬ್ರಹ್ಮವೇ ತಿಳಿಯತ ಕ್ಕವಸ್ತುವು. ಇಲ್ಲಿ ಅನಾದಿ ಎಂತಲೂ ಮತ್ಪರಂ ಎಂತಲೂ ಪದವಿ ಭಾಗಮಾಡಿ ಅನಾದಿಮತ್ ಎಂಬದಾಗಿ ಹೇಳಿದರೆ ಅನಾದಿ ಎಂಬದಾಗಿ ಬಹುವ್ರೀಹಿ ಸಮಾಸವನ್ನು ಹೇಳುವುದರಿಂದಲೆ ಮತುಪ್ ಅರ್ಥವುಸಿ ದ್ಧಿಸುವುದರಿಂದ ಪುನಶ್ಚ ಮತುಪ್ ಪ್ರಯೋಗವು ವ್ಯರ್ಥವೆಂತಲೂ ಪೌನರುಕ್ತ್ಯವೆಂತಲೂ, ಮತ್ಪರಂಎಂದರೆ ವಾಸುದೇವನೆನ್ನಲ್ಪಡುವ ನಾನು ಪರಶಕ್ತಿ ಎನ್ನಲ್ಪಡುವೆನು. ಅಂತಹ ಶಕ್ತಿಯುಳ್ಳದ್ದು ಪರ ಬ್ರಹ್ಮವೆಂತಲೂ, ಕೆಲವರು ಅರ್ಥವರ್ಣನವಂ ಮಾಡುವರು. ಸತ್ಯವೆ? ಆಪ್ರಕಾರವಾಗಿ ಅರ್ಥವರ್ಣನಮಾಡುವಸಂದರ್ಭದಲ್ಲಿ ಮಾತ್ರವೆ ಪೌನ ರುಕ್ತ್ಯದೋಷವು ಹೋಗುವುದಲ್ಲದೆ ಅಂತಹ ಅರ್ಥವರ್ಣನಮಾತ್ರ ಸಂದರ್ಭಿಸುವುದಿಲ್ಲವು. ಏತಕ್ಕೆಂದರೆ? ಸಮಸ್ತ ವಿಶೇಷಗಳು (ಧರ್ಮ ಗಳು) ಇಲ್ಲದ್ದು ಬ್ರಹ್ಮವೆಂಬದಾಗಿ ನಿರ್ಗುಣವನ್ನಾಗಿ ತಿಳಿಸುವ ಉ ದ್ದೇಶ್ಯದಿಂದ 'ನಸತ್ ನಾಸತ್, ಎಂಬದಾಗಿ ಶ್ರೀಕೃಷ್ಣಸ್ವಾಮಿಯು ಉಪದೇಶಿಸುತ್ತಾನೆ. ವಿಶೇಷಶಕ್ತಿಯುಂಟೆಂದು ಹೇಳುವುದರಿಂದ ಸ ಗುಣವನ್ನಾಗಿ ಹೇಳಿದಂತೆ ಆಗುವುದಲ್ಲದೆ ಆಪ್ರಕಾರವಾಗಿ ಸಗುಣವನ್ನಾ ಗಿಯೂ ವಿಶೇಷಶೂನ್ಯವಾದನಿರ್ಗುಣವನ್ನಾಗಿಯೂ ಹೇಳುವುದರಿಂದ ಪರಸ್ಪರ ವಿರುದ್ಧವಲ್ಲವೆ ? ಆದುದರಿಂದ ಬಹುವ್ರೀಹಿ ಸಮಾಸದಿಂದಲೆ ಮತುಪ್ ಅರ್ಥವು ಪ್ರಾಪ್ತವಾದರೂ ಪುನಶ್ಚ ಮತುಪ್ ಪ್ರಯೋಗವು, ಶ್ಲೋಕಪೂರ್ತಿಗೋಸ್ಕರವೆಂದು ಬೋಧಿತವಾಗುವುದು. ಋಷಿಪ್ರ ಯೋಗವಾಗಿರುವುದರಿಂದಲೂ ಪೌನರುಕ್ತ್ಯವನ್ನು ಶಂಕಿಸಬಾರದು.

ಅಮೃತತ್ವರೂಪಫಲವನ್ನುಂಟುಮಾಡುವ ವಸ್ತುವನ್ನು ನಾನು ತಿಳಿಸುವೆನೆಂಬದಾಗಿ ಹೇಳಿ ಕೇಳುವಂತವರಿಗೆ ರುಚಿಯನ್ನುಂಟುಮಾಡಿ ಅಂತಹವಸ್ತುವನ್ನು ನಿರೂಪಿಸುತ್ತಾನೆ. ಆವಸ್ತುವು ಹೇಗಿರುವುದೆಂದರೆ: ಸತ್ತಾಗಿಯೂ (ಇರತಕ್ಕದ್ದಾಗಿಯೂ) ಅಸತ್ತಾಗಿಯೂ (ಇಲ್ಲದೇಇರತಕ್ಕದ್ದಾಗಿಯೂ) ಇರುವುದು. ಇಲ್ಲಿ ಪುನಶ್ಚ ಪೂರ್ವಪಕ್ಷಿಯು ಶಂಕಿಸುತ್ತಾನೆ. ಆದರೆ ಮಹತ್ತಾದ ಪರಿಕರ ಬಂಧದೊಡನೆ ಕಂಠೋಕ್ತವಾಗಿಜ್ಞೇಯ ವಸ್ತುವನ್ನು ಹೇಳುವೆನು ಕೇಳೆಂಬದಾಗಿಹೇಳಿ ಆದು ಸತೂ ಅಲ್ಲವು ಅಸತ್ತೂ ಅಲ್ಲ ವೆಂದು ಅಸಂದರ್ಭವಾಗಿ ಹೇಳುವುದು ಉಚಿತವೋ? ಎಂದರೆ ಇಲ್ಲಿ ಅನುರೂಪವಾಗಿ ಹೇಳಿರುತ್ತಾನಲ್ಲದೆ ಅನನುರೂಪವಾಗಿ ಹೇಳಲಿಲ್ಲವು. ಆದು ಹೇಗೆಂದರೆ? ಸಮಸ್ತವಾದ ಉಪನಿಷತ್ತುಗಳಲ್ಲಿಯೂ ತಿಳಿಯತಕ್ಕ ಬ್ರಹ್ಮವಸ್ತುವು "ಸಏಷಃನೇತಿನೇತ್ಯಾತ್ಮಾ,, (ಬೃಹದಾ॥ ೬-೪-೨೨) "ಅಸ್ಥೂಲಮನಣು,, (ಬೃ॥೫॥ ೮-೮) ಎಂಬದಾಗಿ ಸಮಸ್ತ ವಿಶೇಷ(ಧರ್ಮ)ಗಳು ಇಲ್ಲದ್ದು ಯಾವದೋ ಅದೆ ಎಂಬದಾಗಿ ನಿರೂಪಿಸಲ್ಪಟ್ಟಿರುವುದು. "ಯತೋವಾಚೋನಿವರ್ತನ್ತೇ,, ಎಂಬೀ ಶ್ರುತಿಯಿಂದ ವಾಕ್ಕು ಮೊದಲಾದವುಗಳಿಗೆ ಬ್ರಹ್ಮವು ವಿಷಯವಾಗಲಾರದೆಂಬೀ ಅರ್ಥವು ಸಿದ್ಧಿಸುವುದರಿಂದಲೂ ವಿಶೇಷ ಪ್ರತಿಷೇಧದಿಂದ ಬ್ರಹ್ಮವು ನಿರೂಪಿಸಲ್ಪಡುವುದೆಂದರಿಯಬೇಕು. ಯಾವವಸ್ತುವು ಇರುವುದೋ ಅದು ಇರುವುದೆಂದುಹೇಳಲ್ಪಡುವುದು ಇರುವುದೆಂದು ಯಾವವಸ್ತುವು ಹೇಳಲ್ಪಡುವುದಿಲ್ಲವೋ ಅದು ಇಲ್ಲವೇಇಲ್ಲವು. ಸಕಲವಸ್ತುವೂ ಇರುವುದೆಂಬ ಶಬ್ದಕ್ಕಾದರೂ ಇಲ್ಲವೆಂಬ ಶಬ್ದಕ್ಕಾದರೂ ವಿಷಯವಾಗಿಯೇ ಇರಬೇಕು. ಇಲ್ಲಿ ಜ್ಞೇಯವು (ತಿಳಿಯತಕ್ಕದ್ದು) ಆದ ಬ್ರಹ್ಮವನ್ನು ಅಸ್ತಿ ಶಬ್ದದಿಂದ ಹೇಳಿದರೆ ಒಂದುಕಾಲದಲ್ಲಿ ಇಲ್ಲವೆಂಬ ಶಬ್ದಕ್ಕೂ ವಿಷಯವಾಗಬೇಕಾಗಿರುವುದರಿಂದ ಅಸ್ತಿಶಬ್ದದಿಂದ ಹೇಳಕೂಡದು. ಇರತಕ್ಕ ವಸ್ತುವೆ ಒಂದುಕಾಲದಲ್ಲಿ ಇಲ್ಲವೆಂಬದಾಗಿ ಉಪಸ್ಥಿಸುವುದರಿಂದ ಬ್ರಹ್ಮವು ಯಾವಾಗಲಾದರೆ ಅಸ್ತಿಶಬ್ದದಿಂದ ಹೇಳಲ್ಪಡಲಾರದೋ ಆವಾಗ ನಾಸ್ತಿ ಎಂಬ ಬುದ್ಧಿಗೆ ಯಾವಾಗಲೂ ವಿಷಯವಾಗ ಲಾರದಾದುದರಿಂದ ನಾಸ್ತಿಶಬ್ದದಿಂದಲೂ ಹೇಳಲ್ಪಡಲಾರದು. ಆದು ಹೇಗೆಂದರೆ;

ಲೋಕದಲ್ಲಿ ಸಮಸ್ತ ಬುದ್ಧಿಗಳೂ ಅಸ್ತಿನಾಸ್ತಿ- ಉಂಟು ಇಲ್ಲವೆಂಬ ಜ್ಞಾನದೊಡನೆ ಸಂಬಂಧಿಸಿಯೇ ಇರುವುವು. ಆದುದರಿಂದ ತಿಳಿಯಲ್ಪಡತಕ್ಕ ಸರ್ವವಸ್ತುಗಳೂ ಉಂಟೆನ್ನುವುದಕ್ಕಾದರೂ ಇಲ್ಲವೆಂಬುವುದಕ್ಕಾದರೂ ವಿಷಯವಾಗಿರಬೇಕು. ಬ್ರಹ್ಮ ವಸ್ತುವು ಅಸ್ತಿನಾಸ್ತಿ ಎಂಬೀ ಎರಡು ವ್ಯವಹಾರಗಳಿಗೂ ವಿಷಯವಾದದ್ದಲ್ಲವು, ಏತಕ್ಕೆಂದರೆ? ಅದು ಇಂದ್ರಿಯಗಳಿಂದ ಗ್ರಹಿಸಲರ್ಹವಾಗಿದ್ದರೆ ಯಲ್ಲವೆ ಉಂಟೆಂತಲಾದರೂ ಇಲ್ಲವೆಂತಲಾದರೂ ಹೇಳಬಹುದು. ಘಟಾದಿವಸ್ತುಗಳು ಇಂದ್ರಿಯಗಳಿಗೆ ವಿಷಯಗಳಾಗಿರುವುದರಿಂದಲೆ ಅಸ್ತಿ ನಾಸ್ತಿ ಎಂಬ ವ್ಯವಹಾರಗಳಲ್ಲಿ ಒಂದಕ್ಕಾದರೂ ವಿಷಯ ವಾಗಿರುವುವು. ಬ್ರಹ್ಮವು ಒಂದು ಕಾಲದಲ್ಲಿ ನೋಡಿಯಾದರೂ ನೋಡಿದವರಿಂದ ಕೇಳಿಯಾದರೂ ಇರುವುದಿಲ್ಲ ವಾದುದರಿಂದ ಇಂದ್ರಿಯಗಳಿಂದ ಗ್ರಹಿಸಲ್ಪಡತಕ್ಕದ್ದೆಂದು ಹೇಳಲಾಗುವುದಿಲ್ಲವು. ವೇದಾಂತ ವಾಕ್ಯಾದಿ ರೂಪವಾದ ಶಬ್ದದಿಂದಲೆ ಬ್ರಹ್ಮಸ್ವರೂಪವನ್ನು ತಿಳಿದುಕೊಳ್ಳಬೇಕಲ್ಲವೆ? ಆದುದರಿಂದಲೇ ಸತ್ತು ಅಲ್ಲವು ಅಸತ್ತು ಅಲ್ಲವೆನ್ನುವುದು ಯುಕ್ತವಾಗಿಯೇ ಇರುವುದು. ಬ್ರಹ್ಮವು ಸತ್ತು ಅಲ್ಲವು, ಅಸತ್ತು ಅಲ್ಲವುಎನ್ನುವುದು ಪರಸ್ಪರ ವಿರುದ್ಧವಲ್ಲವೋ? ಎಂದರೆ ‹‹ಅನ್ಯದೇವತದ್ವಿದಿತಾದಥೋ ಅವಿದಿತಾದಧಿ,, (ಕೇನೋ ॥ ೧॥ ೩) ಇತ್ಯಾದಿ ಶ್ರುತಿಗಳಿಂದ ಬ್ರಹ್ಮವು ಸದಸದ್ವಿಲಕ್ಷಣವೆಂಬದಾಗಿಯೇ ನಿರೂಪಿಸಲ್ಪಟ್ಟಿರುವುದು. ಮತ್ತು ಲೋಕದಲ್ಲಿ ಸಮಸ್ತ ವಸ್ತುಗಳೂ ತಿಳಿಯಲ್ಪಡುವಲ್ಲಿ ಜಾತಿ ಕ್ರಿಯಾಗುಣ ಸಂಬಂಧವನ್ನವಲಂಬಿಸಿಯೇ ಗ್ರಹಿಸಲ್ಪಡುವುವು. ಅದು ಹೇಗೆಂದರೆ? ಗೋವು, ಕುದುರೆಯು, ಎಂಬದಾಗಿ ಜಾತಿ ಭೇದದಿಂದಲ್ಲವೆ ತಿಳಿಯಬೇಕಾಗಿರುವುದು, ಅಥವಾ ಗಾನಮಾಡುವ ಕ್ರಿಯೆಯಿಂದಲಾದರೂ ಪಾಕಮಾಡುವ ಕ್ರಿಯೆಯಿಂದಲಾದರೂ ಅಲ್ಲವೆ ತಿಳಿಯಬೇಕು. ಅಥವಾ ಕರಿದು ಬಿಳುಪು ಕೆಂಪು ಇತ್ಯಾದಿ ಬಣ್ಣಗಳಿಂದಲಾದರೂ ತಿಳಿಯಬೇಕು. ಅಥವಾ ಧನಕ್ಷೇತ್ರಾದಿ ಸಂಬಂಧದಿಂದಲಾದರೂ ತಿಳಿಯಬೇಕು. ಇವುಗಳಿಂದಲ್ಲದೆ ಬೇರೆ ಯಾವದಿನಿಂದಲಾದರೂ, ತಿಳಿಯಲು, ಇಲ್ಲದ ವಸ್ತುವನ್ನು ಹೇಗೆ ಗ್ರಹಿಸಬಹುದು? ಆದರೆ ಬ್ರಹ್ಮಕ್ಕೆ ಜಾತಿ ಕ್ರಿಯಾದಿಗಳಿಲ್ಲವೆ? ಎಂದರೆ ನಿ

ಷ್ಕಲಂನಿಷ್ಕ್ರಿಯಂಶಾಂತಂ,, ಇತ್ಯಾದಿ ಶ್ರುತಿಗಳಿಂದ ಬ್ರಹ್ಮಕ್ಕೆ ಜಾತಿಕ್ರಿಯಾದಿಗಳು ನಿಷೇಧಿಸಲ್ಪಡುವುದರಿಂದ ಸದಾದಿ ಶಬ್ದಗಳಿಂದ ನಿರೂಪಿಸಲ್ಪಡಲಾರದು. ಗುಣವಿಲ್ಲದ ವಸ್ತುವಾದುದರಿಂದ ಗುಣವಾಚಕಶಬ್ದಗಳಿಂದಲೂ ಬೋಧಿತವಾಗಲಾರದು. ಗಾನಾದಿ ಕ್ರಿಯಾಶೂನ್ಯವಾಗಿರುವುದರಿಂದ ಬ್ರಹ್ಮಕ್ಕೆ ಕ್ರಿಯಾವಾಚಕ ಶಬ್ದಗಳೂ ಬೋಧಕಗಳಾಗಲಾರವು. ಆದುದರಿಂದ "ಏಕಮೇವಾದ್ವಿತೀಯಂಬ್ರಹ್ಮ,, ಇತ್ಯಾದಿ ಶ್ರುತಿ ವಾಕ್ಯಗಳಿಂದ ಬ್ರಹ್ಮವು ಮತ್ತೊಂದು ವಸ್ತುವಿನಿಂದ ಶೂನ್ಯವಾಗಿಯೂ ಒಂದಾಗಿಯೂ ಇರುವುದರಿಂದ ಸಂಬಂಧವಿಲ್ಲದ್ದೆಂಬದಾಗಿ ತಿಳಿಯಬೇಕು. ಮತ್ತೊಂದುವಸ್ತುವಿದ್ದರೆ ಯಲ್ಲವೆ ಅದರೊಡನೆ ಸಂಬಂಧವನ್ನು ಹೇಳಬಹುದು. "ಯತೋವಾಚೋ ನಿವರ್ತಂತೇ,, ಎಂಬೀ ಶ್ರುತಿಪ್ರಕಾರವಾಗಿ ಶಬ್ದದಿಂದಲೂ ನಿರೂಪಿಸಲ್ಪಡತಕ್ಕದ್ದಲ್ಲವು. ಆದುದರಿಂದ ಬ್ರಹ್ಮವು ಸದಸದ್ವಿಲಕ್ಷಣವೆಂಬದಾಗಿ ತಿಳಿಯಲ್ಪಡಬೇಕಾಗಿರುವುದು. ||೧೨||

(ರಾ|| ಭಾ||) ಇನ್ನು ಮುಂದೆ 'ಏತದ್ಯೋವೇತ್ತಿ, ಎಂಬದಾಗಿ ಜ್ಞಾತೃವಸ್ತುತ್ವೇನ ಹೇಳಲ್ಪಟ್ಟ ಕ್ಷೇತ್ರಜ್ಞನ ಸ್ವರೂಪವು ಶೋಧಿಸಲ್ಪಡುವುದು. ಇಲ್ಲಿ ಕೆಲವರು ಕ್ಷೇತ್ರಜ್ಞನೆಂದರೆ ಪರಬ್ರಹ್ಮವೆನ್ನುವರು. ಅದು ಯುಕ್ತವಲ್ಲವು. ಈ ಅಧ್ಯಾಯಾರಂಭದಲ್ಲಿ "ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ, ಎಂಬದಾಗಿ ದೇಹಾತ್ಮಗಳ ವಿಷಯವೇಉಪಕ್ರಾಂತವಾಗಿರುವುದು. ಉಪಸಂಹಾರದಲ್ಲಿಯೂ ಕ್ಷೇತ್ರಕ್ಷೇತ್ರಜ್ಞಯೋರೇವಂ, ಎಂಬದಾಗಿರುವುದರಿಂದ ಇಲ್ಲಿ ಕ್ಷೇತ್ರಜ್ಞಶಬ್ದದಿಂದ ಪರಬ್ರಹ್ಮವನ್ನು ಹೇಳುವುದು ಅಸಾಧ್ಯವು. ಯತ್- ಯಾವ ಜೀವಾತ್ಮಸ್ವರೂಪವು, ಜ್ಞೇಯಂ- ಹಿಂದೆ ಹೇಳಲ್ಪಟ್ಟ ಅಮಾನಿತ್ವಾದಿ ಗುಣಗಳಿಂದ ತಿಳಿಯತಕ್ಕದ್ದಾಗಿರುವುದೋ, ಯತ್- ಯಾವ ಪ್ರತ್ಯಗಾತ್ಮಸ್ವರೂಪವನ್ನು, ಜ್ಞಾತ್ವಾ- ತಿಳಿದು, ಅಮೃತಂ- ಜನನ ಮರಣಾದಿ ಪ್ರಾಕೃತ ಧರ್ಮ ರಹಿತವಾದ ಜೀವಾತ್ಮ ಸ್ವರೂಪವನ್ನು, ಅಶ್ನುತೇ- ಹೊಂದುತ್ತಾನೆಯೋ, ತದಿತಿಸಿದ್ಧಂ ತತ್- ಆಜೀವಾತ್ಮಸ್ವರೂಪವು, ಅನಾದಿ- ಆದಿಯೆಂದರೆ ಉತ್ಪತ್ತಿಯು, ಅದಿಲ್ಲವಾದ್ದರಿಂದ ಅನಾದಿಯು, ಉತ್ಪತ್ತಿರಹಿತವಾದ ವಸ್ತುವಿಗೆ ಅಂತವೂ ಇಲ್ಲವೆಂಬದಾಗಿ ತಿಳಿಯ

ಬೇಕು. ಮತ್ಪರಂ- ನನ್ನನ್ನೇ ಶೇಷಿಯಾಗಿ ವುಳ್ಳದ್ದು, ನನಗೆ ಶೇಷ ಭೂತವೆಂದರ್ಥವು. ಬ್ರಂಹ- ಬೃಹತ್ವಾಶ್ರಯವಾದ ಜ್ಞಾನಗುಣ ವುಳ್ಳದ್ದಾದುದರಿಂದ ಬ್ರಹ್ಮವೆಂಬದಾಗಿ ಹೇಳಲ್ಪಡುವುದು. ತತ್- ಆಜೀವಾತ್ಮನ ಶುದ್ಧಸ್ವರೂಪವು,ಸತ್‌ನೋಚ್ಯತೆ ಅಸತ್‌ನೋಚ್ಯತೆ-(ದೇ ವಮನುಷ್ಯಾದಿ ನಾಮರೂಪಗಳನ್ನು ಧರಿಸುವುದರಿಂದ ಸತ್ತೆಂದುಹೇ ಳಲ್ಪಡುವುದು, ಅಂತಹದೇವಾದಿ ನಾಮರೂಪಗಳಿಲ್ಲವಾದಕಾರಣ(ಸೂ ಕ್ಷ್ಮವಾಗಿರುವುದರಿಂದ) ಅಸತ್ತೆನ್ನಲ್ಪಡುವುದು. ಈ ಯೆರಡು ಅವ ಸ್ಥೆಯೂ ಅಚೇತನದ್ರವ್ಯಕ್ಕಲ್ಲದೆ ಪರಿಶುದ್ಧವಾದ ಜೀವಾತ್ಮಸ್ವರೂ ಪಕ್ಕಿಲ್ಲವು. ಆದುದರಿಂದ ಅಂತಹ ಪರಿಶುದ್ಧ ಜೀವಾತ್ಮಸ್ವರೂಪಕ್ಕೆ ಸಚ್ಛಬ್ದವಾಚ್ಯವಾದ ಸ್ಥೂಲಾವಸ್ಥೆಯೂ ಅಸಚ್ಛಬ್ದವಾದ ಸೂಕ್ಷ್ಮಾ ವಸ್ಥೆಯೂ ಇಲ್ಲವಾದುದರಿಂದ ಆಆತ್ಮಸ್ವರೂಪವು)ಸತ್ತೆಂತಲೂಹೇಳ ಲ್ಪಡಲಾರದು, ಅಸತ್ತೆಂತಲೂ ಹೇಳಲ್ಪಡಲಾರದು. ಆದರೂ ವಿಶಿಷ್ಟ ವೇಷದಿಂದ ಸದಸಚ್ಛಬ್ದಗಳಿಗೆ ಸ್ಥೂಲ ಚಿದಚಿದ್ವಿಶಿಷ್ಟವಾಗಿಯೂ ಸೂಕ್ಷ್ಮ ಚಿದಚಿದ್ವಿಶಿಷ್ಟವಾಗಿಯೂ ಇರುವ ಬ್ರಹ್ಮವು ವಾಚ್ಯವಾ ಗುವಸಂದರ್ಭದಲ್ಲಿ ಅದರಲ್ಲನ್ತರ್ಗತವಾಗಿರುವುದರಿಂದ ಜೀವಾತ್ಮಸ್ವರೂ ಪವೂ ಸದಸಚ್ಛಬ್ದಗಳಿಗೆ ವಾಚ್ಯವಾಗಬೇಕಾಗಿರುವುದಿಲ್ಲವೋ? ಜೀವಾ ತ್ಮಸ್ವರೂಪಕ್ಕೆ ವಿಕಾರವಿಲ್ಲದಿದ್ದರೂ ಸ್ವಭಾವವಾದ ಧರ್ಮಭೂತಜ್ಞಾ ನಕ್ಕೆ ಆಯಾ ದಶಾನುಗುಣವಾಗಿ ವಿಲಕ್ಷಣ ಸಂಕೋಚ ವಿಕಾಸರೂ ಪಾವಸ್ಥಾದ್ವಯವನ್ನು ಅಂಗೀಕರಿಸದೆ ಹೋದರೆ ಅವಸ್ಥಾಶ್ರಯವಾ ಗುವ ಉಪಾದಾನ ಕಾರಣತ್ವವು ತಪ್ಪಿಹೋಗುವುದಿಲ್ಲವೋ? ಎಂದರೆ ಸತ್ಯವೇಹೌದು, ಆದರೂ ಈ ಸ್ವಭಾವ ವಿಕಾರವೂ ಜೀವಾತ್ಮನಿಗೆ ಕರ್ಮಸಂಬಂಧಮೂಲಕವಾಗಿ ಆಗಂತುಕವಲ್ಲದೆ ಪ್ರಕೃತಿ ವಿಕಾರದಂತೆ ಸ್ವರೂಪಪ್ರಯುಕ್ತವಲ್ಲವು. ಆದುದರಿಂದಲ್ಲವೆ "ಸಚಾನಂತ್ಯಾಯುಕ ಲ್ಪತೆ,,ಎಂಬದಾಗಿ ಮುಕ್ತಾತ್ಮನಿಗೆ ಸ್ವಭಾವದಿಂದ ಸಂಕೋಚ ವಿಕಾ ಸಗಳಿಲ್ಲವು. ಆದುದರಿಂದಲೇ ಸ್ವರೂಪಪ್ರಯುಕ್ತವಾದ ಅವಸ್ಥಾಸಂ ಬಂಧವಿಲ್ಲವಾದುದರಿಂದ ಅವಸ್ಥಾವಾಚಿಗಳಾದ ಸದಸಚ್ಛಬ್ದಗಳಿಗೆ ಆ ತ್ಮಸ್ವರೂಪವು ವಾಚ್ಯವಾಗಲಾರದೆಂದರಿಯಬೇಕು. ಆತ್ಮವು ಅನಾದಿ ಎಂಬುವುದಕ್ಕೆ "ನಜಾಯತೆಮ್ರಿಯತೆವಾವಿಪಶ್ಚಿತ್,, ಇತ್ಯಾದಿ

ಶ್ರುತಿಯೂ ಪ್ರಮಾಣವಾಗಿರುವುದಲ್ಲವೆ ಇಲ್ಲಿಯೂ: ಇತಸ್ತ್ವನ್ಯಾಂ ಪ್ರಕೃತಿಂವಿದ್ಧಿಮೇಪರಾಂ । ಜೀವಭೂತಾಂ,, ಎಂಬದಾಗಿ ಹೇಳಲ್ಪಟ್ಟಿತು. ಆದುದರಿಂದ ಪರಮಾತ್ಮನಿಗೆ ಶರೀರವಾಗಿರುವುದರಿಂದ ಆತ್ಮಸ್ವರೂಪವು ಪರಮಾತ್ಮ ಶೇಷಭೂತವಾಗಿರುವುದು. ಈ ಅರ್ಥವನ್ನು ‘‘ಯಆತ್ಮನಿತಿಷ್ಠನ್- ಸಕಾರಣಂಕರಣಾಧಿಪಾಧಿಪಃ,, ಇತ್ಯಾದಿ ಶ್ರುತಿಗಳೂ ಹೇಳುವುವು. ಆದರೆ ಈ ಶ್ಲೋಕದಲ್ಲಿರುವಪರಂಬ್ರಹ್ಮಶಬ್ದದಿಂದ ಪರಬ್ರಹ್ಮವು ಹೇಳಲ್ಪಡಬೇಕಾಗಿರುವಲ್ಲಿ ಅದನ್ನು ಜೀವಾತ್ಮಪರವಾಗಿ ಹೇಳುವುದು ಹೇಗೆ? ಎಂದರೆ ಅದಕ್ಕಾಗಿ ‘‘ಸಗುಣಾನ್ಸಮತೀತ್ಯೈತಾನ್ ಬ್ರಹ್ಮಭೂಯಾಯಕಲ್ಪತೇ- ಬ್ರಹ್ಮಣೋಹಿಪ್ರತಿಷ್ಠಾಹಮಮೃತಸ್ಯಾವ್ಯಯಸ್ಯಚ ‘‘ಬ್ರಹ್ಮಭೂತಃಪ್ರಸನ್ನಾತ್ಮಾ,, ಎಂಬದಾಗಿ ಬ್ರಹ್ಮಶಬ್ದದಿಂದ ಆತ್ಮನಿರ್ದೇಶವಿರುವುದರಿಂದ ಬಾಧಕವಿಲ್ಲವೆಂದರಿಯಬೇಕು. ॥೧೨॥

(ಗೀ॥ ವಿ॥) ಪ್ರಾಕೃತ ದೇಹೇಂದ್ರಿಯಾದಿಗಳುಳ್ಳದ್ದು ಆದಿಮತ್- ಎಂಬದಾಗಿ ಹೇಳಲ್ಪಡುವುದು. ಪ್ರಾಕೃತ ದೇಹೇಂದ್ರಿಯಾದಿ ರಹಿತವಾದದ್ದು ಅನಾದಿಮತ್- ಎಂಬದಾಗಿ ಹೇಳಲ್ಪಡುವುದು. ತಿಳಿಯಲ್ಪಡತಕ್ಕದ್ದು ಆ ಪರಮಾತ್ಮವಸ್ತುವೆ, ನಸತ್ತನ್ನಾಸದುಚ್ಯತೇ- ಆಪರಮಾತ್ಮನು, ನಸತ್-ಕಾರ್ಯವಾದ ಪ್ರಪಂಚದಲ್ಲಿ ಸೇರಿದವನೂ ಅಲ್ಲವು, ನಾಸತ್-ಕಾರಣವಾದ ಅವ್ಯಕ್ತಾದಿಗಳಲ್ಲಿಸೇರಿದವನೂ ಅಲ್ಲವು. ಈಯರಡಕ್ಕೂ ಅನ್ಯನಾಗಿರುತ್ತಾನಾದುದರಿಂದ ಅವನನ್ನು ಸತ್ ಎಂತಲೂ ಹೇಳಕೂಡದು. ಅಸತ್ ಎಂತಲೂ ಹೇಳಕೂಡದು. ಅಥವಾ ಮೂರ್ತಾಮೂರ್ತದ್ರವ್ಯಗಳಿಗೆ ಅತೀತನಾಗಿರುವುದರಿಂದ ಸದಸಚ್ಛಬ್ದಗಳಿಂದ ಹೇಳಲಿಕ್ಕಾಗುವುದಿಲ್ಲವು. ॥೧೩॥

ಶ್ಲೋ॥ ಸರ್ವತಃ ಪಾಣಿಪಾದಂತತ್ಸರ್ವತೋಕ್ಷಿಶಿರೋಮುಖಂ ।
ಸರ್ವತಶ್ಶ್ರುತಿಮಲ್ಲೋಕೇಸರ್ವಮಾವೃತ್ಯತಿಷ್ಠತಿ ॥೧೪॥

ಪ॥ ಸರ್ವತಃ- ಪಾಣಿಪಾದಂ- ತತ್ ಸರ್ವತಃ- ಅಕ್ಷಿಶಿರೋಮುಖಂ । ಸರ್ವತಃ- ಶ್ರುತಿಮತ್- ಲೋಕೇ- ಸರ್ವಂ- ಆವೃತ್ಯ- ತಿಷ್ಠತಿ॥

ಅ॥ ತತ್- (ಶಂ) ಆಬ್ರಹ್ಮವು, (ರಾ) ಆಜೀವಾತ್ಮನ ಶುದ್ಧಸ್ವರೂಪವು. ಸರ್ವತಃ ಪಾಣಿಪಾದಂ- ಎಲ್ಲಿಯೂ ಕೈಕಾಲುಗಳುಳ್ಳದ್ದು, ಸರ್ವತೋಕ್ಷಿಶಿರೋಮುಖಂ- ಎಲ್ಲಿಯೂ

ಕಣ್ಣುಗಳನ್ನೂ ತಲೆಗಳನ್ನು ಮುಖಗಳನ್ನು ಉಳ್ಳದ್ದು, ಸರ್ವತಶ್ಶ್ರುತಿಮತ್- ಎಲ್ಲೆಲ್ಲಿಯೂ ಕಿವಿಯುಳ್ಳದ್ದು, ಲೋಕೆ - ಪ್ರಪಂಚದಲ್ಲಿ, ಸರ್ವಂ -ಸಮಸ್ತವನ್ನೂ, ಆವೃತ್ಯ- ವ್ಯಾಪಿಸಿಕೊಂಡು, ತಿಷ್ಠತಿ - ಇರುತ್ತದೆ. ||೧೩||

(ಶಂ || ಭಾ || ) ಬ್ರಹ್ಮವು ಅಸ್ತಿ- ಇರುತ್ತದೆ, ಎನ್ನುವದಕ್ಕೆ ಸಾಧ್ಯವಾಗಲಾರದೆನ್ನುವುದರಿಂದ ಅತ್ಯಂತವಾಗಿ ಬ್ರಹ್ಮಾಭಾವಪ್ರಸಂಗವೆ ಬರುವದೊ ಎಂಬಸಂದೇಹವು ಪ್ರಾಪ್ತವಾಗ ಬಹುದು.ಆದುದರಿಂದ ಸಮಸ್ತ ಪ್ರಾಣಿಗಳ ಅವಯವಗಳೆಂಬಉಪಾಧಿಗಳ ಮೂಲಕವಾಗಿ ಬ್ರಹ್ಮಅಸ್ತಿತ್ವವನ್ನು (ಬ್ರಹ್ಮವು ಇರುತ್ತದೆಂಬುವದನ್ನು) ತಿಳಿಸುತ ಹೇಳಿವಿವರಿಸಿರುವ ಸಂಶಯವನ್ನು ನಿರಾಕರಿಸುತ್ತಾನೆ. ಸಮಸ್ತ ಪ್ರಾಣಿಗಳ ಕರಣ (ಇಂದ್ರಿಯ) ಗಳೆಂಬ ಉಪಾಧಿಗಳಮೂಲಕವಾಗಿ ಕ್ಷೇತ್ರಜ್ಞನುಂಟೆನ್ನುವುದನ್ನೂ ಹಿಸಬಹುದು. ಪಾಣಿಪಾದಾದಿರೂಪದಿಂದ ಅನೇಕವಾಗಿರುವ ಉಪಾಧಿಯುಳ್ಳವನೆ ಕ್ಷೇತ್ರಜ್ಞನೆನಲ್ಪಡುವನು. ಕ್ಷೇತ್ರೋಪಾಧಿಗಳೆಂಬದಾಗಿ ಹೇಳಲ್ಪಡುವ ಧರ್ಮಗಳೆಲ್ಲವೂ ಮಿಥ್ಯೆ (ಸುಳ್ಳು)ಆಗಿದ್ದರೂ " ನಸತ್ತನ್ನಾಸದುಚ್ಯತೆ " ಎಂಬದಾಗಿ ಹಿಂದಿನ ಶ್ಲೋಕದಲ್ಲಿ ಹೇಳಿರುವ ಪ್ರಕಾರವಾಗಿ ತಿಳಿಯತಕ್ಕ ಬ್ರಹ್ಮಸ್ವರೂಪವನ್ನು ತಿಳದುಕೊಳ್ಳುವುದಕ್ಕಾಗಿ ಮಿಥ್ಯಾರೂಪಗಳಾದ ಕ್ಷೇತ್ರಧರ್ಮಗಳೆಲ್ಲವನ್ನೂ ಕ್ಷೇತ್ರಜ್ಞಧರ್ಮಗಳನ್ನಾಗಿ ಆರೋಪಿಸಿ ಅಂತಹ ಕ್ಷೇತ್ರಜ್ಞನವಾಸ್ತವಸ್ವರೂಪವುತಿಳಿದಕೂಡ್ಲೆ ಆಧರ್ಮಗಳೆಲ್ಲವೂಮಿಥ್ಯೆಯೆಂಬದಾಗಿ ನಿಷೇಧಿಸಲ್ಪಡುವದು. ಆವಾಗ ಬ್ರಹ್ಮಸ್ವರೂಪವು ಸ್ವಯಂ ಪ್ರಕಾಶವಾಗಿರುವದು. ಆದುದರಿಂದ ಇಲ್ಲಿಕ್ಷೇತ್ರಸ್ವರೂಪ ನಿರೂಪಣನಿಮಿತ್ತವಾಗಿಯೆ ಪಾಣಿಪಾದಾದಿಮಿಥ್ಯಾಸ್ವರೂಪವು ಕಲ್ಪಿಸಿನಿರೂಪಿಸಲ್ಪಡುವುದೆಂದರಿಯಬೇಕು. ಇದಕ್ಕೆ ಸಾಧಕವಾಗಿ" ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂಪ್ರಪಂಚ್ಯತೆ,,ಎಂಬದಾಗಿ ವೇದಾಂತ ಸಂಪ್ರದಾಯವನ್ನರಿತವರವಚನವೂ ಇರುವುದು. ಮೊದಲು ಪ್ರಪಂಚವಿರುವುದಾಗಿ ವ್ಯಾವಹಾರಿಕದಶೆಯಲ್ಲಿ ಕಲ್ಪಿಸಿಕೊಂಡು ಅನಂತರದಲ್ಲಿ ಗುರೂಪದೇಶದಿಂದ ತತ್ತ್ವಮಸ್ಯಾದಿ ಮಹಾವಾಕ್ಯಾರ್ಥಾನು ಭವಜ್ಞಾನಪ್ರಭಾವದಿಂದ ಸಮಸ್ತವು ಮಿಥ್ಯೆ ಎಂಬದಾಗಿ ಪರಮಾರ್ಥಜ್ಞಾನವು ಉಂಟಾಗಮಾಡಲ್ಪಡುವುದುಎಂಬದಾಗಿ ಈ ವಾಕ್ಯಾರ್ಥವು. ಆದುದರಿಂದ

ಸತ್ಯವಾದ ಬ್ರಹ್ಮಸ್ವರೂಪವನ್ನು ತಿಳಿಯುವುದಕ್ಕೆ ಸಾಧನವಾಗಿ ಮಿಥ್ಯೆಗಳಾದ ಅನೇಕಸ್ವರೂಪಗಳನ್ನು ಕಲ್ಪಿಸಿಕೊಂಡು ಅಂತಹ ಬ್ರಹ್ಮಸ್ವರೂಪಸಾಕ್ಷಾನುಭವಜ್ಞಾನಾನಂತರದಲ್ಲಿ ಬ್ರಹ್ಮವ್ಯತಿರಿಕ್ತಗಳೆಲ್ಲವೂ ಮಿಥ್ಯೆಯೆಂಬದಾಗಿ ಪರಿಹರಿಸಿಕೊಳ್ಳಬಹುದು. ಸರ್ವತ್ರಶರೀರದ ಸಮಸ್ತಾವಯವಗಳೆಂಬದಾಗಿ ಭಾವಿಸಲ್ಪಡುವ ಪಾಣಿಪಾದಾದಿಗಳುತಿಳಿಯತಕ್ಕ ವಸ್ತುವಿಗೆನಿಚಿತ್ರಶಕ್ತಿಯುಂಟೆಂದು ಹೇಳುವುದಕ್ಕೆ ಅನುರೂಪವಾಗಿ ಏರ್ಪಡಿಸಿಕೊಳ್ಳಲ್ಪಟ್ಟಿರುವುದರಿಂದ ತಿಳಿಯತಕ್ಕ ವಸ್ತುವಿನ ಕಲ್ಪಿತಗಳಾದ ಗುರ್ತುಗಳೆಂದರಿಯಬೇಕು. ಎಲ್ಲೆಲ್ಲಿಯೂ ಕಣ್ಣುಗಳು ಶಿರಸ್ಸುಗಳು ಮುಖಗಳು ಕಿವಿಗಳುಂಟಾಗಿ ಸಮಸ್ತವನ್ನು ವ್ಯಾಪಿಸಿರುವುದು. ಅಂತಹ ಉಪಾಧಿಯುಕ್ತವಾಗಿರುವಂತೆ ಯೆರ್ಪಡಿಸಿಕೊಳ್ಳಲ್ಪಟ್ಟಿರುವುದೆ ಬ್ರಹ್ಮವಸ್ತು ವೆಂಬದಾಗಿ ತಿಳಿಯಬೇಕು. ॥೧೩॥

( ಶ್ರೀ) ಆದರೆ. ಬ್ರಹ್ಮವುಸದಸದ್ವಿಲಕ್ಷಣವು, ಎನ್ನುವುದಾದರೆ ಸರ್ವಂಖಲ್ವಿದಂ ಬ್ರಹ್ಮ- ಬ್ರಹ್ಮೈವೇದಂ ಸರ್ವಂ " ಇತ್ಯಾದಿಶ್ರುತಿವ್ಯಾಕೋಪವುಂಟಾಗಲಾರದೊ ? ಈ ಶ್ರುತಿಗಳಲ್ಲಿ ಸರ್ವವಸ್ತುಗಳೂ ಬ್ರಹ್ಮವೆಂಬದಾಗಿ ಹೇಳಲ್ಪಡಲಿಲ್ಲವೊ ? ಆದುದರಿಂದ ಬ್ರಹ್ಮವು ಸದಸತ್ತುಗಳಲ್ಲಿ ಒಂದಾಗಿರಬೇಡವೊ ? ಎಂದರೆ " ಪರಾಸ್ಯಶಕ್ತಿರ್ವಿವಿಧೈವಶ್ರೂಯತೆಸ್ವಾಭಾವಿಕೀಜ್ಞಾನಬಲಕ್ರಿಯಾಚ ,,ಇತ್ಯಾದಿ ಶ್ರುತಿಗಳಲ್ಲಿ ಪರಬ್ರಹ್ಮವು ಅಚಿಂತ್ಯ ಶಕ್ತಿಯುಕ್ತವಾಗಿರುವುದೆಂದು ಪ್ರಸಿದ್ಧವಾಗಿರುವುದರಿಂದ ಉಪಾಧಿಯಿಂದ ಸದಸಚ್ಛಬ್ದವಾಚ್ಯವಾಗಿರುವುದೆಂದರಿಯಬೇಕು. ಸರ್ವಪ್ರಾಣಿಪ್ರವೃತ್ತಿಸಾಧನಗಳಾದ ಪಾಣಿಪಾದಾದಿರೂಪಗಳಾಗಿರುವ ಉಪಾಧಿಗಳಿಂದ ಸರ್ವವ್ಯವಹಾರಗಳಿಗೆ ಆಸ್ಪದವಾಗಿರುವುದೆಂದು ಭಾವವು. ... ... ॥೧೩॥

(ರಾ ॥ ಭಾ ॥)ಆತ್ಮಸ್ವರೂಪವು ಅಶರೀರವಾಗಿಯೂ ನಿರವಯವವಾಗಿಯೂ ಇಂದ್ರಿಯರಹಿತವಾಗಿಯೂ ಇರುವುದರಿಂದ ಅದಕ್ಕೆ ಪಾಣಿಪಾದ ಪ್ರಸಂಗವೇ ಇರುವುದಿಲ್ಲವು. ಮತ್ತುಅನೇಕ ಬಾಹೂದರಾದಿಗಳೊಡನೆ ಕೂಡಿರುವ ಪರಜೀವ ಪ್ರಕರಣವೂ ಇದಾಗಲಾರದು. ಆದುದರಿಂದಲೆ ಅನ್ಯರಿಂದ ಹೇಳಲ್ಪಟ್ಟ(ಜೀವಕರ್ಮಗಳಿಂದಲಾದರೂ ಸ್ವೇಚ್ಛೆಯಿಂದಲಾದರೂ ಗ್ರಹಿಸಲ್ಪಟ್ಟಪಾಣಿಪಾದಾದಿಗಳಿಂದ ವಿಶ್ವಾತ್ಮಕವಾ

ದ ಪರಬ್ರಹ್ಮಕ್ಕೆ ಸಂಬಂಧ ಹೇಳಲ್ಪಡುವುದೆಂಬ ಕಲ್ಪನೆಯೂ ನಿರಾಸವಾಡಲ್ಪಟ್ಟಿತು. ಕಿಂಚಪಾದಾದಿಗಳಲ್ಲಿ ಕೈಮೊದಲಾದ ಅವಯವಗೆಳು ಇರುವುದಕ್ಕಾಗಲಾರದಾದುದರಿಂದ ಸರ್ವತಃಪಾಣಿಪಾದಂ, ಎಂಬುವುದೂ ಘಟಿಸಲಾರದೆಂದರೆ? ಪರಿಶುದ್ಧಾತ್ಮನಿಗೆಪಾಣಿಪಾದಾದಿರಾಹಿತ್ಯವಿದ್ದರೂ ಅವುಗಳಿಂದುಂಟಾಗುವ ಶಕ್ತಿಯೊಗದಲ್ಲಿ ಶ್ರುತಿಪ್ರಮಾಣವಿರುವುದೆಂದು ಹೇಳುತ್ತಾರೆ. ತತ್ - ಆಜೀವಾತ್ಮನ ಶುದ್ಧಸ್ವರೂಪವು, ಸರ್ವತಃ ಪಾಣಿಪಾದಂ-ಎಲ್ಲೆಲ್ಲಿಯೂ ಕೈಕಾಲುಗಳುಳ್ಳದ್ದು, ಕೈಕಾಲುಗಳಿಂದ ಮಾಡತಕ್ಕ ಕೆಲಸಗಳನ್ನು ಕೈಕಾಲುಗಳಿಲ್ಲದೇನೆ ಮಾಡುವಂತಹಶಕ್ತಿಯುಳ್ಳದೆಂದರ್ಥವು. ಸರ್ವತೋಕ್ಷಿಶಿರೋಮುಖಂ - ಎಲ್ಲಿಯೂ ಕಣ್ಣುಗಳೂತಲೆಗಳೂ ಮುಖಗಳೂ ವುಳ್ಳದ್ದು, ಕಣ್ಣುಗಳು ಶಿರಸ್ಸುಗಳು ಮುಖಗಳು, ಅವುಗಳಿಂದಮಾಡತಕ್ಕ ಕಾರ್ಯಗಳನ್ನು ಅವುಗಳಿಲ್ಲದೇನೆ ಮಾಡುವಂಥಾ ಶಕ್ತಿಯುಳ್ಳದ್ದು. ಸರ್ವತಶ್ಶ್ರುತಿಮತ್-ಎಲ್ಲಿಯೂ ಕಿವಿಯುಳ್ಳದ್ದು, ಕಿವಿಗಳಿಂದ ಮಾಡತಕ್ಕ ಕಾರ್ಯವನ್ನು ಆ ಕಿವಿಯಿಲ್ಲದೇನೆ ಮಾಡುವಂಥಾಶಕ್ತಿಯುಳ್ಳದ್ದು,ಲೋಕೆಸರ್ವಮಾವೃತ್ಯತಿಷ್ಠತಿ-ಲೋಕದಲ್ಲಿ ಯಾವ ಯಾವ ವಸ್ತುಗಳು ಇರುವುವೋಅವೆಲ್ಲವನ್ನೂ ಪೂರ್ಣವಾಗಿ ಶುದ್ಧದಶೆಯಲ್ಲಿ ಧರ್ಮಭೂತಜ್ಞಾನದಿಂದ ವ್ಯಾಪಿಸಿಕೊಂಡಿರುವುದು. ಆದರೆ " ಅಪಾಣಿಪಾದೊ ಜವನೊಗ್ರಹೀತಾಪಶ್ಯತ್ಯಚಕ್ಷುಸ್ಸಶೃಣೋತ್ಯಕರ್ಣಃ " ಎಂಬೀಶ್ರುತಿಯುಪರಮಾತ್ಮ ಪರವಾಗಿರುವಲ್ಲಿ ಈ ವಾಕ್ಯದೊಡನೆ ಸಮಾನಾರ್ಥಕವಾದ ಈ ಶ್ಲೋಕಕ್ಕೆ ಜೀವಪರವಾಗಿ ಅರ್ಥವನ್ನು ಹೇಳಬಹುದೋ?ಜೀವನಿಗೂ ಪಾಣಿ ಪಾದಾದಿಗಳಿಲ್ಲದೇನೆ ಅವುಗಳಿಂದುಂಟಾಗುವಕಾರ್ಯಗಳುಂಟೆನ್ನುವುದಕ್ಕೆಪ್ರಮಾಣಗಳುಂಟೋ? ಎಂದರೆ ಅದಕ್ಕುತ್ತರವು " ಅಪಾಣಿಪಾದ " ಇತ್ಯಾದಿ ಶ್ರುತಿಪ್ರಮಾಣದಿಂದ ಪರಮಾತ್ಮನಿಗೆ ಈಶಕ್ತಿಗಳುಂಟೆಂದುಸಿದ್ಧವಾದಮೇಲೆ"ನಿರಂಜನಃ ಪರಮಂಸಾಮ್ಯಮುಪೈತಿ " ಎಂಬ ಶ್ರುತಿಯಿಂದ ಜೀವಾತ್ಮನಿಗೆ ಮುಕ್ತಿದಶೆಯಲ್ಲಿ ಪರಮಾತ್ಮನೊಡನೆ ಪರಮಸಾಮ್ಯವು ಕಂಠೋಕ್ತವಾಗಿ ಹೇಳಲ್ಪಟ್ಟಿರುವುದರಿಂದ ಈ ಶಕ್ತಿಗಳೆಲ್ಲವೂ ಜೀವಾತ್ಮನಿಗೂ ಪರಿಶುದ್ಧದಶೆಯಲ್ಲುಂಟೆಂದು ಶ್ರುತಿಸಿದ್ಧವಾಗಿಯೆಇರುವುದು. ಆದುದರಿಂದಲೆ ಅಪಾಣಿಪಾದ ಶ್ರುತಿಯು ಇಲ್ಲಿ ಪರಿಶುದ್ಧಾತ್ಮಸ್ವರೂಪಪರವಾಗಿರು

ವುದು. ಮತ್ತು ಈಶಾಸ್ತ್ರದಲ್ಲಿಯೇ " ಇದಂಜ್ಞಾನಮುಪಾಶ್ರಿತ್ಯಮಮ ಸಾಧರ್ಮ್ಯಮಾಗತಾಃ ,, (೧೪॥೨॥) ಎಂಬದಾಗಿ ಮುಕ್ತದಶೆಯಲ್ಲಿ ಜೀವಾತ್ಮರಿಗೆ ಪರಮಾತ್ಮಸಮಾನಧರ್ಮವತ್ತ್ವವೂ ಪಠಿತವಾಗಿರುವುದು. ... ... ॥೧೩॥

(ಗೀ ॥ ಎ) ಮತ್ತೂ ಆ ಕ್ಷೇತ್ರಪ್ರೇರಕನ ಸಾಮರ್ಥ್ಯವನ್ನು ಐದು ಶ್ಲೋಕಗಳಿಂದ ಹೇಳುತ್ತಾನೆ. ತತ್-ಆಕ್ಷೇತ್ರಪ್ರೆರಕನಾದ ಪರಬ್ರಹ್ಮವು, ಸರ್ವತಃ- ಸಕಲಾವಯವಗಳಲ್ಲಿಯೂ, ಪಾಣಿಪಾದಂ - ಕೈಕಾಲುಮೊದಲಾದ ಶಕ್ತಿಯುಳ್ಳದ್ದು, ಎಂದರೆ ಒಂದೊಂದು ಅವಯವವೂತನಿಗಿಂತಲೂ ಅನ್ಯವಾದ ಒಂದೊಂದುಅವಯವದಶಕ್ತಿಯುಳ್ಳದೆಂದರ್ಥವು. ಅದುಯಾವದರಂತೆಎಂದರೆಃ ಬಿಳಿಪುಕಪ್ಪು ಆದಕೇಶಗಳ ಅವತಾರವಾದ ಬಲರಾಮಕೃಷ್ಣರಲ್ಲಿಪಾಣಿಪಾದಾದ್ಯವಯಶಕ್ತಿಗಳು ಕಾಣಲ್ಪಡುವಂತೆ ಇಲ್ಲಿಯೂ ತಿಳಿಯಬೇಕು. ಸರ್ವತೋಕ್ಷಿಶಿರೋಮುಖಂ - ಸರ್ವಾವಯವಗಳಲ್ಲಿಯೂ ಕಿವಿಯು ಶಿರಸ್ಸು ಮುಖವು ಇವುಗಳಶಕ್ತಿಯುಳ್ಳದ್ದು, ಸರ್ವತಶ್ಶ್ರುತಿಮತ್- ಸರ್ವಾವಯವಗಳಲ್ಲಿಯೂ ಶ್ರೋತ್ರೇಂದ್ರಿಯಶಕ್ತಿಯುಳ್ಳದ್ದು. ಇದರತಾತ್ಪರ್ಯವೆನೆಂದರೆಃ ಸಕಲೇಂದ್ರಿಗಳವಿಷಯಗಳನ್ನೂ ಕರ್ಮಗಳನ್ನೂಸಕಲೇಂದ್ರಿಯಗಳಿಂದಲೂ ತಿಳಿಯುವುದೂ ಮಾಡುವುದೂ ಆದದ್ದು. ಲೋಕೆ - ಪ್ರಪಂಚದಲ್ಲಿ, ಸರ್ವಂ - ಸಕಲವಸ್ತುವನ್ನು, ಆವೃತ್ಯ - ವ್ಯಾಪಿಸಿ, ತಿಷ್ಠತಿ- ಇರುವುದು. (ಅಥವಾ) ಆ ಪರಮಾತ್ಮನು ಸಕಲಲೋಕಗಳಲ್ಲಿಯೂ ಕಣ್ಣು ತಲೆ ಮುಖವು ಕಿವಿ ಮೊದಲಾದ ಅವಯಗಳೊಡನೆ ಸಮಸ್ತವನ್ನೂ ವ್ಯಾಪಿಸಿಕೊಂಡಿರುತ್ತಾನೆ. ಎಂದರೆ ಆ ಪರಮಾತ್ಮನು ಅಣು (ಸೂಕ್ಷ್ಮ) ವಾದಅವಯವಗಳಿಗಿಂತಲೂ ಸೂಕ್ಷ್ಮವಾದ ಪಾಣಿಪಾದಾದ್ಯವಯವಗಳೊಡನೆ ಕೂಡಿರುವ ಅನಂತರೂಪಗಳಿಂದ ಸರ್ವತ್ರ ಇರುತ್ತಾ ವ್ಯಾಪ್ತರೂಪದಿಂದಲೂಸಮಸ್ತವನ್ನು ವ್ಯಾಪಿಸಿರುತ್ತಾನೆಂದು ಮತ್ತೊಂದರ್ಥವನ್ನೂ ತಿಳಿಯಬೇಕು. ... ॥೧೪॥

ಶ್ಲೋ ॥ ಸರ್ವೇಂದ್ರಿಯಗುಣಾಭಾಸಂಸರ್ವೇಂದ್ರಿಯವಿವ
ರ್ಜಿತಂ । ಅಸಕ್ತಂಸರ್ವಭೃಚ್ಚೈವನಿರ್ಗುಣಂಗುಣ
ಭೋಕ್ತೃಚ ॥ ... ... ॥೧೪॥

ಪ॥ ಸರ್ವೇಂದ್ರಿಯ ಗುಣಾಭಾಸಂ-ಸರ್ವೇಂದ್ರಿಯವಿವರ್ಜಿತಂ । ಅಸಕ್ತಂ-ಸರ್ವಭೃತ್-ಚ-ಏವ-ನಿರ್ಗುಣಂ-ಗುಣಭೋಕ್ತೃ-ಚ ॥

ಅ॥ ತತ್ ಜ್ಞೇಯಂ- ಆ ತಿಳಿಯತಕ್ಕ ವಸ್ತುವು, ಸರ್ವೇಂದ್ರಿಯ ಗುಣಾಭಾಸಂ- (ರಾ) ಸಮಸ್ತಗಳಾದ ಇಂದ್ರಿಯ ವೃತ್ತಿಗಳಿಂದಲೂ ವಿಷಯ ಜ್ಞಾನವುಳ್ಳದ್ದು, ಎಂದರೆ ಇಂದ್ರಿಯ ವೃತ್ತಿಗಳಿಂದಲೂ ವಿಷಯಗಳನ್ನು ತಿಳಿದುಕೊಳ್ಳುವ ಸಾಮರ್ಥ್ಯವುಳ್ಳದ್ದೆಂದರ್ಥವು. (ಶಂ) ಜ್ಞಾನಕರ್ಮೇಂದ್ರಿಯಗಳು, ಮನಸ್ಸು, ಬುದ್ಧಿ, ಇವುಗಳ ಕಾರ್ಯವಾದ ಸಂಕಲ್ಪವು, ನಿಶ್ಚಯವು, ಉದ್ದೇಶವು, ಶ್ರವಣವು, ಮಾತನಾಡುವಿಕೆಯೇ ಮೊದಲಾದವುಗಳಿಂದ ಪ್ರವರ್ತಿಸಿರುವಂತೆ ಕಾಣಲ್ಪಡುವುದು. (ಮ॥ ಗೀ॥ ವಿ॥) ಬ್ರಹ್ಮವು ಸಕಲೇಂದ್ರಿಯಗಳನ್ನೂ ವಿಷಯಗಳನ್ನೂ ಪ್ರಕಾಶಪಡಿಸುವುದು. ಸರ್ವೇಂದ್ರಿಯ ವಿವರ್ಜಿತಂ-(ರಾ) ಸ್ವಭಾವದಿಂದ ಸರ್ವೇಂದ್ರಿಯಗಳಿಂದಲೂ ಬಿಡಲ್ಪಟ್ಟದ್ದು, ಇಂದ್ರಿಯವೃತ್ತಿಗಳಿಲ್ಲದೇ ಇದ್ದಾಗ್ಯೂ ತಾನಾಗಿಯೇ ಸಮಸ್ತ ವಸ್ತುಗಳನ್ನು ತಿಳಿದುಕೊಳ್ಳುವಂಥಾದ್ದೆಂದರ್ಥವು. (ಶಂ॥ ಶ್ರೀ) ಇಂದ್ರಿಯ ಶೂನ್ಯವಾದದ್ದು, ಎಂದರೆ "ಅಪಾಣಿ ಪಾದೋಜವನೋಗ್ರಹೀತಾ„ಎಂಬ ಶ್ರುತಿಯಿಂದ ಕೈಕಾಲುಗಳಿಲ್ಲವೆಂದು ಯೋರ್ಪಡುವುದು. ಗ್ರಹಿಸುವುದೂ ನಡಿಯುವುದೂ ಮೊದಲಾದ ವ್ಯಾಪಾರಗಳನ್ನು ಹೇಳಿರುವ ಶ್ರುತಿಯು ಉಪಾಧಿಯನ್ನನುಸರಿಸಿ ಹೇಳಿರುವುದಲ್ಲದೆ ವಾಸ್ತವವಾಗಿ ಗ್ರಹಣಗಮನಾದಿಗಳು ಬ್ರಹ್ಮಕ್ಕಿಲ್ಲವು. (ಗೀ॥ ವಿ) ಪ್ರಾಕೃತಗಳಾಗಿಯೂ ಭಿನ್ನಗಳಾಗಿಯೂ ಇರುವ ಇಂದ್ರಿಯಗಳಿಂದ ರಹಿತವಾದದ್ದು. ಅಸಕ್ತಂ-ಯಾವದರಲ್ಲಿಯೂ ಅಂಟದೇ ಇರುವಂಥಾದ್ದು, (ರಾ) ಸ್ವಭಾವದಿಂದ ದೇವಾದಿ ಶರೀರ ಸಂಬಂಧವಿಲ್ಲದ್ದು. ಸರ್ವಭೃತ್ ಚ ಏವ- ಸಕಲಕ್ಕೂ ಆಧಾರವಾದದ್ದು, (ರಾ) ದೇವಾದಿ ದೇಹಗಳನ್ನು ಧರಿಸುವದುವುದಕ್ಕೆ ಸಮರ್ಥವಾದದ್ದು, ನಿರ್ಗುಣಂ-ಸತ್ವಾದಿ ಗುಣಶೂನ್ಯವಾದದ್ದು, (ರಾ) ಸ್ವಭಾವದಿಂದ ಸತ್ವಾದಿ ಗುಣ ಶೂನ್ಯವಾದದ್ದು. ಗುಣಭೋಕ್ತೃ ಚ-ಸತ್ವಾದಿ ಗುಣಗಳ ಭೋಗದಲ್ಲಿ ಸಮರ್ಥವಾದದ್ದು;(ಶಂ) ನಿರ್ಗುಣಂ ಗುಣಭೋಕ್ತೃ ಚ- ಸತ್ವಾದಿಗುಣಗಳಿಲ್ಲದ ವಸ್ತುವಾಗಿದ್ದರೂ ಆಗುಣಗಳನ್ನು ಅನುಭವಿಸುವಂತೆ ಕಾಣುವುದು. (ಗೀ॥ ವಿ॥) ಗುಣ

ಭೋಕ್ತೃಚ-ಸಮಸ್ತ ಕಲ್ಯಾಣ ಗುಣಗಳುಳ್ಳವನು. ॥೧೪॥

ಶ್ಲೋ॥ ಬಹಿರಂತಶ್ಚಭೂತಾನಾಮಚರಂಚರಮೇವಚ।
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂಚಾಂತಿಕೇಚ
ತತ್ ॥ ... .. ... ॥೧೫॥

ಪ॥ ಬಹಿಃ-ಅಂತಃ-ಚ-ಭೂತಾನಾಂ- ಅಚರಂ-ಚರಂ-ಏವ-ಚ । ಸೂಕ್ಷ್ಮತ್ವಾತ್-ತತ್-ಅವಿಜ್ಞೇಯಂ-ದೂರಸ್ಥಂ-ಚ-ಅಂತಿಕೇ-ಚ-ತತ್ ॥

ಅ॥ ಭೂತಾನಾಂಬಹಿಃ-ಚರಾಚರ ಭೂತಗಳ ಹೊರಗಿನ ಪ್ರದೇಶಗಳಲ್ಲಿಯೂ, (ರಾ) ಪೃಥಿವ್ಯಾದಿ ಭೂತಗಳನ್ನು ಬಿಟ್ಟು ಶರೀರವಿಲ್ಲದೆ ಹೊರಗಿರುವುದು, ಅಂತಶ್ಚ-ಒಳಗೆಯೂ ಇರುವಂತಾದ್ದು, (ಶಂ) ಬಹಿರಂತಶ್ಚ-ಹೊರಗೆಯೂ ಒಳಗೆಯೂ ಮಧ್ಯದಲ್ಲಿಯೂ ಇರುವುದು, ಚರಾಚರವಾದ್ದರಿಂದ ಮಧ್ಯವು ಸೇರಿಸಲ್ಪಟ್ಟಿತು. ಅಚರಂ-ಸ್ವಭಾವದಿಂದ ಸಂಚರಿಸದ ವಸ್ತುವು, (ಗೀ॥ ವಿ) ಏಕರೂಪವಾದ ಸ್ವಭಾವಮುಳ್ಳದ್ದು. ಚರಮೇವಚ-ಜಂಗಮವಾದದ್ದು.(ಸಂಚರಿಸತಕ್ಕದ್ದು.) (ರಾ) ದೇಹ ಪರಿಗ್ರಹಮುಳ್ಳ ಬಂಧ ದಶೆಯಲ್ಲಿ ಸಂಚರಿಸುವಂತಾದ್ದು. (ಗೀ॥ ವಿ) ಎಲ್ಲೆಲ್ಲಿಯೂ ಸಂಚರಿಸತಕ್ಕದ್ದು. ಸೂಕ್ಷ್ಮತ್ವಾತ್ತದವಿಜ್ಞೇಯಂ- (ಶಂ) ಆಕಾಶದಂತೆ ಸೂಕ್ಷ್ಮವಾಗಿರುವುದರಿಂದ ಅಜ್ಞಾನಿಗಳಿಂದ ತಿಳಿಯಲ್ಪಡದೇ ಇರತಕ್ಕದ್ದು. (ರಾ) ಈ ಪ್ರಕಾರವಾಗಿ ಸರ್ವಶಕ್ತಿ ಯುಕ್ತವಾಗಿಯೂ ಸರ್ವಜ್ಞವಾಗಿಯು ಇರುವ ಆ ಜೀವಾತ್ಮ ವಸ್ತುವು ಈ ಶರೀರದಲ್ಲಿದ್ದರೂ ಸೂಕ್ಷ್ಮವಾಗಿರುವುದರಿಂದ ದೇಹಕ್ಕಿಂತಲೂ ಭಿನ್ನವಾಗಿ ಸಂಸಾರಿಗಳಿಂದ ತಿಳಿಯಲ್ಪಡತಕ್ಕದ್ದಲ್ಲವಾದದ್ದು. (ಗೀ॥ ವಿ॥) ಸೂಕ್ಷ್ಮವಾಗಿರುವುದರಿಂದ ಇಂದ್ರಿಯಗಳಿಗೆ ಗೋಚರವಲ್ಲದ್ದು. ತದ್ದೂರಸ್ಥಂಚ- ರಾ ಅಮಾನಿತ್ವಾದಿ ಗುಣಗಳಿಲ್ಲದವರಾಗಿಯೂ ವಿಪರೀತ ಗುಣಗಳಿಂದೊಪ್ಪಿದವರಾಗಿಯೂ ಇರುವ ಚೇತನರಿಗೆ ತಮ್ಮ ತಮ್ಮಗಳ ದೇಹದಲ್ಲಿಯೇ ಇದ್ದರೂ ಅತಿದೂರಸ್ಥವಾಗಿರುವುದು. ತತ್-ಅಂತಿಕೇಚ-(ರಾ) ಆ ಪ್ರಕಾರವೆ ಅಮಾನಿತ್ವಾದಿ ಗುಣಗಳುಳ್ಳವರಿಗೆ ಅತಿ ಸಮೀಪಸ್ಥವಾಗಿರುವುದು. (ಶಂ) ದೂರಸ್ಥಂಚಾಂತಿಕೇಚತತ್-ಅನೇಕ ಕೋಟಿ ಸಂವತ್ಸರಗಳಿಂದಲಾದರೂ ಶಮದಮಾದಿ ಗುಣಗಳೇನು ಶಾಸ್ತ್ರಾರ್ಥ ವಿಶ್ವಾಸವೇನು, ಗುರೂಪದೇಶಗ

ಳೇನು, ಅವುಗಳಿಲ್ಲದ ಅಜ್ಞಾನಿಗಳಿಂದ ಹೊಂದಲ್ಪಡಲಾರದಾದುದರಿಂದ ಅಂತವರ ದೃಷ್ಟಿಯಿಂದ ದೂರಸ್ಥವಾಗಿರುವುದು. ಜ್ಞಾನಿಗಳಿಗೆ ಸವಿಾಪಸ್ಥವಾಗಿರುವುದು ಆ ಬ್ರಹ್ಮವು. (ಶ್ರೀ) ಆ ಬ್ರಹ್ಮವು "ತದೇಜತಿತನ್ನೈಜತಿತದ್ದೂರೇತದ್ವಂದತಿಕೆ।ತದಂತರಸ್ಯ ಸರ್ವಸ್ಯ ತದುಸರ್ವಸ್ಯಾಸ್ಯಬಾಹ್ಯತಃ,, ಎಂಬ ಈಶಾವಾಸ್ಯಶ್ರುತಿಯಂತೆ ಧ್ಯಾನರಹಿತರಾದವರಿಗೆ ದೂರದಲ್ಲಿದ್ದರೂ ಧ್ಯಾನಿಸುವಂತವರಿಗೆ ಸವಿಾಪದಲ್ಲಿರುವುದು. (ಬ್ರಹ್ಮವು ನಿಶ್ಚಲವಾದದ್ದಾದರೂ ಚಲಿಸುವಂತೆ ಕಾಣುವುದು. ಅಜ್ಞಾನಿಗಳಿಗೆ ದೂರವಾದದ್ದು, ಜ್ಞಾನಿಗಳಿಗೆ ಅತ್ಯಂತ ಸವಿಾಪದಲ್ಲಿರುವುದು. ನಾಮರೂಪಕ್ರಿಯಾ ಸ್ವರೂಪವಾದ ಸರ್ವಜಗತ್ತಿಗೂ ಅನ್ತರ್ಬಹಿಶ್ಚ ಸರ್ವವ್ಯಾಪಿಯಾಗಿರುವುದೆಂದು ಈ ಶ್ರುತ್ಯರ್ಥವು) (ಗೀ॥ವಿ) ಬ್ರಹ್ಮವು ಯೆಲ್ಲೆಲ್ಲಿಯೂ ಇರುವುದರಿಂದ ದೂರದಲ್ಲಿಯೂ ಇರುವುದು ಸವಿಾಪದಲ್ಲಿಯೂ, ಇರುವುದು. ... ... ॥೧೫॥

ಶ್ಲೋ॥ ಅವಿಭಕ್ತಂಚಭೂತೇಷುವಿಭಕ್ತಮಿವಚಸ್ಥಿತಂ।

ಪ॥ ಅವಿಭಕ್ತಂ-ಚ-ಭೂತೇಷು-ವಿಭಕ್ತಂ-ಇವ-ಚ-ಸ್ಥಿತಂ ॥

(ಅ॥ ರಾ॥) ಭೂತೇಷು-ಸರ್ವಭೂತಗಳಲ್ಲಿಯೂ, ಸ್ಥಿತಂ-ಇರುವಂಥಾ ಆತ್ಮವಸ್ತುವು, ಅವಿಭಕ್ತಂಚ - ಜ್ಞಾತೃತ್ವೈಕಾಕಾರವಾಗಿರುವುದರಿಂದ ವಿಭಾಗ ಮಾಡಲ್ಪಡದೆ ಇರುವುದು, ವಿಭಕ್ತಮಿವಚಸ್ಥಿತಂ-ಅಜ್ಞಾನಿಗಳಿಗೆ ಇವನು ದೇವನು ಇವನು ಮನುಷ್ಯನು ಎಂಬದಾಗಿ ವಿಭಕ್ತವಾಗಿರುವಂತೆ ಕಾಣುವುದು. ಇವ ಎಂಬೀಪದದಿಂದ ದೇವತ್ವಾದ್ಯಾಕಾರಗಳು ಶರೀರಗತಗಳಾಗಿರುವುದರಿಂದಲೂ ಆತ್ಮನಲ್ಲಿ ಆ ಆಕಾರವಿಲ್ಲವಾದುದರಿಂದಲೂ ಅಂತಹ ದೇವತ್ವಮನುಷ್ಯತ್ವಾದ್ಯಾಕಾರಗಳಿಂದುಂಟಾದವಿಭಾಗವು ವಾಸ್ತವವಲ್ಲವೆಂಬದಾಗಿತೋರುವುದು. ಈ ಅಧ್ಯಾಯಾರಂಭದಲ್ಲಿಯೂ " ಏತದ್ಯೋವೇತ್ತಿತಂಪ್ರಾಹುಃ ಕ್ಷೇತ್ರಜ್ಞಇತಿತದ್ವಿದಃ,, ಎಂಬದಾಗಿ ಕ್ಷೇತ್ರಕ್ಕಿಂತಲೂ ವೇದಿತಾ ಆದ (ತಿಳಿಯುತಕ್ಕವಸ್ತುವಾದ) ಕ್ಷೇತ್ರಜ್ಞನು ಭಿನ್ನನೆಂದರಿಯ ಬೇಕೆಂದು ಸಾಧಿಸಿದ್ದಾರೆ. ... ... ... ... ॥೧೬॥

ಶ್ಲೋ॥ ಭೂತಭರ್ತೃಚತಜ್ಜ್ಞೇಯಂಗ್ರಸಿಷ್ಣುಪ್ರಭವಿಷ್ಣುಚ॥ ... ... ... ॥೧೬॥

ಪ॥ ಭೂತಭರ್ತೃ-ಚ-ತತ್-ಜ್ಞೇಯಂ-ಗ್ರಸಿಷ್ಣು-ಪ್ರಭವಿಷ್ಣು-ಚ ॥

(ಅ॥ ರಾ॥) ಈಗ ಅನ್ನು ಕೆಲವುಪ್ರಕಾರಗಳಿಂದದೇಹಕ್ಕಿಂತಲೂ ಆತ್ಮನನ್ನು ಭಿನ್ನನೆಂದರಿಯಬಹು ದೆನ್ನುತ್ತಾರೆ. ಭೂತಭರ್ತೃಚ ತತ್ ಜ್ಞೇಯಂ- ದೇಹರೂಪವಾಗಿ ಸೇರಿರುವ ಪೃಥಿವ್ಯಾದಿ ಭೂತಗಳನ್ನು ಭರಣಮಾಡುವುದರಿಂದಲೂ (ಭರಿಸಲ್ಪಡುವ ದೇಹರೂಪವಾಗಿರುವಭೂತಗಳಿಗಿಂತಲೂ ಭರಿಸುವ ಆ ಆತ್ಮವಸ್ತುವು) ಭಿನ್ನವಾಗಿ ತಿಳಿಯಲ್ಪಡತಕ್ಕದ್ದಾಗಿರುವುದು. ಗ್ರಸಿಷ್ಣುಚತಜ್ಜ್ಞೇಯಂ- ಆಪ್ರಕಾರವೇಪೃಥಿವ್ಯಾದಿ ಭೂತಪರಿಣಾಮಗಳಾದಅನ್ನಾದಿಗಳನ್ನು ಗ್ರಹಿಸುವಂತಾದ್ದು. ಇಲ್ಲಿ ಭಕ್ಷಿಸಲ್ಪಡುವಅನ್ನಾದಿರೂಪಗಳಾದ ಪೃಥಿವ್ಯಾದಿ ಭೂತಗಳಿಗಿಂತಲೂ ಅವುಗಳನ್ನು ಭೋಜನ ಮಾಡುವಂತಹ ಆತ್ಮವಸ್ತುವು ಭಿನ್ನವಾಗಿರುವುದೆಂದರಿಯಬಹುದಲ್ಲವೆ. ಪ್ರಭವಿಷ್ಣುಚತತ್ ಜ್ಞೇಯಂ- ಮಲಾದಿ ರೂಪಗಳಿಂದ ಪರಿಣಮಿಸಿರುವ ಪೂರ್ವದಲ್ಲಿ ಸ್ವೀಕೃತವಾದಅನ್ನಾದಿಗಳನ್ನು ರೇತೋಗರ್ಭಾದಿ ರೂಪಗಳಿಂದ ಹೊರಪಡಿಸುವುದರಿಂದಲೂ (ಹೊರಪಡಿಸಲ್ಪಡುವ ಭೂತಗಳಿಗಿಂತಲೂಹೊರಪಡಿಸುವ ಆತ್ಮವಸ್ತುವು) ಭಿನ್ನವೆಂದರಿಯಲ್ಪಡುವುದಷ್ಟೆ. ಆದರೆ ಅನ್ನಾದಿಗ್ರಾಸಸ್ವೀಕಾರವು ಶರೀರದಿಂದಲೆ ಮಾಡಲ್ಪಡುವಂತೆ ಪ್ರತ್ಯಕ್ಷವಾಗಿ ಕಂಡುಬರುತ್ತದೆ. ಮತ್ತು ಶರೀರೇಂದ್ರಿಯಾದಿಗಳಿಲ್ಲದ ನಿರವಯುವವಸ್ತುವಿಗೆ ಗ್ರಾಸ ಸ್ವೀಕಾರವನ್ನು ಯೆಲ್ಲಿಯೂ ನೋಡಲಿಲ್ಲವಾದ್ದರಿಂದ ಗ್ರಾಸಸ್ವೀಕಾರಾದಿಗಳನ್ನು ಆತ್ಮ ಧರ್ಮವನ್ನಾಗಿ ಹೇಳುವುದು ಉಚಿತವೊ? ಎಂದರೆ ಆತ್ಮವಿಲ್ಲದ ಮೃತ ಶರೀರದಲ್ಲಿ ಗ್ರಸನಪ್ರಭವಾದಿಗಳು ಕಂಡುಬರುವುದಿಲ್ಲವಾದುದರಿಂದ ಕೇವಲ ಶರೀರ ಕಾರ್ಯಗಳವುಗಳೆಂದ ಹೇಳಕೂಡದು. ಆದುದರಿಂದ ಆತ್ಮ ಧರ್ಮಗಳೆಂತಲೆ ಹೇಳಲ್ಪಡುವುದು॥ ॥೧೬॥

(ಶಂ॥ ಭಾ॥) ಜ್ಞೇಯವಾದ ವಸ್ತುವು ಇರುವು ದೆನ್ನುವುದಕ್ಕೆ ಕಾರಣಾಂತರವನ್ನೂ ಹೇಳುತ್ತಾರೆ. ಸ್ವಾಭಾವಿಕವಾಗಿ ಬ್ರಹ್ಮವು ಆಕಾಶದಂತೆ ಒಂದಾಗಿದ್ದರೂ ಅಜ್ಞಾನಿಗಳಿಂದ ಪ್ರತಿಶರೀರಗಳಲ್ಲಿಯೂ ಭಿನ್ನಭಿನ್ನವಾಗಿರುವಂತೆ ಭಾವಿಸಲ್ಪಡುವುದು. ಸರ್ಪತ್ವ ಭ್ರಾಂತಿಯುಂಟಾಗುವುದಕ್ಕೆ. (ಅದು ನಿಂತಿರುವುದಕ್ಕೂ ಪುನಶ್ಚ ಅದುಹೋ

ಗುವುದಕ್ಕೂ ಹೇಗೆ ಯಾವ ಪ್ರಕಾರವಾಗಿ ಆಧಾರವಾಗಿರುವುದೋ ಆಪ್ರಕಾರವೆ ಬ್ರಹ್ಮವು ಈ ಸಮಸ್ತ ಪ್ರಪಂಚ ಸೃಷ್ಟಿ ಸ್ಥಿತಿಲಯ ಗಳಿಗಾಧಾರವಾಗಿರುವುದು. ... ||೧೬||

(ಗೀ|| ವಿ||) ಜ್ಞೇಯಂ- ಅನ್ಯರಿಂದ ತಿಳಿಯುವುದಕ್ಕೆ ಯೋಗ್ಯ ವಾದ, ತತ್- ಆಪರಬ್ರಹ್ಮವು, ಭೂತೇಷು- ಪ್ರಾಣಿಗಳಲ್ಲಿ, ಅವಿಭಕ್ತಂಚ- ವಿಯೋಗವಿಲ್ಲದೆ ಇರುವಂಥಾದ್ದಾಗಿರುವುದು. ವಿಭಕ್ತಮಿವ ಚಸ್ಥಿತಂ- ಅಜ್ಞಾನಿಗಳಿಗೆ ವಿಯೋಗಯುಕ್ತನೊ ಎಂಬಂತೆ ಕಾಣುವಂಥಾದ್ದು. ಭೂತಭರ್ತೃಚ- ಭೂತಗಳ ಧಾರಣ ಪೋಷಣವನ್ನು ಮಾಡುವಂಥಾದ್ದು. ಗ್ರಸಿಷ್ಣು- ಪ್ರಲಯಕಾಲದಲ್ಲಿ ಸರ್ವ ಸಂಹಾರವನ್ನು ಮಾಡುವಂಥಾ ಸ್ವಭಾವವುಳ್ಳದ್ದು. ಪ್ರಭವಿಷ್ಣುಚ- ಸೃಷ್ಟಿಕಾಲ ದಲ್ಲಿ ಸಮಸ್ತವನ್ನು ಹುಟ್ಟಿಸುವಂಥಾ ಸ್ವಭಾವವುಳ್ಳದ್ದು. ||೧೭||

ಶ್ಲೋ|| ಜ್ಯೋತಿಷಾಮಪಿತಜ್ಜ್ಯೋತಿಸ್ತಮಸಃಪರಮು
ಚ್ಯತೇ | ಜ್ಞಾನಂಜ್ಞೇಯಂಜ್ಞಾನಗಮ್ಯಂಹೃದಿಸರ್ವಸ್ಯ
ವಿಷ್ಠಿತಂ || ... |೧೭||

ಪ||ಜ್ಯೋತಿಷಾಂ- ಅಪಿ- ತತ್- ಜ್ಯೋತಿಃ-ತಮಸಃ- ಪರಂ- ಉಚ್ಯತೆ | ಜ್ಞಾನಂ- ಜ್ಞೇಯಂ- ಜ್ಞಾನಗಮ್ಯಂ- ಹೃದಿ- ಸರ್ವಸ್ಯ- ವಿಷ್ಠಿತಂ ||

ಅ|| (ರಾ) ಜ್ಯೋತಿಷಾಮಪಿ- ದೀಪಾದಿತ್ಯ ಮಣಿ ಗಳೇ ಮೊದಲಾದ ಪ್ರಕಾಶ ವಸ್ತುಗಳಿಗೂ, ಜ್ಯೋತಿಃ- ಪ್ರಕಾಶಕವಾದ ಜ್ಯೋತಿಸ್ಸಾಗಿಯೂ,ದೀಪಾದಿತ್ಯಾದಿಗಳೇನು ಸ್ವಭಾವದಿಗಳೇನು ಈವೆಲ್ಲವನ್ನು ಆತ್ಮವಸ್ತುವಿನ ಪ್ರಭಾರೂಪವಾದ ಜ್ಞಾನವಪ್ರಕಾಶ ಪಡಿಸುವುದು.ದೀಪಾದಿತ್ಯಾದಿಗಳು ಜ್ಞಾನ ಸಹಕಾರಿಯಾದ ವಿಷಯೇಂದ್ರಿಯಸನ್ನಿಕರ್ಷ ( ಸಾಮೀಪ್ಯ ) ವನ್ನು ವಿರೋಧಿಸುವ ಅಂಧಕಾರವನ್ನು ಹೋಗಲಾಡಿಸುವುವು. ಅಷ್ಟುಮಾತ್ರದಿಂದಲೆ ದೀಪಾದಿಗಳನ್ನು ಪ್ರಕಾಶಕಗಳೆಂದು ಹೇಳುವರು. ಜ್ಞಾನಂಜ್ಞೇಯಂ-ಜ್ಞಾನೈಕಾಕಾರವಾಗಿ ತಿಳಿಯತಕ್ಕದ್ದಾಗಿಯೂ, ಜ್ಞಾನಗಮ್ಯಂ- ಅಮಾನಿತ್ವಾದಿ ಗುಣಗಳೆಂಬ ಜ್ಞಾನ ಸಾಧನಗಳಿಂದ ಹೊಂದತಕ್ಕದ್ದಾಗಿಯೂ, ಸರ್ವಸ್ಯ ಹೃದಿವಿಷ್ಠಿತಂ- ಸಮಸ್ತವಾದ ಮನುಷ್ಯಾದಿ ದೇಹಿವರ್ಗದ ಹೃದಯವೆಂಬ ಸ್ಥಾನದಲ್ಲಿ ವಿಶೇಷವಾಗಿ ಇರತಕ್ಕದ್ದಾಗಿಯೂ ಇರುವ, ತತ್- ಆತ್ಮವಸ್ತುವು, ತಮಸಃ- ಸೂಕ್ಷ್ಮಾವಸ್ಥವಾದ ಪ್ರಕೃತಿಗಿಂತಲೂ, ಪರಂ- ವಿಲಕ್ಷಣವೆಂಬದಾಗಿ, ಉಚ್ಯತೆ- ಉಪನಿಷತ್ತುಗಳಲ್ಲಿ ಹೇಳಲ್ಪಡುತ್ತದೆ. — ... ||೧೭||

(ಶ್ರೀ)ಜ್ಯೋತಿಷಾಮಪಿ- "ಯೇನಸೂರ್ಯಸ್ತಪತಿತೇಜಸೇದ್ಧಃ-

ನತತ್ರಸೂರ್ಯೋಭಾತಿ- ಆದಿತ್ಯವರ್ಣಂತಮಸಃಪರಸ್ತಾತ್,, ಇತ್ಯಾದಿ ಶ್ರುತಿ ಪ್ರಮಾಣಗಳಿಂದ ಚಂದ್ರಾದಿತ್ಯರಿಗೂ ಆಬ್ರಹ್ಮವು ಪ್ರಕಾಶಕವೆಂದರಿಯಬೇಕು. ತಮಸಃಪರಂ- ಅಜ್ಞಾನಕ್ಕೆ ಬಹಿರ್ಭೂತವಾಗಿಯೂ ಇರುವುದು. ಜ್ಞಾನಂಜ್ಞೇಯಂ- (ಶಂ) ಅಮಾನಿತ್ವಾದಿಗಳು ಜ್ಞಾನವು, "ಜ್ಞೇಯಂಯತ್ತತ್ಪ್ರವಕ್ಷ್ಯಾಮಿ,, ಎಂಬದಾಗಿ ಹೇಳಲ್ಪಟ್ಟದ್ದು ಜ್ಞೇಯವು. (ಗೀ॥ವಿ॥) ಪ್ರಕಾಶಸ್ವರೂಪವಾಗಿರುವುದು ಜ್ಞಾನವು, ತನ್ನಿಂದಲೆ ತನ್ನನ್ನರಿಯುವ ಸ್ವಯಂ ಪ್ರಕಾಶರೂಪವಾಗಿರುವುದು ಜ್ಞೇಯವು. ಜ್ಞಾನಗಮ್ಯಂ -(ಗೀ॥ ವಿ॥) ಅಪರೋಕ್ಷಜ್ಞಾನದಿಂದ ಮುಕ್ತರಿಂದ ತಿಳಿಯಲ್ಪಡತಕ್ಕವಸ್ತುವು. ವಿಷ್ಠಿತಂ-(ಶ್ರೀ) ನಿಯಾಮಕವಾಗಿರುವುದು. ಧಿಷ್ಠಿತಂ ಎಂಬ ಪಾಠದಲ್ಲಿ ಅಧಿಷ್ಠಾಯಸ್ಥಿತಮಿತ್ಯರ್ಥಃ- ಸಮಸ್ತರ ಹೃದಯದಲ್ಲಿಯೂ ಆರೂಢವಾಗಿರುವುದೆಂದರ್ಥವು. ... ... ॥೧೭॥

(ಶಂ॥ ಭಾ॥) ಜ್ಞೇಯವಸ್ತುವಿನ ಇರುವಿಕೆಯು ಇದರಿಂದಲೂ ಸಿದ್ಧವಾಗುವುದು. ಆದರೆ ಸರ್ವತ್ರ ಇರುತಲಿರುವ ಬ್ರಹ್ಮವಸ್ತುವುಗೋಚರವಾಗದಮೇಲೆ ಅದು ಅಂಧಕಾರರೂಪವಾಗಿರುವುದೋ? ಎಂದರೆ ತಮಸ್ಸಲ್ಲವು. ಜ್ಯೋತಿಸ್ಸ್ವರೂಪವೆಂತಲೆ ತಿಳಿಯಬೇಕು. ಜ್ಞೇಯವಾದ ಆ ಬ್ರಹ್ಮವು ಆದಿತ್ಯಾದಿಗಳಿಗೂ ಪ್ರಕಾಶಕವಾಗಿಯೇ ಇರುವುದು. ಇದಕ್ಕೆ "ಯೇನಸೂರ್ಯಸ್ತಪತಿತೇಜಸೇದ್ಧಃ- ತಸ್ಯಭಾಸಾ ಸರ್ವಮಿದಂವಿಭಾತಿ- ಯದಾದಿತ್ಯಗತಂತೇಜಃ,,ಇತ್ಯಾದಿಗಳು ಪ್ರಮಾಣಗಳೆಂದರಿಯಬೇಕು. ಮತ್ತು ಬ್ರಹ್ಮವು ಅಜ್ಞಾನ ಸಂಪರ್ಕವಿಲ್ಲದ್ದಾಗಿರುವುದು. (ಹೊಂದಲ್ಪಡುವುದಕ್ಕೆ ಅಶಕ್ಯವಾದದ್ದೆಂಬದಾಗಿ ನಿಶ್ಚಯಿಸಲ್ಪಟ್ಟ ಜ್ಞಾನಸ್ವರೂಪವನ್ನು ಪ್ರಕಟನೆ ಮಾಡುವ ಉದ್ದೇಶದಿಂದ ಈ ಶ್ಲೋಕದ ಉತ್ತರಾರ್ಧವು ಪ್ರವೃತ್ತವಾಯಿತು.) ಈಅಧ್ಯಾಯದ ಎಂಟನೆಶ್ಲೋಕವನ್ನು ಮೊದಲು ಮಾಡಿಕೊಂಡು ಹೇಳಲ್ಪಟ್ಟ ಅಮಾನಿತ್ವಾದಿ ಜ್ಞಾನವೂ,(ಜ್ಞಾನ ಸಾಧನವೂ) (೧೭)ನೇಶ್ಲೋಕವನ್ನು ಮೊದಲುಮಾಡಿಕೊಂಡು ಹೇಳಲ್ಪಟ್ಟ ಜ್ಞೇಯ ವಸ್ತುವೂ, (ಜ್ಞಾನಗಮ್ಯವೆಂದರೂ ಜ್ಞೇಯವೆಂದರೂ ಒಂದೇ ಅರ್ಥವಾಗಿರುವುದರಿಂದ ಪೌನರುಕ್ತ ಮುಂಟಾಗಲಾರದೊ ಎಂದರೆ ಅದಕ್ಕಾಗಿ ಆಪದಗ

ಳಿಗೆ ಅರ್ಥಭೇದವನ್ನು ಹೇಳುತ್ತಾರೆ.) ತಿಳಿಯಲ್ಪಟ್ಟನಂತರವೂ ತಿಳಿಯಲ್ಪಡುತಲಿರುವಲ್ಲಿಯೂ ಮುಂದೆ ತಿಳಿಯಲ್ಪಡುವಂಥಾದ್ದಾಗಿರುವಲ್ಲಿಯೂ ಜ್ಞಾನಕ್ಕೆ ಫಲವಾಗಿಯೂ ( ಎಂದರೆ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಅದು ಜ್ಞಾನೈಕ ವೇದ್ಯವಾಗಿರುವುದೆಂದರ್ಥವು); ಈರೀತಿಯಾಗಿ ಸಮಸ್ತ ಪ್ರಾಣಿಗಳ ಬುದ್ಧಿಯಲ್ಲಿ ನಿಯಂತೃತ್ವೇನ ಇರುವುದೆಂದರಿಯಬೇಕು. ಈರೀತಿಯಾಗಿ ನಿರೂಪಿಸಲ್ಪಟ್ಟದ್ದೇ ಬ್ರಹ್ಮವೆಂದರಿಯಬೇಕು. ... ॥೧೭॥

ಶ್ಲೋ ॥ ಇತಿಕ್ಷೇತ್ರಂತಥಾಜ್ಞಾನಂಜ್ಞೇಯಂಚೋಕ್ತಂ ಸಮಾಸತಃ| ಮದ್ಭಕ್ತಏತದ್ವಿಜ್ಞಾಯಮದ್ಭಾವಾಯೊ ಪಪದ್ಯತೇ ॥ ... ॥೧೮॥

ಪ॥ ಇತಿ-ಕ್ಷೇತ್ರಂ-ತಥಾ-ಜ್ಞಾನಂ-ಜ್ಞೇಯಂ-ಚ-ಉಕ್ತಂ-ಸಮಾಸತಃ । ಮದ್ಭಕ್ತಃ-ಏತತ್-ವಿಜ್ಞಾಯ-ಮದ್ಭಾವಾಯ-ಉಪಪದ್ಯತೆ ॥

(ಅ॥ ರಾ॥) ಇತಿ-ಈ ಪ್ರಕಾರವಾಗಿ, ಕ್ಷೇತ್ರಂಸಮಾಸತಃ ಉಕ್ತಂ- ʻʻಮಹಾಭೂತಾನ್ಯಹಂಕಾರಃ,, (೧೩॥ ೫॥) ಎಂದು ಉಪಕ್ರಮಿಸಿ ʻʻ ಸಂಘಾತಶ್ಚೇತನಾಧೃತಿಃ ,, (೧೩॥ ೬) ಎಂಬಿದುವರೆಗೂ ದೇಹವೆಂಬ ಕ್ಷೇತ್ರತತ್ವವು ಸಂಗ್ರಹವಾಗಿ ಹೇಳಲ್ಪಟ್ಟಿತು. ತಥಾ ಜ್ಞಾನಂ ಸಮಾಸತಃ ಉಕ್ತಂ-ಅಮಾನಿತ್ವಮದಂಭಿತ್ವಂ,, (೧೩॥ ೭॥) ಎಂಬದಾಗಿ ಉಪಕ್ರಮಿಸಿ ʻʻ ತತ್ವಜ್ಞಾನಾರ್ಥಚಿಂತನಂ ,, (೧೩॥೧೧॥) ಎಂಬಿದುವರೆಗಿರುವ ಗ್ರಂಥಗಳಿಂದ ಆತ್ಮಜ್ಞಾನ ಸಾಧನವಾದ ಗುಣವರ್ಗವು ಹೇಳಲ್ಪಟ್ಟಿತು. ಜ್ಞೇಯಂಚ ಸಮಾಸತಃ ಉಕ್ತಂ- ʻʻಅನಾದಿ ಮತ್ಪರಂ ,, (೧೩॥ ೧೨॥) ಎಂದಾರಂಭಿಸಿ ʻʻ ಹೃದಿಸರ್ವಸ್ಯವಿಷ್ಠಿತಂ,, (೧೩॥ ೧೭) ಎಂಬಿದುವರೆಗೂ ಜ್ಞೇಯವಾದ ಕ್ಷೇತ್ರಜ್ಞನ ಯಾಥಾತ್ಮ್ಯವೂ ಸಂಗ್ರಹವಾಗಿ ಹೇಳಲ್ಪಟ್ಟಿತು. ಮದ್ಭಕ್ತಃ-ನಮ್ಮಲ್ಲಿ ಭಕ್ತಿಯುಳ್ಳ ಅಧಿಕಾರಿಯು, ಏತತ್-ಹಿಂದೆ ವಿವರಿಸಲ್ಪಟ್ಟ ಕ್ಷೇತ್ರಕ್ಕಿಂತಲೂ ಭಿನ್ನವಾದ ಆತ್ಮಸ್ವರೂಪವನ್ನುಹೊಂದುವದಕ್ಕಾಗಿ ಸಾಧನವಾಗಿರುವ ಗುಣಗಳ ತತ್ವವನ್ನೂ ಕ್ಷೇತ್ರಜ್ಞ ತತ್ವವನ್ನೂ, ವಿಜ್ಞಾಯ-ಚೆನ್ನಾಗಿ ತಿಳಿದುಕೊಂಡು, ಮದ್ಭಾವಾಯ-ನಮ್ಮಂತೆ ಅಸಂಸಾರಿಯಾ

ಗಿರುವಿಕೆಯನ್ನು ಹೊಂದುವುದಕ್ಕೆ, ಉಪಪದ್ಯತೆ - ತಕ್ಕವನಾಗುತ್ತಾನೆ. ॥೧೮॥

(ಶಂ॥ ಭಾ ॥) ಮಹಾಭೂತಗಳು ಮೊದಲು ಧೈರ್ಯಪರ್ಯಂತವಾಗಿರುವ ಶ್ಲೋಕಗಳಿಂದ ಕ್ಷೇತ್ರಸ್ವರೂಪವೂ, 'ಅಮಾನಿತ್ವಂ+ತತ್ವಜ್ಞಾನಾರ್ಥ ದರ್ಶನಂ, ಈ ಶ್ಲೋಕಗಳಿಂದ ಜ್ಞಾನಸಾಧನಗಳಾದ ಗುಣಸ್ವರೂಪವೂ, ' ಜ್ಞೇಯಂ ಯತ್ತತ್+ತಮಸಃ ಪರಮುಚ್ಯತೆ, ಈ ಶ್ಲೋಕಗಳಿಂದ ಜ್ಞೇಯ ಸ್ವರೂಪವೂ ಸಂಗ್ರಹವಾಗಿ ಉಪದೇಶಿಸಲ್ಪಟ್ಟಿತು. ಈ ಅರ್ಥವೆ ಸಮಸ್ತ ವೇದವೇದಾಂತಗಳ ಸಾರಾಂಶಗಳೆಂತಲೂ ಈ ಗೀತಾಶಾಸ್ತ್ರಸಾರಾಶವೆಂತಲೂ ತಿಳಿಯಬೇಕು. ಆದರೆ ಇಂಥಾ ಪರಮಾರ್ಥ ಜ್ಞಾನಕ್ಕೆ ಯೋಗ್ಯನಾದವನು ಯಾವನೊ ಅವನನ್ನು ಹೇಳುವೆನುಕೇಳು. ಈಶ್ವರನಾಗಿಯೂ ಸರ್ವಜ್ಞನಾಗಿಯೂಪರಮಗುರುವಾಗಿಯೂ ಇರುವ ವಾಸುದೇವನಾದನನ್ನಲ್ಲಿ ಸಮರ್ಪಿಸಲ್ಪಟ್ಟ ಸರ್ವಾತ್ಮ ಭಾವವುಳ್ಳವನೂ ಸಮಸ್ತವೂ ವಾಸುದೇವ ಸ್ವರೂಪವೆಂಬದಾಗಿ ತಾನು ಯಾವದನ್ನು ನೋಡುತ್ತಾನೆಯೊ ಕೇಳುತ್ತಾನೆಯೊ ಸ್ಪರ್ಶಿಸುತ್ತಾನೆಯೊ ಅವೆಲ್ಲವೂ ಪರಬ್ರಹ್ಮ ಭೂತನಾದಶ್ರೀಭಗವದ್ವಾಸುದೇವಾತ್ಮಕವಾಗಿರುವುದೆಂದು ತಿಳಿಯುವಂತವನೂ ಈ ಪರಮಾರ್ಥಜ್ಞಾನಕ್ಕೆ ಅಧಿಕಾರಿ ಯೆಂದರಿಯಬೇಕು. ಇಂತಹ ಬುದ್ಧಿಯೊಡನೆ ಪರಮಾರ್ಥಜ್ಞಾನವನ್ನು ಹೊಂದಿರುವಬ್ರಹ್ಮನಿಷ್ಠನು ಬ್ರಹ್ಮತ್ವವೆಂಬ ಮೋಕ್ಷವನ್ನು ಹೊಂದುತ್ತಾನೆ. ॥೧೮॥

(ಗೀ॥ವಿ॥) ಮದ್ಭಾವಾಯ-ನನ್ನಲ್ಲಿರುವಿಕೆಯನ್ನು ಹೊಂದುವುದಕ್ಕೆ ॥೧೮॥

ಶ್ಲೋ ॥ ಪ್ರಕೃತಿಂಪುರುಷಂಚೈವ ವಿದ್ಧ್ಯನಾದೀಉಭಾವಪಿ । ವಿಕಾರಾಂಶ್ಚಗುಣಾಂಶ್ಚೈವ ವಿದ್ಧಿಪ್ರಕೃತಿಸಂಭವಾನ್॥ ... ... ॥೧೯॥

ಪ॥ ಪ್ರಕೃತಿಂ- ಪುರುಷಂ- ಚ- ಏವ- ವಿದ್ಧಿ- ಅನಾದೀ- ಉಭೌ- ಅಪಿ । ವಿಕಾರಾನ್- ಚ- ಗುಣಾನ್- ಚ- ಏವ- ವಿದ್ಧಿ- ಪ್ರಕೃತಿಸಂಭವಾನ್॥

ಅ॥ ಪ್ರಕೃತಿಂ- ಪ್ರಕೃತಿಯನ್ನು, ಪುರುಷಂಚೈವ- ಪುರುಷನನ್ನೂ, ಉಭಾವಪಿ- ಇಬ್ಬರನ್ನೂಕೂಡ, ಅನಾದೀವಿದ್ಧಿ- ಅನಾದಿಗ

ಳೆಂದು ತಿಳಿದುಕೊಳ್ಳು, ವಿಕಾರಾಂಶ್ಚ- ದೇಹೇಂದ್ರಿಯಾದಿ ವಿಕಾರ ಗಳನ್ನೂ, ಗುಣಾಂಶ್ಚೈವ- ಸುಖದುಃಖ ಮೋಹಾದಿಗಳನ್ನೂ, ಪ್ರ ಕೃತಿ ಸಂಭವಾನ್ವಿದ್ಧಿ- ಪ್ರಕೃತಿ ಯಿಂದುಂಟಾದವುಗಳನ್ನಾಗಿ ತಿಳಿದು ಕೊಳ್ಳು. ... ||೧೯||

(ಶಂ|| ಭಾ||) ಹಿಂದೆ ಸಪ್ತಮಾಧ್ಯಾಯದಲ್ಲಿ ಈಶ್ವರನ ದ್ವಿವಿಧ ವಾದ ಪ್ರಕೃತಿಗಳು ಉಪನ್ಯಸ್ತಗಳಾದವು. ಎಂದರೆ ' ಭಿನ್ನಾಪ್ರ ಕೃತಿ ರಷ್ಟಧಾ, (೭-೪) ಎಂಬುವುದರಿಂದ ಮಾಯೆಯು ಈಶ್ವರ ರನಿಗೆ ಅಪರ ಪ್ರಕೃತಿ ಯೆಂತಲೂ 'ಅಪರೇಯಮಿತಸ್ತ್ವನ್ಯಾಂಪ್ರ ಕೃತಿಂವಿದ್ಧಿಮೇಪರಾಂ । ಜೀವಭೂತಾಂ, (೭-೫) ಎಂಬುವುದರಿಂದ ಜೀವನು ಈಶ್ವರನ ಪರಪ್ರಕೃತಿ ಎಂತಲೂ ಹೇಳಲ್ಪಟ್ಟಿತು. ಈಮಾ ಯಾಜೀವರನ್ನು ಕ್ರಮವಾಗಿ ಪ್ರಕೃತಿ ಪುರುಷರೆಂತಲೂ ಕ್ಷೇತ್ರಕ್ಷೇ ತ್ರಜ್ಞರೆಂತಲೂ ಹೇಳಿರುವುದಲ್ಲದೆ ಅನಾದಿಗಳೆಂತಲೂ ನಿತ್ಯರೆಂತಲೂ ಈ ಅಧ್ಯಾಯದಲ್ಲಿ ಹೇಳಿಆಯಿತು. ಈಶ್ವರನನ್ನು ನಿತ್ಯನನ್ನಾಗಿಯೂ ಅನಾದಿಯನ್ನಾಗಿಯೂ ಅಂಗೀಕರಿಸುವ ನಾವು ಆ ಈಶ್ವರನ ಪರಾಪರ ಪ್ರಕೃತಿಗಳಾದ ಮಾಯಾ ಜೀವರನ್ನೂ ನಿತ್ಯರನ್ನಾಗಿಯೂ ಅನಾದಿಗ ಳನ್ನಾಗಿಯೂ ಅಂಗೀಕರಿಸ ಬೇಕಾಗಿರುವುದು. ಮತ್ತು ಯಾವದು ಉತ್ಪನ್ನವಾಗಿರುವುದೆಂದು ಹೇಳಲ್ಪಡುವುದೋ ಅದೆಲ್ಲವೂ ಪ್ರಕೃತಿ ಯಿಂದುಂಟಾದದ್ದು. ಅಂತಹ ಪ್ರಕೃತಿಯನ್ನು ಕೂಡ ಹೊಸದಾಗಿ ಹು ಟ್ಟಿರುವುದೆಂದು ಹೇಳುವ ಪಕ್ಷದಲ್ಲಿ ಇಂಥಾ ಪ್ರಕೃತಿಯನ್ನು ಹುಟ್ಟಿ ಸುವುದಕ್ಕೆ ಮತ್ತೊಂದು ಪ್ರಕೃತಿಯನ್ನಂಗೀಕರಿಸಿ ಅದಕ್ಕೆ ಮತ್ತೊಂ ದು ಪ್ರಕೃತಿ ಎಂಬದಾಗಿ ಅನವಸ್ಥಾಪ್ರಸಂಗ ಮುಂಟಾಗುವುದು.ಆದು ದರಿಂದ ಹೊಸದಾಗಿ ಹುಟ್ಟಿದ್ದಲ್ಲವೆಂತಲೂ ನಿತ್ಯವೆಂತಲೂ ಅನಾದಿ ಯೆಂತಲೂ ಸ್ವೀಕರಿಸಬೇಕು. ಜೀವನೂ ಎಂದರೆ ಬ್ರಹ್ಮಾಂಶನಾಗಿ ರುವುದರಿಂದ ಬ್ರಹ್ಮವು ನಿತ್ಯವೆಂಬ ಕಾರಣ ಬ್ರಹ್ಮಾಂಶನಾದ ಜೀವ ನೂನಿತ್ಯನೆನ್ನಲು ಸಂಶಯವಿಲ್ಲವು. ಈ ಯರಡು ಪ್ರಕೃತಿಗಳಿಂದ ಈಶ್ವರನಿಗೆ ಸೃಷ್ಟಿಸ್ಥಿತಿ ಸಂಹಾರಾದಿ ಕಾರಣತ್ವವು ಹೇಳಲ್ಪಟ್ಟಿರು ವುದು. ಈಪ್ರಕೃತಿ ಪುರುಷರಿಗೆ ಅನಾದಿತ್ವ ನಿತ್ಯತ್ವಗಳನ್ನು ಸಮ್ಮ ತಿಸಲಾಗಿವು ಎಂದರೆ ಬ್ರಹ್ಮಕ್ಕೆ ಈಶ್ವರತ್ವ ಜಗತ್ಕಾರಣತ್ವಗಳನ್ನೂ

ಅಂತನರು ಸಮ್ಮತಿಸಬಾರದು. ಪ್ರಕೃತಿ ಪುರುಷರನ್ನು ಹೊಂದುವಂತವನು ಯಾವನೋ ಅವನೆ ಈಶ್ವರನು. ಆಳುವಿಕೆಗೆ ಒಳಪಟ್ಟ ವಸ್ತುಗಳಿಲ್ಲದೆಹೋದರೆ ಆಳುವ ಯಜಮಾನತ್ವವು ಯೆಲ್ಲುಂಟಾಗುವುದು. ಮತ್ತು ಪ್ರಕೃತಿ ಪುರುಷರನಾದಿಗಳಲ್ಲವು, ಉಂಟಾದವರೆ ಎಂದರೆ ಅವರುಂಟಾಗಿರುವುದಕ್ಕೆ ಪೂರ್ವದಲ್ಲಿ ಈಶ್ವರತ್ವ ವಿಲ್ಲದೇ ಇರಬೇಕು. ಮತ್ತು ಪುರುಷನಿಗೆ ಅನಾದಿಯಾದ ಕರ್ಮ ಬಂಧವೆಂಬೀ ಅಂಶವೂ ಸಂಗತವಾಗಲಾರದು. ಮತ್ತು ಈಶ್ವರನು ಒಬ್ಬ ಜೀವನನ್ನು ಸುಖಿಯನ್ನಾಗಿಯು ಮತ್ತೊಬ್ಬನನ್ನು ದುಃಖಿಯನ್ನಾಗಿಯೂ ಪೂರ್ವ ಕರ್ಮಗಳನ್ನಪೇಕ್ಷಿಸದೆ ಸೃಷ್ಟಿಸುವ ಪಕ್ಷದಲ್ಲಿ ಪರಮಾತ್ಮನಿಗೆ ವೈಷಮ್ಯ ನೈರ್ಘೃಣ್ಯ ದೋಷಗಳು ಸಂಭವಿಸುವುವಾದುದರಿಂದ ಬಂಧವೇ ಇಲ್ಲವೆಂಬುದಾಗಿ ಹೇಳಿದಂತೆ ಆಗುವುದು. ಬಂಧವನ್ನಂಗೀಕರಿಸದೆ ಇರುವುದರಿಂದಬಾಧಕವೇನೆಂದರೆ ಬಂಧವಿಲ್ಲವೆನ್ನುವುದಾದರೆ ಮೋಕ್ಷವೆಂಬುವುದು ಹೇಗೆ? ಮೋಕ್ಷವೂ ಅನಾವಶ್ಯಕವೆಂಬುವ ಪಕ್ಷದಲ್ಲಿ ಮೋಕ್ಷ ಪ್ರತಿಪಾದಕಗಳಾದ ವೇದಭಾಗಗಳಿಂದ ಏನು ಪ್ರಯೋಜನವು? ಆದುದರಿಂದ ಪ್ರಕೃತಿಪುರುಷರನ್ನು ಅನಾದಿಗಳೆಂದು ಹೇಳಿರುವುದು ಯುಕ್ತವಾಗಿಯೇ ಇರುವುದು. ... ... ॥೧೯॥

(ರಾ॥ ಭಾ॥) ಇನ್ನು ಮುಂದೆ ಒಂದಕ್ಕೊಂದು ವಿಲಕ್ಷಣ ಸ್ವಭಾವಗಳಾದ ಪ್ರಕೃತಿ ಪುರುಷ ತತ್ವಗಳಿಗೆ ಅನಾದಿಯಾದ ಸಂಸರ್ಗವನ್ನೂ ಅನ್ಯೋನ್ಯ ಸಂಸೃಷ್ಟಗಳಾದ ಆ ಯರಡು ತತ್ವಗಳ ಕಾರ್ಯಭೇದವಿರುವ ಪ್ರಕಾರವನ್ನೂ ಅವುಗಳ ಪರಸ್ಪರ ಸಂಸರ್ಗಕ್ಕೆ ಕಾರಣವನ್ನೂ ಹೇಳುತ್ತಾರೆ. ಪ್ರಕೃತಿಂ ಪುರುಷಂಚ ಉಭಾವಪಿ ಅನಾದೀ ವಿದ್ಧಿ - ಪರಸ್ಪರ ಸಂಸೃಷ್ಟರಾದ ಪ್ರಕೃತಿ ಪುರುಷರಿಬ್ಬರೂ ಆ ಸಂಸರ್ಗದೊಡನೆ ಅನಾದಿಗಳಾಗಿರುವುದಾಗಿಯೇ ತಿಳಿದುಕೊಳ್ಳು. ವಿಕಾರಾಂಶ್ಚ - ಬಂಧಹೇತುಗಳಾದ ಇಚ್ಛಾ ದ್ವೇಷಾದಿ ವಿಕಾರಗಳನ್ನೂ, ಗುಣಾಂಶ್ಚೈವ- ಮೋಕ್ಷಕಾರಣಗಳಾದ ಅಮಾನಿತ್ವಾದಿ ಗುಣಗಳನ್ನೂ, ಪ್ರಕೃತಿ ಸಂಭವಾನ್ವಿದ್ಧಿ-ಪ್ರಕೃತಿಸಂಸರ್ಗದಿಂದುಂಟಾದವುಗಳನ್ನಾಗಿ ತಿಳಿದುಕೊಳ್ಳು. ಪುರುಷನೊಡನೆ ಸಂಸರ್ಗವನ್ನು ಹೊಂದಿರುವ ಪ್ರಕೃತಿಯು ಕ್ಷೇತ್ರಾಕಾರದಿಂದ ಪರಿಣಾಮವನ್ನು ಹೊಂದಿ ತನ್ನ ವಿಕಾರಗ

ಳಾದ ಇಚ್ಛಾದ್ವೇಷಾದಿಗಳಿಂದ ಪುರುಷನಿಗೆ ಬಂಧಹೇತುವಾಗುವುದು. ಅದೇ ತನ್ನ ವಿಕಾರಗಳಾದ ಅಮಾನಿತ್ವಾದಿಗಳಿಂದ ಪುರುಷನಿಗೆಮೋಕ್ಷ ಹೇತುವೂ ಆಗುವುದೆಂದು ತಾತ್ಪರ್ಯವು. ॥೧೯॥

(ಗೀ॥ ವಿ॥) ಹಿಂದೆ "ಯತ್ತಚ್ಛಯತ್., (೧೩॥ ೩) ಎಂಬುವುದರಿಂದ ಪ್ರತಿಜ್ಞಾತವಾದ ಅಂತಹ ಧರ್ಮ ವಿಶಿಷ್ಟನಾದ ತನ್ನ ದಶೆಯಿಂದ ಕ್ಷೇತ್ರವು ಪ್ರೇರಿಸಲ್ಪಡುವುದೆಂಬ ಅರ್ಥಜ್ಞಾನವು, ಪ್ರೇರಿಸಲಿಕ್ಕೆ ಯೋಗ್ಯವಾದ ಪ್ರಕಾರ ಸಹಿತವಾಗಿರುವ ಕ್ಷೇತ್ರ ನಿರೂಪಣವಿಲ್ಲದೆ ಉಂಟಾಗಲಾರದು. ಆದುದರಿಂದ 'ಯತ್ತಚ್ಛಯತ್, ಎಂಬುವುದರಿಂದ ಪ್ರತಿಜ್ಞಾತವಾದ ಅರ್ಥವನ್ನು ಹೇಳುವುದಕ್ಕಾಗಿ ಯಾದೃಕ್ಚ ಎಂಬುವುದರಿಂದ ಪ್ರತಿಜ್ಞಾತವಾದ ಪ್ರಕಾರ ಸಹಿತವಾಗಿರುವ ಪ್ರಕೃತಿ ವಿಕಾರ ಪುರುಷರೂಪವಾದ ಕ್ಷೇತ್ರ ಸ್ವರೂಪವನ್ನು ಸಂಕ್ಷೇಪವಾಗಿ ಬೋಧಿಸುತ್ತಾನೆ. ಪ್ರಕೃತಿ ಎಂಬುವುದು ಇಪ್ಪತ್ತೈದು ತತ್ವಗಳು ಅಥವಾ ಜಗತ್ಕಾರಣನಾದ ಪರಮಾತ್ಮನು. ಪುರುಷನೆಂಬುವನು ಜೀವನು; ಅವರ ನಾದಿಗಳೆಂ ದರಿಯಬೇಕು. ಗುಣಗಳೂ ವಿಕಾರಗಳೂ ಪ್ರಕೃತಿಯಿಂದುಂಟಾದವುಗಳೆಂದು ತಿಳಿದುಕೊಳ್ಳು. ॥೨೦॥

ಶ್ಲೋ॥ ಕಾರ್ಯಕಾರಣಕರ್ತೃತ್ವೇಹೇತುಃಪ್ರಕೃತಿರುಚ್ಯತೇ।
ಪುರುಷಸ್ಸುಖದುಃಖಾನಾಂಭೋಕ್ತೃತ್ವೇಹೇತುರುಚ್ಯತೇ॥
॥೨೦॥

ಪ॥ ಕಾರ್ಯಕಾರಣಕರ್ತೃತ್ವೇ- ಹೇತುಃ- ಪ್ರಕೃತಿಃ- ಉಚ್ಯತೇ । ಪುರುಷಃ-ಸುಖದುಃಖಾನಾಂ- ಭೋಕ್ತೃತ್ವೇ- ಹೇತುಃ- ಉಚ್ಯತೇ॥

(ಅ॥ ರಾ॥) ಕಾರ್ಯಕಾರಣಕರ್ತೃತ್ವೇ ಪ್ರಕೃತಿರ್ಹೇತುರುಚ್ಯತೇ- ಕಾರ್ಯವೆಂದರೆ ಶರೀರವು, ಕಾರಣಗಳೆಂದರೆ ಜ್ಞಾನೇಂದ್ರಿಯಗಳೈದೂ ಕರ್ಮೇಂದ್ರಿಯಗಳೈದೂ ಮನಸ್ಸೂ ಸೇರಿ ಕಾರಣಗಳೆನ್ನಲ್ಪಡುವುವು. ಅವುಗಳ ಕರ್ತೃತ್ವವೆಂದರೆ ಕಾರ್ಯವನ್ನು ಮಾಡಿಸುವಿಕೆಯು, ಅವುಗಳಲ್ಲಿ ಜೀವಾತ್ಮನಿಂದಾ ಕ್ರಮಿಸಲ್ಪಟ್ಟಿರುವ ಪ್ರಕೃತಿಯೆ ಕಾರಣವೆಂಬದಾಗಿ ಜ್ಞಾನಿಗಳಿಂದ ಹೇಳಲ್ಪಡುವುದು. ಪುರುಷಾಧಿಷ್ಠಿತವಾಗಿ ಕ್ಷೇತ್ರತ್ವೇನ ಪರಿಣಾಮವನ್ನು ಹೊಂದಿರುವ ಪ್ರಕೃತಿಯು ನ್ನಾಕ್ರಮಿಸಿರು

ವುದು ಭೋಗಸಾಧನ ವ್ಯಾಪಾರವೆಂದರ್ಥವು. ಪುರುಷನಿಗೆ ಆಶರೀರಾಧಿಷ್ಠಾತೃತ್ವಮಾತ್ರವೆ ಉಂಟಾಗಿರುವುದು. ಆದರಿಂದಲೆ ತಾನೆ“ ಕರ್ತಾಶಾಸ್ತ್ರಾರ್ಥವತ್ತ್ವಾತ್,, ಇತ್ಯಾದಿಯಾಗಿ ಹೇಳಲ್ಪಟ್ಟಿತು. ಪುರುಷನನ್ನು ಕರ್ತೃ ಎಂಬದಾಗಿಹೇಳುವುದೆಲ್ಲವೂ ಶರೀರಾಧಿಷ್ಠಾನಕ್ಕೆಅಪೇಕ್ಷಿತವಾದಪ್ರಯತ್ನಕ್ಕೆ ಹೇತುವಾಗಿರುವುದರಿಂದಲೆ. ಪುರುಷಸ್ಸುಖದುಃಖಾನಾಂಭೋಕ್ತೃತ್ವೇ ಹೇತುರುಚ್ಯತೆ- ಪ್ರಕೃತಿ ಸಂಸರ್ಗ ಯುಕ್ತನಾದಪುರುಷನು ಸುಖದುಃಖಾನುಭವಕ್ಕೆ ಆಶ್ರಯಭೂತನೆಂಬದಾಗಿ ಜ್ಞಾನಿಗಳಿಂದ ಹೇಳಲ್ಪಡುವನು. ... ... ||೨೦||

(ಶ್ರೀ) ಪ್ರಕೃತಿಯು ಜಡವಾಗಿರುವುದರಿಂದ ಅದು ಹೇಗೆಬಂಧವನ್ನುಂಟುಮಾಡಿಸುವುದೆಂದು ಹೇಳಬಹುದು, ಜೀವಸ್ವಭಾವವೂ ವಿಕಾರವನ್ನು ಹೊಂದತಕ್ಕದ್ದಲ್ಲವು. ಜೀವನಿಗೆ ಇಂದ್ರಿಯಗಳು ಮನಶ್ಚಿತ್ತಾಹಂಕಾರಾದಿಗಳೂ ಕ್ಷುತ್ಪಿಪಾಸಾದಿಗಳೂ ವಾಸ್ತವವಾಗಿಲ್ಲವು. ಆದುದರಿಂದ ಅವನು ವಿಕಾರಿಯಾಗಲು ಕಾರಣವೇ ಇಲ್ಲವು. ಆದುದರಿಂದ ಅವನು ಅನುಭವಿಸುತ್ತಾನೆಂದು ಹೇಗೆ ಹೇಳಬಹುದೆಂದರೆ? ಈ ಶಂಕಾಸಮಾಧಾನಾರ್ಥವಾಗಿ ಈ ಶ್ಲೋಕವು ಪ್ರವೃತ್ತವಾಗಿರುವುದು. ಪ್ರಕೃತಿಯು ಜಡವಾಗಿದ್ದರೂ ಜೀವನ ಅವಿದ್ಯಾಕಾರ್ಯವಾದ ಅನಾದಿಕರ್ಮವೆಂಬ ಅದೃಷ್ಟವಶದಿಂದ ಆಪ್ರಕೃತಿಯು ವಿಕಾರಪಟ್ಟುಜೀವನಿಗೆ ಉಪಯುಕ್ತವಾಗಿರುವಂತೆ ದೇಹೇಂದ್ರಿಯಾದಿರೂಪದಿಂದ ಪರಿಣಾಮವನ್ನು ಹೊಂದುವುದು. ಅದು ಹೇಗೆಂದರೆ, ಜೀವನಾದ ಮಗುವು ಹುಟ್ಟಿದ ಒಡನೆ ಅದರ ಆಹಾರಕ್ಕಾಗಿ ಜಡವಾದ ಹಾಲು ಉಂಟಾಗುವಂತೆ ಜೀವನಿಗೆ ಉಪಯುಕ್ತವಾಗಿರುವ ಅನೇಕ ಜಡ ಪದಾರ್ಥಗಳುಂಟಾಗುವುವು. ಆಪ್ರಕಾರವಾಗಿ ನಾನಾವಸ್ತುರೂಪವಾಗಿ ಪರಿಣಮಿಸುವುದು ಪ್ರಕೃತಿಯೆ ಆದುದರಿಂದ ಪ್ರಕೃತಿಯು ಕಾರಣವಾಗಿಹೇಳಲ್ಪಟ್ಟಿತು.

ಜೀವನು ಜ್ಞಾನವನ್ನೆ ಸ್ವರೂಪವನ್ನಾಗಿ ಉಳ್ಳವನು. ಅವನ ಜ್ಞಾನವು ಸುಖದುಃಖಾದಿ ಸಂಬಂಧವಾದ ವಿಷಯ ಜ್ಞಾನವಲ್ಲವು. ಆದರೂ ದೇಹೇಂದ್ರಿಯಾದಿಗಳ ಮೂಲಕವಾಗಿ ವಿಷಯ ಜ್ಞಾನವುಂಟಾಗುವುದು. ಅಂತಾ ದೇಹೇಂದ್ರಿಯಾದಿಗಳು ಕರ್ಮದಿಂದುಂಟಾಗುವುವು.

ದೇಹವುಂಟಾದಮೇಲೆ ಸುಖದುಃಖಗಳನ್ನು ತಿಳಿಯುವಿಕೆಯೆಂಬವಿಷಯ ಜ್ಞಾನವನ್ನು ಹೊಂದುತ್ತಾನೆ. ಈರೀತಿಯಾಗಿ ಸುಖದುಃಖಾದಿವಿಷಯಜ್ಞಾನವನ್ನು ಹೊಂದುವುದರಿಂದ ಅವನು ಸುಖದುಃಖಾದಿಗಳನ್ನನುಭವಿಸುವುದಕ್ಕೆ ಕಾರಣನಾಗಿ ಹೇಳಲ್ಪಡುತ್ತಾನೆ. ಪುರುಷಸನ್ನಿಧಾನದಿಂದ ಪ್ರಕೃತಿಗೆ ಕರ್ತೃತ್ವವೂ ಪ್ರಕೃತಿ ಸಂಯೋಗದಿಂದ ಪುರುಷನಿಗೆಭೋಕ್ತೃತ್ವವೂಉಂಟಾಗುವುದೆಂದುಭಾವವು ‖೨೦‖

(ಶಂ‖ ಭಾ‖)ಪ್ರಕೃತಿ ಕಾರ್ಯಗಳಾದ ವಿಕಾರಗಳೂ ಗುಣಗಳೂ ಯಾವವೊ ಅವುಗಳನ್ನು ಹೇಳುವೆನು ಕೇಳು. ಕಾರ್ಯಕರಣ ಕರ್ತೃತ್ವೆ ಎಂಬೀ ಪಾಠದಲ್ಲಿ ಕಾರ್ಯವೆಂದರೆ ಶರೀರವು ಕರಣವೆಂದರೆ ಶರೀರದಲ್ಲಿರುವ ಜ್ಞಾನೇಂದ್ರಿಯ ಕರ್ಮೇಂದ್ರಿಯ ಮನೋಬುದ್ಧ್ಯಹಂಕಾರಗಳೆಂಬ ಹದಿಮೂರು ತತ್ವಗಳು.ದೇಹೋತ್ಪತ್ತಿ ಮೂಲಭೂತಗಳಾದ ಭೂತಗಳೂವಿಷಯಗಳೂ ಇವೆಲ್ಲವೂಪ್ರಕೃತಿಯಿಂದ ಹುಟ್ಟಿರುವುವಾದುದರಿಂದ ವಿಕಾರಗಳೆನ್ನಲ್ಪಡುವುವು. ಇವು ಕಾರ್ಯಶಬ್ದದಿಂದ ಹೇಳಲ್ಪಡುವುವು. ಮತ್ತು ಕರಣಗಳೆನ್ನಲ್ಪಡುವುವು ಕೆಲವು ಇರುವುವು. ಅವು(ಗುಣಗಳು ಇಂದ್ರಿಯಗಳನ್ನಾಶ್ರಯಿಸಿ ಕೊಂಡಿರುವು ವಾದುದರಿಂದ ಸುಖದುಃಖ ಮೋಹಗಳೆಂಬ ಗುಣಗಳು ಕರಣಗಳೆಂಬದಾಗಿ(ಕರಣಶಬ್ದದಿಂದ)ಹೇಳಲ್ಪಡುವುವು. ಅಂತಹ ಕಾರ್ಯಕರಣಗಳನ್ನು ಹುಟ್ಟಿಸುವ ವಿಷಯದಲ್ಲಿ ಪ್ರಕೃತಿಯು ಕಾರಣವೆಂದು ಹೇಳಲ್ಪಡುವುದು, ಆದುದರಿಂದ ಪ್ರಕೃತಿಯೆ ಸಂಸಾರಮೂಲವೆಂಬದಾಗಿ ತಿಳಿಯಲ್ಪಡುವುದು. ಕಾರ್ಯಕಾರಣ ಕರ್ತೃತ್ವೇ ಎಂಬ ಪಾಠದಲ್ಲೂ ಯಾವ ವಸ್ತುವು ಯಾವರೀತಿಯಾಗಿ ಪರಿಣಾಮವನ್ನು ಹೊಂದುವುದೊ ಆರೀತಿಯಾಗಿ ಪರಿಣಮಿಸಿರುವುದು ಕಾರ್ಯವೆನ್ನಲ್ಪಡುವುದು.(ಮಣ್ಣೆಂಬ ವಸ್ತುವು ಮಡಿಕೆ ರೂಪವಾಗಿ ಪರಿಣಾಮವನ್ನು ಹೊಂದಿದರೆ ಆಪರಿಣಾಮವನ್ನೇ ಕಾರ್ಯವೆನ್ನುವರು. ಪರಿಣಾಮವೆಂದರೆ ಒಂದುವಸ್ತುವು ಬೇರೊಂದುರೂಪವಾಗಿಮಾರ್ಪಾಟಾಗುವುದು.) ಪರಿಣಾಮವನ್ನು ಹೊಂದುವಂಥಾದ್ದು ಕಾರಣವು. ಕಾರ್ಯವು ವಿಕಾರವೆಂತಲೂ ಕಾರಣವು ವಿಕಾರಿಯೆಂತಲೂ ಹೇಳಲ್ಪಡುವುದು. ಅಂಥಾ ಕಾರ್ಯಕಾರಣಗಳೆಂಬದಾಗಿ ಮೇಲೆ ವಿವರಿಸಲ್ಪಟ್ಟವು

ಗಳೆನ್ನ ಗ್ರಹಿಸಬಹುದು. ಅವುಗಳನ್ನು ಹುಟ್ಟಿಸುವುದು ಪ್ರಕೃತಿ ಯೆಂತಲಾದರೂ ಹೇಳಬಹುದು. ಅಥವಾ ಕರ್ಮೇಂದ್ರಿಯಗಳು ಮತ್ತು ಅಂತಃಕರಣವೂ ಶಬ್ದಸ್ಪರ್ಶರೂಪ ರಸಗಂಧಗಳೂ ಸೇರಿ ಹದಿನಾರು ವಿಕಾರಗಳೂ ಕಾರ್ಯಗಳೆನ್ನಲ್ಪಡುವುವು. ಮಹದಹಂಕಾರಗಳು ಭೂತ ತನ್ಮಾತ್ರಗಳೂ (ಶಬ್ದಸ್ಪರ್ಶ ರೂಪ ರಸ ಗಂಧಗಳೆ ಭೂತತನ್ಮಾತ್ರ ಗಳು) ಎಂಬೀ ಯೇಳೂ ಪ್ರಕೃತಿ ವಿಕೃತಿಗಳೆನ್ನಲ್ಪಡುವುವು. ಅವು ಕಾರಣಗಳೆನ್ನಲ್ಪಡುವುವು. ಅಂತಹ ಕಾರ್ಯಕಾರಣಗಳನ್ನು ಹುಟ್ಟಿಸು ವುದು ಪ್ರಕೃತಿಯೆಂತಲಾದರೂ ಹೇಳಬಹುದು. ಸೃಷ್ಟಿಯುಂ ಟಾಗುವುದಕ್ಕೆ ಸಾಧನ ಭೂತನಾಗಿರುವವನೆ ಆಗಿರುವುದರಿಂದಜೀವನು ಸಂಸಾರ ಕಾರಣನೆಂಬ ಅಂಶವು ವಿಶದ ಪಡಿಸಲ್ಪಡುವುದು. ಅದು ಹೇಗೆಂದರೆ,ಜೀವನು ಭೋಗಾರ್ಹಗಳಾದ ಸುಖದುಃಖಗಳನ್ನು ಅನುಭ ವಿಸುವುದಕ್ಕೆ ಕರ್ತೃವೆನ್ನಲ್ಪಡುತ್ತಾನೆ. ಆದರೆ ಕಾರ್ಯಕಾರಣ ಕರ್ತೃವಾಗಿ ರುವುದರಿಂದಲೂ ಸುಖ ದುಃಖ ಭೋಕ್ತೃವಾಗಿರುವುದರಿಂದಲೂ ಪ್ರಕೃ ತಿಪುರುಷರು ಸಂಸಾರಕ್ಕೆ ಕಾರಣರೆಂಬದಾಗಿಹೇಗೆ ಹೇಳಬಹುದೆಂದರೆ? ಕಾರ್ಯಕಾರಣಗಳೆಂಬ ಹೇತುವಾಗಿಯೂ ಸುಖದುಃಖಗಳೆಂಬ ಫಲವಾ ಗಿಯೂ ಪ್ರಕೃತಿಯು ಪರಿಣಮಿಸದೇ ಹೋದರೂ ಚೇತನನಾದ ಪುರುಷನು ಅವುಗಳನ್ನು ಹೊಂದದೆ ಇದ್ದರೂ ಸಂಸಾರವು ಹೇಗೆ ಉಂ ಟಾಗುವುದು. ಏತಕ್ಕೆಂದರೆ, ಕಾರ್ಯಕಾರಣ ಹೇತುಫಲ ಸ್ವರೂಪವಾಗಿ ಪರಿಣಮಿಸಿ ಭೋಗ್ಯವೂಆದ ಪ್ರಕೃತಿಯೊಡನೆ ಪುರುಷನಿಗೆಭೋಕ್ತೃ ಎಂಬ ಅವಿದ್ಯಾರೂಪವಾದ ಸಂಪರ್ಕವು ಯಾವಾಗಲಾದರೆ ಉಂಟಾಗು ವುದೋ ಆವಾಗಲೇ ಯಲ್ಲವೆ ಸಂಸಾರವು ಯೇರ್ಪಡುವುದು. ಆದುದ ರಿಂದ ಮೇಲೆ ವಿವರಿಸಿರುವ ಪ್ರಕಾರವಾಗಿ ಪ್ರಕೃತಿ ಪುರುಷರು ಸಂಸಾ ರಕಾರಣ ರೆನ್ನಲು ಸಂಶಯವಿಲ್ಲವು. ಸಂಸಾರವೆಂದರೆ ಸುಖದುಃಖಾ ನುಭವವೆ. ಅಂಥಾ ಸುಖದುಃಖಗಳನ್ನು ಅನುಭವಿಸುವಂತವನಾ ಗುವಿಕೆಯೆ ಪುರುಷನಿಗೆ ಸಂಸಾರಿತ್ವವು. (ಪ್ರಕೃತಿಯು ಜಡವಾಗಿರುವು ದರಿಂದ ಅದಕ್ಕೆ ಕರ್ತೃತ್ವವೂ ಯಿಲ್ಲವು. ಪುರುಷನು ನಿರ್ವಿಕಾರಿಯಾ ಗಿರುವುದರಿಂದ ಇವನಿಗೆ ಭೋಕ್ತೃತ್ವವೂ ಇಲ್ಲವು.) ಆದುದರಿಂದ ಪ್ರಕೃತಿಪುರುಷರಿಗೆ ಕಾರ್ಯಕಾರಣ ಕರ್ತೃತ್ವದಿಂದಲೂ ಸುಖದುಃಖ

ಭೋಕ್ತೃತ್ವದಿಂದಲೂ ಸಂಸಾರ ಕಾರಣತ್ವವು ಯಾವದು ನಮ್ಮಿಂದ ಹೇಳಲ್ಪಟ್ಟಿತೋ ಅದು ಯುಕ್ತವೆಸರಿ. ॥೨೦॥

(ಮ॥ ಭಾ॥) ಕಾರ್ಯವೆಂಬುವುದು ದೇಹವು, ಕಾರಣವೆಂಬುವುವು ಇಂದ್ರಿಯಗಳು, ಕರ್ತೃತ್ವವೆಂಬುವುದು ಕ್ರಿಯೆಯು, ಪ್ರಕೃತಿಯು ಈಮೂರು ರೂಪವಾಗಿರುವುದು. ಆದುದರಿಂದ ಈಮೂರಿಗೂ ಪ್ರಕೃತಿಯನ್ನು ಹೇತುವನ್ನಾಗಿ ಹೇಳುತ್ತಾರೆ. ಜೀವನು ಜ್ಞಾನಸ್ವರೂಪಿಯಾಗಿರುವುದರಿಂದಲೂ ಸುಖದುಃಖಗಳನ್ನು ತಿಳಿಯುತ್ತಾನಾದುದರಿಂದಲೂ ಸುಖದುಃಖಾನುಭವಕ್ಕೆ ಜೀವನು ಕಾರಣನಾಗಿ ಹೇಳಲ್ಪಡುವನು. ... ... ॥೨೦॥

(ಗೀ॥ವಿ॥) ದೇಹೇಂದ್ರಿಯಗಳ ಕರ್ತೃತ್ವಕ್ಕೆ ಕಾರಣವುಚಿತ್ಪ್ರಕೃತಿಯು, ಎಂದರೆ ಲಕ್ಷ್ಮೀದೇವಿಯು. ಜೀವನು ಪ್ರಕೃತಿವಿಕಾರಗಳಾದ ಸುಖದುಃಖಗಳನ್ನು ಅನುಭವಿಸುವುದಕ್ಕೆ ಪರಮಪುರುಷನಾದ ಭಗವಂತನು ಕಾರಣನಾಗಿ ಹೇಳಲ್ಪಡುತ್ತಾನೆ. ಸರ್ವಕರ್ತಾದ ಆಭಗವಂತನಿಗೆ ದೇಹೇಂದ್ರಿಯಾದಿ ಕರ್ತೃತ್ವವಿದ್ದರೂ ಭೋಗಪ್ರದಾನವಿಷಯಪಲ್ಲಿ ಲಕ್ಷ್ಮೀದೇವಿಗೆ ಹೇತುತ್ವವಿದ್ದರೂ ಸುಖದುಃಖ ಭೋಗಗಳನ್ನು ಕೊಡುವ ವಿಷಯದಲ್ಲಿ ಲಕ್ಷ್ಮೀದೇವಿಗೆ ಹೇತುತ್ವವು ಸ್ವಲ್ಪವಾಗಿರುವುದು. ಕಾರ್ಯಕಾರಣ ವಿಷಯಗಳಲ್ಲಿ ಹೇತುತ್ವವು ಅಧಿಕವಾಗಿರುವುದು. ಆದುದರಿಂದ ದೇವಿಯಾದ ಪ್ರಕೃತಿಯನ್ನು ಕಾರ್ಯಕಾರಣ ಕರ್ತೃತ್ವ ಹೇತುವಾಗಿ ಹೇಳಿತು. ದೇಹೇಂದ್ರಿಯಕರ್ತೃತ್ವಪ್ರವೃತ್ತಿಗಿಂತಲೂ ಪರಮಪುರುಷನಿಗೆ ಭೋಗಪ್ರದಾನ ವಿಷಯದಲ್ಲಿ ಪ್ರವೃತ್ತಿಯು ಅಧಿಕವಾಗಿರುವುದರಿಂದ ಆವಿಷಯದಲ್ಲಿ ಭಗವಂತನಿಗೆ ಹೇತುತ್ವವು ಹೇಳಲ್ಪಟ್ಟಿತು. ಅಥವಾ ಪ್ರಕೃತಿಯೆಂದರೆ ಜಡಪ್ರಕೃತಿಯು, ಪುರುಷನೆಂದರೆ ಜೀವನು, ದೇಹೇಂದ್ರಿಯ ವ್ಯಾಪಾರಕ್ಕೆ ಕಾರಣವು ಜಡಪ್ರಕೃತಿಯೂ, ಸುಖದುಃಖಾನುಭವಕ್ಕೆ ಕಾರಣನು ಜೀವನೂ ಹೇಳಲ್ಪಡುವನು. ... ... ॥೨೦॥

ಶ್ಲೋ॥ಪುರುಷಃಪ್ರಕೃತಿಸ್ಥೋಹಿಭುಂಕ್ತೇಪ್ರಕೃತಿಜಾನ್

ಗುಣಾನ್ | ಕಾರಣಂಗುಣಸಂಗೋಽಸ್ಯ ಸದಸದ್ಯೋನಿ
ಜನ್ಮಸು॥ ... ॥೨೧॥

ಪ॥ ಪುರುಷಃ- ಪ್ರಕೃತಿಸ್ಥಃ- ಹಿ- ಭುಂಕ್ತೇ- ಪ್ರಕೃತಿಜಾನ್- ಗುಣಾನ್ | ಕಾರಣಂ-ಗುಣಸಂಗಃ- ಅಸ್ಯ- ಸದಸದ್ಯೋನಿಜನ್ಮಸು॥

(ಅ॥ ರಾ॥) ಈಪ್ರಕಾರವಾಗಿ ಪರಸ್ಪರ ಸಂಸೃಷ್ಟರಾಗಿರುವ ಪ್ರಕೃತಿ ಪುರುಷರಿಗೆ ಕಾರ್ಯಭೇದವು ಹೇಳಲ್ಪಟ್ಟಿತು. ಇನ್ನುಮುಂದೆ ಸ್ವಾತ್ಮಾನುಭವೈಕ ಸುಖನಾಗಿರುವ ಪುರುಷನಿಗೆ ಶಬ್ದಾದಿ ವಿಷಯಾನುಭವ(ಸುಖೋಪಭೋಗದಲ್ಲಿ)ಹೇತುವನ್ನುಹೇಳುತ್ತಾರೆ.ಇಲ್ಲಿನಗುಣಶಬ್ದವು ಸತ್ವಾದಿ ಗುಣಕಾರ್ಯಗಳಾದ ಸುಖದುಃಖಾದಿಗಳನ್ನು ಉಪಚಾರವೃತ್ತಿಯಿಂದ ಹೇಳುವುದು.

ಪುರುಷಃ- (ಸ್ವಾನುಭವೈಕ ಸುಖನಾದ) ಪುರುಷನು, ಪ್ರಕೃತಿಸ್ಥೋಹಿ- ಪ್ರಕೃತಿ ಸಂಸರ್ಗ ಮುಳ್ಳವನಾಗಿರುವುದರಿಂದ, ಪ್ರಕೃತಿಜಾನ್- ಪ್ರಕೃತಿ ಕಾರ್ಯಭೂತಗಳಾಗಿರುವ, ಗುಣಾನ್- ಸುಖದುಃಖಾದಿಗಳನ್ನು, ಭುಂಕ್ತೇ- ಅನುಭವಿಸುತ್ತಾನೆ.

ಪ್ರಕೃತಿ ಸಂಸರ್ಗಕ್ಕೆ ಕಾರಣವನ್ನೂ ಹೇಳುತ್ತಾರೆ. ಅಸ್ಯ- ಈಪುರುಷನಿಗೆ ಸದಸದ್ಯೋನಿಜನ್ಮಸು- ಬ್ರಾಹ್ಮಣಾದಿ ಶ್ರೇಷ್ಠಯೋನಿಜನ್ಮಗಳಲ್ಲಿಯೂ ಚಂಡಾಲಾದಿ ನೀಚಯೋನಿಜನ್ಮಗಳಲ್ಲಿಯೂ ಈಪ್ರಕಾರವಾಗಿ ಹುಟ್ಟುವಿಕೆ ಯೆಂಬ ಪ್ರಕೃತಿ ಸಂಸರ್ಗದಲ್ಲಿ ಯೆಂದರ್ಥವು. ಗುಣಸಂಗಃ- ಸತ್ವಾದಿ ಗುಣಕೃತವಾದ ಸುಖದುಃಖಾದ್ಯಾಸಕ್ತಿಯು, ಕಾರಣಂ- ಹೇತುವಾಗುವುದು. ಪೂರ್ವಪ್ರಕೃತಿ ಪರಿಣಾಮರೂಪಗಳಾದ ದೇವ ಮನುಷ್ಯಾದಿ ಯೋನಿ ವಿಶೇಷಗಳಲ್ಲಿರುತಲಿರುವ ಈಪುರುಷನು ಆಯಾ ಯೋನಿಪ್ರಯುಕ್ತವಾದ ಸತ್ವಾದಿಗುಣಕಾರ್ಯವಾಗಿರುವ ಸುಖಾದ್ಯಾಸಕ್ತಿಯಿಂದ ಆಸುಖಾದಿಗಳಿಗೆ ಸಾಧನಗಳೆಂಬದಾಗಿ ಶಾಸ್ತ್ರವಿಹಿತಗಳಾಗಿರುವ ಪುಣ್ಯಕರ್ಮಗಳಲ್ಲಿಯೂ ಪಾಪಕರ್ಮಗಳಲ್ಲಿಯೂ, ಪ್ರವರ್ತಿಸಿ ಆಪುಣ್ಯ ಪಾಪಕರ್ಮಗಳ ಫಲಾನುಭವಕ್ಕಾಗಿ ಬ್ರಾಹ್ಮಣಾದಿ ಶ್ರೇಷ್ಠಯೋನಿಗಳಲ್ಲಿಯೂ ಚಂಡಾಲಾದಿ ನಿಕೃಷ್ಟ ಯೋನಿಗಳಲ್ಲಿಯೂ ಹುಟ್ಟಿ ಪೂರ್ವದಲ್ಲಿ ಮನೋರಥ ಪಟ್ಟಿರುವ ಸುಖಾದಿಗಳನ್ನು ಅನುಭವಿಸಿ, ಪುನಶ್ಚ ಅಂಥಾ ಸುಖಾಸಕ್ತಿ

ಯಿಂದ ಪೂರ್ವದಂತೆ ಕರ್ಮಗಳನ್ನು ಅನುಷ್ಠಿಸಿ ಆಯಾ ಯೋನಿಗಳಲ್ಲಿ ಜನಿಸಿ ಅಮಾನಿತ್ವಾದಿಗಳಾದ ಆತ್ಮಪ್ರಾಪ್ತಿ ಹೇತು ಭೂತಗಳಾಗಿರುವ ಗುಣಗಳನ್ನು ಯಷ್ಟರಮಟ್ಟಿಗೆ ಹೊಂದುವುದಿಲ್ಲವೊ ಅಷ್ಟುಮಟ್ಟಿಗೂ ಸಂಸಾರಿಯಾಗಿರುವನೆಂದು ತಾತ್ಪರ್ಯವು. ... ॥೨೧॥

(ಶಂ॥ಭಾ॥) ಪುರುಷನಿಗೆ ಸುಖದುಃಖಗಳನ್ನು ಅನುಭವಿಸುವಿಕೆಯೇ ಸಂಸಾರಿತ್ವವೆಂಬದಾಗಿ ಹಿಂದಿನ ಶ್ಲೋಕದ ಕೊನೆಯಲ್ಲಿ ಹೇಳಲ್ಪಟ್ಟಿರುವುದು. ಅದು ಯಾವದರಿಂದ ಎಂದರೆ ಹೇಳುವೆನು ಕೇಳು ಜೀವನು, ಕಾರ್ಯಕಾರಣರೂಪವಾಗಿ ಪರಿಣಮಿಸುವುದಾಗಿಯೂ ಅವಿದ್ಯೆಯೆನ್ನಲ್ಪಡುವುದಾಗಿಯೂ ಇರುವ ಪ್ರಕೃತಿಯೆ ತಾನಾಗಿ, ಸುಖದುಃಖಾದ್ಯನುಭವ ಕರ್ತನೂ ಆಗಿರುವುದರಿಂದ ಪ್ರಕೃತಿಯಿಂದ ಹುಟ್ಟಿ ನಾನು ಸುಖಿಯು ದುಃಖಿಯು ಮೂಢನು ಪಂಡಿತನು ಎಂಬದಾಗಿ ಸುಖದುಃಖ ಮೋಹಾದ್ಯಾಕಾರದಿಂದ ಕಾಣಲ್ಪಡುವುದಾಗಿಯೂ ಇರುವ ಗುಣಗಳನ್ನು ಹೊಂದುತಿರುವನು. ಜನ್ಮಕ್ಕೆ ಕಾರಣವಾಗಿ ಅವಿದ್ಯೆ ಇದ್ದರೂ ಅನುಭವಿಸಲ್ಪಡುತಲಿರುವ ಸುಖದುಃಖ ಮೋಹಗಳೆಂಬ ಗುಣಗಳಲ್ಲಿ ಸಕ್ತಿಯೆ ಸಂಸಾರಕ್ಕೆ ಮುಖ್ಯಕಾರಣವು. ಅದು ಹೇಗೆಂದರೆ? " ಸಯಥಾಕಾಮೋಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮಕುರುತೆಯತ್ರ ತತ್ಕರ್ಮಕುರುತೇತದಭಿ ಸಂಪದ್ಯತೆ,, ಈ ಶ್ರುತ್ಯರ್ಥವು. ಜೀವನು ಎಂತಹ ಅಪೇಕ್ಷೆ ಯುಳ್ಳವನಾಗುವನೊ ಅಂತಹ ದೇವತೆಯನ್ನು ಭಜನಮಾಡುವನು. ಎಂತಹ ದೇವತೆಯನ್ನು ಭಜಿಸುತ್ತಾನೆಯೊ ಅಂತಹ ದೇವತಾ ಪ್ರೀತಿಯನ್ನುಂಟುಮಾಡುವ ಯಜ್ಞಗಳನ್ನು ಮಾಡುವನು. ಎಂತಹ ಯಜ್ಞಕರ್ಮಗಳನ್ನು ಮಾಡುತ್ತಾನೆಯೊ ಅಂಥಾ ಫಲವನ್ನು ಹೊಂದುವನು ) ಆದುದರಿಂದ ಸುಖದುಃಖಾನುಭವಶಾಲಿಯಾದ ಜೀವನು ಯೆಂಥಾ ಗುಣಗಳಲ್ಲಪೇಕ್ಷಾಯುಕ್ತನಾಗಿರುವನೊ ಅದಕ್ಕನುರೂಪವಾದ ದೇವಾದಿ ಸದ್ಯೋನಿಗಳಲ್ಲಿ ಜನ್ಮವನ್ನು ಎತ್ತಿ ಸಾತ್ವಿಕಗಳಾದ ವಿಷಯ ಫಲಗಳನ್ನೂ, ಪಶ್ವಾದಿ ಯೋನಿಗಳಲ್ಲಿ ಜನ್ಮಿಸಿ ತಾಮಸಗಳಾದ ಅನಿಷ್ಟ ಫಲಗಳನ್ನೂ, ಸದಸತ್ತುಗಳಾದ ಮನುಷ್ಯ ಯೋನಿಗಳಲ್ಲಿ ಹುಟ್ಟಿ ರಾಜಸಗಳಾದ ಮಿಶ್ರ (ಇಷ್ಟಾನಿಷ್ಟ) ಫಲಗಳನ್ನೂ, ಹೊಂದುತ್ತಾನೆ. ಎಂದರೆ ಪ್ರಕೃತಿ

ಸ್ಥಿತ್ವವೆಂಬ ಅವಿದ್ಯಾ ಗುಣಗಳಲ್ಲಿರುವ ಕಾಮವೆ ಸಂಸಾರಕ್ಕೆ ಮುಖ್ಯ ಕಾರಣವಾಗಿರುವುದರಿಂದ ಅದನ್ನೇ ನಿವರ್ತಿಸಿಕೊಳ್ಳಬೇಕು. ಇದನ್ನು ನಿವರ್ತನೆ ಮಾಡುವುದು ಸನ್ಯಾಸದೊಡನೆ ಕೂಡಿರುವ ಜ್ಞಾನ ವೈರಾಗ್ಯ ಗಳೆಂಬದಾಗಿ ಈಗೀತಾಶಾಸ್ತ್ರದಲ್ಲಿ ಪ್ರಸಿದ್ಧವಾಗಿ ಹೇಳಲ್ಪಟ್ಟಿರುವುದು. ಅಂಥಾ ಜ್ಞಾನಸ್ವರೂಪವು "ಯದ್ಜ್ಞಾತ್ವಾ ಮೃತಮಶ್ನುತೇ,, ಎಂಬ ಹದಿಮೂರನೆ ಶ್ಲೋಕದಮೊದಲು ಕ್ಷೇತ್ರಕ್ಷೇತ್ರಜ್ಞ ವಿಷಯದಲ್ಲಿ ಪರಮಾತ್ಮನಿಗೆ ಸ್ವತಸ್ಸಿದ್ಧವಾಗಿ ಇಲ್ಲದ ಪಾಣಿಪಾದಾದ್ಯಾರೋಪಮೂಲವಾಗಿ ಇದುವರೆಗೂ ಹಿಂದೆಯೇ ಹೇಳಲ್ಪಟ್ಟಿರುವುದು.

(ಈಶ್ಲೋಕ ಪದಾರ್ಥಗಳು ಹೇಗೆಂದರೆ? ವಿವರಿಸುವೆವು.) ಪ್ರಕೃತಿಸ್ಥಃ- ಕಾರ್ಯಕಾರಣರೂಪವಾಗಿರುವ ಅವಿದ್ಯಾಲಕ್ಷಣವಾದ ಪ್ರಕೃತಿಯನ್ನು ತಾನೆಂದು ನೆನೆಯುತಲಿರುವ, ಪುರುಷಃ- ಸುಖದುಃಖಾದಿಗಳನ್ನು ಅನುಭವಿಸುತಲಿರುವ ಪುರುಷನು, (ಜೀವನು) ಪ್ರಕೃತಿಜಾನ್- ಪ್ರಕೃತಿಯಿಂದುಂಟಾಗಿರುವ, ಗುಣಾನ್- ಸುಖದುಃಖಮೋಹಾಕಾರಗಳಾಗಿ ಕಾಣಲ್ಪಡುವ ಗುಣಗಳನ್ನು, ಭುಂಕ್ತೇಹಿ- ಅನುಭವಿಸುತ್ತಾನಲ್ಲವೆ. ಗುಣಸಂಗಃ- ನಾನು ನನ್ನದು ಎಂಬೀ ಅಹಂಕಾರ ಮಮಕಾರವೆಂಬ ಗುಣಸಂಬಂಧವು, ಅಸ್ಯ- ಅನುಭವಿಸುತಲಿರುವ ಈಜೀವನಿಗೆ, ಸದಸದ್ಯೋನಿಜನ್ಮಸು- ದೇವಮನುಷ್ಯ ಪಶುಪಕ್ಷ್ಯಾದಿ ಜನ್ಮಗಳಲ್ಲಿ, ಕಾರಣಂ- ಕಾರಣವಾಗಿರುವುದು. ಇವುಗಳನ್ನೆಲ್ಲಾ ಸವಿವೇಚನವಾಗಿ ತಿಳಿದು ಬಂಧದ್ದಶೆಯಿಂದ ಬಿಡಲ್ಪಡುವುದಕ್ಕೆ ಪ್ರಯತ್ನಿಸಬೇಕೆಂಬುವುದೆ ಈಶ್ಲೋಕ ಪ್ರವೃತ್ತಿಗೆ ಮೂಲವೆಂದರಿಯಬೇಕು. ॥೭೧॥

(ಗೀ॥ ವಿ॥) ದೇಹದಿಂದುಂಟಾಗುವ ಸುಖದುಃಖಾದಿಗಳನ್ನು ಜೀವನು ಅನುಭವಿಸುತ್ತಾನೆಂಬುವುದು ಮಿಥ್ಯೆಯಲ್ಲವೆಂಬ ಅಂಶವನ್ನು ಸೂಚನಮಾಡುವುದಕ್ಕಾಗಿ (ಹಿ) ಎಂಬ ಪದವು ಪ್ರಯೋಗಿಸಲ್ಪಟ್ಟಿರುವುದು. ... ... ॥೭೧॥

ಶ್ಲೋ॥ ಉಪದ್ರಷ್ಟಾನುಮಂತಾಚಭರ್ತಾಭೋಕ್ತಾಮಹೇಶ್ವರಃ। ಪರಮಾತ್ಮೇತಿಚಾಪ್ಯುಕ್ತೋದೇಹೇಽಸ್ಮಿನ್ಪುರುಷಃಪರಃ॥ ... ... ॥೨೩॥

ಪ॥ ಉಪದ್ರಷ್ಟಾ- ಅನುಮಂತಾ-ಚ- ಭರ್ತಾ- ಭೋಕ್ತಾ- ಮಹೇಶ್ವರಃ । ಪರಮಾತ್ಮಾ- ಇತಿ- ಚ- ಅಪಿ- ಉಕ್ತಃ- ದೇಹೇ- ಅಸ್ಮಿನ್- ಪುರುಷಃ- ಪರಃ॥

(ಅ॥ ಟೀ॥) ಅಸ್ಮಿನ್ದೇಹೇ- ಈದೇಹದಲ್ಲಿ, (ಅವಸ್ಥಿತಃ- ಇರುತಲಿರುವ) ಪರಃಪುರುಷಃ- ಸ್ವತಃ ಅಪರಿಚ್ಛಿನ್ನ ಜ್ಞಾನಶಕ್ತಿಯುಳ್ಳ ಜೀವಾತ್ಮನು, ಉಪದ್ರಷ್ಟಾ- ದೇಹಪ್ರವೃತ್ತಿಗೆ ಅನುಗುಣವಾದ ಸಂಕಲ್ಪಾದಿ ರೂಪದಿಂದ ನೋಡುತಲಿರುವಂತವನಾಗಿಯೂ,ಅನುಮಂತಾಚ- ದೇಹಾದಿಗಳಿಂದ ಮಾಡಲ್ಪಡುವ ಕಾರ್ಯಗಳನ್ನು ಅನುಮೋದಿಸುವಂತವನಾಗಿಯೂ, ಭರ್ತಾ- ದೇಹವನ್ನು ಭರಿಸುವಂತವನಾಗಿಯೂ, ಭೋಕ್ತಾ-ದೇಹಪ್ರವೃತ್ತಿಯಿಂದ ಉಂಟಾಗುವಸುಖದುಃಖಗಳಿಗೆಭೋಕ್ತಾ ಆಗಿಯೂ, ಮಹೇಶ್ವರಃ- (ಈಪ್ರಕಾರವಾಗಿ ದೇಹವನ್ನು ಪ್ರವೃತ್ತಿ ನಿವೃತ್ತಿಗಳಲ್ಲಿ ಪ್ರೇರಿಸುವುದರಿಂದಲೂ ದೇಹ ಭರಣದಿಂದಲೂ ದೇಹದಿಂದುಂಟಾದ ಸುಖದುಃಖ ರೂಪಾತಿಶಯಗಳನ್ನು ಹೊಂದಿ ಶೇಷಿಯಾಗಿರುವುದರಿಂದಲೂ ದೇಹೇಂದ್ರಿಯ ಮನಸ್ಸುಗಳನ್ನು ಕುರಿತು) ಮಹೇಶ್ವರನಾಗಿಯೂ, ಪರಮಾತ್ಮೇತಿಚಾಪಿ- ದೇಹೇಂದ್ರಿಯ ಮನಸ್ಸುಗಳನ್ನು ಕುರಿತು ಪರಮಾತ್ಮನೆಂತಲೂ, ಉಕ್ತಃ- ಹೇಳಲ್ಪಡುತ್ತಾನೆ. ಆತ್ಮನನ್ನು ಮಹೇಶ್ವರನೆಂಬದಾಗಿ "ಶರೀರಂಯದವಾಪ್ನೋತಿಯಚ್ಚಾಪ್ಯುತ್ಕ್ರಾಮತೀಶ್ವರಃ । ಗೃಹೀತ್ವೈತಾನಿಸಂಯಾತಿ ವಾಯುರ್ಗಂಧಾನಿವಾಶಯಾತ್,, ಎಂಬ ಶ್ಲೋಕದಿಂದ ಮುಂದೆ ವಿವರಿಸುವರು. ಈ ಪ್ರಕಾರವೇ ಆತ್ಮಶಬ್ದವು ದೇಹದಲ್ಲಿಯೂ ಮನಸ್ಸಿನಲ್ಲಿಯೂ ಮುಂದೆ ಪ್ರಯೋಗಿಸಲ್ಪಡುವುದು. "ಧ್ಯಾನೇನಾತ್ಮನಿಪಶ್ಯಂತಿ ಕೇಚಿದಾತ್ಮಾನಮಾತ್ಮನಾ,, ಎಂಬದಾಗಿ. 'ಅನಾದಿ ಮತ್ಪರಂ, ಇತ್ಯಾದಿ ಪ್ರಮಾಣ ಪ್ರಕಾರದಿಂದ ಅಪರಿಚ್ಛಿನ್ನ ಜ್ಞಾನಶಕ್ತಿಯುಳ್ಳ ಈಜೀವಾತ್ಮನು ಅನಾದಿಪ್ರಕೃತಿ ಸಂಸರ್ಗಕೃತವಾದ ಗುಣಾದ್ಯಾಸಕ್ತಿಯಿಂದ ದೇಹಮಾತ್ರಕ್ಕೆ ಮಹೇಶ್ವರನಾಗಿಯೂ ಪರಮಾತ್ಮನಾಗಿಯೂ ಆಗುತ್ತಾನೆಂದು ಭಾವವು. ... ... ॥೨೨॥

(ಶ್ರೀ) ಪರಃ- ಗುಣಸಂಬಂಧವಿಲ್ಲದವನು. ಉಪದ್ರಷ್ಟಾ-ಸಮೀಪದಲ್ಲಿದ್ದುಕೊಂಡು ನೋಡುವಂತವನು. ಅನುಮಂತಾಚ- ಸನ್ನಿಧಾನಮಾತ್ರದಿಂದ ನಡೆಯುವ ಕಾರ್ಯವನ್ನು ನಡೆಸುವುದಕ್ಕೆ ಸಮ್ಮತಿಸಿರು

ವನನಂತೆ ಇರುವಂತವನು. ಭರ್ತಾ- ಈಶ್ವರರೂಪದಿಂದ ಜಗದ್ಧಾರಕನು. ಭೋಕ್ತಾ- ಪಾಲಕನು. ಪರಮಾತ್ಮೇತಿಚ- ಅಂತರ್ಯಾಮಿಯೆಂತಲೂ ಹೇಳಲ್ಪಡುವನು. ... ॥೨೭॥

ಶಂ॥ಭಾ॥ ಪ್ರಕೃತವಾಗಿರುವ ಮೋಕ್ಷ ಹೇತು-ವಾದ ಜ್ಞಾನಕ್ಕೆ ನೆನಿರ್ದ್ದೇಶವು ಮಾಡಲ್ಪಡುವುದು.ಪುರುಷಃ - ಪುರುಷನೆಂಬಜೀವನು, ಅಸ್ಮಿನ್ ದೇಹೇಸತ್ಯಪಿ- ಈ ಶರೀರದಲ್ಲಿರುವಂತವನಾಗಿದ್ದರೂ, ಪರಃ- ದೇಹಕ್ಕಿಂತಲೂ ಅನ್ಯನಾಗಿಯೂ, ಉಪದ್ರಷ್ಟಾ- ಸಮೀಪದಲ್ಲಿದ್ದುಕೊಂಡು ನೋಡುತಲಿರುವ ಮೇಲ್‌ವಿಚಾರಣೆ ಕರ್ತನಾಗಿಯೂ,ಎಂದರೆ- ಋತ್ವಿಕ್ಕುಗಳೂ ಯಜಮಾನನೂ ಯಜ್ಞವನ್ನು ಮಾಡುತಲಿರುವಲ್ಲಿ ಮತ್ತೊಬ್ಬನು ತಾನು ಯಜ್ಞವನ್ನು ಮಾಡಿಸುವುದರಲ್ಲಿಯು ಮಾಡುವುದರಲ್ಲಿಯೂ ವ್ಯಾಪೃತನಲ್ಲದೆ ಇರುವಂತವನಾದರು ಯಾವ ಕಾರ್ಯಗಳನ್ನು ಮಾಡದೆ ತಟಸ್ಥನಾಗಿದ್ದುಕೊಂಡು ಋತ್ವಿಗ್ಯಜಮಾನರುಗಳ ವ್ಯಾಪಾರಗಳಲ್ಲಿ ಲೋಪಗಳನ್ನು ಹೇಗಾದರೆ ಕಂಡುಹಿಡಿಯುತಲಿರುವನೊ ಆಪ್ರಕಾರವೆ ಶರೀರೇಂದ್ರಿಯಗಳು ವ್ಯಾಪಾರಗಳನ್ನು ಮಾಡುತಲಿದ್ದರು ಅವುಗಳಿಗಿಂತಲೂ ಅನ್ಯನಾದ ತಾನು (ಜೀವನು) ವ್ಯಾಪಾರಗಳಿಲ್ಲದವನಾಗಿ ವ್ಯಾಪಾರಯುಕ್ತಗಳಾದ ಅವುಗಳನ್ನು ಸಮೀಪದಲ್ಲಿದ್ದುಕೊಂಡು ನೋಡುವಂತವನು ಉಪದ್ರಷ್ಟಾ ಎನ್ನಲ್ಪಡುವನೆಂದು ಭಾವವು. ಅಥವಾ ದೇಹಬುದ್ಧಿ ಮನಆತ್ಮರು ದ್ರಷ್ಟೃರೆನ್ನಲ್ಪಡುವರು. ಅವುಗಳಲ್ಲಿ ಬಾಹ್ಯದ್ರಷ್ಟೃತ್ವವು ದೇಹಕ್ಕುಂಟಾಗಿರುವುದು. ಜ್ಞಾನವಸ್ತುವಾದ ಆತ್ಮನು ಸಮೀಪದಲ್ಲಿದ್ದುಕೊಂಡು ಅವುಗಳನ್ನು ನೋಡುವಂತವನಾಗಿರುವನು. ಇವನಿಗಿಂತಲು ಒಳಗಿರತಕ್ಕ ಅತಿಶಯಿತ ದ್ರಷ್ಟೃವಸ್ತುವು ಬೇರೆಯಿಲ್ಲವು. ಯಜಮಾನನು ಋತ್ವಿಕ್ಕುಗಳು ಸೇರಿ ಮಾಡುವ ಯಜ್ಞ ಕರ್ಮದಲ್ಲಿ(ಗುಣವನ್ನಾದರೂ ದೋಷವನ್ನಾದರೂಸರ್ವಯಜ್ಞಗಳನ್ನುತಿಳಿದಿರುವ)ಮತ್ತೊಬ್ಬನುಹೇಗಾದರೆಉಪದ್ರಷ್ಟಾಆಗಿರುತ್ತಾನೊ,ಆಪ್ರಕಾರವೆ ಜ್ಞಾನೈಕ ಸ್ವಭಾವನಾದ ಆತ್ಮನು ಸಮಸ್ತವನ್ನು ಗೋಚರ ಪಡಿಸುವುದರಿಂದ ಉಪದ್ರಷ್ಟಾ ಎನ್ನಲ್ಪಡುವನು. ಅನುಮಂತಾಚ- ಇತರರು ಒಂದು ಕಾರ್ಯವನ್ನು ಮಾಡುತಲಿರುವಲ್ಲಿಅದನ್ನುನೋಡಿ ಸುಮ್ಮನಿರುವಂತವನು ಅನು

ಮಂತಾ ಎನ್ನಲ್ಪಡುವನು, ಆದರಂತೆ ದೇಹೇಂದ್ರಿಯ ವ್ಯಾಪಾರಗಳಲ್ಲಿ ತಾನು ಪ್ರವರ್ತಿಸದೆ ಹೋದರೂ ಅದಕ್ಕನುಕೂಲವಾಗಿ ಪ್ರವರ್ತಿಸುವವನಂತೆ ಕಾಣಲ್ಪಡುವಂತವನಾಗಿಯೂ, ಅಥವಾ ಆದೇಹೇಂದ್ರಿಯಾದಿಗಳ ಪ್ರವರ್ತನಕ್ಕೆ ತಾನು ಸಾಕ್ಷಿಯಾಗಿರುವಂತವನಾಗಿಯೂ, (ಅಥವಾ) ಸ್ವವ್ಯಾಪಾರಗಳಲ್ಲಿ ಪ್ರವರ್ತಿಸುತ್ತಲಿರುವ ದೇಹೇಂದ್ರಿಯಾದಿಗಳನ್ನು ಅವುಗಳಿಗೆ ಸಾಕ್ಷೀಭೂತನಾಗಿದ್ದುಕೊಂಡು ನಿವಾರಣ ಮಾಡದೆ ಇರುವಂತವನಾಗಿಯೂ, ಭರ್ತಾ - ದೇಹಕ್ಕೆ ಧಾರಕನಾಗಿಯೂ, (ಎಂದರೆ ಸತ್ಯವಾದ ರಜ್ಜುವು(ಹಗ್ಗವು) ಸುಳ್ಳಾದ ಸರ್ಪಭ್ರಾಂತಿಗೆ ಆಧಾರವಾಗಿರುವಂತೆ ಸತ್ಯಭೂತವಾದ ಆತ್ಮಸ್ವರೂಪದಿಂದ ಮಿಥ್ಯಾಭೂತಗಳಾದ ದೇಹೇಂದ್ರಿಯ ಮನೋಬುದ್ಧ್ಯಾದಿಗಳಿಗೆ ಆಧಾರವಾಗಿರುವವನನ್ನು ವಹಿಸುವನಂತೆ ತೋರುವಂತನಾಗಿಯೂ) ಭೋಕ್ತಾ-ಭೋಕ್ತ್ರಸಂಬದಾಗಿ ತೋರುವಂತವನಾಗಿಯೂ, (ಎಂದರೆ ಅಗ್ನಿಯು ಉಷ್ಣಗುಣವು ಅಯಃ ಪಿಂಡದಲ್ಲಿರುವಂತೆ ವಿಷಯಗಳನ್ನು ಕುರಿತು ಬುದ್ಧಿಗುಂಟಾಗುವ ಸುಖದುಃಖಾದಿಗಳ ಅನುಭವಗಳು ಆತ್ಮನಲ್ಲಿ ಸಂಕ್ರಮಿಸಿರುವಂತೆ ಕಾಣಲ್ಪಡುವುದರಿಂದ ಭೋಕ್ತಾ ಎಂಬಂತೆ ತೋರಲ್ಪಡುವಂತವನಾಗಿಯೂ,) ಮಹೇಶ್ವರಃ - ಸಮಸ್ತಕ್ಕೂ ಆತ್ಮನಾಗಿಯೂ, ಸ್ವತಂತ್ರನಾಗಿಯೂ, ಪರಮಾತ್ಮೇತಿಚಾಪಿ-ಅವಿದ್ಯಾಸಂಬಂಧದಿಂದ ಆತ್ಮನಾಗಿ ಕಲ್ಪಿಸಲ್ಪಡುವ ದೇಹಾದಿಗಳಿಗಿಂತಲೂ ಉತ್ಕೃಷ್ಟನಾಗಿಯೂ, ಉಕ್ತಃ-ಶ್ರುತಿಗಳಿಂದ ಹೇಳಲ್ಪಡುತ್ತಾನೆ. ॥೨೨॥

(ಗೀ॥ ವಿ॥) ಜಡಗಳಾದ ಗುಣಗಳಿಗೆ ಪ್ರಕೃತಿ ಕಾರ್ಯವಾದ ದೇಹಾದಿಸಂಬಂಧದಲ್ಲಿ ಸ್ವತಂತ್ರಕಾರಣತ್ವವನ್ನು ಹೇಳಲಿಕ್ಕಾಗುವುದಿಲ್ಲವು. ಆದುದರಿಂದ ಸ್ವತನ್ತ್ರಕಾರಣ ವಸ್ತುವು ಯಾವದೆಂದರೆ ಅದನ್ನು ವಿವರಿಸುವಂತವನಾಗಿ ' ಯತಜ್ಞಯತ್ , ಎಂಬುವುದರಿಂದ ಪ್ರತಿಜ್ಞಾತವಾದ ಅರ್ಥವನ್ನು ಹೇಳುತ್ತಾನೆ. ಉಪದ್ರಷ್ಟಾ - ಸರ್ವವಸ್ತುಗಳಿಗಿಂತಲೂ ಸರ್ವೋತ್ತಮನಾಗಿದ್ದುಕೊಂಡು ನೋಡುವಂತವನೆಂತಲೂ, ಭರ್ತಾ-ಸರ್ವಧಾರಕನೆಂತಲೂ, ಭೋಕ್ತಾ-ಸರ್ವಸಾರಭೋಕ್ತನೆಂತಲೂ, ಮಹೇಶ್ವರಃ-ಅಚಿಂತ್ಯೈಶ್ವರ್ಯಶಕ್ತಿಕನೆಂತಲೂ, ಪರಮಾತ್ಮಾಚ-ಉತ್ತಮನಾದ ಆತ್ಮನೆಂತಲೂ, ಪರಃ- ಜೀವಭಿನ್ನನೆಂತಲೂ, ಪುರುಷಃ-

ಪರಿಪೂರ್ಣಷಡ್ಗುಣನೆಂತಲೂ, ಹೇಳಲ್ಪಡುವ ಪರಮಾತ್ಮನು, ಅಸ್ಮಿನ್ ದೇಹೇ- ಈ ದೇಹದಲ್ಲಿ, ಅನುಮಂತೇತ್ಯಪಿ -(ಸರ್ವರಿಗಿಂತಲೂ ಅಧಿಕ ದ್ರುಷ್ಟ್ರತ್ವಾದಿ ವಿಶೇಷಣಗಳಿಂದ ಕೂಡಿರುವ ಕಾರಣ ಮನೋಪೇಕ್ಷೆ ಇವಿಲ್ಲದೆ ಬುದ್ಧಿಪೂರ್ವಕವಾಗಿ ಸ್ವಾತಂತ್ರ್ಯದಿಂದ ಪ್ರೇರಕನೆಂತಲೂ, ಉಕ್ತಃ - "ಕ್ಷೇತ್ರಜ್ಞಂಚಾಪಿಮಾಂವಿದ್ಧಿ,, ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟನು. ಆದಕ್ಕೆ "ಸ್ವಾತಂತ್ರ್ಯಾತ್ಸ್ವನುಕೂಲ್ಯೇನಮ ತ್ವಾಪ್ರೇರಯತಿಸ್ಮಯತ್ । ಅನುಮಂತೇತಿಕಥಿತಸ್ಸ್ವಯಂ ಪ್ರಭುರ ಜೋಹರಿಃ ,, ಎಂಬ ವಚನವು ಸಮ್ಮತಿಯು. ಮತ್ತು ಅನುಮಂತಾ ಎಂಬ ಶಬ್ದಕ್ಕೆ ಪುನಃ ಪುನಃ ಕರ್ತವ್ಯದ ಆಲೋಚನವನ್ನು ಮಾಡು ವಂತವನೆಂತಲೂ ಭಾಷ್ಯಾನುಸಾರವಾಗಿ ಅರ್ಥಮಾಡಲ್ಪಟ್ಟಿರುವುದು. ॥೨೩॥

ಶ್ಲೋ॥ ಯಏವಂವೇತ್ತಿಪುರುಷಂ ಪ್ರಕೃತಿಂಚಗು
ಣೈಸ್ಸಹ । ಸರ್ವಥಾವರ್ತಮಾನೋಽಪಿ ನಸಭೂಯೋಽಭಿಜಾ
ಯತೇ ॥ ... ... ... ॥೨೪॥

ಪ॥ ಯಃ-ಏವಂ-ವೇತ್ತಿ-ಪುರುಷಂ-ಪ್ರಕೃತಿಂ-ಚ-ಗುಣೈಃ-ಸಹ । ಸರ್ವಥಾ-ವರ್ತಮಾನಃ-ಅಪಿ-ನ-ಸಃ-ಭೂಯಃ-ಅಭಿಜಾಯತೇ ॥

(ಅ॥ ರಾ॥) ಯಃ-ಯಾವಪುರುಷನು, ಏವಂ- ಈ ಪೂರ್ವೋಕ್ತ ಪ್ರಕಾರವಾಗಿ, ಪುರುಷಂ-ಜೀವಾತ್ಮನನ್ನೂ, ಏವಂ-ಹಿಂದೆ ವಿವರಿಸಿ ರುವ ಪ್ರಕಾರವಾಗಿ, ಪ್ರಕೃತಿಂಚ-ಮೂಲಪ್ರಕೃತಿಯನ್ನೂ, ಗುಣೈ ಸ್ಸಹ-ಮುಂದಿನ ಅಧ್ಯಾಯದಲ್ಲಿ ಹೇಳಲ್ಪಡುವ ಸ್ವಭಾವಗಳುಳ್ಳ ಸತ್ವರ ಜಸ್ತಮೋ ಗುಣಗಳೊಡನೆ ಕೂಡ, ವೇತ್ತಿ-ಯಥಾವತ್ತಾಗಿ ವಿವೇಕ ದಿಂದ ಅರಿಯುತ್ತಾನೆಯೊ, ಸಃ-ಆಪುರುಷನು, ಸರ್ವಥಾವರ್ತಮಾ ನೋಽಪಿ-ದೇವಮನುಷ್ಯಾದಿ ದೇಹಗಳಲ್ಲಿ ಅತ್ಯಂತ ಕಷ್ಟವಾದ ಪ್ರಕಾರ ದೊಡನೆ ಇದ್ದರೂ, ಭೂಯಃ-ತಿರಿಗಿಯೂ, ನಾಭಿಜಾಯತೇ- ಹುಟ್ಟು ವುದಿಲ್ಲವು. ಪುನಶ್ಚ ಪ್ರಕೃತಿ ಯೊಡನೆ ಸಂಬಂಧಿಸಲಾರನು. ಅಪರಿ ಚ್ಛಿನ್ನ ಜ್ಞಾನ ಲಕ್ಷಣವಾಗಿಯೂ ಅಪಹತ ಪಾಪ್ಮವಾಗಿಯೂ (ಪಾಪ ಗಳನ್ನು ತೊಲಗಿಸಿಯೂ) ಇರುವ ಆತ್ಮವನ್ನು ಆ ಶರೀರಾವಸಾನದ

ಲ್ಲಿಯೇ ಹೊಂದುವನೆಂದು ಭಾವವು. ..................॥೭೩॥

(ಶಂ॥ ಭಾ॥) ಈ ಪ್ರಕಾರವಾಗಿ "ಸಚಯೋ ಯತ್ಪ್ರಭಾವಶ್ಚ,, (೧೩॥ ೪॥) ಎಂಬ ಶ್ಲೋಕದಲ್ಲಿ ಪ್ರತಿಜ್ಞೆ ಮಾಡಲ್ಪಟ್ಟ ಕ್ಷೇತ್ರಜ್ಞ ಸ್ವರೂಪವು ನಿರೂಪಿಸಲ್ಪಟ್ಟಿತು. ಇನ್ನು ಮುಂದೆ "ಯಾಜ್ಞಾತ್ವಾಽಮೃತಮಶ್ನುತೆ,, (೧೩॥ ೧೩॥) ಎಂಬ ಶ್ಲೋಕತಾತ್ಪರ್ಯವು ವಿವರವಾಗಿ ಹೇಳಲ್ಪಡುವುದು. ಹೇಗೆಂದರೆ ? ಹಿಂದೇ ಹೇಳಿರುವ ಪ್ರಕಾರವಾಗಿ 'ತಾನೇ ಬ್ರಹ್ಮವು ಬ್ರಹ್ಮವೇತಾನು, ಎಂಬದಾಗಿ ಪುರುಷ ಸ್ವರೂಪವನ್ನೂ, ಅವಿದ್ಯೆ ಎನ್ನಲ್ಪಡುವುದಾಗಿಯೂ ತನ್ನ ವಿಕಾರಗಳೊಡನೆ ಕೂಡ ಜ್ಞಾನದಿಂದ ನಾಶಹೊಂದತಕ್ಕದ್ದಾಗಿಯೂ ಇರುವ ಪ್ರಕೃತಿಯ ಸ್ವರೂಪವನ್ನೂ, ತಿಳಿದುಕೊಂಡವನು ಯೆಂತಹ ನಡವಡಿಕೆಯುಳ್ಳವನಾಗಿದ್ದರೂ, ಆವಾಗ ಪ್ರಾಪ್ತವಾಗಿರುವ ಶರೀರವನ್ನು ತ್ಯಾಗಮಾಡಿದ ನಂತರ ಪುನಶ್ಚ ಜನ್ಮವನ್ನು ಹೊಂದಲಾರನು. ಎಂದರೆ ಮೋಕ್ಷವನ್ನು ಹೊಂದುವನೆಂದರ್ಥವು.

ಆದರೆ ಜ್ಞಾನೋತ್ಪತ್ತಿಯಾದಬಳಿಕ ಪುನಶ್ಚ ಜನ್ಮವನ್ನು ಹೊಂದಲಾರನೆಂದು ಹೇಳಿರುವುದೇನೊ ಯುಕ್ತವೆ; ಆದರೂ ಜ್ಞಾನೋತ್ಪತ್ತಿಗೆ ಪೂರ್ವದಲ್ಲಾ ಜನ್ಮದಲ್ಲಿ ಮಾಡಲ್ಪಟ್ಟ ಕರ್ಮಗಳಿಗೂ, ಜ್ಞಾನೋತ್ಪತ್ತಿಯಾದನಂತರದಲ್ಲಿ ಮಾಡಲ್ಪಟ್ಟ ಕರ್ಮಗಳಿಗೂ, ಇದುವರೆಗೂ ಅತಿಕ್ರಮಿಸಿರುವ ಅನೇಕ ಜನ್ಮಗಳಲ್ಲಿ ಮಾಡಲ್ಪಟ್ಟು ಅನುಭವಿಸಿವಿಕ್ಕಿರುವ ಕರ್ಮಗಳಿಗೂ ಎಂದರೆ ಈ ಕರ್ಮಗಳೆಲ್ಲವೂ ತಮ್ಮಗಳ ಫಲಗಳನ್ನು ಕೊಡದೇನೆ ಬಂದೇಸಲ ನಶಿಸುವುವೆನ್ನುವುದು ಯುಕ್ತವಲ್ಲವು. ಪ್ರಾರಬ್ಧಕರ್ಮಗಳು ಫಲಗಳನ್ನು ಕೊಡದೆನಶಿಸಿ ಹೋಗಲಾರವಷ್ಟೆ. ಆಪ್ರಕಾರವೆ ಇತರ ಕರ್ಮಗಳೂ ಆಗಿರುವುದರಿಂದ ಈ ಮೂರು ವಿಧವಾಗಿರುವ ಕರ್ಮಗಳೂ ಮೂರು ಜನ್ಮಗಳನ್ನುಂಟುಮಾಡುವುವೆನ್ನುವುದು ಯುಕ್ತವಾಗಿಯೇ ಇರುವುದು. ಕಿಂಚ ಮಾಡಲ್ಪಟ್ಟ ಕರ್ಮಗಳು ಅನುಭವಕ್ಕೆ ಬಾರದೆ ನಾಶವನ್ನು ಹೊಂದುವುವೆಂಬೀವಾದವೂ ಯುಕ್ತವಲ್ಲವಷ್ಟೆ. ಬಂದುವೇಳೆ ಆಮೂರುವಿಧಗಳಾದ ಕರ್ಮಗಳು ಮೂರುಜನ್ಮಗಳನ್ನು ಕೊಡದೆಇದ್ದರೂ ಈಮೂರು ಕರ್ಮಗಳೂ ಸೇರಿ ತಮ್ಮ ಫಲಗಳನ್ನು ಬಂದೇಜನ್ಮದಲ್ಲಿಯಾದರೂಕೊ

ಡುವುವೆಂತಲಾದರೂ ಹೇಳಬೇಡವೆ? ಆರೀತಿಯಾಗಿಯೂ ಹೇಳದೆಹೋ ದರೆ ಕರ್ಮಗಳು ತಮ್ಮಗಳ ಫಲಗಳನ್ನು ಕೊಡುವುವೆಂಬ ವಿಷಯದಲ್ಲಿ ನಂಬಿಕೆ ಯಾರಿಗೆತಾನೆ ಉಂಟಾಗುವುದು ? ಅದನ್ನುಕೂಡ ಅಂಗೀಕ ರಿಸುವ ಪಕ್ಷದಲ್ಲಿ ಕರ್ಮಗಳು ಫಲಗಳನ್ನು ಕೊಡುವುವೆಂಬದಾಗಿ ಪ್ರತಿ ಪಾದಿಸುವ ಶಾಸ್ತ್ರಗಳು ನಿರರ್ಥಕಗಳಾಗುವುವು. ಆದುದರಿಂದ 'ನಸ ಭೂಯೋಭಿಜಾಯತೆ, ಎಂಬದಾಗಿ ಹೇಳಿರುವುದು ಯುಕ್ತವಲ್ಲವೆಂದರೆ ಅದಕ್ಕೆತಕ್ಕ ಪ್ರತ್ಯುತ್ತರವು ಕೊಡಲ್ಪಡುವುದು. ನಿಮ್ಮ ಆಕ್ಷೇಪವು ಯುಕ್ತವಾದದ್ದಲ್ಲವು. ಏತಕ್ಕೆಂದರೆ? "ಕ್ಷೀಯಂತೆಚಾಸ್ಯಕರ್ಮಾಣಿ,, ॥೧॥,, ಎಂತಲೂ, "ಬ್ರಹ್ಮವೇದ ಬ್ರಹ್ಮೇವಭವತಿ॥೨॥,,ಎಂತಲೂ, "ತಸ್ಯತಾವದೇವಚಿರಮಿಷೀಕಾತೂಲ ವತ್ಸರ್ವಕರ್ಮಾಣಿ ಪ್ರದೂಯಂ ತೆ॥೩॥,, ಎಂತಲೂ, ಇವೇ ಮೊದಲಾಗಿರುವ ಅನೇಕ ಶ್ರುತಿಗಳು ಬ್ರಹ್ಮಜ್ಞಾನಿಯಾದವನಿಗೆ ಸರ್ವ ಕರ್ಮ ವಿನಾಶವನ್ನು ಪ್ರತಿಪಾದಿಸು ವುವು. (ಈಶ್ರುತ್ಯರ್ಥವ್ಯಾವದೆಂದರೆ? (೧) ನೇ ಶ್ರು॥ ಅ॥ ಬ್ರಹ್ಮಜ್ಞಾ ನಿಯ ಆಗಾಮಿ ಸಂಚಿತ ಕರ್ಮಗಳೆಲ್ಲವೂ ನಶಿಸಿ ಹೋಗುವುವು. (೨) ನೇಶ್ರು॥ ಅ॥ ಬ್ರಹ್ಮಜ್ಞಾನಿಯು ಬ್ರಹ್ಮವೇ ಆಗುತ್ತಾನೆ. (೩)ನೇಶ್ರು॥ ಅ॥ ಸರ್ವ ಕರ್ಮಗಳು ನಶಿಸುವುದಕ್ಕೆ ಬ್ರಹ್ಮಜ್ಞಾನವಿಲ್ಲದೆ ಇರುವುದೆ ತ ಡೆಯಾಗಿತ್ತು. ಈಬ್ರಹ್ಮಜ್ಞಾನ ವುಂಟಾದಮೇಲೆ ಹತ್ತಿಯ ಸಮೂ ಹವನ್ನು ಅಗ್ನಿಯು ದಹಿಸುವಂತೆ ಸರ್ವ ಕರ್ಮಗಳನ್ನು ಜ್ಞಾನಾಗ್ನಿಯು ದಹಿಸುವುದು.) ಈಗ್ರಂಥದಲ್ಲಿಯೂ "ಯಥೈಧಾಂಸಿಸಮಿದ್ಧೋಗ್ನಿಃ,, (೪॥ ೩೭॥) ಎಂಬಿವೆ ಮೊದಲಾದ ಶ್ಲೋಕಗಳಲ್ಲಿ ಈ ಅರ್ಥವು ಪ್ರತಿ ಪಾದಿಸಲ್ಪಟ್ಟಿರುವುದು. ಮುಂದೆಯೂ ವಿವರಿಸಲ್ಪಡುವುದು. ಮತ್ತು ಯುಕ್ತಿ ಬಲದಿಂದಲೂ ಈ ಅಂಶವನ್ನು ಸಾಧಿಸಬಹುದು. ಅದುಹೇ ಗೆಂದರೆ? ಅಜ್ಞಾನಿಗೆ ಅವಿದ್ಯೆಯಿಂದುಂಟಾಗಿರುವ ರಾಗದ್ವೇಷಾದಿಗ ಳೊಡನೆ ಮಾಡಲ್ಪಡುವುದಾಗಿಯೂ, ಧರ್ಮಾಧರ್ಮ ಕರ್ಮಗಳಿಂದುಂಟಾ ಗುವ ಕ್ಲೇಶಗಳಿಗೆ ಮೂಲಭೂತಗಳಾಗಿಯೂ, ಇರುವ ಕರ್ಮಗಳು ಫ ಲಪ್ರದಗಳಾಗಿಯೇ ಇರುವುದರಿಂದ ಅಂಥಾ ಕರ್ಮಗಳನ್ನು ಮಾಡುವು ದರಿಂದ ಜನ್ಮಾಂತರಗಳುಂಟಾಗುತಲಿರುವುವು. ಆದುದರಿಂದ ಇಲ್ಲಿಯೂ ಅಹಂಕಾರಾಭಿಸಂಧಿಯೊಡನೆ ಮಾಡಲ್ಪಡುವ ಕರ್ಮಗಳು ಫಲಾರಂಭ

ಕಗಳಾಗುವುವು. ಇತರ ಕರ್ಮಗಳು ಆಪ್ರಕಾರವಾಗಲಾರವೆಂಬದಾಗಿ ಶ್ರೀಪರವನಾತ್ಮನೂ ಅಲ್ಲಲ್ಲಿ ಹೇಳಿರುವನು. ಕಿಂಚ "ಬೀಜಾನ್ಯಗ್ನ್ಯು ಪದಗ್ಧಾನಿನರೋಹಂತಿಯಥಾಪುನಃ । ಜ್ಞಾನದಗ್ಧೈಸ್ತಥಾಕ್ಲೇಶೈರ್ನಾತ್ಮಾ ಸಂಪದ್ಯತೆಪುನಃ,, ಎಂಬದಾಗಿ ಉತ್ತರಗೀತಾವಚನವೂ ಇರುವುದು. ಅಜ್ಞನು ಅಹಂಕಾರದೊಡನೆ ಮಾಡುವ ಕರ್ಮಗಳು ಫಲಗಳನ್ನು ಕೊಡದೆ ಹೋಗಲಾರವು. ಆದರೆ ಪ್ರಾಜ್ಞನು ಅಂಥಾ ಅಭಿಮಾನದಿಂದ ಬಿಡಲ್ಪಟ್ಟವನಾದುದರಿಂದ ಅವನ ಕರ್ಮಗಳು ಫಲಪ್ರದಗಳಾಗಲಾರವು. ಆದುದರಿಂದ ಬ್ರಹ್ಮಜ್ಞಾನಿಗೆ ಜನ್ಮಾಂತರಗಳುಂಟಾಗುವುವೆನ್ನುವುದು ಯುಕ್ತವಲ್ಲವು.

ಆದರೂ ಜ್ಞಾನೋತ್ಪತ್ತ್ಯನಂತರದಲ್ಲಿ ಮಾಡಲ್ಪಟ್ಟ ಕರ್ಮಗಳು ಜ್ಞಾನ ಸಹಭಾವಿಯಾಗಿರುವುದರಿಂದ (ಜ್ಞಾನವಿರುವಲ್ಲಿ ಇದ್ದವಾದುದರಿಂದ) ಜ್ಞಾನಾಗ್ನಿಯಿಂದ ದಹಿಸಲ್ಪಡಬಹುದು. ಈ ಜನ್ಮದಲ್ಲಿ ಜ್ಞಾನೋತ್ಪತ್ತಿಗೆ ಪೂರ್ವದಲ್ಲಿ ಮಾಡಲ್ಪಟ್ಟೂ, ಹಿಂದೆ ತೀರಿಹೋಗಿರುವ ಅನೇಕಜನ್ಮಗಳಲ್ಲಿ ಮಾಡಲ್ಪಟ್ಟೂ ಗುಂಪು ಗುಂಪಾಗಿ ಇರುವ ಕರ್ಮಗಳು ದಹಿಸಲ್ಪಡುವುವೆಂದು ಹೇಳುವುದು ಯುಕ್ತವಲ್ಲವೆಂದರೆ ಅದಕ್ಕುತ್ತರವು. ಹಿಂದೆ ಉದಹರಿಸಿರುವ ಶ್ರುತಿಗಳಲ್ಲಿ ಸರ್ವ ಕರ್ಮಗಳೂ ನಶಿಸಿಹೋಗುವುವೆಂದಲ್ಲವೆ ಹೇಳಲ್ಪಟ್ಟಿರುತ್ತದೆ. ಸರ್ವ ಕರ್ಮಗಳೆಂದರೆ ಜ್ಞಾನೋತ್ಪತ್ತಿಯಾದಬಳಿಕ ಮಾಡಲ್ಪಟ್ಟ ಸರ್ವ ಕರ್ಮಗಳೆಂದು ಹೇಳುವುದಕ್ಕಾಗಲಾರದು. ಆರೀತಿಯಾಗಿ ಸಂಕೋಚಮಾಡಿ ಕೆಲವು ಕರ್ಮಗಳನ್ನೇ ಸರ್ವ ಶಬ್ದದಿಂದ ಹೇಳುವುದಕ್ಕೆ ಕಾರಣವಿಲ್ಲವಷ್ಟೆ.

ಆದರೂ ಜ್ಞಾನವು ಉತ್ಪನ್ನವಾಗಿದ್ದರೂ ವರ್ತಮಾನ ಶರೀರವು ಉಂಟಾಗುವುದಕ್ಕೆ ಕಾರಣಗಳಾದ ಪ್ರಾರಬ್ಧಕರ್ಮಗಳು ಫಲಗಳನ್ನುಂಟುಮಾಡದೆ ನಾಶವೊಂದದಂತೆ ಪ್ರಾರಬ್ಧೇತರ ಕರ್ಮಗಳೂ ಫಲಪ್ರದಾನಮಾಡದೆ ನಾಶವೊಂದುವುದಿಲ್ಲವೆಂದರೆ ಅದೂ ಯುಕ್ತವಲ್ಲವು. ಪ್ರಾರಬ್ಧಕರ್ಮಗಳು ಬಿಡಲ್ಪಟ್ಟ ಬಾಣದಂತೆ ಒಂದುಕಾರ್ಯವನ್ನುಮಾಡುವುದಕ್ಕೆ ನಿರ್ಣಯಿಸಲ್ಪಟ್ಟಿರುವುವು. ಅದು ಹೇಗೆಂದರೆ? ಲಕ್ಷ್ಯವಸ್ತುವಾಗಿಬೇಕಿಟ್ಟಿಕೊಳ್ಳಲ್ಪಟ್ಟ ವಸ್ತುವನ್ನು ಹೊಡೆಯುವುದಕ್ಕಾಗಿ ಧನುಸ್ಸಿನಿಂದ ಬಿಡಲ್ಪಟ್ಟಬಾಣವು ಲಕ್ಷ್ಯವನ್ನು ಹೊಂದಿದನಂತರದ

ಲ್ಲಿಯೂಕೂಡ ವೇಗವಿರುವವರೆಗೂ ಹೋಗಿ ವೇಗವು ಮಂದವಾದಮೇಲೆ ಕೆಳಗೆ ಬೀಳುವುದು. ಆಪ್ರಕಾರವೆ ಶರೀರೋತ್ಪತ್ತಿಗೆ ಕಾರಣವಾಗಿರುವ ಪ್ರಾರಬ್ಧ ಕರ್ಮವು ಶರೀರಸ್ಥಿತಿ ರೂಪವಾದ ಪ್ರಯೋಜನವು ಪೂರ್ತಿಯಾದರೂ ಸಂಸ್ಕಾರವೆಂಬ ವೇಗವಿರುವವರೆಗೂ ಇರುವುದು. ಮತ್ತು ಲಕ್ಷ್ಯದಮೇಲೆ ವ್ಯಾಪಿಸುವುದಕ್ಕೆ ಸಾಧನವಾದವೇಗವು ಉಂಟಾಗುವಂತೆ ಬಿಡಲ್ಪಡದ ಆಬಾಣವೇ ಧನುಸ್ಸಿನಲ್ಲಿ ಸೇರಿಸಲ್ಪಟ್ಟ ಮಾತ್ರದಿಂದಲೆ ಕೆಲಸವನ್ನು ಮಾಡಲಾರದಷ್ಟೆ. ಆಪ್ರಕಾರವೆ ಪ್ರಾರಬ್ಧೇತರ ಕರ್ಮಗಳು ಜ್ಞಾನೋತ್ಪತ್ತ್ಯನಂತರದಲ್ಲಿ ಅಂತಃಕರಣದಲ್ಲಿ ಸೇರಿಯಿದ್ದರೂ ಅಗ್ನಿಯಿಂದ ದಹಿಸಲ್ಪಟ್ಟ ಬೀಜವು ಹೇಗಾದರೆ ಮೊಳಕೆಗೆ ಸಮರ್ಥವಾಗಲಾರದೊ ಅದರಂತೆ ಜ್ಞಾನವೆಂಬ ಬೆಂಕಿಯಿಂದ ದಹಿಸಲ್ಪಟ್ಟು ನಿಸ್ಸಾರವಾಗಿ ಮಾಡಲ್ಪಟ್ಟಿರುವುದರಿಂದ ಬ್ರಹ್ಮಜ್ಞಾನಿಯುತನ್ನಶರೀರವನ್ನು ಬಿಟ್ಟಮೇಲೆ “ನಸಭೂಯೋಭಿಜಾಯತೆ,,ಎಂಬದಾಗಿ ಪುನಶ್ಚ ಜನ್ಮವನ್ನುಯೆತ್ತಲಾರನೆಂದುಹೇಳಿರುವುದು ಯುಕ್ತವಾಗಿಯೇ ಇರುವುದು.

‘ಸರ್ವಥಾವರ್ತಮಾನೋಽಪಿ, ಎಂಬದಾಗಿ ಅಪಿಶಬ್ದ ಪ್ರಯೋಗವನ್ನು ಮಾಡಿರುವುದಕ್ಕೆ ಹಿಂದೆ ಹೇಳಿರುವ ಪ್ರಕಾರವಾಗಿ ಯಾವನಾದರೆ ತಿಳಿದುಕೊಳ್ಳುತ್ತಾನೆಯೊ ಅಂತವನು ಶಾಸ್ತ್ರೋಕ್ತ ವಿಧಿಗಳನ್ನ ತಿಕ್ರಮಿಸಿದವನಾಗಿದ್ದರೂ ಪುನಶ್ಚ ಜನ್ಮವನ್ನು ಯೆತ್ತದೆ. ಮುಕ್ತನಾಗುವನು. ಹೀಗಿರುವಲ್ಲಿ ಇಂಥಾ ಸಂದರ್ಭಗಳಲ್ಲಿ ಯುಕ್ತಪ್ರವರ್ತನವುಳ್ಳವನು ಪೂರ್ವೋಕ್ತಪ್ರಕಾರವಾಗಿ ತಿಳಿದುಕೊಂಡವನೆ ಆದರೆ ಅಂತವನು ಮುಕ್ತನಾಗುವನೆಂಬದಾಗಿ ಬೇರೆ ಹೇಳಬೇಕೇ? ಎಂಬ ಅಭಿಪ್ರಾಯವನ್ನು ತಿಳಿಯಬೇಕು. ॥೨೩॥

(ಮ॥ ಭಾ॥) ಪೂರ್ವೋಕ್ತಪ್ರಕಾರವಾಗಿ ಯಾವನಾದರೆ ಪರಮಾತ್ಮನನ್ನು ಪ್ರತ್ಯಕ್ಷವಾಗಿ ತಿಳಿಯುತ್ತಾನೊ ಅವನುಪುನಶ್ಚ ಹುಟ್ಟುವುದಿಲ್ಲವೆಂಬುವುದಕ್ಕೆ ‘ಯಾವನಾದರೆ ತನ್ನನ್ನೇ ಬ್ರಹ್ಮವೆಂದು ತಿಳಿಯುತ್ತಾನೊ ಅವನು ಹುಟ್ಟುವುದಿಲ್ಲವೆಂಬದಾಗಿ ಕೆಲವರು ಹೇಳುವ ಅರ್ಥ'ವು ಯುಕ್ತವಾದದ್ದಲ್ಲವು. ಪುರುಷನೆ ನಾನೆಂದು ಹೇಳಬಾರದು ಜನಮೇಜಯ ವೈಶಂಪಾಯನ ಸಂವಾದರೂಪವಾದ ಶ್ರೀಮಹಾಭಾರತ

ಮೋಕ್ಷ ಧರ್ಮ ಪರ್ವದಲ್ಲಿ "ಬಹವಃ ಪುರುಷಾಬ್ರಹ್ಮನ್ ಉತಾಹೋಏಕ ಏವತು । ಕೋಹ್ಯತ್ರಪುರುಷಶ್ರೇಷ್ಠಸ್ತಂಭವಾನ್ವಕ್ತುಮರ್ಹತಿ,, ಎಂಬದಾಗಿ ಮಾಡಲ್ಪಟ್ಟ ಪ್ರಶ್ನೆಗೆ "ನೈತದಿಚ್ಛಂತಿ ಪುರುಷಮೇಕಂಕುರುಕುಲೋದ್ಭವ । ಬಹೂನಾಂಪುರುಷಾಣಾಂಹಿಯಥೈಕಾಯೋನಿರುಚ್ಯತೇ॥ತಂತಥಾಪುರುಷಂವಿಶ್ವಮಾಖ್ಯಾಸ್ಯಾಮಿಗುಣಾಧಿಕಂ,,॥ ಎಲೈಬ್ರಾಹ್ಮಣೋತ್ತಮನೇ! ಪುರುಷರನೇಕರಾಗಿರುವರೋ? ಅಥವಾಒಬ್ಬನೋ? ಅನೇಕರಾಗಿರುವ ಪಕ್ಷದಲ್ಲಿ ಅವರಲ್ಲಿ ಶ್ರೇಷ್ಠನಾದವನು ಯಾವನು ? ಅವನನ್ನು ನೀವು ನನಗೆ ಹೇಳಬೇಕು. ಎಂಬೀ ಪ್ರಶ್ನೆಕ್ಕೆ ಪ್ರತಿವಚನವಾಗಿ 'ಪುರುಷರೆಲ್ಲರೂ ಒಂದೇ, ಎಂಬ ಮತವನ್ನು ಜ್ಞಾನಿಗಳು ಸಮ್ಮತಿಸಲಾರರು. ಅನೇಕ ಪುರುಷರಲ್ಲಿ ಸಮಸ್ತಕ್ಕೂ ಕಾರಣನಾಗಿರುವ ಪುರುಷನು ಒಬ್ಬನೆಂತಲೆ ಹೇಳಲ್ಪಡುವನು. ಆಪ್ರಕಾರವಾಗಿ ಸಮಸ್ತಕ್ಕೂ ಕಾರಣನಾಗಿಯೂ ಅನೇಕ ಕಲ್ಯಾಣಗುಣಗಳೊಡನೆ ಕೂಡಿಯೂ ಇರುವ ಪುರುಷನನ್ನು ಜ್ಞಾನಿಗಳಂಗೀಕರಿಸುವ ಪ್ರಕಾರವಾಗಿ ನಾನು ನಿನಗೆಹೇಳಿರುವೆನು ಕೇಳೆಂದೀಶ್ಲೋಕಗಳ ಅಭಿಪ್ರಾಯವು. ಈ ಪ್ರಶ್ನ ಪ್ರತಿವಚನಗಳಲ್ಲಿ ಆತ್ಮಭೇದವು ಅಂಗೀಕೃತವಾಗಿರುವುದರಿಂದ ನಾನೆ ಬ್ರಹ್ಮನೆಂಬದಾಗಿ ಯಾವನಾದರೇ ತಿಳಿಯುತ್ತಾನೆಯೊ ಎಂಬದಾಗಿ ಮಾಡಲ್ಪಟ್ಟ ಅರ್ಥವರ್ಣನವು ಯುಕ್ತವಲ್ಲವು. ... ॥೨೩॥

(ಗೀ॥ ವಿ॥) ಜೀವನು, ಪರನು, ಎಂಬೀ ದ್ವಿವಿಧರಾದ ಪುರುಷರನ್ನೂ ಜಡಾಜಡಗಳೆಂಬೀ ದ್ವಿವಿಧ ಪ್ರಕೃತಿಗಳನ್ನೂ ಅವುಗಳ ಗುಣಗಳೊಡನೆ ಕೂಡ ಪ್ರತ್ಯಕ್ಷವಾಗಿ ಯಾವನಾದರೆ ತಿಳಿಯುತ್ತಾನೆಯೊ ಅವನು ಅಜಾಗ್ರತೆಯಿಂದ ಕ್ರಮತಪ್ಪಿ ನಡದಾಗ್ಯೂ ಪುನಃ ಜನ್ಮವನ್ನೆತ್ತಲಾರನು. ... ... ॥೨೪॥

ಶ್ಲೋ ॥ ಧ್ಯಾನೇನಾತ್ಮನಿಪಶ್ಯಂತಿಕೇಚಿದಾತ್ಮಾನಮಾತ್ಮನಾ।ಅನ್ಯೇಸಾಂಖ್ಯೇನಯೋಗೇನಕರ್ಮಯೋಗೇನಚಾಪರೇ॥ ... ॥೨೫॥

ಪ॥ ಧ್ಯಾನೇನ- ಆತ್ಮನಿ- ಪಶ್ಯಂತಿ- ಕೇಚಿತ್- ಆತ್ಮಾನಂ- ಆತ್ಮನಾ । ಅನ್ಯೇ- ಸಾಂಖ್ಯೇನ- ಯೋಗೇನ- ಕರ್ಮಯೋಗೇನ- ಚ- ಅಪರೇ ॥

(ಅ॥ ರಾ॥) ಕೇಚಿತ್- ನಿಷ್ಪನ್ನಯೋಗರಾದ ಕೆಲವು ಅಧಿಕಾರಿಗಳು, ಆತ್ಮನಿ- ಶರೀರದಲ್ಲಿ, (ಅವಸ್ಥಿತಂ ಯೆಂಬದಾಗಿ ಸೇರಿಸಿಕೊಳ್ಳಬೇಕು.) ಅವಸ್ಥಿತಂ- ಇರುತಲಿರುವ, ಆತ್ಮಾನಂ- ಜೀವಾತ್ಮನನ್ನು ಆತ್ಮನಾ- ಮನಸ್ಸಿನಿಂದ, ಧ್ಯಾನೇನ- ನಿರಂತರ ಚಿಂತನವೆಂಬ ಧ್ಯಾನಯೋಗದಿಂದ, ಪಶ್ಯಂತಿ- ಸಾಕ್ಷಾತ್ಕರಿಸುತ್ತಾರೆ. ಅನ್ಯೇ- ಯೋಗನಿಷ್ಪತ್ತಿ ರಹಿತರಾದ ಬೇರೆಬೇರೆ ಕೆಲವು ಅಧಿಕಾರಿಗಳು, ಸಾಂಖ್ಯೇನ ಯೋಗೇನ- ಜ್ಞಾನಯೋಗದಿಂದ, (ಇಲ್ಲಿ 'ಯೋಗ್ಯಂಮನಃಕೃತ್ವಾ, ಎಂಬದಾಗಿ ಮೂರುಪದಗಳನ್ನು ಸೇರಿಸಿಕೊಳ್ಳಬೇಕು.) ಆತ್ಮಸಾಕ್ಷಾತ್ಕಾರಕ್ಕೆ ಯೋಗ್ಯವಾಗಿರುವಂತೆ ಮನಸ್ಸನ್ನು ಮಾಡಿಕೊಂಡು, ಆತ್ಮಾನಂಪಶ್ಯಂತಿ- ಜೀವಾತ್ಮನನ್ನು ಸಾಕ್ಷಾತ್ಕರಿಸುತ್ತಾರೆ. ಅಪರೆ- ಜ್ಞಾನಯೋಗದಲ್ಲಿ ಅಧಿಕಾರವಿಲ್ಲದವರಾಗಿಯೂ ಸುಲಭೋಪಾಯದಲ್ಲಾಸಕ್ತಿ ಯುಳ್ಳವರಾಗಿಯೂ ಯೋಗ್ಯರೆಂಬ ಪ್ರಸಿದ್ಧಿ ಯುಳ್ಳವರಾಗಿಯೂ ಇರುವ ಕೆಲವು ಅಧಿಕಾರಿಗಳು, ಕರ್ಮಯೋಗೇನ- ಆತ್ಮಜ್ಞಾನಗರ್ಭವಾದ ಕರ್ಮಯೋಗದಿಂದ, (ಮನಸಃ ಯೋಗ ಯೋಗ್ಯ ತಾಮಾಪಾದ್ಯ- ಎಂಬದಾಗಿ ಇಲ್ಲಿಯೂ ಮೂರುಪದಗಳನ್ನು ಸೇರಿಸಿಕೊಳ್ಳಬೇಕು. ಮನಸ್ಸಿಗೆ ಆತ್ಮದರ್ಶನ ಯೋಗ್ಯತೆಯನ್ನುಂಟುಮಾಡಿಕೊಂಡು, ಆತ್ಮಾನಂಪಶ್ಯಂತಿ-ಜೀವಾತ್ಮನನ್ನು ಸಾಕ್ಷಾತ್ಕರಿಸುವರು. ‖೨೪‖

(ಶಂ॥ ಭಾ॥) ಇಲ್ಲಿ ಆತ್ಮದರ್ಶನಕ್ಕೆ ಯೋಗ್ಯಗಳಾದ ಧ್ಯಾನಾದ್ಯನೇಕ ಉಪಾಯಗಳಿರುವುವು. ಅವುಗಳನ್ನು ತಿಳಿಸುವೆನುಕೇಳು. ಉತ್ತಮಾಧಿಕಾರಿಗಳು ಧ್ಯಾನದಿಂದ ಅಂತಃಕರಣ ನಿಷ್ಠವಾದ ಸ್ವಸ್ವರೂಪವನ್ನು ತಿಳಿದುಕೊಳ್ಳುವರು. ಧ್ಯಾನವೆಂದರೆ ಕಿವಿಯೇ ಮೊದಲಾದ ಇಂದ್ರಿಯಗಳನ್ನು ಶಬ್ದಾದಿವಿಷಯಗಳ ದಶೆಯಿಂದ ನಿವರ್ತಿಸಿ ಮನಸ್ಸಿನಲ್ಲಿ ಸೇರಿಸಿ ಆಮನಸ್ಸನ್ನು ಆತ್ಮನಲ್ಲಿ ಏಕಾಗ್ರವಾಗಿ ಲಯಿಸುಂತೆ ಮಾಡಿ ತೈಲಧಾರೆಯಂತೆ ಅವಿಚ್ಛಿನ್ನವಾದ ಯಾವ ಚಿಂತನಮುಂಟೊ ಅದನ್ನೇ ಧ್ಯಾನವೆನ್ನುವರು. "ಧ್ಯಾಯತೀವಕಃಧ್ಯಾಯತೀವ ಪೃಥಿವೀಧ್ಯಾಯನ್ತೀವಪರ್ವತಾಃ,, ಎಂಬದಾಗಿ ಈಧ್ಯಾನಕ್ಕೆ ಶ್ರುತಿ ಪ್ರಮಾಣವೂ ಇರುವುದು. ಜಲವು ಭೂಮಿಯು ಪರ್ವತಗಳು ಇವುಗಳಂತೆ ಚಿತ್ತವನ್ನು ಶುದ್ಧವಾಗಿಯೂ ಸ್ಥಿರವಾಗಿಯೂ ನಿಶ್ಚಲ

 

ವಾಗಿಯೂ ಮಾಡಿಕೊಂಡು ಏಕಾಗ್ರವಾಗಿ ಧ್ಯಾನ ಮಾಡಬೇಕೆಂಬ ದಾಗಿ ಈಶ್ಲೋಕತ್ತ್ಯರ್ಥವು. ಮತ್ತು ಕೆಲವು ಮಧ್ಯಮಾಧಿಕಾರಿಗಳು ಸಾಂಖ್ಯದಿಂದ ಅಂತಃಕರಣ ನಿಷ್ಠವಾದ ಆತ್ಮವನ್ನು ತಿಳಿದುಕೊಳ್ಳುವರು ಸಾಂಖ್ಯ ವೆಂದರೆ ಸತ್ವ ರಜಸ್ತಮೋಗುಣಗಳನ್ನು ನೋಡುವಂತವನಾಗಿಯೂ ಅವುಗಳಿಗಿಂತಲೂ ಭಿನ್ನನಾಗಿಯೂ ಅವುಗಳವ್ಯಾಪಾರಗಳಿಗೆ ಸಾಕ್ಷಿಭೂತನಾಗಿಯೂ ನಿತ್ಯನಾಗಿಯೂ ಗುಣವಿಲಕ್ಷಣನಾಗಿಯೂ ಇರುವ ಆತ್ಮನೇ ನಾನೆಂಬದಾಗಿಚಿಂತಿಸುವಿಕೆಯೆ. ಕೆಲವು ಅಧಮಾಧಿಕಾರಿಗಳು ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನನುಷ್ಠಿಸಿ ಅದರಿಂದ ಚಿತ್ತಶುದ್ಧಿಯನ್ನೂ ಆದರಿಂದ ಜ್ಞಾನವನ್ನೂ ಹೊಂದಿ ಆತ್ಮಸ್ವರೂಪವನ್ನು ತಿಳಿದುಕೊಳ್ಳುವರು. ಕರ್ಮಯೋಗೇನ ಯೆಂಬುವಸ್ಥಾನದಲ್ಲಿರುವ ಯೋಗಶಬ್ದವು ಗೌಣಾರ್ಥಕ ವಲ್ಲದೆ ಮುಖ್ಯಾರ್ಥವಲ್ಲವು. ಯೋಗಾರ್ಥವಾಗಿರುವುದರಿಂದ ಕರ್ಮವೇ ಯೋಗವೆನ್ನಲ್ಪಡುವುದು. ಎಂದರೆ ಚಿತ್ತೈಕಾಗ್ರ್ಯವೆ ಯೋಗವೆನ್ನಲ್ಪಡುವುದು. ಅದಕ್ಕೆ ಸಾಧನವಾಗಿರುವ ಚಿತ್ತಶುದ್ಧಿಯನ್ನುಂಟುಮಾಡುವುದರಿಂದ ಕರ್ಮವೂ ಯೋಗವೆನ್ನಲ್ಪಟ್ಟಿತು. ಆದುದರಿಂದಲೆ ಗೌಣವೃತ್ತಿಯಿಂದ ಯೋಗವೆನ್ನಲ್ಪಟ್ಟಿತೆಂದು ಭಾವವು. ॥೨೪॥

(ಮ॥ ಭಾ॥) ಕರ್ಮಯೋಗಿಯಾದವನಿಗೆ ಕರ್ಮಯೋಗ ಸಾಂಖ್ಯಯೋಗ ಧ್ಯಾನಯೋಗವೆಂಬೀ ಮೂರೂಅವಶ್ಯಾಪೇಕ್ಷಿತವಾಗಿರುವುದು. ಸಾಂಖ್ಯಯೋಗಿಯು ವೇದೋಕ್ತವಾಗಿರುವ ಈಶ್ವರರೂಪವನ್ನುಕೇಳಿಯೂನೋಡಿಯೂ ಚಿಂತಿಸಿಯೂ ಧ್ಯಾನಿಸಿಯೂ ತಿಳಿದುಕೊಳ್ಳಬೇಕು. ... ॥೨೪॥

(ಗೀ॥ ವಿ॥) ಕೆಲವರು ಶ್ರವಣಮನನದೊಡನೆ ಕೂಡಿಕೊಂಡವರಾಗಿ ಧ್ಯಾನದಿಂದಲೂ ಬುದ್ಧಿಯಿಂದಲೂ ಪರಮಾತ್ಮನನ್ನು ದೇಹದಲ್ಲಿ ನೋಡುತ್ತಾರೆ. ಕೆಲವರು ವೇದೋಕ್ತವಾದ ಭಗವತ್ಸ್ವರೂಪದ ಅಪರೋಕ್ಷ ಜ್ಞಾನದಿಂದಲೂ ಧ್ಯಾನದಿಂದಲೂ ನೋಡುತ್ತಾರೆ. ಸಾಧು ಕರ್ಮದಿಂದುಂಟಾಗುವುದು ಭಗವತ್ಪ್ರಸಾದವು. ಅಂಥಾ ಭಗವತ್ಪ್ರಸಾದದಿಂ ದುಂಟಾಗುವ ಶ್ರವಣಮನನ ಧ್ಯಾನಗಳಿಂದ ಪರಮಾತ್ಮನನ್ನು ತಿಳಿಯುತ್ತಾರೆ. ಧ್ಯಾನಕ್ಕೆ ಅಶಕ್ತರಾದ ಮತ್ತೆ ಕೆಲವರು

ಸಾಂಖ್ಯ ಸಂಪಾದನದಿಂದ ಧ್ಯಾನವನ್ನು ಸಂಪಾದಿಸಿಕೊಂಡು ನೋಡುತ್ತಾರೆ. ಇದರಲ್ಲಿಯೂ ಅಶಕ್ತರಾದವರು ಕರ್ಮೋಪಾಯದಿಂದ ಶ್ರವಣ ಮನನಾದಿಗಳನ್ನು ಸಂಪಾದಿಸಿಕೊಂಡು ಅವುಗಳಿಂದ ಪರಮಾತ್ಮನನ್ನು ನೋಡುತ್ತಾರೆ. ॥೨೪॥

ಶ್ಲೋ॥ ಅನ್ಯೇತ್ವೇವಮಜಾನಂತಃಶ್ರುತ್ವಾನ್ಯೇಭ್ಯಉಪಾಸತೇ । ತೇಪಿಚಾತಿತರಂತ್ಯೇವ ಮೃತ್ಯುಂಶ್ರುತಿಪರಾಯಣಾಃ॥ ॥೨೫॥

ಪ॥ ಅನ್ಯೇ- ತು- ಏವಂ-ಅಜಾನಂತಃ-ಶ್ರುತ್ವಾ- ಅನ್ಯೇಭ್ಯಃ- ಉಪಾಸತೇ । ತೇ- ಅಪಿ- ಚ- ಅತಿತರಂತಿ- ಏವ- ಮೃತ್ಯುಂ- ಶ್ರುತಿ ಪರಾಯಣಾಃ ॥

(ಅ॥ ರಾ॥ ಏವಮಜಾನಂತಃ- ಪೂರ್ವೋಕ್ತಪ್ರಕಾರವಾಗಿ ಆತ್ಮಾವಲೋಕನ ಸಾಧನಗಳಲ್ಲಿ ಜ್ಞಾನರಹಿತರಾದ, ಅನ್ಯೇತು- ಬೇರೆ ಕೆಲವು ಅಧಿಕಾರಿಗಳು. ಅನ್ಯೇಭ್ಯಶ್ಶ್ರುತ್ವಾ- ಬೇರೆ ಕೆಲವು ತತ್ವಜ್ಞಾನಿಗಳದೆಶೆಯಿಂದ ಕೇಳಿಕೊಂಡು, ಉಪಾಸತೇ-ಕರ್ಮಯೋಗಾದಿಗಳಿಂದ ಆತ್ಮೋಪಾಸನವನ್ನು ಮಾಡುತ್ತಾರೆ. ಶ್ರುತಿ ಪರಾಯಣಾಃ- ಶ್ರವಣಮಾತ್ರನಿಷ್ಠರಾಗಿಯೂ(ಶ್ರವಣನಿಷ್ಠರೂ ಪಾಪರಹಿತರಾಗಿ ಕ್ರಮವಾಗಿಕರ್ಮಯೋಗಾದಿಗಳನ್ನಾರಂಭಿಸಿ ಅವುಗಳಿಂದ ಮೃತ್ಯುವನ್ನತಿಕ್ರಮಿಸುವರು.) ಆಶ್ರವಣ ನಿಷ್ಠೆಯಿಂದ ಪಾಪರಹಿತರಾಗಿಯೂ ಇರುವ,(ಶಂ) ಗುರೂಪದೇಶವೇ ಮೋಕ್ಷಕ್ಕೆ ಮುಖ್ಯಸಾಧನವೆಂದು ತಿಳಿದು ಅವರಉಪದೇಶಪ್ರಕಾರವಾಗಿ ಅನುಷ್ಠಿತಲಿರುವವರಾಗಿಯೂ, ಅನೇಕ ಕಾಲಗಳವರೆಗೂ ಶ್ರವಣಮಾಡಿದವರಾಗಿಯೂ ಇರುವ, ತೇಪಿಚ ಮೃತ್ಯುಮತಿತರಂತ್ಯೇವ- ಅಂತವರೂ ಅತ್ಮ ಸಾಕ್ಷಾತ್ಕಾರದಿಂದ ಸಂಸಾರವನ್ನು ಅತಿಕ್ರಮಿಸುವರು. ... ॥೨೫॥

ಶ್ಲೋ ॥ ಯಾವತ್ಸಂಜಾಯತೇಕಿಂಚಿತ್ಸತ್ವಂಸ್ಥಾವರಜಂಗಮಂ । ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿಭರತರ್ಷಭ॥ ... ।೨೬।

ಪ॥ ಯಾವತ್- ಸಂಜಾಯತೇ- ಕಿಂಚಿತ್- ಸತ್ವಂ- ಸ್ಥಾವರಜಂಗಮಂ । ಕ್ಷೇತ್ರಕ್ಷೇತ್ರಜ್ಞಸಂಯೋಗಾತ್- ತತ್-ವಿದ್ಧಿ- ಭರತರ್ಷಭ॥

(ಅ॥ರಾ॥)ಇನ್ನು ಮುಂದೆ ಪ್ರಕೃತಿಯೊಡನೆ ಸೇರಿರುವ ಜೀವಾತ್ಮನ ವಿವೇಕಾನುಸಂಧಾನ ಪ್ರಕಾರವನ್ನು ಹೇಳುವುದಕ್ಕಾಗಿ ಸ್ಥಾವರಜಂಗಮರೂಪವಾದ ಪ್ರಾಣಿಸಮೂಹವೆಲ್ಲವೂ ಚೇತನಾಚೇತನಗಳ ಸಂಸರ್ಗದಿಂದ ಉಂಟಾಗಿರುವುವೆಂದು ಹೇಳುತ್ತಾರೆ. ಭರತರ್ಷಭ- ಭರತವಂಶ್ಯರಾದ ರಾಜರಲ್ಲಿ ಶ್ರೇಷ್ಠನಾದ ಎಲೈಅರ್ಜುನನೆ, ಯಾವತ್ಸತ್ವಂ- ಯೆಷ್ಟುವಸ್ತುವು, ಕಿಂಚಿತ್- ಯಾವದಾದರೂ, ಸ್ಥಾವರ ಜಂಗಮಂ- ಸ್ಥಾವರರೂಪವಾಗಿಯಾದರೂ ಜಂಗಮರೂಪವಾಗಿಯಾದರೂ, ಸಂಜಾಯತೆ- ಹುಟ್ಟುವುದೋ, ತತ್- ಅವೆಲ್ಲವೂ, ಕ್ಷೇತ್ರಕ್ಷೇತ್ರಜ್ಞ ಸಂಯೋಗಾತ್- ಅಚೇತನವಾದ ಕ್ಷೇತ್ರವೇನು ಚೇತನನಾದ ಕ್ಷೇತ್ರಜ್ಞನಾಗಿರುವ ಜೀವಾತ್ಮನೇನು, ಇವರ ಪರಸ್ಪರ ಸಂಸರ್ಗದಿಂದಲೆ,ವಿದ್ಧಿ ಉಂಟಾದದ್ದೆಂದು ತಿಳಿದುಕೊಳ್ಳು. ಈಪ್ರಕಾರವಲ್ಲದೆ ಚೇತನವೇ ಬೇರೆಯಾಗಿಯೂ ಅಚೇತನವೆ ಬೇರೆಯಾಗಿಯೂ ಹುಟ್ಟುವುದಿಲ್ಲವೆಂದುತಿಳಿದುಕೊಳ್ಳೆಂದು ಭಾವವು.

(ಶ್ರೀ) ಅವಿವೇಕದಿಂದ ದೇಹಾದಿಗಳಲ್ಲುಂಟಾಗಿರುವ ಆತ್ಮಬುದ್ಧಿಯೆ ಕ್ಷೇತ್ರಕ್ಷೇತ್ರಜ್ಞರ ಸಂಬಂಧವೆನ್ನಲ್ಪಡುವುದು. ॥೨೬॥

(ಶಂ॥ ಭಾ॥) "ಯದ್ಜ್ಞಾತ್ವಾಮೃತಮಶ್ನುತೆ," (೧೩॥ ೧೩) ಎಂಬ ಶ್ಲೋಕದಲ್ಲಿ ಕ್ಷೇತ್ರಕ್ಷೇತ್ರಜ್ಞರ ಐಕ್ಯಜ್ಞಾನವೇ ಮೋಕ್ಷಸಾಧನವೆಂಬದಾಗಿ ಹೇಳಲ್ಪಟ್ಟಿರುವುದು. ಅದು ಯಾವದರಿಂದ ಎಂದರೆ ಅದಕ್ಕೆ ತಕ್ಕಕಾರಣವನ್ನು ಹೇಳುವೆನುಕೇಳು. ಎಲೈ ಅರ್ಜುನನೆ ಜಂಗಮಸ್ಥಾವರ ರೂಪಗಳಾದ ಸಮಸ್ತ ವಸ್ತುಗಳುಕ್ಷೇತ್ರಕ್ಷೇತ್ರಜ್ಞರಸಂಯೋಗದಿಂದ ಹುಟ್ಟುವುವೆಂದರಿಯಬೇಕು. ಕ್ಷೇತ್ರಕ್ಷೇತ್ರಜ್ಞರಸಂಯೋಗವೆಂದರೆ? ಕ್ಷೇತ್ರಜ್ಞನು ಆಕಾಶದಂತೆ ನಿರವಯವನಾಗಿರುವುದರಿಂದ, ರಜ್ಜುವಿನಿಂದ ಘಟವು ಕಟ್ಟಿ ಇಟ್ಟಿರುವಾಗ ಈ ಯೆರಡೂ ಒಂದಕೊಂದು ಸೇರಿರುವಂತೆ ಕಾಣುವಹಾಗೆ ಈಕ್ಷೇತ್ರಕ್ಷೇತ್ರಜ್ಞಸಂಯೋಗವಿರುವುದು. ಕ್ಷೇತ್ರಕ್ಷೇತ್ರಜ್ಞರಲ್ಲಿ ಒಂದಕೊಂದು ಕಾರಣವೆಂತಲಾದರೂ ಒಂದರಿಂದಒಂದು ಹುಟ್ಟಿರುವುದೆಂತಲಾದರೂ ಹೇಳುವುದಕ್ಕೆ ಸಾಧನವಿಲ್ಲವಾದುದರಿಂದ ಒಂದರಲ್ಲೊಂದು ಕಲೆತಿರುವುದೆಂತಲೂ ಹೇಳುವುದಕ್ಕಾಗಲಾರದು. ಆದರೆ ಸಂಯೋಗವೆಂಬುವುದುತಾನೆ ಯಾವದು? ಎಂದರೆ ಕ್ಷೇತ್ರದ ಜಡತ್ವಾದಿ ಧರ್ಮಗಳನ್ನು

ಕ್ಷೇತ್ರಜ್ಞನಲ್ಲಿಯೂ ಕ್ಷೇತ್ರಜ್ಞನ ಚೈತನ್ಯ ಸ್ವಭಾವವನ್ನು ಕ್ಷೇತ್ರದಲ್ಲಿಯೂ ಆರೋಪಿಸುವಿಕೆ ಎಂಬುವುದೇ ಸಂಯೋಗ(ಅಧ್ಯಾಸ) ವೆನ್ನಲ್ಪಡುವುದು. ಕ್ಷೇತ್ರವು ವಿಷಯವು, ಕ್ಷೇತ್ರಜ್ಞನು ವಿಷಯಿ ಈ ಇಬ್ಬರ ಸ್ವಭಾವವೂ ಭಿನ್ನಭಿನ್ನವಾಗಿಯೆ ಇರುವುದು. ಕ್ಷೇತ್ರಕ್ಷೇತ್ರಜ್ಞರ ನಿಜಸ್ವರೂಪವನ್ನು ತಿಳಿಯದೇ ಇರುವುದರಿಂದ ಅಂತಹ ಆರೋಪಣವುಂಟಾಗುವುದು. ರಜ್ಜುಶುಕ್ತ್ಯಾದಿಗಳಲ್ಲಿ (ಹಗ್ಗವು, ಮುತ್ತಿನ ಚಿಪ್ಪು, ಇದೇ ಮೊದಲಾದವುಗಳಲ್ಲಿ) ಸರ್ಪ ರಜತಾದಿಗಳು ಭ್ರಾಂತಿಯಿಂದ ಆರೋಪಿಸಲ್ಪಡುವುವೆಂಬೀ ಅಂಶವೂ ಲೋಕಪ್ರಸಿದ್ಧವಾಗಿಯೇ ಇರುವುದು. ಆಪ್ರಕಾರವಾಗಿ ಭ್ರಾಂತಿ ಸಿದ್ಧವಾಗಿಯೂ ಅಧ್ಯಾಸರೂಪವಾಗಿಯೂ ಇರುವುದೇ ಕ್ಷೇತ್ರಕ್ಷೇತ್ರಜ್ಞ ಸಂಯೋಗವು. ಅಂತಹ ಭ್ರಾಂತಿಯು ಹೇಗೆ ನಿವೃತ್ತಿಸುವುದೆಂದರೆ, ಗುರೂಪದಿಷ್ಟವಾದ 'ತತ್ತ್ವಮಸಿ, ಇತ್ಯಾದಿ ಮಹಾವಾಕ್ಯಾನುಭವಜ್ಞಾನವನ್ನು ಹೊಂದಿ ಮಹಾಭೂತಾದಿ ಸ್ವರೂಪವಾಗಿರುವ ಕ್ಷೇತ್ರಕ್ಕಿಂತಲೂ ಈ ಅಧ್ಯಾಯದ (೨೨) ನೇ ಶ್ಲೋಕದಲ್ಲಿ ಹೇಳಲ್ಪಟ್ಟ ಉಪದ್ರಷ್ಟೃತ್ವಾದಿಲಕ್ಷಣಗಳುಳ್ಳ ಕ್ಷೇತ್ರಜ್ಞನನ್ನು (ಮೌಂಜೀದರ್ಭಕ್ಕಿಂತಲೂ ಇಷೀಕವೆಂಬ ದರ್ಭವನ್ನು ಹೇಗಾದರೆ ಭಿನ್ನವಾಗಿ ತಿಳಿದುಕೊಳ್ಳುವನೊ ಅದರಂತೆ) ಭಿನ್ನನೆಂದು ತಿಳಿದುಕೊಂಡು ''ನಸತ್ತನ್ನಾಸದುಚ್ಯತೆ,, (೧೩॥ ೧೨) ಎಂಬೀಪ್ರಕಾರವಾಗಿ ಸರ್ವೋಪಾಧಿವಿನಿರ್ಮುಕ್ತವಾದ ರೂಪವುಳ್ಳದ್ದಾಗಿ ತಿಳಿಯತಕ್ಕ ಬ್ರಹ್ಮವಸ್ತುವನ್ನು ಅನುಭವಿಸುವಜ್ಞಾನಿಗೆ ಮಾಯಾನಿರ್ಮಿತವಾದ ಆನೆಯಂತೆಯೂ ಸ್ವಪ್ನದಲ್ಲಿ ಕಾಣಲ್ಪಡುವ ಪದಾರ್ಥಗಳಂತೆಯೂ ಗಂಧರ್ವ ನಗರದಂತೆಯೂ ಅಸತ್ಯವಾಗಿರುವ ಕ್ಷೇತ್ರವನ್ನು ಸತ್ಯಗಳಂತೆ ತೋರಲ್ಪಡಿಸುವ ಮಿಥ್ಯಾಜ್ಞಾನವು ತಾನಾಗಿಯೆ ನಶಿಸಿಹೋಗುವುದು. ''ಯಏವಂವೇತ್ತಿ ಪುರುಷಂ ಪ್ರಕೃತಿಂಚಗುಣೈಸ್ಸಹ,, ಎಂಬೀಅಧ್ಯಾಯದ (೧೪) ನೇ ಶ್ಲೋಕದಿಂದ ಬ್ರಹ್ಮಜ್ಞಾನಿಗೆ ಸಂಸಾರಸಂಬಂಧ ಮೂಲವಾದ ಅವಿದ್ಯೆಯು ವಾಸನೆಗಳೊಡನೆ ನಶಿಸುವುವೆಂತಲೂ ಅದರಿಂದ ಸಂಸಾರವೆನ್ನಲ್ಪಡುವ ಜನ್ಮವು ಉಂಟಾಗಲಾರದೆಂತಲೂ ತಿಳಿಸಲ್ಪಟ್ಟಿರುವುದು ಆದುದರಿಂದ ಅಂತಹ ಸಂಸಾರಮೂಲವು ಅವಿದ್ಯೆಯಿಂದುಂಟಾಗುವ ಕ್ಷೇತ್ರಕ್ಷೇತ್ರಜ್ಞಸಂಯೋಗವೆಂತಲೆ(ಭ್ರಾಂತಿಯೆಂತಲೆ) ತಿಳಿಯಬೇಕು. ... ॥೨೬॥

(ಗೀ॥ವಿ॥) ಸ್ಥಾವರ ಜಂಗಮಾತ್ಮಕವಾದ ಜೀವ ಸಮುದಾಯವೆಲ್ಲವೂ ಲಕ್ಷ್ಮೀ, ಪರಮಾತ್ಮಾ, ಇವರ ಸಂಬಂಧದಿಂದಲೆ ಉಂಟಾಗುವುವು. ॥೨೭॥

ಶ್ಲೋ॥ ಸಮಂಸರ್ವೇಷುಭೂತೇಷುತಿಷ್ಠಂತಂಪ
ರಮೇಶ್ವರಂ।ವಿನಶ್ಯತ್ಸ್ವವಿನಶ್ಯಂತಂಯಃಪಶ್ಯತಿ
ಸಪಶ್ಯತಿ॥ ॥೨೭॥

ಪ॥ ಸಮಂ-ಸರ್ವೇಷು-ಭೂತೇಷು-ತಿಷ್ಠಂತಂ-ಪರಮೇಶ್ವರಂ।ವಿನಶ್ಯತ್ಸು-ಅವಿನಶ್ಯಂತಂ-ಯಃ-ಪಶ್ಯತಿ-ಸಃ-ಪಶ್ಯತಿ॥

(ಅ॥) ಸರ್ವೇಷುಭೂತೇಷು- ಸ್ಥಾವರ ಜಂಗಮಾತ್ಮಕವಾದ ಸಕಲಭೂತಗಳಲ್ಲಿಯೂ, ಸಮಂ-ಸಮವಾಗಿ, ತಿಷ್ಠಂತಂ-ಇರುತಲಿರುವ, ಪರಮೇಶ್ವರಂ-ಪರಮೇಶ್ವರನನ್ನು, ವಿನಶ್ಯತ್ಸು-ಮೇಲೆಹೇಳಿರುವ ದೇಹಾದಿಗಳು ನಾಶವನ್ನು ಹೊಂದಿದರು, ಅವಿನಶ್ಯಂತಂ-ನಾಶವಿಲ್ಲದವನೆಂಬದಾಗಿ, ಯಃಪಶ್ಯತಿ-ಯಾವನು ಅರಿಯುತ್ತಾನೆಯೊ, ಸಪಶ್ಯತಿ-ಅವನೇ ಆತ್ಮನನ್ನು ಯಥಾವತ್ತಾಗಿ ನೋಡುತ್ತಾನೆ॥೨೭॥

(ಶಂ॥ ಭಾ) "ನಸಘೂಯತೋಽಭಿಜಾಯತೆ" ಎಂಬದಾಗಿ ಹಿಂದಿನ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟ ಪ್ರಕಾರದಿಂದ ಆತ್ಮಜ್ಞಾನವು ಅವಿದ್ಯಾದಿ ಸಂಸಾರ ಬೀಜಗಳನ್ನು ನಿವೃತ್ತಿಪಡಿಸುವುದರಿಂದ ಪುನರ್ಜನ್ಮವನ್ನು ಉಂಟುಮಾಡುವುದಿಲ್ಲವೆಂದು ಹೇಳಿಆಯಿತು. ಜನ್ಮಕಾರಣವೂ ಅವಿದ್ಯಾನಿಮಿತ್ತಕವಾದ ಕ್ಷೇತ್ರಕ್ಷೇತ್ರಜ್ಞ ಸಂಯೋಗವೆಂಬದಾಗಿ ಹೇಳಲ್ಪಟ್ಟಿತು. ಆದುದರಿಂದ ಅಂಥಾ ಅವಿದ್ಯಾನಿವರ್ತಕವಾದ ಆತ್ಮಜ್ಞಾನವು ಹಿಂದೆಯೆ ಹೇಳಲ್ಪಟ್ಟಿದ್ದಗೂ ಪುನಃ ಶಬ್ದಾಂತರದಿಂದ ಹೇಳಲ್ಪಡುವುದು. ದೇಹೇಂದ್ರಿಯ ಮನೊಬುದ್ಧಿ ಅವ್ಯಕ್ತಾದಿಗಳಿಗಿಂತಲೂ ವಿಲಕ್ಷಣನಾಗಿಯೂ ನಿಯಂತೃವಾಗಿಯು ಇರುವುದರಿಂದ ಪರಮೇಶ್ವರನೆಂಬದಾಗಿ ಹೇಳಲ್ಪಟ್ಟಿರುವನು. ಅಂತಹ ಬ್ರಹ್ಮವಸ್ತುವು ಬ್ರಹ್ಮಾದಿ ಸ್ತಂಬ ಪರ್ಯಂತವಾದ ಚರಾಚರಾತ್ಮಕ ಪ್ರಪಂಚದಲ್ಲಿ ಸಮವಾಗಿರುವುದು. ಕಾಣಲ್ಪಡುವ ಸಕಲವಾದ ವಸ್ತುಗಳೂ ಆ ವಸ್ತುಗಳು ಯಾವದರ ವಿಕಾರಗಳೊ ಆ ಮೂಲವೂ ನಾಶ ಹೊಂದತಕ್ಕದ್ದಾಗಿಯೇ ಇರುವುದು. ಇವುಗಳು

ನಾಶವನ್ನು ಹೊಂದಿದರು ಬ್ರಹ್ಮವಸ್ತುವು ನಾಶ ಹೊಂದುವುದಿಲ್ಲವೆಂಬದಾಗಿ ಯಾವನಾದರೆ ತಿಳಿದುಕೊಂಡಿರುತ್ತಾನೆಯೊ ಅಂತವನೆ ಪರಮಾರ್ಥ ಜ್ಞಾನವನ್ನರಿತವನೆಂದು ಹೇಳಲ್ಪಡುವನು. ಆದೇ ಪರಮಾತ್ಮನಿಗೂ ಭೂತಗಳಿಗೂ ಇರುವ ಅತ್ಯಂತ ಭೇದವು. ಅದು ಹೇಗೆಂದರೆ ? ಸಮಸ್ತಗಳಾದ ಭಾವ ವಿಕಾರಗಳಿಗೂ ಹುಟ್ಟುವಿಕೆಯೆಂಬ ಭಾವ ವಿಕಾರವು ಮೂಲವಾಗಿರುವುದು. ಹುಟ್ಟುವಿಕೆಗೆ ಅನಂತರದಲ್ಲುಂಟಾಗುವ ಭಾವ ವಿಕಾರವು ನಾಶದೊಡನೆ ಮುಗಿಯುವುದು. ವಿನಾಶಾನಂತರದಲ್ಲಿ ಯಾವ ಭಾವ ವಿಕಾರವೂ ಇರುವುದಿಲ್ಲವು. ಒಂದಕ್ಕೊಂದು ಅನುವೃತ್ತಗಳಾಗಿರುವ ಸಮಸ್ತ ಭಾವವಿಕಾರಗಳೂ ಪರಮಾತ್ಮನಿಗಿಲ್ಲವು. ಆದುದರಿಂದಲೆ ಸಮಸ್ತ ಪ್ರಾಣಿಗಳಿಗಿಂತಲೂ ಅತ್ಯಂತ ಭೇದವೂ ಸರ್ವ ಭಾವ ವಿಕಾರ ರಾಹಿತ್ಯವೂ (ರಾಹಿತ್ಯವೆಂದರೆ ಇಲ್ಲದಇರುವಿಕೆಯು) ಅದ್ವಿತೀಯತ್ವವೂ ಪರಮಾತ್ಮನಿಗೆ ಸಿದ್ಧವಾಯಿತು. ಈ ಅಂಶಗಳನ್ನು ತಿಳಿದವನೆ ನೋಡುವಂತವನು ಎಂದರೆ ವಿಸ್ತಾರವಾಗಿ ತಿಳಿದವನೆನ್ನಲ್ಪಡುವನು. ಭೇದದೃಷ್ಟಿಯಿಂದ ನೋಡುವಂತವನು ತಿಳಿದವನಲ್ಲವೋ ? ಎಂದರೆ ಅವನೂ ನೋಡುವಂತವನೆ; ಆದರೆ ಭೇದದೃಷ್ಟಿಯಿಂದ ನೋಡುವಂತವನು ಬ್ರಹ್ಮವನ್ನು ಸರ್ವತ್ರ ಸಮವಾಗಿ ನೋಡುವುದಿಲ್ಲವು. ಅದು ಹೇಗೆಂದರೆ ? ತಿಮಿರವೆಂಬ ನೇತ್ರ ರೋಗಮುಳ್ಳವನು ಒಂದು ಚಂದ್ರನನ್ನು ಅನೇಕ ಚಂದ್ರನಂತೆ ನೋಡುತ್ತಾನೆ. ಅವನಿಗಿಂತಲೂ ಏಕ ಚಂದ್ರ ದರ್ಶಿಯಾದವನು ಯಥಾರ್ಥದಿಂದ ನೋಡುವವನೆಂಬದಾಗಿ ಹೇಗೆ ಹೇಳಲ್ಪಡುತ್ತಾನೆಯೊ ಆ ಪ್ರಕಾರವೆ ಇಲ್ಲಿಯೂ ಆತ್ಮನನ್ನು ಒಬ್ಬನನ್ನಾಗಿಯಾವನಾದರೆಶಾಸ್ತ್ರಾನುಭವದಿಂದನೋಡುತ್ತಾನೆಯೊ ಅಂತವನು ಭೇದ ದೃಷ್ಟಿಯಿಂದ ನೋಡುವಂತವರಿಗಿಂತಲೂ ಶ್ರೇಷ್ಠನಾಗಿರುವುದರಿಂದ ಅಂತವನೇ ಯಥಾವತ್ತಾಗಿ ನೋಡಿದವನೆನ್ನಲ್ಪಡುವನು. ಅನ್ಯರು ವಿಪರೀತವಾಗಿ ನೋಡುವಂತವರಾಗಿರುವದ್ದರಿಂದ ಅನೇಕ ಚಂದ್ರದರ್ಶಿಗಳಂತೆ ಯಥಾವತ್ತಾಗಿ ನೋಡುವಂತವರಲ್ಲವೆಂದು ಭಾವವು. ||೨೭||

(ರಾ|| ಭಾ||) ಸರ್ವೇಷು ಭೂತೇಷು-ಚೇತನ ವಸ್ತುವೂ ಆ

ಚೇತನ ವಸ್ತುವು ಒಂದಕ್ಕೊಂದು ಸೇರಿಕೊಂಡು ಜಂಗಮ ಸ್ಥಾವರ ರೂಪಗಳಾಗಿರುವ ಜಂತುಗಳಲ್ಲಿ, ವಿಷಮವಾದ ಆಕಾರದಿಂದ ಬಿಡಲ್ಪಟ್ಟಿರುವಂತಹನಾಗಿಯೂ, ಪರಮೇಶ್ವರಂ- ಅಲ್ಲಲ್ಲಿ ಅಯಾ ದೇಹೇಂದ್ರಿಯ ಮನಸ್ಸುಗಳನ್ನು ಕುರಿತು ಪರಮೇಶ್ವರನಾಗಿಯೂ, ತಿಷ್ಠಂತಂ-ಇರುತ್ತಲಿರುವ ಆತ್ಮನನ್ನು, ಸಮಂ-ಜ್ಞಾತೃತ್ವದಿಂದ ಸಮಾನಾಕಾರನಾಗಿಯೂ, ವಿನಶ್ಯತ್ಸ್ವವಿನಶ್ಯಂತಂ-ಆಯಾ ದೇಹಗಳು ನಶಿಸಿ ಹೋದರೂ ವಿನಾಶ ಯೋಗ್ಯವಲ್ಲದ ಸ್ವಭಾವ ಮುಕ್ತನನಾಗಿರುವುದರಿಂದ ತಾನು ನಾಶವನ್ನು ಹೊಂದದವನಾಗಿಯೂ, ಯಃಪಶ್ಯತಿ-ಯಾವನಾದರೆ ನೋಡುತ್ತಾನೆಯೊ, ಸಃ-ಅವನ, ಪಶ್ಯತಿ- ಆತ್ಮನನ್ನು ಯಥಾವತ್ತಾಗಿ ನೋಡುತ್ತಾನೆ. ಯಾವನಾದರೆ ದೇವಾದಿಗಳಂತೆ ಆತ್ಮನನ್ನು ವಿಷಮಾಕಾರ ಯುಕ್ತನನ್ನಾಗಿಯೂ ಜನ್ಮನಾಶಾದಿ ಯುಕ್ತನನ್ನಾಗಿಯೂ ತಿಳಿಯುತ್ತಾನೆಯೋ ಅವನು ಯಾವಾಗಲು ಸಂಸಾರಿಯಾಗಿಯೇ ಇರುವನೆಂದು ಭಾವವು. ॥೨೭॥

(ಗೀ॥ ವಿ॥) ಉಚ್ಚನೀಚಗಳಾದ ಸಕಲ ಪ್ರಾಣಿಗಳಲ್ಲಿರುವ ಅಚಿಂತ್ಯ ಶಕ್ತಿಕನಾದ ಪರಮಾತ್ಮನನ್ನು ಸ್ವತಂತ್ರ ಏಕ ರೂಪವಾಗಿರುವಂತಹನನ್ನಾಗಿಯೂ ಜನನ ಮರಣಾದಿಗಳಿಂದುಂಟಾದ ದುಃಖ ದೋಷಗಳೊಡನೆ ಕೂಡಿರುವ ಪ್ರಾಣಿಗಳಲ್ಲಿರುವ ಪರಮಾತ್ಮನಿಗೆ ಪ್ರಾಣಿಗಳ ದೋಷಗಳಲ್ಲಿ ಸಂಬಂಧವಿಲ್ಲವೆಂತಲೂ ಯಾವನಾದರೆ ತಿಳಿಯುತ್ತಾನೆಯೊ ಅವನು ಯಥಾರ್ಥವಾದ ಜ್ಞಾನಿಯಾಗಿರುವನೆಂದರಿಯಬೇಕು. ॥೨೮॥

ಶ್ಲೋ॥ಸಮಂಪಶ್ಯನ್ಹಿಸರ್ವತ್ರಸಮವಸ್ಥಿತಮೀಶ್ವರಂ ನಹಿನಸ್ತ್ಯಾತ್ಮನಾತ್ಮಾನಂತತೋಯಾತಿ
ಪರಾಂಗತಿಂ॥ ॥೨೮॥

ಪ॥ ಸಮಂ-ಪಶ್ಯನ್-ಹಿ-ಸರ್ವತ್ರ-ಸಮವಸ್ಥಿತಂ-ಈಶ್ವರಂ। ನ-ಹಿನಸ್ತಿ-ಆತ್ಮನಾ-ಆತ್ಮಾನಂ-ತತಃ-ಯಾತಿ-ಪರಾಂ-ಗತಿಂ।

(ಅ॥ರಾ॥) ಸರ್ವತ್ರ-ದೇವಾದಿ ಶರೀರಗಳೆಂಬ ಯೆಲ್ಲೆಲ್ಲಿಯೂ, ಸಮವಸ್ಥಿತಂ-ಅವುಗಳಿಗೆ ಆಶ್ರಯನಾಗಿಯೂ ಆಧಾರ ಭೂತನಾಗಿಯೂ ನಿಯಂತಾವಾಗಿಯೂ ಇರುವ, ಈಶ್ವರಂ-ದೇಹೇಂದ್ರಿಯಗಳ

ಗೆ ಈಶ್ವರನಾದ ಜೀವಾತ್ಮನನ್ನು, ಸಮಂಪಶ್ಯನ್-ದೇವತ್ವಾದಿ ವಿಷಮಾಕಾರವಿಲ್ಲದವನನ್ನಾಗಿಯೂ ಜ್ಞಾನೈಕಾಕಾರತೆಯಿಂದ ಸಮಾನನನ್ನಾಗಿಯೂ ನೋಡುವಂತವನು ತಾನೆ, ಆತ್ಮನಾ-ಮನಸ್ಸಿನಿಂದ, ಆತ್ಮಾನಂ-ತನ್ನನ್ನು, ನಹಿನಸ್ತಿ-ಹಿಂಸಿಸಿಕೊಳ್ಳುವುದಿಲ್ಲವು. ಸಂಸಾರದಿಂದ ಬಿಡಿಸಿಕೊಂಡು ರಕ್ಷಿಸಿಕೊಳ್ಳುತ್ತಾನೆ. ತತಃ-ಜ್ಞಾನೈಕಾಕಾರತೆಯಿಂದ ಸಮತ್ವೇನ ನೋಡುವುದರ ದೆಶೆಯಿಂದ, ಪರಾಂಗತಿಂ-ಹೊಂದಬೇಕಾಗಿರುವುದರಲ್ಲಿ ಶ್ರೇಷ್ಠವಾದ ಯಥಾವಸ್ಥಿತವಾಗಿರುವ ಆತ್ಮನನ್ನು, ಯಾತಿ-ಹೊಂದುತ್ತಾನೆ. ದೇವಾದಿ ವಿಷಮಾಕಾರಯುಕ್ತನಾಗಿರುವುದರಿಂದ ಸರ್ವತ್ರ ವಿಷಮ ಸ್ವರೂಪನಾಗಿರುವನು ಆತ್ಮನೆಂದು ಯಾವನು ನೋಡುತ್ತಾನೆಯೊ ಅಂತವನು ತನ್ನಾತ್ಮನನ್ನು ಕೆಡಿಸಿಕೊಂಡು ಸಂಸಾರ ಸಮುದ್ರ ಮಧ್ಯದಲ್ಲಿ ತಳ್ಳಿ ಬಿಡುತ್ತಾನೆಂದು ತಾತ್ಪರ್ಯವು. ॥೨೮॥

(ಶಂ॥ಭಾ॥) ಇಂತಹ ಬ್ರಹ್ಮಜ್ಞಾನಿಗುಂಟಾಗುವ ಫಲವು ಯಾವುದೊ ಅದನ್ನು ತಿಳಿಸುವೆನು ಕೇಳು. ಎಲೈ ಅರ್ಜುನನೆ ? ಸರ್ವಪ್ರಾಣಿಗಳಲ್ಲಿಯೂ ಯಾವಾಗಲೂ ಏಕರೀತಿಯಾಗಿರುವ ಪರಮಾತ್ಮನನ್ನು ತಿಳಿಯುವಂತವನು ತನ್ನನ್ನು ತಾನು ಹಿಂಸಿಸದವನೆನ್ನಲ್ಪಡುವನು. ಆ ರೀತಿಯಾಗಿ ಹಿಂಸಿಸಿಕೊಳ್ಳದೇ ಇರುವುದರಿಂದ ಮೋಕ್ಷವನ್ನು ಹೊಂದುತ್ತಾನೆ. ಆದರೆ ಲೋಕದಲ್ಲಿ ಯಾವನೂ ತನ್ನನ್ನು ತಾನು ಮನಃ ಪೂರ್ವಕವಾಗಿ ಹಿಂಸಿಸಿಕೊಳ್ಳುವಂತನು ಸಾಮಾನ್ಯವಾಗಿರಲಾರನಷ್ಟೆ ? ಬೆಂಕಿಯು ಭೂಮಿಯಮೇಲೆ ಇರುವುದರಿಂದ ಭೂಮಿಯಮೇಲೆ ಬೆಂಕಿಯು ಇಲ್ಲವೆಂಬದಾಗಿ ಹೇಳಬಹುದಲ್ಲದೆ ಆಕಾಶದಲ್ಲಿ ಅಗ್ನಿ ಇಲ್ಲವೆಂಬದಾಗಿ ಹೇಳುವಿಕೆಯು ಹೇಗಾದರೆ ಅಸಂದರ್ಭವೊ ಅದರಂತೆ ಒಂದು ಕಾಲದಲ್ಲಿಯೂ ಸಂಭವಿಸದ ಅಂಶವನ್ನು ಇಲ್ಲವೆಂಬದಾಗಿ ನಿಷೇಧಿಸುವುದು ಯುಕ್ತವೆ ? ಎಂದರೆ ಇದಕ್ಕುತ್ತರವು. ಅಜ್ಞರು ಆತ್ಮನನ್ನು ತಿರಸ್ಕರಿಸುವುದುಂಟು. ಅದೇ ಹಿಂಸೆ ಯೆನ್ನಲ್ಪಡುವುದರಿಂದ ಆರೀತಿಯಾಗಿ ಹೇಳಿರುವುದು ತಪ್ಪಲ್ಲವು. ಅದು ಹೇಗೆಂದರೆ ; ಅಜ್ಞರಾದವರೆಲ್ಲರೂ ಶ್ರುತಿ ಪ್ರಸಿದ್ಧವಾದ ಪರಿಶುದ್ಧಾತ್ಮವನ್ನು ತಿಳಿದುಕೊಳ್ಳಲಾರದೆ ಆತ್ಮವಲ್ಲದ ಶರೀರವನ್ನೆ ಆತ್ಮವನ್ನಾಗಿ

ಗ್ರಹಿಸಿ ಪುಣ್ಯ ಪಾಪರೂಪಗಳಾದ ಕರ್ಮಗಳನ್ನು ಮಾಡಿ ಆ ಶರೀರವನ್ನು ಕೆಡಿಸಿಕೊಂಡು ಮತ್ತೊಂದು ಹೊಸಶರೀರವನ್ನು ಪರಿಗ್ರಹಿಸಿ ಅದನ್ನೂ ಕೆಡಿಸಿಕೊಂಡು ಮತ್ತೊಂದು ಶರೀರವನ್ನು ಹೊಂದುವ ರೆಂಬೀರೀತಿಯಾಗಿ ತಾನಾತ್ಮನೆಂಬದಾಗಿ ಗ್ರಹಿಸಿರುವ ಶರೀರಗಳೆಲ್ಲವನ್ನೂ ಪುಣ್ಯ ಪಾಪ ಕರ್ಮಗಳಿಂದ ನಶಿಸಿ ಹೋಗುವಂತೆ ಮಾಡುತ್ತಾನೆಂಬ ಕಾರಣದಿಂದ ಅಜ್ಞವರ್ಗವು ಆತ್ಮ ಘಾತಿ ಎಂಬದಾಗಿ ಹೇಳಲ್ಪಡುವುದು. (ಮತ್ತು ಪರಮಾರ್ಥವಾಗಿ ಆತ್ಮ ವಿರುವುದಕ್ಕೆ ಪ್ರಯೋಜನವು ಕಾಣಲ್ಪಡುವುದಿಲ್ಲವಾದುದರಿಂದ ಅಜ್ಞನ ಅಜ್ಞಾನದಿಂದ ಸಂಹರಿಸಲ್ಪಟ್ಟಂತೆನೆ ಆಗುವುದು. ಆದುದರಿಂದ ಆತ್ಮ ಘಾತೀ ಎಂಬದಾಗಿ ಅಜ್ಞನು ಹೇಳಲ್ಪಡುವನು.) ಈ ಪ್ರಕಾರವಲ್ಲವೆ ಗುರೂಪದೇಶ ಪೂರ್ವಕವಾಗಿ ಉಂಟಾಗಿರುವ ಸ್ವಾನುಭವದಿಂದ ತನ್ನನ್ನು ತಾನು ತಿಳಿದಿರುವ ಬ್ರಹ್ಮನಿಷ್ಠನು ಬ್ರಹ್ಮ ಸಾಯುಜ್ಯವನ್ನು ಹೊಂದುವನು. ‖೨೮‖

(ಶ್ರೀ‖) ಯಾವನು ಈ ರೀತಿಯಾಗಿ ತಿಳಿಯುತ್ತಾನೆಯೊ ಅವನು ಸಚ್ಚಿದಾನಂದ ಸ್ವರೂಪಿಯಾದ ತನ್ನನನ್ನು ಕೆಡಿಸಿಕೊಳ್ಳುವುದಿಲ್ಲವು. ಆ ಪ್ರಕಾರವಾಗಿ ತಿಳಿಯದವನು ದೇಹವನ್ನ ಆತ್ಮನನ್ನಾಗಿ ತಿಳಿದವನಾದುದರಿಂದ ಅವನು ದೇಹದಂತೆ ಆತ್ಮನನ್ನೂ ಕೆಡಿಸಿಕೊಳ್ಳುತ್ತಾನೆ. ‖೨೮‖

(ಗೀ‖ ವಿ‖) ಸಾಮ್ಯಾದಿ ಜ್ಞಾನದ ಫಲವನ್ನು ಹೇಳುತ್ತಾನೆ. ಸರ್ವತ್ರ-ಸಮಸ್ತ ಪ್ರಾಣಿಗಳಲ್ಲಿ, ಸಮವಸ್ಥಿತಂ-ಇರುತಲಿರುವ, ಈಶ್ವರಂ-ಸರ್ವೇಶ್ವರನಾದ ಪರಮಾತ್ಮನನ್ನು, ಸಮಂ-ಸರ್ವತ್ರ ನಿರ್ದೋಷಗಳಾದ ಅಶೇಷ ಸದ್ಗುಣಗಳುಳ್ಳವನಾಗಿರುವುದರಿಂದ ಏಕಪ್ರಕಾರಮುಳ್ಳವನನ್ನಾಗಿ, ಪಶ್ಯನ್- "ನಸ್ಥಾನತೋಪಿಪರಸ್ಯೋಭಯಲಿಂಗಂಸರ್ವತ್ರಹಿ ,, ಎಂಬ ಸೂತ್ರೋಕ್ತ ಕ್ರಮದಿಂದ ನೋಡುವಂತವನು. ಆತ್ಮನಾ-ಬುದ್ಧಿಯಿಂದ, ಆತ್ಮಾನಂ-ತನ್ನನ್ನು, ನಹಿನಸ್ತಿ-ನರಕದಲ್ಲಿ ಬೀಳುವಂತೆ ಮಾಡುವುದಿಲ್ಲವು. ಹಿ-ಈ ಅರ್ಥವು "ದುಃಖಯೋಗಾದಿರೂಪೇಣಜೀವೇಷುವಿನಶತ್ಸ್ವಪಿ । ದುಃಖಯೋಗಾದಿರಹಿತಸ್ಸರ್ವಜೀವೇಷ್ವವಸ್ಥಿತಃ‖ ಗುಣೈಸ್ಸರ್ವೈಸ್ಸಮೋನಿತ್ಯಂನ

ಹೀನೋಹೀನಗೋಪಿಸನ್ | ಇತಿಪಶ್ಯತಿಯೋಏಷ್ಟಂಸಎವನತವೋಸ್ತ್ಯ ಜೇಶ, ,, ಎಂಬೀ ಪ್ರಮಾಣ ಪ್ರಸಿದ್ಧವಾಗಿರುವುದು. ತತಃ-ಆ ಜ್ಞಾನದದಶೆಯಿಂದ, ಪರಾಂ-ಶ್ರೇಷ್ಠವಾದ, ಗತಿಂ-ಗತಿಯನ್ನು, ಯಾತಿ-ಹೊಂದುತ್ತಾನೆ. ||೨೯||

ಶ್ಲೋ || ಪ್ರಕೃತ್ಯೈವಚಕರ್ಮಾಣಿಕ್ರಿಯಮಾ
ಣಾನಿಸರ್ವಶಃ| ಯಃಪಶ್ಯತಿತಥಾತ್ಮಾನಮಕರ್ತಾ
ರಂಸಪಶ್ಯತಿ|| ||೨೯||

ಪ|| ಪ್ರಕೃತ್ಯಾ-ಏವ-ಚ-ಕರ್ಮಾಣಿ-ಕ್ರಿಯಮಾಣಾನಿ-ಸರ್ವಶಃ|ಯಃ-ಪಶ್ಯತಿ-ತಥಾ-ಆತ್ಮಾನಂ-ಅಕರ್ತಾರಂ-ಸಃ-ಪಶ್ಯತಿ||

(ಅ|| ರಾ| ಭಾ||) ಕರ್ಮಾಣಿ-ಸರ್ವ ಕಾರ್ಯಗಳೂ, ಸರ್ವಶಃ-ಸರ್ವ ಪ್ರಕಾರದಿಂದಲೂ, ಪ್ರಕೃತ್ಯೈವಚಕ್ರಿಯಮಾಣಾನಿ- "ಕಾರ್ಯಕಾರಣಕರ್ತೃತ್ವೇಹೇತುಃಪ್ರಕೃತಿರುಚ್ಯತೆ ,, ಎಂಬೀ ಪ್ರಕಾರವಾಗಿ ಪೂರ್ವದಲ್ಲಿ ಹೇಳಿರುವ ಕ್ರಮದಿಂದ ಪ್ರಕೃತಿಯಿಂದ ಮಾಡಲ್ಪಡುವುವೆಂತಲೂ, ತಥಾ-ಅಪ್ರಕಾರವೆ, ಆತ್ಮಾನಂ-ಜೀವಾತ್ಮನನ್ನು, ಅಕರ್ತಾರಂ-ಕರ್ತೃತ್ವವಿಲ್ಲದವನನ್ನಾಗಿಯೂ,(ಆ ಆತ್ಮನಿಗೆ ಪ್ರಕೃತಿಸಂಸರ್ಗವೂ ಪ್ರಕೃತಿಯನ್ನಭಿಮಾನಿಸಿರುವಿಕೆಯೂ ಅದರಿಂದುಂಟಾದ ಸುಖ ದುಃಖಾನುಭವನೂ ಅನಾದಿ ಕರ್ಮವೆಂಬ ಅಜ್ಞಾನದಿಂದುಂಟಾದದ್ದೆಂತಲೂ, ) ಯಃಪಶ್ಯತಿ-ಯಾವನು ನೋಡುತ್ತಾನೆಯೊ, ಸಃ-ಅವನೆ, ಪಶ್ಯತಿ-ಆತ್ಮಸ್ವರೂಪವನ್ನು ತಿಳಿದವನು. ||೨೯||

(ಶ್ರೀ||) ಆತ್ಮನಿಗೆ ಕರ್ತೃತ್ವವು ದೇಹಾಭಿಮಾನದಿಂದಲ್ಲದೆ ಸ್ವಭಾವದಿಂದ ಕರ್ತೃತ್ವವಿಲ್ಲವು. ||೨೯||

(ಶಂ||) ಮಾಯೆಯು ದೇಹೇಂದ್ರಿಯಾದಿರೂಪವಾಗಿದ್ದುಕೊಂಡು ಕರ್ಮಗಳನ್ನು ಮಾಡುತ್ತದೆ. ಆತ್ಮವಾದ ತಾನು ಕರ್ಮಗಳನ್ನು ಮಾಡುವುದಿಲ್ಲವು. ತಾನು ಶುದ್ಧನಾಗಿಯೂ ನಿರ್ಗುಣನಾಗಿಯೂ ಇರುವಂತವನೆಂಬದಾಗಿಯಾವನು ಯಾವಾಗಲಾದರೆ ತಿಳಿಯುತ್ತಾನೆಯೊ ಅವಾಗ ತಾನೆ ಅಂತವನು ಪರಮಾತ್ಮನನ್ನು ತಿಳಿದವನೆಂದು ಹೇಳಲ್ಪಡುತ್ತಾನೆ. ||೨೯||

(ಗೀ|| ವಿ||) "ಉಪದ್ರಷ್ಟಾನುಮಂತಾಚ ,, (೧೩-೨೨)ಎಂ

ಹೀ ಶ್ಲೋಕದಲ್ಲಿ ಸದಸದ್ಯೋನಿ ಜನ್ಮಗಳಲ್ಲಿ ಪರಮಾತ್ಮನಿಗೆ ಸ್ವತಂತ್ರ ಕಾರಣತ್ವವು ಹೇಳಲ್ಪಟ್ಟಿತು. ಅದುಯುಕ್ತವಲ್ಲವು. ಕರ್ಮಗಳನ್ನ ಅಪೇಕ್ಷಿಸದೆ ಸ್ವತಂತ್ರನಾಗಿದ್ದರೆ ವಿಷಮ ಸೃಷ್ಟಿಯನ್ನ ಮಾಡುವುದರಿಂದ ಪರಮಾತ್ಮನಿಗೆ ವೈಷಮ್ಯ ನೈರ್ಘೃಣ್ಯ ದೋಷಗಳು ಪ್ರಾಪ್ತವಾಗುವುವು. ಇದರ ಪರಿಹಾರಾರ್ಥವಾಗಿ ಕರ್ಮಾನುಗುಣವಾಗಿ ಸೃಷ್ಟಿಯನ್ನ ಹೇಳುವ ಪಕ್ಷದಲ್ಲಿ ಈಶ್ವರನಿಗೆ ಸ್ವಾತಂತ್ರ್ಯಭಂಗವು ಪ್ರಾಪ್ತವಾಗುವುದು. ಕಿಂಚ ಅಪರಮಾತ್ಮನಿಗೂ ಕರ್ತ್ರಂತರ ಸದ್ಭಾವದಿಂದಲೇ ಸ್ವಾತಂತ್ರ್ಯ ಹಾನಿಯು ಇರಬಹುದೆಂಬೀ ಶಂಕೆಯನ್ನ ಪರಿಹಾರ ಮಾಡುವುದಕ್ಕಾಗಿ ಈ ಶ್ಲೋಕವು ಪ್ರವೃತ್ತವಾಯಿತು. ಪ್ರಕೃತ್ಯೈವಚ- ಪ್ರಕೃತ್ಯಾ- ಏವಚ- (ಈಶ್ವರೇಣ)-ತಾನು ಮಾಡುವ ಸಕಲ ಕರ್ಮಗಳನ್ನ ತನ್ನ ಪೂರ್ವಕರ್ಮಾನುಸಾರವಾಗಿಯೆ ಪರಮಾತ್ಮನು ಮಾಡಿಸುತ್ತಾನೆಂತಲೂ, ಆ ಪರಮಾತ್ಮನಿಗೆ ಕರ್ತಾ ಬೇರೆ ಇಲ್ಲವೆಂತಲೂ ಯಾವನಾದರೆ ತಿಳಿಯುತ್ತಾನೆಯೊ, ಅಂತವನು ಪರಮಾತ್ಮನನ್ನು ಕಾಣುತ್ತಾನೆ. ಈಶ್ವರನು ಜೀವ ಕರ್ಮಗಳನ್ನನುಸರಿಸಿಯೇ ಆಯಾ ಕರ್ಮಾನುಸಾರವಾಗಿ ಕರ್ಮಗಳನ್ನ ಮಾಡಿಸುವುದರಿಂದ ಈಶ್ವರನಲ್ಲಿ ವೈಷಮ್ಯವಿಲ್ಲವು. ಅಥವಾ- ಪ್ರಕೃತ್ಯಾ-ಚಿತ್ಪ್ರಕೃತಿಯಿಂದಲೂ, ಚ- ಈಶ್ವರನಿಂದಲೂ ಕರ್ಮಗಳು ಮಾಡಿಸಲ್ಪಡುವುವೆಂತಲೂ ಜೀವನು ಸ್ವತಂತ್ರನಲ್ಲವೆಂತಲೂ ಯಾವನಾದರೆ ನೋಡುತ್ತಾನೆಯೊ ಅವನು ವಾಸ್ತವಾಂಶವನ್ನ ತಿಳಿದವನೆನ್ನಲ್ಪಡುವನು. ॥೨೯॥

ಶ್ಲೋ॥ ಯದಾಭೂತಪೃಥಗ್ಭಾವಮೇಕಸ್ಥಮನು
ಪಶ್ಯತಿ । ತತಏವಚವಿಸ್ತಾರಂಬ್ರಹ್ಮಸಂಪದ್ಯ
ತೇತದಾ॥ ॥೩೦॥

ಪ॥ ಯದಾ-ಭೂತಪೃಥಗ್ಭಾವಂ-ಏಕಸ್ಥಂ-ಅನುಪಶ್ಯತಿ। ತತಃ-ಏವ- ಚ-ವಿಸ್ತಾರಂ-ಬ್ರಹ್ಮ-ಸಂಪದ್ಯತೆ-ತದಾ॥

(ಅ॥ ರಾ॥ ಭಾ॥) ಭೂತಪೃಥಗ್ಭಾವಂ-ಪ್ರಕೃತಿ ಪುರುಷಾತ್ಮಕಗಳಾಗಿ ಸರ್ವಭೂತಗಳೂ ಇರುವಲ್ಲಿ ಅವುಗಳಿಗೆ ದೇವತ್ವ ಮನುಷ್ಯತ್ವ ಹ್ರಸ್ವತ್ವದೀರ್ಘತ್ವಾದಿಯಾದ ಭಿನ್ನ ಭಿನ್ನ ಸ್ವ

ಭಾವವನ್ನು, ಏಕಸ್ಥಂ-ಒಂದು ಅಚೇತನ ತತ್ವಮಾತ್ರದಲ್ಲಿರುವಂತೆ ಯೂ, ಚೇತನ ತತ್ವದಲ್ಲಿಲ್ಲವೆಂತಲೂ, ತತಏವಚ-ಆ ಅಚೇತನ ತತ್ವದಿಂದಲೇ, ವಿಸ್ತಾರಂ-ಮೇಲೆ ಮೇಲೆ ಪುತ್ರ ಪೌತ್ರಾದಿ ಭೇದವಿಸ್ತಾರವನ್ನೂ, ಯದಾಪಶ್ಯತಿ- ಯಾವಾಗಲಾದರೆ ನೋಡುತ್ತಾನೆಯೊ, ತದಾ-ಆವಾಗಲೆ, ಬ್ರಹ್ಮಸಂಪದ್ಯತೆ-ಅನವಚ್ಛಿನ್ನ ಜ್ಞಾನೈಕಾಕಾರನಾದ ಆತ್ಮನನ್ನು ಹೊಂದುತ್ತಾನೆ. ॥೩೦॥

(ಶಂ॥ಭಾ॥) ಪುನಶ್ಚ ಹಿಂದೆ ವಿವರಿಸಿರುವ ಸಮ್ಯಗ್ದರ್ಶನವನ್ನೆ ಶಬ್ದಾಂತರದಿಂದ ವ್ಯಕ್ತಪಡಿಸುತ್ತಾರೆ. ಯದಾ-ಯಾವಕಾಲದಲ್ಲಿ, ಭೂತಪೃಥಗ್ಭಾವಂ-ಭೂತಗಳ ಪೃಥಕ್ತ್ವವನ್ನು, ನಾನಾಭೇದಗಳುಳ್ಳ ಪ್ರಪಂಚವನ್ನು, ಏಕಸ್ಥಮನುಪಶ್ಯತಿ-ಶಾಸ್ತ್ರಾಚಾರ್ಯೋಪದೇಶದಿಂದ ಮನನವನ್ನು ಮಾಡಿ ಕಾಣಲ್ಪಡುವ ವಸ್ತುಗಳೆಲ್ಲವೂ ಆತ್ಮವೆ ಎಂಬದಾಗಿಪ್ರತ್ಯಕ್ಷದಿಂದ ನೋಡುತ್ತಾನೆಯೊ,‘‘ಆತ್ಮೈವೇದಂಸರ್ವಮಿತಿ,,ಈ ಸಮಸ್ತವೂ ಆತ್ಮವೇ, ಎಂಬದಾಗ,(ಛಾಂ॥ಉ॥ ೭॥೨೫॥೨॥ನ್ನು ನೋಡಬೇಕು.) ವಿಸ್ತಾರಂಚಾನುಪಶ್ಯತಿ-ಸಕಲಪ್ರಪಂಚವೂ ತನ್ನ ದಶೆಯಿಂದಲೆಉಂಟಾಗಿರುವುದೆಂತ ಯಾವನಾದರೆನೋಡುತ್ತಾನೆಯೊ ‘‘ ಆತ್ಮತಃಪ್ರಾಣ ಆತ್ಮತಆಶಾಆತ್ಮತಸ್ಸ್ಮರಆತ್ಮತಆಕಾಶಃ ,, ಇತ್ಯಾದಿ ವಾಕ್ಯಾರ್ಥಪರಿ ಜ್ಞಾನದಿಂದ ಆತ್ಮನದೆಶೆಯಿಂದ ಪ್ರಾಣನು ದಿಕ್ಕುಗಳು ಇಚ್ಛೆಯು ಆಕಾಶವು ಪ್ರಕಾಶವು ಜಲವು ಉತ್ಪತ್ತಿ ನಾಶಗಳು ಭೂಮಿಯು ಅನ್ನವು ಬಲವು ವಿಜ್ಞಾನವು ಧ್ಯಾನವು ಚಿತ್ತವು ಸಂಕಲ್ಪವು ಮನಸ್ಸು ವಾಕ್ಕು ಹೆಸರು ಮನ್ತ್ರಗಳು ಕರ್ಮಗಳು ಮತ್ತು ಈ ರೀತಿಗಳಾದ ಸರ್ವ ವಸ್ತುಗಳೂ ಉಂಟಾಗಿರುವುವೆಂಬೀ ಪ್ರಕಾರವಾಗಿ ತಿಳಿಯುತ್ತಾನೆಯೊ ಆ ಕಾಲದಲ್ಲಿ ಬ್ರಹ್ಮನಾಗುತ್ತಾನೆಂದರಿಯಬೇಕು. ॥೩೦॥

(ಗೀ॥ವಿ॥) ಏಕಸ್ಥಂ-ಒಬ್ಬನಾದ ವಿಷ್ಣುವಿನಲ್ಲಿ ಆಶ್ರಯಿಸಿರುವುದಾಗಿಯೂ, ತತಏವಚವಿಸ್ತಾರಂ-ಆ ವಿಷ್ಣುವಿನಲ್ಲಿಯೇ ಇದ್ದುಕೊಂಡು ಪುನಶ್ಚ ಉಂಟಾಗುವುದೆಂತಲೂ,ಅನುಪಶ್ಯತಿ-ಜೀವೇಶ್ವರಭೇದವನ್ನೂ ಜೀವರಲ್ಲಿಪರಸ್ಪರ ಭೇದವನ್ನೂ ತಾರತಮ್ಯದಿಂದನೋಡುತ್ತಾನೆಯೊ, ಬ್ರಹ್ಮಸಂಪದ್ಯತೆ- ಬ್ರಹ್ಮವನ್ನು ಹೊಂದುತ್ತಾನೆ. ॥೩೧॥

ಶ್ಲೋ॥ ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾ
ಯಮವ್ಯಯಃ। ಶರೀರಸ್ಥೋಪಿಕೌಂತೇಯನಕ
ರೋತಿನಲಿಪ್ಯತೇ॥ ॥೩೧॥

ಪ॥ ಅನಾದಿತ್ವಾತ್- ನಿರ್ಗುಣತ್ವಾತ್- ಪರಮಾತ್ಮಾ-ಅಯಂ- ಅವ್ಯಯಃ।ಶರೀರ
ಸ್ಥಃ-ಅಪಿ-ಕೌಂತೇಯ-ನ-ಕರೋತಿ-ನ-ಲಿಪ್ಯತೇ॥

(ಅ.ರಾ॥ ಭಾ॥) ಕೌಂತೇಯ-ಎಲೈ ಕುಂತೀ ಕುಮಾರನಾದ ಅರ್ಜುನನೇ, ಅಯಂಪರಮಾತ್ಮಾ- ದೇಹಕ್ಕಿಂತಲೂ ವಿಲಕ್ಷಣ ಸ್ವಭಾವವುಳ್ಳವನೆಂಬದಾಗಿ ನಿರೂಪಿಸಲ್ಪಟ್ಟಿರುವ ಈ ಜೀವಾತ್ಮನು, ಶರೀರಸ್ಥೋಪಿ-ಈ ಶರೀರದಲ್ಲಿಯೇ ಇದ್ದರೂ, ಅನಾದಿತ್ವಾತ್-ಒಬ್ಬರಿಂದ ಸೃಷ್ಟಿಸಲ್ಪಡದವನಾಗಿರುವುದರಿಂದ, ಅವ್ಯಯಃ-ನಾಶವಿಲ್ಲದವನು,ನಿರ್ಗುಣತ್ವಾತ್-ಸತ್ವಾದಿಗುಣರಹಿತನಾಗಿರುವುದರಿಂದ,ನಕರೋತಿ-ಯಾವದನ್ನೂ ಮಾಡುವಂತವನಲ್ಲವು, ನಲಿಪ್ಯತೇ-ದೇಹಸ್ವಭಾವಗಳಿಂದ ಸಂಬಂಧಿಸಲ್ಪಡುವುದೂಇಲ್ಲವು. ॥೩೧॥

(ಶಂ॥ಭಾ॥) ಒಬ್ಬನಾದ ಆತ್ಮನಿಗೆ ಸರ್ವ ದೇಹಗಳಲ್ಲಿಯೂ ಸ್ಥಿತಿಯನ್ನಂಗೀಕರಿಸಿದರೆ ಆಯಾ ದೇಹಸಂಬಂಧ ಪ್ರಯುಕ್ತಗಳಾದ ದೋಷಗಳು ಆತ್ಮನಿಗುಂಟಾಗಲಾರವೋ? ಎಂದರೆ ಅದಕ್ಕುತ್ತರವನ್ನು ಹೇಳುವೆನು ಕೇಳು. ಪರಮಾತ್ಮನು ಸರ್ವ ವಿಕಾರಶೂನ್ಯನು. ಹೇಗೆಂದರೆ? ವ್ಯಯವೆಂದರೆ ನಾಶವು, ಸ್ವಾಭಾವಿಕಗಳಾದ ವಿಕಾರಗಳುಳ್ಳಿವಿಕೆಯು. ಸರ್ವಕಾಲದಲ್ಲಿಯೂ ಸತ್ತಾದಆತ್ಮನಿಗೆ ನಾಶವಿಲ್ಲವಾದುದರಿಂದ ಅನಾದಿಎನ್ನಲ್ಪಡುವನು.ಆದಿ ಎಂದರೆ ಕಾರಣವು, ಅದಿಲ್ಲ ವಸ್ತುವು ಅನಾದಿ ಎನ್ನಲ್ಪಡುವುದು.ಅನಾದಿಯಾದುದರಿಂದಲೆ ನಿರವಯವನು. ನಿರವಯವ ಪದಾರ್ಥಕ್ಕೆ ನಾಶವಿಲ್ಲವಷ್ಟೆ. ಈ ಆತ್ಮನಿಗೆ ಗುಣಗಳಿದ್ದರೆ ಗುಣವ್ಯಯದೊಡನೆ ಗುಣಿಗೂ ನಾಶವುಂಟೆಂದು ಹೇಳಬಹುದು. ಆತ್ಮನು ನಿರ್ಗುಣನಾದುದರಿಂದಲೂ ವ್ಯಯವಿಲ್ಲವು. ಇಂತಹ ಸ್ವರೂಪನಾಶವಾದರೂ ಗುಣದ್ವಾರಾ ನಾಶವಾದರೂ ಇಲ್ಲವೆಂಬ ಕಾರಣದಿಂದ ಬ್ರಹ್ಮವು ಸರ್ವಭಾವ ವಿಕಾರಗಳಿಲ್ಲದ್ದೆಂಬದಾಗಿ ಹೇಳಲ್ಪಡುವುದು. ಅಧ್ಯಾಸಾಧೀನವಾದ ಸಂಬಂಧದಿಂದ ಶರೀರದಲ್ಲಿರುವಂತೆ ಇದ್ದರೂ ಶರೀರ ಕೃತ್ಯಗಳು ಆತ್ಮನನ್ನಂಟಲಾರವು. ಜ

ಲದಲ್ಲಿ ಪ್ರತಿಬಿಂಬಿಸಿರುವ ಸೂರ್ಯನು (ಜಲವು ಚಲಿಸಿದರು) ಚಲಿಸದೆ ಇರುವಂತೆ ಆತ್ಮನು ಯಾವ ಕಾರ್ಯಕ್ಕೂ ಕರ್ತನಲ್ಲವಾದುದರಿಂದ ಅಂತಹ ಕರ್ಮಫಲಗಳೊಡನೆ ಸಂಪರ್ಕವು ಆತ್ಮನಿಗಿಲ್ಲವು. ಲೋಕದಲ್ಲಿ ಯಾವನು ಯಾವ ಕೆಲಸವನ್ನು ಮಾಡಿದರೂ ಅವನೆ ಆ ಫಲವನ್ನು ಹೊಂದುತ್ತಾನಲ್ಲವೆ ? ಇಚ್ಛಾ ದ್ವೇಷಗಳು ಸುಖದುಃಖಗಳೇ ಮೊದಲಾದವು ಕ್ಷೇತ್ರಧರ್ಮಗಳೆಂಬದಾಗಿ „ ಪ್ರಕೃತ್ಯೈವಚಕರ್ಮಾಣಿ „ (೧೩॥೨೦) ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ.

ಆದರೆ ಈ ದೇಹದಲ್ಲಿದ್ದುಕೊಂಡು ಕರ್ಮಗಳ ಮಾಡುತ ಕರ್ಮಫಲಗಳನ್ನನುಭವಿಸುವಂತವನು ಯಾವನು ? ಪರಮಾತ್ಮನಿಗಿಂತಲೂ ಅನ್ಯನಾದ ಒಬ್ಬ ಜೀವಿ ಇರುವನು; ಅವನೇ ಕರ್ತಾ ಭೋಕ್ತಾ ಎಂಬುವ ಪಕ್ಷದಲ್ಲಿ „ ಕ್ಷೇತ್ರಜ್ಞಂಚಾಪಿಮಾಂವಿದ್ಧಿ „ (೧೩॥೨) ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಜೀವೇಶ್ವರೈಕ್ಯಕ್ಕೆ ಅಸಾಂದರ್ಭ್ಯವು ಪ್ರಾಪ್ತವಾಗುವುದು. ಈಶ್ವರನಿಗಿಂತಲೂ ಅನ್ಯವಾದ ಆತ್ಮವಸ್ತು ವಿಲ್ಲವೆಂದರೆ ಕರ್ತೃತ್ವ ಭೋಕ್ತೃತ್ವಗಳು ಈಶ್ವರನಿಗೇನೆ ಹೇಳಿದಂತೆ ಆಗುತ್ತದೆ. ಆದುದರಿಂದ ಈ ಪಕ್ಷವೂ ಯುಕ್ತವಲ್ಲವೆಂದರೆ ಈ ಅಂಶವು ಸ್ವಲ್ಪ ಪ್ರಕಾರಗಳಿಂದ ತಿಳಿಯಲ್ಪಡುವುದಕ್ಕೂ ವಿವರಿಸಲ್ಪಡುವುದಕ್ಕೂ ಅಶಕ್ಯವೆಂಬಕಾರಣದಿಂದಲೆ ಇಂತಹ ಕಷ್ಟಗಳನ್ನನುಭವಿಸುವುದಕ್ಕೆ ಇಷ್ಟಪಡದ ವೈಶೇಷಿಕರೂ ಸಾಂಖ್ಯರೂ ಆರ್ಹತರೂ ಬೌದ್ಧರೂ ಶ್ರೀಭಗವದುಪದಿಷ್ಟವಾದ ಉಪನಿಷತ್ಸಾರಾಂಶವನ್ನು ತ್ಯಾಗ ಮಾಡಿರುವರು. ಇದಕ್ಕೆ ತಕ್ಕ ಸಮಾಧಾನವನ್ನು ಶ್ರೀಕೃಷ್ಣನು ತಾನೇ ಉಪದೇಶಿಸಿರುವನು. ಎಲ್ಲೆಂದರೆ, „ ಸ್ವಭಾವಸ್ತು ಪ್ರವರ್ತತೆ „ (೫॥೧೪॥) ಎಂಬೀವಚನಾನುಸಾರವಾಗಿ ಅವಿದ್ಯೆಯಿಂದಲೇ ಕರ್ತೃತ್ವ ಭೋಕ್ತೃತ್ವಾದಿ ವ್ಯವಹಾರವಲ್ಲದೆ ಪರಮಾರ್ಥವಾಗಿ ಒಬ್ಬನಾದ ಪರಮಾತ್ಮನಲ್ಲಿ ಅವು ಇಲ್ಲವು. ಆದುದರಿಂದಲೆ ಸಮಸ್ತವೂ ಒಂದಾದ ಬ್ರಹ್ಮಸ್ವರೂಪವೇ ಎಂಬ ಅಧ್ಯವಸಾಯಮುಳ್ಳವರಾಗಿಯೂ ಪರಮಹಂಸ ಪರಿವ್ರಾಜಕರಾಗಿಯೂ ಅವಿದ್ಯಾಕೃತ ವ್ಯವಹಾರಗಳಿಲ್ಲದವರಾಗಿಯೂ ಇರುವ ಜ್ಞಾನನಿಷ್ಠರಿಗೆ ಕರ್ಮಾಧಿಕಾರ ವಿಲ್ಲವೆಂಬದಾಗಿ ಈ ಗ್ರಂಥದಲ್ಲಿ ಅಲ್ಲಲ್ಲಿ ಪರಮಾತ್ಮನಿಂದ ಹೇಳಲ್ಪಟ್ಟಿರುವುದು.॥೨೧॥

(ಗೀ॥ ವಿ॥) ಪರಮಾತ್ಮನಿಗೆ ನಾಶಾದಿ ರೂಪ ಧರ್ಮಗಳಿಲ್ಲವೆಂದು ಹೇಳುತ್ತಾರೆ. ಅನಾದಿತ್ವಾತ-ಉತ್ಪತ್ತಿ ರಹಿತನೆಂಬ ಕಾರಣದ್ದೆಶೆಯಿಂದಲೂ, ನಿರ್ಗುಣತ್ವಾತ್-ಸತ್ವಾದಿ ಗುಣರಹಿತನೆಂಬ ಕಾರಣದ್ದೆಶೆಯಿಂದಲೂ, ಅಯಂಪರಮಾತ್ಮಾ-ಈ ಪರಮಾತ್ಮನು, ಶರೀರಸ್ಥೋಪಿ-ಜೀವಶರೀರಗಳಲ್ಲಿರತಕ್ಕವನಾದರೂ, ಅವ್ಯಯಃ-ನಾಶರಹಿತನು. ಅಯಂಪರಮಾತ್ಮಾ-ಈ ಪರಮಾತ್ಮನು, ನಕರೋತಿ-ಲೌಕಿಕ ಕ್ರಿಯೆಗಳನ್ನು ಮಾಡತಕ್ಕವನಲ್ಲವು, ನಲಿಪ್ಯತೆ-ಪುಣ್ಯ ಪಾಪ ಕರ್ಮಗಳೊಡನೆ ಲಿಪ್ತನಾಗುವುದಿಲ್ಲವು. (ಅಥವಾ) ಪರಮಾತ್ಮನು ಸರ್ವಚೇತನಾ ಚೇತನಾತ್ಮಕನಾದ ಕಾರಣ ,, ಯದಾಭೂತಪೃಥಗ್ಭಾವಂ ,, ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಜೀವ ಪರಮಾತ್ಮ ಭೇದವು ಕೂಡದೆಂದರೆ ಅದಕ್ಕುತ್ತರವಾಗಿ ಈ ಶ್ಲೋಕವು ಪ್ರವೃತ್ತವಾಗಿರುವುದು. ಅವ್ಯಯಃ-ಸರ್ವಥಾ ನಾಶರಹಿತನಾದ, ಅಯಂಪರಮಾತ್ಮಾ-ಈ ಪರಮಾತ್ಮನು, ಅನಾದಿತ್ವಾತ್-ನಿರ್ಗುಣತ್ವಾತ್- (ಹಿಂದೆ ವಿವರಿಸಿರುವಅರ್ಥವೆ) ಹೇಕೌಂತೇಯ-ಎಲೈಅರ್ಜುನನೆ ! ಶರೀರಸ್ಥಃ-ಶರೀರದಲ್ಲಿ ಪ್ರವೃತ್ತಿರೂಪವಾದ ಸುಖದುಃಖಗಳನ್ನು ಭೋಗಿಸುವ ಜೀವನು, ನ-ಅಲ್ಲವು, ಅಪಿ-ಜಡವೂ, ನ-ಅಲ್ಲವು, ಜೀವನಿಗೆ ಉತ್ಪತ್ತಿಯೂ ಸತ್ವಾದಿಗುಣ ಸಂಬಂಧವೂ ಶರೀರದಲ್ಲಿ ಪ್ರವೃತ್ತಿ ರೂಪವಾದ ಸುಖದುಃಖಗಳ ಭೋಗವೂ ಉಂಟು, ಇವೆಲ್ಲವೂ ಪರಮಾತ್ಮನಿಗಿಲ್ಲವಾದುದರಿಂದ ಜೀವಪರಮಾತ್ಮರು ಭಿನ್ನರೆಂದಭಿಪ್ರಾಯವು. ಕಿಂಚ-ಜೀವಭೇದಸಾಧಕವಾದ ಮತ್ತೂ ಒಂದು ಧರ್ಮವನ್ನು ಪರಮಾತ್ಮನಿಗೆ ಹೇಳುತ್ತಾನೆ. ಅಯಂಪರಮಾತ್ಮಾ-ಈ ಪರಮಾತ್ಮನು, ಕರೋತಿ-ಕರ್ಮಗಳನ್ನು ಮಾಡುತ್ತಾನೆ. ಆದರೂ ; ನಲಿಪ್ಯತೆ-ಆ ಕರ್ಮಫಲಗಳಿಂದ ಲಿಪ್ತನಾಗುವುದಿಲ್ಲವು. ಜೀವನಿಗೆ ಕರ್ಮಫಲ ಲೇಪ ವಿರುವದರಿಂದ ಜೀವ ಪರಮಾತ್ಮರಿಗೆ ಭೇದವು ಸಿದ್ಧವಾಯಿತೆಂದರಿಯಬೇಕು. ॥೩೧॥

ಶ್ಲೋ ॥ ಯಥಾಸರ್ವಗತಂಸೌಕ್ಷ್ಮ್ಯಾದಾಕಾಶಂ
ನೋಪಲಿಪ್ಯತೆ।ಸರ್ವತ್ರಾವಸ್ಥಿತೋದೇಹೇತಥಾ
ತ್ಮಾನೋಪಲಿಪ್ಯತೆ। ।೩೨।

ಪ॥ ಯಥಾ-ಸರ್ವಗತಂ-ಸೌಕ್ಷ್ಮ್ಯಾತ್-ಆಕಾಶಂ-ನ-ಉಪಲಿಪ್ಯತೇ।ಸರ್ವತ್ರ-ಅವಸ್ಥಿತಃ-ದೇಹೇ-ತಥಾ-ಆತ್ಮಾ-ನ-ಉಪಲಿಪ್ಯತೇ॥

(ಅ॥) ಸರ್ವಗತಂ-ಸಕಲಪ್ರದೇಶಗಳಲ್ಲಿಯೂ ವ್ಯಾಪಿಸಿರುವ; ಆಕಾಶಂ- ಆಕಾಶವು, ಸೌಕ್ಷ್ಮ್ಯಾತ್- ಸೂಕ್ಷ್ಮವಾಗಿರುವುದರಿಂದ, ಯಥಾ-ಹೇಗಾದರೆ, ನೋಪಲಿಪ್ಯತೇ-ಅಂಟುವುದಿಲ್ಲವೋ, ತಥಾ-ಆಪ್ರಕಾರವಾಗಿ, ಸರ್ವತ್ರದೇಹೇ-ಸಕಲ ದೇಹಗಳಲ್ಲಿಯೂ, ಅವಸ್ಥಿತಃ-ಇರುತಲಿರುವ, ಆತ್ಮಾ-ಆತ್ಮವು, ನೋಪಲಿಪ್ಯತೇ-ಅಂಟುವುದಿಲ್ಲವು. ॥೩೨॥

(ಶ್ರೀ॥) ಸರ್ವತ್ರದೇಹೇವಸ್ಥಿತಃ-ಉತ್ತಮವಾದ ಅಥವಾ ನೀಚವಾದ ದೇಹಗಳಲ್ಲಿದ್ದರೂ. ॥೩೨॥

(ರಾ॥ಭಾ॥) ಸತ್ಯವೇ; ನಿರ್ಗುಣನಾದುದರಿಂದ ಯಾವದನ್ನು ಮಾಡಬೇಡ, ಆದರೂ ದೇಹವೊಡನೆ ಯಾವಾಗಲೂ ಸೇರಿರುವ ಆತ್ಮನು ದೇಹ ಸ್ವಭಾವಗಳೊಡನೆ ಹೇಗೆ ಲೇಪಿಸಲ್ಪಡಲಾರನು ? "ಯತ್ಪ್ರಾಪ್ಯಾತಿಪವಿತ್ರಾಣಿವಸ್ತ್ರಾಣ್ಯಾಭರಣಾನಿಚ । ಅಶುಚಿತ್ವಂಕ್ಷಣಾದ್ಯಾಂತಿಕಿಮನ್ಯದಶುಚಿಸ್ತತಃ" ಎಂಬ ನ್ಯಾಯದಿಂದ ಪರಿಶುದ್ಧವಾದವಸ್ತ್ರಾಭರಣಾದಿಗಳುಕೂಡಯಾವದೇಹದೊಡನೆ ಕ್ಷಣಮಾತ್ರಸಂಬಂಧಿಸಿದರೂ ಅಶುದ್ಧಿಯನ್ನು ಹೊಂದಿ ಕ್ಷೀಣಿಸಿ ಹೋಗುವುವೋ ಅಂತಹ ದೇಹದಲ್ಲಿ ಅನಾದಿ ಕಾಲದಿಂದಿರುತಲಿರುವ ಆತ್ಮನಿಗೆ ದೇಹಸ್ವಭಾವವು ಲೇಪಿಸುವುದಿಲ್ಲವೆಂದು ಹೇಳುವುದು ಅಸಾಧ್ಯವಲ್ಲವೆ ? ಎಂದರೆ ಇದಕ್ಕುತ್ತರವನ್ನು ಹೇಳುತ್ತಾರೆ. ಹೇಗಾದರೆ ಆಕಾಶವು ಸರ್ವವಸ್ತುಗಳೊಡನೆ ಸೇರಿದ್ದರೂ ಸೂಕ್ಷ್ಮವಸ್ತುವಾದುದರಿಂದ ಸರ್ವವಸ್ತುಗಳ ಸ್ವಭಾವಗಳಿಂದ ಸಂಬಂಧಿಸಲ್ಪಡುವುದಿಲ್ಲವೋ ಆಪ್ರಕಾರವೆ ಜೀವಾತ್ಮನೂ ಸೂಕ್ಷ್ಮವಸ್ತುವಾಗಿರುವುದರಿಂದ ದೇವಮನುಷ್ಯಾದಿಯಾದ ಯಾವ ಶರೀರದಲ್ಲಿದ್ದರೂ ಆಯಾ ದೇಹಸ್ವಭಾವಗಳೊಡನೆ ಸಂಬಂಧಿಸಲ್ಪಡುವುದಿಲ್ಲವು. ॥೩೨॥

ಶ್ಲೋ॥ಯಥಾಪ್ರಕಾಶಯತ್ಯೇಕಃಕೃತ್ಸ್ನಂಲೋ
ಕಮಿಮಂರವಿಃ। ಕ್ಷೇತ್ರಂಕ್ಷೇತ್ರೀತಥಾಕೃತ್ಸ್ನಂ
ಪ್ರಕಾಶಯತಿಭಾರತ॥ ॥೩೩॥

ಪ॥ ಯಥಾ-ಪ್ರಕಾಶಯತಿ-ಏಕಃ-ಕೃತ್ಸ್ನಂ-ಲೋಕಂ-ಇಮಂ-ರವಿಃ! ಕ್ಷೇತ್ರಂ-ಕ್ಷೇತ್ರೀ-ತಥಾ. ಕೃತ್ಸ್ನಂ-ಪ್ರಕಾಶಯತಿ-ಭಾರತ॥

(ಅ||) ಹೇಭಾರತ-ಭರತವಂಶದಲ್ಲ ದಿಸಿರುವ ಎಲೈಅರ್ಜುನನೆ, ಏಕಃ-ಒಬ್ಬನಾದ, ರವಿಃ-ಸೂರ್ಯನು, ಕೃತ್ಸ್ನಂ-ಸಮಸ್ತವಾದ, ಇಮಂಲೋಕಂ-ಈ ಲೋಕವನ್ನು, ಯಥಾ-ಹೇಗಾದರೆ, ಪ್ರಕಾಶಯತಿ-ಪ್ರಕಾಶಪಡಿಸುತ್ತಾನೆಯೊ,ತಥಾ-ಆ ಪ್ರಕಾರವೆ, ಕ್ಷೇತ್ರೀ-ಕ್ಷೇತ್ರಜ್ಞನು, ಕೃತ್ಸ್ನಂಕ್ಷೇತ್ರಂ-ಸಕಲವಾದ ಶರೀರವನ್ನು, ಪ್ರಕಾಶಯತಿ-ಪ್ರಕಾಶಪಡಿಸುತ್ತಾನೆ. ||೩೩||

(ಶಂ||ಭಾ||) ಒಬ್ಬನೇಆದ ಸೂರ್ಯನು ಸಕಲ ಲೋಕವನ್ನು ಪ್ರಕಾಶಪಡಿಸುವಂತೆ ಪರಮಾತ್ಮನು ಸಮಸ್ತವಾದ ಪ್ರಪಂಚವನ್ನು (ಮಹಾ ಭೂತಾದಿಯಾದ ಧೃತಿಪರ್ಯಂತವಾಗಿರುವ ಸರ್ವ ಕ್ಷೇತ್ರವನ್ನೂ) ಪ್ರಕಾಶಪಡಿಸುತ್ತಾನೆ. ಸೂರ್ಯನ ಪ್ರಕಾಶವು ಯಾವ ವಸ್ತುವಿನಲ್ಲಿ ಸ್ಪೃಷ್ಟವಾದರೂ ಆ ವಸ್ತುವಿನ ಗುಣವು ಸೂರ್ಯನನ್ನು ಹೇಗಾದರೆ ಅಂಟುವುದಿಲ್ಲವೋ ಆ ಪ್ರಕಾರವಾಗಿ ಆತ್ಮನು ಯಾವ ದೇಹದಲ್ಲಿದ್ದರೂಆಯಾದೇಹಸ್ವಭಾವಗುಣಗಳು ಆತ್ಮನನ್ನಂಟಲಾರವೆಂತಲೂ ಒಂದೇ ಆತ್ಮನು ಸೂರ್ಯನಂತೆ ಸಕಲ ಪ್ರಪಂಚವನ್ನು ಪ್ರಕಾಶ ಪಡಿಸುತ್ತಾನೆಂತಲೂ ದೃಷ್ಟಾಂತದಿಂದ ಬೋಧಿತವಾಗುವುದು. ||೩೩||

(ರಾ||ಭಾ||) ಭರತವಂಶೋದ್ಭವನಾದ ಎಲೈ ಅರ್ಜುನನೆ! ಹೇಗಾದರೆ ಒಬ್ಬ ಸೂರ್ಯನು ಸಮಸ್ತವಾದ ಈ ಲೋಕವನ್ನು ತನ್ನ ಪ್ರಭೆಯಿಂದ ಪ್ರಕಾಶಪಡಿಸುತ್ತಾನೆಯೊ ಆ ಪ್ರಕಾರವೆ ಶರೀರವನ್ನು ಕ್ಷೇತ್ರಸ್ವಾಮಿಯಾದ ಜೀವಾತ್ಮನ ನನ್ನದು, ಈ ಶರೀರವು ಇಂತಾದ್ದೆಂಬದಾಗಿ ಅಂತಃ ಪ್ರದೇಶದಲ್ಲಿಯೂ ಬಾಹ್ಯಪ್ರದೇಶಗಲ್ಲ ಕಾಲು ಮೊದಲು ತಲೆವರೆಗೂ ತನ್ನ ಧರ್ಮಭೂತಜ್ಞಾನದಿಂದ ಪ್ರಕಾಶಪಡಿಸುತ್ತಾನೆ. ಆದುದರಿಂದ ಪ್ರಕಾಶ್ಯವಾದಲೋಕಕ್ಕಿಂತಲೂ ಪ್ರಕಾಶಕನಾದ ಸೂರ್ಯನಂತೆ, ತಿಳಿಯುವ ತವನಾದುದರಿಂದಅರಿಯಲ್ಪಡುವ ಕ್ಷೇತ್ರಕ್ಕಿಂತಲೂ ಹಿಂದೇ ವಿವರಿಸಲ್ಪಟ್ಟ ಲಕ್ಷಣಯುಕ್ತನಾದ ಜೀವಾತ್ಮನು ವಿಲಕ್ಷಣನೆಂದರಿಯಬೇಕು. ||೩೩||

ಶ್ಲೋ|| ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ
ಜ್ಞಾನಚಕ್ಷುಷಾ | ಭೂತಪ್ರಕೃತಿಮೋಕ್ಷಂಚ

ಯೇವಿದುರ್ಯಾಂತಿತೇಪರಂ॥ ॥೩೪॥
ಓಂ ತತ್ಸದಿತಿಶ್ರೀಭಗವದ್ಗೀತಾಸೂಪನಿಷತ್ಸು
ಪರಬ್ರಹ್ಮವಿದ್ಯಾಯಾಂಯೋಗಶಾಸ್ತ್ರೇಶ್ರೀಕೃ
ಷ್ಣಾರ್ಜುನಸಂವಾದೇಕ್ಷೇತ್ರಕ್ಷೇತ್ರಜ್ಞವಿಭಾಗಯೋ
ಗೋನಾಮತ್ರಯೋದಶೋಧ್ಯಾಯಃ.

ಪ॥ ಕ್ಷೇತ್ರಕ್ಷೇತ್ರಜ್ಞಯೋಃ-ಏವಂ-ಅಂತರಂ-ಜ್ಞಾನಚಕ್ಷುಷಾ । ಭೂತಪ್ರಕೃತಿಮೋಕ್ಷಂ-ಚ-ಯೇ-ವಿದುಃ-ಯಾಂತಿ-ತೇ-ಪರಂ॥

(ಅ॥ರಾ॥ಭಾ॥) ಏವಂ-ಇದುವರೆಗೂ ನಿರೂಪಿಸಲ್ಪಟ್ಟ ಪ್ರಕಾರದಿಂದ, ಕ್ಷೇತ್ರಕ್ಷೇತ್ರಜ್ಞಯೋರಂತರಂ-ಕ್ಷೇತ್ರವೆಂಬ ಶರೀರವೇನು, ಕ್ಷೇತ್ರಜ್ಞನೆನ್ನಲ್ಪಡುವ ಜೀವಾತ್ಮನೇನು ಇವರ ವಿಶೇಷವನ್ನು, (ಅಜ್ಞತ್ವಧಾರ್ಯತ್ವಶೇಷತ್ವವು ಕ್ಷೇತ್ರಧರ್ಮವು, ವೇದಿತೃತ್ವಧಾರಕತ್ವಶೇಷಿತ್ವವು ಕ್ಷೇತ್ರಜ್ಞಧರ್ಮವೆಂಬ ವಿಶೇಷವನ್ನು ಎಂದರ್ಥವು.) ಜ್ಞಾನಚಕ್ಷುಷಾ-ವಿವೇಕವಿಷಯ ಜ್ಞಾನವೆಂಬ ಕಣ್ಣಿನಿಂದ, ಯೇ-ಯಾರಾದರೆ, ವಿದುಃ-ತಿಳಿಯುತ್ತಾರೆಯೋ ಭೂತಪ್ರಕೃತಿಮೋಕ್ಷಂಚ-ಭೂತಾಕಾರವಾಗಿ ಪರಿಣಮಿಸಿರುವ ಪ್ರಕೃತಿಯ ವಿಮೋಚನಕ್ಕೆ ಉಪಾಯವಾದ ಅಮಾನಿತ್ವಾದಿ ಗುಣವರ್ಗವನ್ನೂ, (ಅವಗನ್ಯಯೇಆಚರಂತಿ) ಎಂಬದಾಗಿ ಮೂರು ಪದಗಳನ್ನು ಅಧ್ಯಾಹರಿಸಿಕೊಳ್ಳಬೇಕು. ಸಮೀಚೀನವಾಗಿ ತಿಳಿದುಯಾರಾದರೆ ಆಚರಿಸುತ್ತಾರೆಯೋ,ತೇ-ಅವರು, ಪರಂಯಾಂತಿ-ಬಂಧಸಂಬಂಧಗಂಧವಿಲ್ಲದ ಜೀವಾತ್ಮನನ್ನು ಹೊಂದುತ್ತಾರೆ. ॥೩೪॥

(ಶಂ॥ಭಾ॥) ಈ ಕ್ಷೇತ್ರಾಧ್ಯಾಯಾರ್ಥಗಳ ಉಪಸಂಹಾರರೂಪವಾಗಿರುವುದು ಈ ಶ್ಲೋಕವು. (ಕಿಂಚ-ಈ ಅಧ್ಯಾಯದಲ್ಲಿ ವಿಶದೀಕರಿಸಲ್ಪಟ್ಟ ವಿಶೇಷಾರ್ಥಗಳನ್ನು ತಿಳಿದುಕೊಂಡವನಿಗೆ ಫಲವಿಶೇಷವನ್ನು ಕೂಡ ಬೋಧಿಸುವೆನು ಕೇಳು ಈ ಅಧ್ಯಾಯದಲ್ಲಿ ವಿವರಿಸಲ್ಪಟ್ಟ ಕ್ಷೇತ್ರಕ್ಷೇತ್ರಜ್ಞರ ಪರಸ್ಪರ ವೈಲಕ್ಷಣ್ಯ ವಿಶೇಷವನ್ನು; (ಕ್ಷೇತ್ರವುಜಡವು ವಿಕಾರಿ, ಕ್ಷೇತ್ರಜ್ಞನು ಚೇತನನು ನಿರ್ವಿಕಾರಿ,) ಎಂಬಿದೇಮೊದಲಾದ ಭೇದಗಳನ್ನು ಸಮಸ್ತ ಭೂತಗಳಿಗೆ ಆಧಾರ

ವಾದ ಮಾಯಾ ಎಂಬ ಅವಿದ್ಯಾನಿವರ್ತಕವಾದ ಉಪಾಯ ವಿಶೇಷವ ನ್ನೂ ಶಾಸ್ತ್ರಾಚಾರ್ಯೋಪದೇಶಗಳಿಂದುಂಟು ಮಾಡಲ್ಪಟ್ಟ ಜ್ಞಾನ ಚಕ್ಷುಸ್ಸಿನಿಂದ ಯಾರಾದರೆ ತಿಳಿದುಕೊಳ್ಳುವರೋ ಅಂತವರು ಪರ ಮಾರ್ಥವಾದ ಬ್ರಹ್ಮತತ್ವವನ್ನು ತಿಳಿದುಕೊಂಡವರಾದುದರಿಂದ ಅಂ ತವರಿಗೆ ಪುನರ್ಜನ್ಮ ಉಂಟಾಗಲಾರದು ಎಂದರೆ ಹಿಂದೇ ವಿವರಿ ಸಲ್ಪಟ್ಟ ಅಮಾನಿತ್ವಾದಿ ನಿಷ್ಠೆಯೊಡನೆ ಇದ್ದುಕೊಂಡು ಕ್ಷೇತ್ರಕ್ಷೇ ತ್ರಜ್ಞರ ನಿಜಾಕಾರವನ್ನು ತಿಳಿದ ಬ್ರಹ್ಮಜ್ಞನಿಗೆ ಸರ್ವಾನರ್ಥಗಳೂ ನಿವರ್ತಿಸಿ ಪರಿಪೂರ್ಣ ಪರಮಾನಂದಾವಿರ್ಭಾವವೆಂಬಪರಮಪುರುಷಾರ್ಥ ಲಾಭಕ್ಕೆ ಯಾವಸಂಶಯವೂ ಇಲ್ಲವೆಂದು ತಾತ್ಪರ್ಯವು. ‖೩೪‖

---

## ಅದ್ವೈತಸಿದ್ಧಾನ್ತಾನುಸಾರಿಯಾದ ಅಧ್ಯಾಯ

## ಸಂಗ್ರಹಶ್ಲೋಕವು.

ಮೂ ‖ ಕ್ಷೇತ್ರಕ್ಷೇತ್ರಜ್ಞಯೋರ್ಯತ್ಪ್ರಕೃತಿಪು
ರುಷಯೋರಂತರಜ್ಞಾನಮೇತತ್ತತ್ತ್ವಂಪ್ರೋ
ಕ್ತಂಯಥಾವ್ಯಾಗುಣವಿಕೃತಿಮಯಿಸಾಕಾರ್ಯಕರ್ತೃ
ತ್ವಹೇತುಃ। ಭೋಕ್ತೃತ್ವೇಹೇತುರಾತ್ಮಾಸುಖತ
ದಿತರಯೋರೇಕಪವಾಖಿಲೇಷುಕ್ಷೇತ್ರೀಭಾ
ಸ್ವಾನಿವ್ಯೈವಂತ್ರಿಸಹಿತದಶಮೇಪುಂಪ್ರಕೃತ್ಯೋ
ರ್ವಿಚಾರಃ ‖೧೩‖

ತಾ॥ ಪ್ರಕೃತಿಯು ಸತ್ವರಜಸ್ತಮೋಗುಣ ಮಯವಾದದ್ದೆಂತ ಲೂ, ದೇಹೇಂದ್ರಿಯಾದಿ ಸಮಸ್ತಗಳನ್ನುಂಟು ಮಾಡತಕ್ಕದ್ದೆಂತ ಲೂ, ಆತ್ಮನು ಪ್ರಕೃತಿಯೇತಾನೆಂಬಅಭಿಮಾನವುಳ್ಳವನಾಗಿ ಸುಖ

ದುಃಖಗಳನ್ನು ಅನುಭವಿಸುವನಂತೆ ಇರುತ್ತಾನಲ್ಲದೆ ವಾಸ್ತವವಾಗಿ ನಿರ್ವಿಕಾರಿಯೆಂತಲೂ ಒಬ್ಬ ಸೂರ್ಯನು ಸಮಸ್ತ ಪದಾರ್ಥಗಳನ್ನು ಪ್ರಕಾಶಪಡಿಸುವಂತೆ ಒಂದಾತ್ಮವೇ ಸಮಸ್ತ ಪ್ರಪಂಚವನ್ನು ಅಭಾಸಿಸುವಂತೆ ಮಾಡುತ್ತಾನೆಂತಲೂ ಈ ರೀತಿಯಾಗಿ ಕ್ಷೇತ್ರಕ್ಷೇತ್ರಜ್ಞರೆನ್ನಲ್ಪಡುವ ಪ್ರಕೃತಿ ಪುರುಷರ ವೈಲಕ್ಷಣ್ಯವನ್ನು ತಿಳಿಯುವಿಕೆಯೆ ತತ್ವಜ್ಞಾನವೆನ್ನಲ್ಪಡುವುದೆಂಬದಾಗಿ ಪ್ರಕೃತಿ ಪುರುಷ ವಿವೇಕವು ಈ ಹದಿಮೂರನೇದಾದ ಕ್ಷೇತ್ರಾಧ್ಯಾಯದಲ್ಲಿ ಪವಿಷ್ಟವಾಯಿತೆಂದು ಭಾವವು. ‖೧೩‖

ಶ್ರೀಮದ್ಯಾಮುನಾಚಾರ್ಯರ ಸಂಗ್ರಹ ಶ್ಲೋಕವು.

ಮೂ‖ ದೇಹಸ್ವರೂಪಮಾತ್ಮಾಪ್ತಿಹೇತುರಾತ್ಮ
ವಿಶೋಧನಂ।ಬಂಧಹೇತುರ್ವಿವೇಕಶ್ಚತ್ರಯೋದಶ
ಉದೀರ್ಯತೇ‖ ‖೧೭‖

ತಾ‖ ಈ ಅಧ್ಯಾಯದಲ್ಲಿ ದೇಹಸ್ವರೂಪವಿರುವ ಪ್ರಕಾರವೂ ಆತ್ಮಸ್ವರೂಪವಿರುವಪ್ರಕಾರವೂದೇಹವಿಯುಕ್ತಾತ್ಮಪ್ರಾಪ್ತ್ಯುಪಾಯಗಳಾದ ಅಮಾನಿತ್ವಾದಿ ಗುಣಗಳೂ, ಅಜತ್ವಾನಂತತ್ವಭಗವಚ್ಛೇಷತ್ವಬೃಹತ್ತ್ವಾದಿ ಗುಣಕವಾದ ಯಥಾವಸ್ಥಿತ ಪ್ರತ್ಯಗಾತ್ಮವನ್ನು ಶೋಧಿಸಿದ ಪ್ರಕಾರವೂ ಪ್ರಕೃತಿ ಸಂಸರ್ಗೋಪಾಧಿಕ ಪೂರ್ವಪೂರ್ವ ಸತ್ವಾದಿಗುಣಮಯ ಸುಖಾದಿ ಸಂಗವು ಬಂಧಕಾರಣವೆಂಬ ಸಂದರ್ಭವೂ, ಯಥಾಧಿಕಾರವಾಗಿಭಗವದ್ಧ್ಯಾನಯೋಗವೂ ಜ್ಞಾನಯೋಗವೂ (ಆತ್ಮಜ್ಞಾನಗರ್ಭವಾಗಿಯೂ ಫಲಾಭಿಸಂಧಿ ರಹಿತವಾಗಿಯೂ ಇರುವ) ಕರ್ಮಯೋಗವೂ ಎಂಬಿವೇಮೊದಲಾದಪರಿಕರಗಳೊಡನೆ ಆತ್ಮಾವಲೋಕನ ಮಾಡುವಪ್ರಕಾರವೂ ವ್ಯಾಖ್ಯಾತವಾಯಿತು‖೧೭‖

## ಶ್ರೀಮನ್ನಿಗಮಾನ್ತ ಮಹಾದೇಶಿಕರಿಂದ ಅನುಗ್ರಹಿಸಲ್ಪಟ್ಟ ಅಧ್ಯಾಯಾರ್ಥ ಸಂಗ್ರಾಹಕವಾದ ಶ್ರೀಗೀತಾರ್ಥ ಸಂಗ್ರಹಗಾಥೆಯು.

ಮೂ॥ ಊನಿಱ್ಪಡಿಯುಮುಯಿರಿಱ್ಪಿರಿವುಮುಯಿ
ರ್ಪೆರುವಾರ್, ಞಾನಂಪೆರುವಕೈಯುಮ್ ಞಾನ
ವಿಞ್ಞಾನ್ನವುಯಿರ್ಪಯನುಂ, ಊನಿನ್ನವರ್ಕಡಿಯು
ಮುಯಿರ್ವೇರಿಡುಮುಳ್ವಿರಕುಂ, ತೇನಿನ್ನಪಾ
ದರ್ತೆಳಿವಿತ್ತನರ್ಶಿಲೈಪ್ಪಾರ್ತ್ತನುಕ್ಕೇ॥

ಟೀ॥ „ದೇಹಸ್ವರೂಪ,, ಎಂಬುವ ಸಂಗ್ರಹ ಶ್ಲೋಕದಂತೆ ಈ ಅಧ್ಯಾಯಾರ್ಥಗಳನ್ನೊಂದು ಗಾಥೆಯಿಂದ ಸಂಗ್ರಹಿಸುತ್ತಾರೆ. ತೇನಿನ್ನ ಪಾದರ್-ಅಮೃತಸ್ಯಂದಿ ಪಾದಪಂಕಜವುಳ್ಳ ಸರ್ವೇಶ್ವರನು, ಊನಿಱ್-ಶರೀರದ, ಪಡಿಯುಂ-ಪ್ರಕಾರಗಳನ್ನೂ, ಉಯಿರಿಱ್-ಆತ್ಮನ, ಪಿರಿವುಂ-ವಿಭಾಗವನ್ನೂ, ಉಯಿರ್-ಆತ್ಮನನ್ನು, ಪೆರುವಾರ್-ಹೊಂದುವಂತವರು, ಞಾನಂ-ಜ್ಞಾನವನ್ನು, ಪೆರುವಕೈಯುಂ-ಹೊಂದುವ ಪ್ರಕಾರವನ್ನೂ, ಇಲ್ಲಿ ಜ್ಞಾನಶಬ್ದದಿಂದ ಜ್ಞಾಯತೇ ಅನೇನ ಆತ್ಮಾ ಎಂಬ ವ್ಯುತ್ಪತ್ತಿಯಿಂದ ಆತ್ಮಜ್ಞಾನಸಾಧನವಾದ ಅಮಾನಿತ್ವಾದಿ ಆತ್ಮಗುಣವೃಂದವು ವಿವಕ್ಷಿತವಾಗುವುದು. ಆತ್ಮಲಾಭಾಪೇಕ್ಷಿಗಳಿಗೆ ಆತ್ಮಪ್ರಾಪ್ತಿಸಾಧನವಾದ ಅಮಾನಿತ್ವಾದಿಗುಣಬೃಂದವು ಉಪಾಯವಾದ ಪ್ರಕಾರವನ್ನು ಎಂದರ್ಥವು. ಉಯಿರ್ಪಯನುಂ - ಆತ್ಮವೆಂಬ ಫಲವನ್ನೂ, ಅಮಾನಿತ್ವಾದಿಗುಣಬೃಂದರೂಪ ಆತ್ಮಜ್ಞಾನಸಾಧನಸಾಧ್ಯವಾದ ಪ್ರತ್ಯಗಾತ್ಮಸ್ವರೂಪ ಲಕ್ಷಣವಾಗಿರುವ ಪ್ರಾಪ್ಯವನ್ನೂ ಎಂದರ್ಥವು. ಊನಿಲ್-ಶರೀರದಲ್ಲಿ, ನಿನ್ನವರ್ಕು-ಇರುವಂತವರಿಗೆ, ಅಡಿಯುಂ-ಮೂಲವನ್ನೂ, ಆತ್ಮನಿಗೆ ನಾನಾಕಳೇಬರ ಸಂಸರ್ಗರೂಪ ಬಂಧಹೇತುವನ್ನೂ ಎಂದರ್ಥವು. ಞಾನವಿನ್ನ-ಜ್ಞಾನದಿಂದುಂಟಾದ, ಉಯಿರ್-ಆತ್ಮನನ್ನು, ವೇರಿಡುಮ್-ಪ್ರತ್ಯೇಕಿಸುವುದಾದ, ಉಳ್ ವಿರಕುಮ್-ಅಂತರವಾದ ಉಪಾಯವನ್ನೂ, ಪ್ರಕೃತಿ ಸಂಸೃಷ್ಟನಾದ ಆತ್ಮನ ವೈಲಕ್ಷಣ್ಯಾನುಸಂಧಾನ ಪ್ರಕಾರವೇನು, ಅದಕ್ಕೆ ಅಂತರಂಗೋಪಾಯವೇನು ಇವುಗಳನ್ನೂ ಎಂದರ್ಥವು ಶಿಲೈ, ಧನ್ವಿಯಾದ, (ಎಂದರೆ ಧನುರ್ಧಾರಿಯಾದ,) ಪಾರ್ತ್ತನುಕ್ಕು-ಅರ್ಜುನನಿಗೆ, ತೆಳಿವಿತ್ತನರ್-ವಿಶದವಾಗಿ ಉಪದೇಶಿಸಿದನು. ॥೧೮॥

ಇತಿ ಶ್ರೀಮದ್ಗೀತಾರ್ಥಸಾರೇ ತ್ರಯೋದಶಾಧ್ಯಾಯಃ.



ಶ್ರೀಯೈಶ್ರೀರುಕ್ಮಿಣ್ಯೈನಮಃ.

ಶ್ರೀಕೃಷ್ಣಾಯ ಪರಮಾತ್ಮನೇನಮಃ.

# ಶ್ರೀಮದ್ಗೀತಾರ್ಥಸಾರೇ ಚತುರ್ದಶಾಧ್ಯಾಯಃ.

ಅವತಾರಿಕೆಗಳು.

(ಶಂ॥ಭಾ॥) ಕ್ಷೇತ್ರಕ್ಷೇತ್ರಜ್ಞರ ಸಂಯೋಗದಿಂದ ಸಕಲವೂ ಉಂಟಾಗುವಂತೆ ಹೇಳಲ್ಪಟ್ಟಿತು. ಅದು ಹೇಗೆ ಉಂಟಾಗುವುದೆಂದರೆ ಆ ಅಂಶವು ಈ ಅಧ್ಯಾಯದಲ್ಲಿ ವಿವರಿಸಲ್ಪಡುವುದು. (ಅಥವಾ) ಸಾಂಖ್ಯನಿರೀಶ್ವರ ವಾದಿಗಳು ಹೇಳುವಂತೆ ಕ್ಷೇತ್ರಕ್ಷೇತ್ರಜ್ಞರಿಗೆಸ್ವಾಭಾವಿಕವಾಗಿ ಜಗತ್ಕಾರಣತ್ವ ವಿಲ್ಲವೆಂತಲೂ ಈಶ್ವರ ಪರತಂತ್ರರಾದ ಪ್ರಕೃತಿಪುರುಷರಿಗೆ ಜಗತ್ಕಾರಣತ್ವ ವುಂಟೆಂತಲೂ (ಜೀವನಿಗೆ ಪ್ರಕೃತಿಯಲ್ಲಿರುವಿಕೆಯೂ, ಗುಣಗಳ ಸಂಬಂಧವೂ, ಸಂಸಾರಕ್ಕೆ ಕಾರಣವಾಗಿ ಹೇಳಲ್ಪಟ್ಟಿರುವುದರಿಂದ ಯಾವ ಗುಣದಿಂದ ಹೇಗೆ ಸಂಬಂಧವು ? ಆ ಗುಣಗಳ್ಯಾವವು ? ಅವುಗಳು ಜೀವಾತ್ಮನನ್ನು ಹೇಗೆ ಬಂಧಿಸುವುವು ? ಗುಣಗಳ ದಶೆಯಿಂದ ಬಿಡಲ್ಪಡುವುದು ಹೇಗೆ ? ಗುಣವಿಮುಕ್ತನಾದವನು ಹೇಗೆ ಇರುವನು ? ಅವನ ಲಕ್ಷಣವು ಹೇಗೆ ಇರುವುದು ? ಎಂಬೀ ಪ್ರಶ್ನೆಗಳಿಗುತ್ತರವು) ಈ ಅಧ್ಯಾಯದಲ್ಲಿ ಹೇಳಲ್ಪಡುವುದು.

(ರಾ॥ಭಾ॥) ತ್ರಯೋದಶಾಧ್ಯಾಯದಲ್ಲಿ ಅನ್ಯೋನ್ಯ ಸಂಸೃಷ್ಟರಾದ ಪ್ರಕೃತಿಪುರುಷರ ಸ್ವರೂಪದ ಯಥಾರ್ಥವಾದ ಸ್ಥಿತಿಯನ್ನು ತಿಳಿದು ಭಗವದ್ಭಕ್ತಿಯುಕ್ತಗಳಾದ ಅಮಾನಿತ್ವಾದಿ ಗುಣಗಳಿಂದ ಬಂಧವಿಮೋಚನವನ್ನು ಹೊಂದುವನೆಂಬದಾಗಿ ಹೇಳಿತು. ಅದರಲ್ಲಿ ಬಂಧಕಾರಣವು ಪೂರ್ವ್ವಕವಾದ ಸತ್ವಾದಿಗುಣವಿಕಾರವಾಗಿರುವಸುಖದುಃಖಾದಿಗಳಲ್ಲುಂಟಾದ ಸಂಬಂಧವೆಂಬದಾಗಿ ‟ಕಾರಣಂಗುಣಸಂಗೋಸ್ಯಸದಸದ್ಯೋನಿಜನ್ಮಸು „ ಇತ್ಯಾದಿಗಳಿಂದ ಹೇಳಲ್ಪಟ್ಟಿತು. ಈ ಅಧ್ಯಾಯದಲ್ಲಿ ಗುಣಗಳಿಗೆ ಬಂಧಕಾರಣತ್ವ ಪ್ರಕಾರವೂ ಅಂತಹ

ಗುಣಗಳ ನಿವರ್ತನ ಪ್ರಕಾರವೂ ಹೇಳಲ್ಪಡುವುದು.

(ಶ್ರೀ) ಪುಂಪ್ರಕೃತ್ಯೋಸ್ಸ್ವತಂತ್ರತ್ವಂವಾರಯನ್ ಗುಣಸಂಗತಃ|ಪ್ರಾಹಸಂಸಾರವೈಚಿತ್ರ್ಯಂವಿಸ್ತರೇಣಚತುರ್ದಶೇ||ಪ್ರಕೃತಿ ಪುರುಷರಿಗೆ ಸ್ವಾತಂತ್ರ್ಯವಿಲ್ಲವೆಂಬದಾಗಿ ನಿಷೇಧಿಸಿ ಗುಣಸಂಗದಿಂದ ಪ್ರಾಪ್ತವಾಗಿರುವ ಸಂಸಾರ ವೈಚಿತ್ರ್ಯವನ್ನು ವಿಸ್ತಾರವಾಗಿ ಈ ಚತುರ್ದಶಾಧ್ಯಾಯದಲ್ಲಿ ಹೇಳುತ್ತಾರೆ.

(ಗೀ||ವಿ||) "ಯೋಗೇತ್ವಿಮಾಂಶೃಣು" (೨||೩೯||) ಎಂಬದಾಗಿ ದ್ವಿತೀಯಾಧ್ಯಾಯದಲ್ಲಿ ಮೋಕ್ಷಸಾಧನವನ್ನುಪದೇಶಿಸುವೆನೆಂಬದಾಗಿ ಪ್ರತಿಜ್ಞೆಯಂಮಾಡಿ ಕರ್ಮಧ್ಯಾನರೂಪಗಳಾದ ಜ್ಞಾನಸಾಧನಗಳನ್ನು ಕಾಮಾದಿವರ್ಜನರೂಪಗಳಾದ ಅಂಗಗಳೊಡನೆ ಆರನೇಅಧ್ಯಾಯದವರೆಗೂ ಉಪದೇಶಿಸಿದನು. ಜ್ಞಾನಸಾಧನವಾದ ಕರ್ಮಧ್ಯಾನಯೋಗಗಳ ಅಂಗವಾದ ಕಾಮವರ್ಜನಾದಿಗಳನ್ನೇ ವಿಸ್ತರಿಸಿ ಮುಂದಿನ ಐದು ಅಧ್ಯಾಯಗಳಿಂದ ಪ್ರಾಧಾನ್ಯವಾಗಿ ಉಪದೇಶಿಸುತ್ತಾನೆ. ಸಂಸಾರ ಬಂಧಪ್ರಕಾರವು ತಿಳಿಯದೇ ಹೋದರೆ ಸಂಸಾರ ಬಂಧನಾಶರೂಪವಾಗಿರುವ ಮೋಕ್ಷಸಾಧನವಾದ ಕಾಮವರ್ಜನಾದ್ಯಂಗಾನುಷ್ಠಾನವು ಕೂಡುವುದಿಲ್ಲವು. ಅದುದರಿಂದ ಸಂಸಾರ ಬಂಧಪ್ರಕಾರವು ತಿಳಿಯಲ್ಪಡಬೇಕು. ಆ ಸಂಸಾರಬಂಧವು ಸತ್ವಾದಿ ಗುಣವಿಕಾರಾತ್ಮಕವಾಗಿರುವುದು. ಆದುದರಿಂದ ಸತ್ವಾದಿಗುಣವಿಕಾರವನ್ನು ತಿಳಿದರೆ ಸಂಸಾರ ಬಂಧ ಜ್ಞಾನಮುಂಟಾಗುವುದು. ಆದುದರಿಂದ ಸತ್ವಾದಿಗುಣ ವಿಕಾರರೂಪವಾದ ಸಂಸಾರ ಬಂಧಪ್ರಕಾರವು ಹಿಂದಿನಅಧ್ಯಾಯದಲ್ಲಿ "ಯಾವತ್ಸಂಜಾಯತೇ" ಇತ್ಯಾದಿಗಳಿಂದ ವ್ಯಕ್ತಪಡಿಸಲ್ಪಟ್ಟಿದ್ದರೂ ಅದನ್ನು ವಿವರಿಸಿ ಈ ಅಧ್ಯಾಯದ ಮೊದಲುಭಾಗದಲ್ಲಿ ಹೇಳಿ ತದನಂತರದಲ್ಲಿ ಗುಣತ್ರಯ ವಿಕಾರರೂಪ ಸಂಸಾರ ಬಂಧ ನಾಶರೂಪವಾದ (ಮೋಕ್ಷಸಾಧನವಾಗಿರುವ) ಕರ್ಮಧ್ಯಾನಗಳಿಗೆ ಅಂಗಗಳನ್ನು ಈ ಅಧ್ಯಾಯದ ಕೊನೆಯಲ್ಲಿ ವಿವರಿಸುವಂತವನಾಗಿ ಮುಂದೆ ವಿವರಿಸುವ ಅರ್ಥವನ್ನು ಪ್ರತಿಜ್ಞಾಪೂರ್ವಕವಾಗಿ ಎರಡು ಶ್ಲೋಕಗಳಿಂದ ಸ್ತುತಿಸುತ್ತಾನೆ.

ಮೂ॥ ಶ್ರೀಭಗವಾನುವಾಚ॥ ಪರಂಭೂಯಃಪ್ರವಕ್ಷ್ಯಾ
ಮಿಜ್ಞಾನಾನಾಂಜ್ಞಾನಮುತ್ತಮಂ।ಯಜ್ಞಾತ್ವಾ
ಮುನಯಸ್ಸರ್ವೇಪರಾಂಸಿದ್ಧಿಮಿತೋಗತಾಃ ॥೧॥

ಪ॥ ಶ್ರೀಭಗವಾನ್-ಉವಾಚ-ಪರಂ-ಭೂಯಃ-ಪ್ರವಕ್ಷ್ಯಾಮಿ-ಜ್ಞಾನಾನಾಂ-ಜ್ಞಾನಂ-ಉತ್ತಮಂ। ಯತ್-ಜ್ಞಾತ್ವಾ-ಮುನಯಃ-ಸರ್ವೇ ಪರಾಂ-ಸಿದ್ಧಿಂ-ಇತಃ-ಗತಾಃ॥

(ಅ॥ರಾ॥ಭಾ॥) ಶ್ರೀಭಗವಾನುವಾಚ-ಶ್ರೀಕೃಷ್ಣನುಹೇಳಿದನು. ಯತ್-ಯಾವ ಜ್ಞಾನವನ್ನು, ಜ್ಞಾತ್ವಾ-ಸಂಪಾದಿಸಿಕೊಂಡು, ಸರ್ವೇ-ಸಮಸ್ತಾಧಿಕಾರಿಗಳು, ಮುನಯಃ-ಅಂತಹ ಜ್ಞಾನವನ್ನು ಮನನ ಮಾಡಿದವರಾಗಿ, ಇತಃ-ಈ ಸಂಸಾರ ಬಂಧದ್ದಶೆಯಿಂದ, ಪರಾಂಸಿದ್ಧಿಂ-ಪರಿಶುದ್ಧಾತ್ಮ ಪ್ರಾಪ್ತಿಯೆಂಬ ಸಿದ್ಧಿಯನ್ನು, ಗತಾಃ-ಹೊಂದಿರುವರೊ, ಪರಂ-ಮೊದಲು ಹೇಳಿರುವುದಕ್ಕಿಂತಲೂ ಭಿನ್ನವಾದದ್ದಾಗಿಯೂ, ಜ್ಞಾನಾನಾಮುತ್ತಮಂ-ಸಮಸ್ತಗಳಾದ ಪ್ರಕೃತಿಪುರುಷ ಮಯವಾಗಿರುವ ಜ್ಞಾನಗಳಲ್ಲಿ ಶ್ರೇಷ್ಠವಾಗಿಯೂ, ಜ್ಞಾನಂ-ಪ್ರಕೃತಿಪುರುಷಾಂತರ್ಗತವಾಗಿಯೇಇರುವ ಸತ್ವಾದಿಗುಣ ವಿಷಯವಾದ ಜ್ಞಾನವನ್ನು, ಭೂಯಃಪ್ರವಕ್ಷ್ಯಾಮಿ-ಪುನಃ ಉಪದೇಶಿಸುವೆನು. ॥೧॥

(ಶಂ॥ಭಾ॥) ಎಲೈ ಅರ್ಜುನನೇ ! ಯಜ್ಞದಾನತಪಃಪ್ರಭೃತಿಗಳಾದ ಬಹಿರಂಗಗಳಂತೆ ಇಗದೆ ಮೋಕ್ಷಪ್ರದವಾಗಿರುವುದರಿಂದ ಅವುಗಳಗಿಂತಲೂ ಅತ್ಯಂತ ಶ್ರೇಷ್ಠವಾದದ್ದಾಗಯೂ, ಪರಮಾತ್ಮಸ್ವರೂಪವನ್ನು ತಿಳಿಯಪಡಿಸುವುದರಿಂದ ಉತ್ಕೃಷ್ಟವಾದದ್ದಾಗಿಯೂ ಇರುವ ಬ್ರಹ್ಮಜ್ಞಾನವೆಂಬ ಮೋಕ್ಷಸಾಧನವನ್ನು ನಿನಿಗುಪದೇಶಿಸುವೆನು. ಇದುವರೆಗೂ ಹಿಂದೆ ಸಂಗ್ರಹವಾಗಿ ಉಪದೇಶಿಸಿದ್ದರೂ ಇಲ್ಲಿ ವಿಸ್ತರಿಸಿ ಉಪದೇಶಿಸುವೆನು. ಇಂತಹ ಜ್ಞಾನವನ್ನು ಹೊಂದಿಯೇ ಮನನಶೀಲರಾದ ಸನ್ನ್ಯಾಸಿಗಳು (ದೇಹಸಂಬಂಧಮೂಲವಾದ ಸಂಸಾರವನ್ನುಬಿಟ್ಟು) ಮೋಕ್ಷವೆಂಬ ಸಿದ್ಧಿಯನ್ನು ಹೊಂದಿರುತ್ತಾರೆ. (ಇಲ್ಲಿನಪರೊತ್ತಮ ಶಬ್ದಗಳು ಪರ್ಯಾಯಗಳಾಗಿದ್ದರೂ ಪರವಸ್ತುವಾದ ಬ್ರಹ್ಮವನ್ನು ವಿಷಯವಾಗಿ ಉಳ್ಳದ್ದಾಗಿರುವುದರಿಂದ ಪರವೆಂತ

ಲೂ, ಬ್ರಹ್ಮತ್ವವೆಂಬ ಉತ್ಕೃಷ್ಟಫಲವನ್ನು ಕೊಡುವುದರಿಂದ ಉತ್ತಮವೆಂತಲೂ ಇಂಥಾ ಭೇದವನ್ನು ಕಲ್ಪಿಸಿಕೊಂಡಿರುವುವು. ) ಇಲ್ಲಿ ( ಜ್ಞಾನಾನಾಂ, ಎಂಬುವುದರಿಂದ ಹಿಂದೇ ವಿವರಿಸಿರುವ ಯಜ್ಞಾದಿಗಳನ್ನು ಹೇಳಬೇಕಲ್ಲದೆ ಮೋಕ್ಷಸಾಧನಗಳಾದ ಅಮಾನಿತ್ವಾದಿಗಳನ್ನು ಗ್ರಹಿಸಕೂಡದು. ಕೇಳುವಂತವರಿಗೆ ಶ್ರದ್ಧಾಜನನಾರ್ಥವಾಗಿ ಇಲ್ಲಿ ಜ್ಞಾನವು ಕೊಂಡಾಡಲ್ಪಟ್ಟಿರುವುದೆಂದರಿಯಬೇಕು. ॥೧॥

(ಗೀ॥ ವಿ॥) ಜ್ಞಾನಾನಾಂಜ್ಞಾನಮುತ್ತಮಂ-ತಿಳಿಯಬೇಕಾದ ಜ್ಞಾನಗಳಲ್ಲಿ ಶ್ರೇಷ್ಠವಾದ ಜ್ಞಾನವನ್ನು ಹೇಳುವೆನೆಂಬದಾಗಿ ತಾತ್ಪರ್ಯವು. (ಶ್ರೀ॥) ಜ್ಞಾನಂ-ಬ್ರಹ್ಮೋಪದೇಶವನ್ನು. ॥೧॥

ಮೂ॥ ಇದಂಜ್ಞಾನಮುಪಾಶ್ರಿತ್ಯಮಮಸಾಧರ್ಮ್ಯ
ಮಾಗತಾಃ।ಸರ್ಗೇಪಿನೋಪಜಾಯಂತೇಪ್ರಳಯೇ
ನವ್ಯಥಂತಿಚ ॥ ॥೨॥

ಪ್ರ॥ ಇದಂ-ಜ್ಞಾನಂ-ಉಪಾಶ್ರಿತ್ಯ-ಮಮ-ಸಾಧರ್ಮ್ಯಂ-ಆಗತಾಃ।ಸರ್ಗೇ-ಅಪಿ-ನ-ಉಪಜಾಯಂತೇ-ಪ್ರಳಯೇ-ನ-ವ್ಯಥಂತಿ-ಚ।

(ಅ। ರಾ॥ ಭಾ॥) ಪ್ರಸಕ್ತ ಹಿಂದಿನ ಶ್ಲೋಕದಲ್ಲಿ ಪ್ರಕೃತವಾಗಿರುವ ಜ್ಞಾನವನ್ನೇ ಫಲಮೊಡನೇ ವಿಶೇಷಿಸಿ ಉಪದೇಶಿಸುತ್ತಾರೆ. ಇದಂ ಜ್ಞಾನಂ-ಮುಂದೆ ವಿವರಿಸಲ್ಪಡುವ ಈ ಜ್ಞಾನವನ್ನು, ಉಪಾಶ್ರಿತ್ಯ-ಆಶ್ರಯಿಸಿ, ಮಮ-ನನ್ನ, ಸಾಧರ್ಮ್ಯಂ-ಸಾಮ್ಯವನ್ನು, ಆಗತಾಃ-ಹೊಂದಿರುವಂತವರು, ಸರ್ಗೇಪಿನೋಪಜಾಯಂತೇ-ಸೃಷ್ಟಿ ಕಾಲದಲ್ಲಿ ಹುಟ್ಟುವದೂ ಇಲ್ಲವು, ಪ್ರಲಯೇಚನವ್ಯಥಂತಿಚ-ಪ್ರಲಯಕಾಲದಲ್ಲಿಯೂ ದುಃಖಪಡುವುದಿಲ್ಲವು. ಪರಮಾತ್ಮನು ಮಾಡುವ ಸೃಷ್ಟಿ ಕ್ರಿಯೆಯಲ್ಲಿಯೂ ಪ್ರಲಯ ಕ್ರಿಯೆಯಲ್ಲಿಯೂ ವಿಷಯರಾಗುವುದಿಲ್ಲವು. ಸಂಸಾರ ಬಂಧದಿಂದ ವಿಮುಕ್ತರಾಗುವರೆಂದು ಭಾವವು ॥೨॥

(ಶಂ॥ ಭಾ॥) ಸಾಧರ್ಮ್ಯವೆಂದರೆ, ಜೀವಪರಮಾತ್ಮೈಕ್ಯವೆ. ಈ ಗೀತಾಶಾಸ್ತ್ರದಲ್ಲಿಜೀವಪರಭೇದವು ಅಂಗೀಕರಿಸಲ್ಪಡದೇ ಇರುವುದರಿಂದಸಮಾನ ಧರ್ಮವತ್ತ್ವವು ಅರ್ಥವಾಗಲಾರದು. ಜ್ಞಾನವನ್ನು ಕೊಂಡಾಡುವುದಕ್ಕಾಗಿ ಅದಕ್ಕೆ ಉತ್ತಮ ಫಲವಾದ ಬ್ರಹ್ಮತ್ವ

ಪ್ರಾಪ್ತಿರೂಪವಾದಮೋಕ್ಷವು ಹೇಳಲ್ಪಡುವುದೆಂದರಿಯ ಬೇಕು॥೨॥

(ಗೀ॥ ವಿ॥) ಮಮಸಾಧರ್ಮ್ಯಂ-ನನ್ನ ಸಾರೂಪ್ಯವನ್ನು ॥೨॥

ಮೂ॥ ಮಮಯೋನಿರ್ಮಹದ್ಬ್ರಹ್ಮತಸ್ಮಿನ್ಗರ್ಭಂದಧಾಮ್ಯಹಂ । ಸಂಭವಸ್ಸರ್ವಭೂತಾನಾಂತತೋಭವತಿಭಾರತ॥ ॥೩॥

ಪ॥ ಮಮ-ಯೋನಿಃ-ಮಹತ್-ಬ್ರಹ್ಮ-ತಸ್ಮಿನ್-ಗರ್ಭಂ-ದಧಾಮಿ-ಅಹಂ । ಸಂಭವಃ-ಸರ್ವಭೂತಾನಾಂ-ತತಃ-ಭವತಿ-ಭಾರತ॥

ಅ॥ ಹೇ ಭಾರತ-ಎಲೈ ಅರ್ಜುನನೇ, ಮಹತ್-ಸರ್ವ ವ್ಯಾಪಿಯಾದ, ಬ್ರಹ್ಮ-ಪ್ರಕೃತಿಯು ಮಮ-ನನಗೆ ಯೋನಿಃ-ಗರ್ಭವನ್ನಿಡುವ ಸ್ಥಾನವಾಗಿರುವುದು. ತಸ್ಮಿನ್-ಅದರಲ್ಲಿ, ಗರ್ಭಂ-ಗರ್ಭವೆಂಬ ಜಗದ್ವಿಸ್ತಾರ ಕಾರಣವನ್ನು, ಅಹಂದಧಾಮಿ-ನಾನಿಡುವೆನು, ತತಃ-ಅದರ ದಶೆಯಿಂದ, ಸರ್ವಭೂತಾನಾಂಸಂಭವಃ-ಸರ್ವ ಪ್ರಾಣಿಗಳ ಉತ್ಪತ್ತಿಯು, ಭವತಿ-ಆಗುತ್ತದೆ. ॥೩॥

(ಶಂ॥ ಭಾ॥) ಭೂತಗಳ ಉತ್ಪತ್ತಿಗೆ ಕಾರಣವಾದ ಕ್ಷೇತ್ರ ಕ್ಷೇತ್ರಜ್ಞ ಸಂಯೋಗವು ಈ ಪ್ರಕಾರವಾಗಿರುವುದೆನ್ನುತ್ತಾನೆ. ನನಗೆ ಅಧೀನವಾದದ್ದಾಗಿಯೂ ತ್ರಿಗುಣಾತ್ಮಕವಾದದ್ದಾಗಿಯೂ ಸಮಸ್ತ ಭೂತಗಳ ಉತ್ಪತ್ತಿಗೆ ಕಾರಣಭೂತವಾದದ್ದಾಗಿಯೂ, ಕಾರ್ಯಗಳಾದ ಸಮಸ್ತ ಪದಾರ್ಥಗಳಿಗಿಂತಲೂ ದೊಡ್ಡದಾದುದರಿಂದ ಮಹಚ್ಛಬ್ದವಾಚ್ಯವಾಗಿಯೂ, ತನ್ನ ಸರ್ವ ವಿಕಾರಗಳನ್ನು ಭರಿಸಿರುವುದರಿಂದ ಬ್ರಹ್ಮಶಬ್ದವಾಚ್ಯವಾಗಿಯೂ ಇರುವ ಮಾಯೆಯೆಂಬ ಗರ್ಭಸ್ಥಾನದಲ್ಲಿ ಹಿರಣ್ಯಗರ್ಭಾದಿ ಸಮಸ್ತ ಭೂತಗಳ ಹುಟ್ಟುವಿಕೆಗೆ ಮೂಲಭೂತವಾದ ಬೀಜವನ್ನಿಡುವೆನು. ಎಂದರೆ ಕ್ಷೇತ್ರ ಕ್ಷೇತ್ರಜ್ಞ ರೂಪ ಪ್ರಕೃತಿದ್ವಯ ಶಕ್ತಿಯುಕ್ತನಾಗಿರುವ ಈಶ್ವರನಾದ ನಾನು ಅವಿದ್ಯೆಯಿಂದುಂಟಾಗುವ ಅಪೇಕ್ಷೆಗಳಿಂದ ಮಾಡಲ್ಪಡುವ ಕರ್ಮಗಳೆಂಬ ಉಪಾಧಿಗಳನ್ನು ಅನುಸರಿಸುವ ಕ್ಷೇತ್ರಜ್ಞರನ್ನು ಕ್ಷೇತ್ರಗಳೊಡನೇ ಸೇರಿಸುವೆನೆಂದು ಭಾವವು. ಆ ರೀತಿಯಾಗಿ ಸೇರಿಸುವುದರಿಂದ ಹಿರಣ್ಯಗರ್ಭೋತ್ಪತ್ತಿ ದ್ವಾರಾ ಸರ್ವಭೂತಗಳ ಉತ್ಪತ್ತಿಯುಂಟಾಗುವುದು. ॥೩॥

(ಶ್ರೀ) ಸರ್ವ ಪ್ರಪಂಚೋತ್ಪತ್ತಿಗೆ ಕಾರಣವಾಗಿರುವುದರಿಂದ ಬ್ರಹ್ಮವೆಂಬ ಹೆಸರುಳ್ಳ ಪ್ರಕೃತಿಯು ಗರ್ಭಸ್ಥಾನವಾಗಿರುವುದು. ಆ ಅವಿದ್ಯಾ ಕಾಮಕರ್ಮಗಳು ಅವುಗಳೊಡನೆ ಸಂಬಂಧಿಸಿ ಪ್ರಳಯಕಾಲದಲ್ಲಿ ನನ್ನಲ್ಲಿ ಅಡಗಿರುವ ಚಿದಾಭಾಸನಾದ ಕ್ಷೇತ್ರಜ್ಞನನ್ನು ಸೃಷ್ಟಿಸಮಯದಲ್ಲಿ ಅವನಿಗೆ ಭೋಗ್ಯವಾದ ಪ್ರಕೃತಿ ರೂಪವಾಗಿರುವ ಕ್ಷೇತ್ರದಲ್ಲಿ ಸೇರಿಸುವೆನೆಂದರ್ಥವು. (ಕ್ಷೇತ್ರವೆಂದರೆ ಶರೀರವು.) ||೩||

(ರಾ|| ಭಾ||) ಇನ್ನು ಮುಂದೆ ಪ್ರಾಕೃತಗಳಾದ ಸತ್ವರಜಸ್ತಮಸ್ಸುಗಳು ಆತ್ಮನನ್ನು ಬಂಧಿಸುವ ಪ್ರಕಾರವನ್ನುಪದೇಶಿಸುವಂತೆ ಉಪದೇಶಿಸಿ ಮೊದಲು ಸಮಸ್ತ ಭೂತವರ್ಗಕ್ಕೂ ತಾನು ಆದಿಕಾಲದಲ್ಲಿ ಮಾಡಿದ ಪ್ರಕೃತಿ ಪುರುಷ ಸಂಸರ್ಗದಿಂದುಂಟಾಗಿರುವ ಪ್ರಕಾರವನ್ನು ಬೋಧಿಸುತ್ತಾನೆ. ಭಾರತ-ಅರ್ಜುನನೆ, (ಯತ್ ಎಂಬ ಪದವು ಸಿದ್ಧವು) ಯೋನಿಃ-ಸಮಸ್ತ ಜಗತ್ತಿಗೂ ಉಪಾದಾನ ಕಾರಣನಾದ, ಮಮ-ನನ್ನ, ಮಹದ್ಬ್ರಹ್ಮ-ಮಹದಾದಿ ತತ್ವಗಳಿಗೆ ಕಾರಣಭೂತವಾದ ಮೂಲಪ್ರಕೃತಿ ಎನ್ನುವದು, ಯತ್-ಯಾವದುಂಟೊ, ತಸ್ಮಿನ್-ಆ ಅಚೇತನ ಪ್ರಕೃತಿಯೆಂಬ ಯೋನಿಯಲ್ಲಿ, ಗರ್ಭಂ-ಚೇತನಪುಂಜರೂಪವಾದ ಗರ್ಭವನ್ನು, ಅಹಂ-ನಾನು, ದಧಾಮಿ-ಸೇರಿಸುವೆನು, ಭೋಗಕ್ಷೇತ್ರವಾದ ಅಚೇತನ ಪ್ರಕೃತಿಯೊಡನೆ ಭೋಕ್ತೃವರ್ಗಾತ್ಮಕವಾದ ಚೇತನಪ್ರಕೃತಿಯನ್ನು ಸೇರಿಸುವೆನೆಂದು ತಾತ್ಪರ್ಯವು. ತತಃ-ನನ್ನ ಸಂಕಲ್ಪದಿಂದ ಮಾಡಲ್ಪಟ್ಟಿರುವ ಚೇತನಾಚೇತನ ಪ್ರಕೃತಿದ್ವಯ ಸಂಯೋಗದಿಂದ, ಸರ್ವಭೂತಾನಾಂ-ಬ್ರಹ್ಮಾದಿಸ್ತಂಬ ಪರ್ಯಂತಗಳಾದ ಸರ್ವ ಪ್ರಾಣಿವರ್ಗಗಳಿಗೂ, ಸಂಭವಃ-ಉತ್ಪತ್ತಿಯು, ಭವತಿ-ವುಂಟಾಗುವುದು. “ಭೂಮಿರಾಪೋನಲೋವಾಯುಃಖಂಮನೋಬುದ್ಧಿರೇವಚ| ಅಹಂಕಾರಇತೀಯಂಮೆ ಭಿನ್ನಾಪ್ರಕೃತಿರಷ್ಟಧಾ||ಅಪರೇಯಂ,, ||೭||೪||) ಎಂಬದಾಗಿ ಹೇಳಲ್ಪಟ್ಟ ಅಚೇತನ ಪ್ರಕೃತಿಯು ಮಹದಹಂಕಾರಾದಿ ಸರ್ವವಿಕಾರಗಳಿಗೂ ಕಾರಣವಾಗಿರುವುದರಿಂದ “ಮಹದ್ಬ್ರಹ್ಮ,, ಎನ್ನಲ್ಪಟ್ಟಿತು. ಶ್ರುತಿಯಲ್ಲಿಯೂ ಕೆಲವು ಪ್ರದೇಶಗಳಲ್ಲಿ “ಯಸ್ಸರ್ವಜ್ಞಸ್ಸರ್ವವಿದ್ಯಸ್ಯ ಜ್ಞಾನಮಯಂತಪಃತಸ್ಮಾದೇತದ್ಬ್ರಹ್ಮನಾಮರೂಪಮನ್ನಂಚಜಾ

ಯುತೆ ,, ಎಂಬದಾಗಿ ಪ್ರಕೃತಿಯು ಬ್ರಹ್ಮಶಬ್ದದಿಂದ ಪ್ರತಿಪಾದಿಸಲ್ಪಟ್ಟಿರುವುದು. “ ಇತಸ್ತ್ವನ್ಯಾಂಪ್ರಕೃತಿಂವಿದ್ಧಿಮೇಪರಾಂ।ಜೀವಭೂತಾಂ,, (೭।೫॥) ಎಂಬದಾಗಿ ನಿರ್ದೇಶಿಸಲ್ಪಟ್ಟ ಚೇತನಸಮೂಹವೆಂಬ ಮೇಲಾದ ಪ್ರಕೃತಿಯು ಸಕಲ ಪ್ರಾಣಿಗಳಿಗೂಬೀಜ ಭೂತವಾಗಿರುವುದರಿಂದ ಗರ್ಭಶಬ್ದದಿಂದ ಹೇಳಲ್ಪಟ್ಟಿತು. ॥೩॥

(ಮ॥ ಭಾ॥) ಮಹತ್-ಬ್ರಹ್ಮ-ಎಂಬುವ ಪದಗಳು ಚಿತ್ಪ್ರಕೃತಿಯನ್ನು ಬೋಧಿಸುವುವು. ಚಿತ್ಪ್ರಕೃತಿ ಎಂದರೆ ಶ್ರೀದೇವಿ ಭೂದೇವಿ ದುರ್ಗಾದೇವಿ ಇವರೆ. ಅವರಲ್ಲಿ ನಾನು ಗರ್ಭವನ್ನುಂಟು ಮಾಡುವೆನು. ಅವರ ದೆಶೆಯಿಂದ ಸಕಲ ಪ್ರಪಂಚಗಳೂ ಉಂಟಾಗುವವು॥೩॥

(ಗೀ॥ವಿ॥) ಮಹತ್ ಬ್ರಹ್ಮ, ಎನ್ನಲ್ಪಡುವ ಚಿತ್ಪ್ರಕೃತಿಯಾದ ನನ್ನ ಭಾರ್ಯೆಗಳಲ್ಲಿ ಇಪ್ಪತ್ತು ನಾಲ್ಕು ತದ್ವಗಳೊಡನೆ ಕೂಡಿಯೂ ನನ್ನ ಉದರ (ಹೊಟ್ಟೆ)ದಲ್ಲಡಗಿಯೂ ಇರುವ ಜೀವರನ್ನು ರೆತೋರೂಪವಾಗಿ ಚಿತ್ಪ್ರಕೃತಿಯ ಗರ್ಭದಲ್ಲಿಡುವೆನು. ಅವಳ ದಶೆಯಿಂದ ಸಕಲ ಪ್ರಪಂಚಗಳೂ ಉಂಟಾಗುವುವು. ॥೩॥

ಮೂ॥ಸರ್ವಯೋನಿಷುಕೌಂತೇಯಮೂರ್ತಯಸ್ಸಂಭವಂ
ತಿಯಾಃ । ತಾಸಾಂಬ್ರಹ್ಮಮಹದ್ಯೋನಿರಹಂ
ಬೀಜಪ್ರದಃಪಿತಾ॥ ॥೪॥

ಪ॥ ಸರ್ವಯೋನಿಷು-ಕೌಂತೇಯ-ಮೂರ್ತಯಃ-ಸಂಭವಂತಿ-ಯಾಃ । ತಾಸಾಂ-ಬ್ರಹ್ಮ-ಮಹತ್-ಯೋನಿಃ-ಅಹಂ-ಬೀಜಪ್ರದಃ-ಪಿತಾ॥

ಅ॥ ಹೇ ಕೌಂತೇಯ-ಎಲೈ ಕುಂತೀ ಕುಮಾರನಾದ ಅರ್ಜುನನೇ, ಸರ್ವಯೋನಿಷು-ಸಕಲ ಜಾತಿಗಳಲ್ಲಿಯೂ, (ಶಂ) ದೇವ ಪಿತೃ ಮನುಷ್ಯ ಪಶುಪಕ್ಷಿಗಳೇ ಮೊದಲಾದ ಸರ್ವ ಜಾತಿಗಳಲ್ಲಿಯೂ, ಯಾಮೂರ್ತಯಃ-ಯಾವ ಸ್ಥಾವರ ಜಂಗಮಗಳಾದ ವಸ್ತುಗಳು, (ಶಂ) ಯಾವ ದೇಹಗಳು, ಸಂಭವಂತಿ-ಉತ್ಪನ್ನಗಳಾಗುವವೋ, ತಾಸಾಂ-ಅವುಗಳಿಗೆ, ಮಹದ್ಬ್ರಹ್ಮ-ಪ್ರಕೃತಿಯು, (ಗೀ॥ ವಿ॥) ಶ್ರೀಮಹಾಲಕ್ಷ್ಮಿಯು, ಯೋನಿಃ-ತಾಯಿಯು, ಅಹಂ-ನಾನು, ಬೀಜಪ್ರದಃಪಿತಾ-ಬೀಜಪ್ರದಾನ ಮಾಡುವತಂದೆಯು. (ಶ್ರೀ) ಸಕಲೋತ್ಪತ್ತಿಗೂ ಕಾರಣನು. ಮೊದಲಿನ ಉತ್ಪತ್ತಿಗೆ ಮಾತ್ರವಲ್ಲನು, ಪ್ರತಿಯೊಂದು

ಸೃಷ್ಟಿಗೂ ನಾನು ಕಾರಣನೆಂದರ್ಥವು. (೪)

(ರಾ॥ ಭಾ॥) ಇನ್ನು ಮುಂದೆ ಕಾರ್ಯಾವಸ್ಥನಾದ ಚೇತನಾಚೇತನ ಪ್ರಕೃತಿ ಸಂಸರ್ಗವೂ ನನ್ನಿಂದಲೇ ಮಾಡಲ್ಪಟ್ಟಿತೆಂದು ಬೋಧಿಸುತ್ತಾನೆ. ಕುಂತೀ ಪುತ್ರನಾದ ಎಲೈ ಅರ್ಜುನನೇ ! ದೇವಾಸುರ ಗಂಧರ್ವ ಯಕ್ಷ ರಾಕ್ಷಸ ಮನುಷ್ಯ ಪಶು ಮೃಗ ಪಕ್ಷಿ ಸರ್ಪಾದಿ ಯೋನಿಗಳಲ್ಲಿ ಯಾವ ಶರೀರಗಳು ಉಂಟಾಗುವುವೋ ಆ ಸಮಸ್ತಕ್ಕೂ ಮಹತ್ತಾದ ಮೂಲ ಪ್ರಕೃತಿಯು ಕಾರಣವಾಗಿರುವುದು. ನನ್ನಿಂದ ಚೇತನ ವರ್ಗದೊಡನೆ ಕೇರಿಸಲ್ಪಟ್ಟದ್ದಾಗಿಯೂ ಪಂಚಮಹಾಭೂತಾವಸ್ಥೆಯೊಡನೆ ಸೇರಿಯೂ ಇರುವ ಪ್ರಕೃತಿಯು ಕಾರಣವೆಂದರ್ಥವು. ಅಲ್ಲಲ್ಲಿ ಆಯಾ ಚೇತನರ ಕರ್ಮಾನುಗುಣವಾಗಿ ಚೇತನವರ್ಗವನ್ನು ಸೇರಿಸುವಂತವನೂ ನಾನು. (೪)

ಮೂ॥ಸತ್ತ್ವಂರಜಸ್ತಮಇತಿಗುಣಾಃಪ್ರಕೃತಿಸಂಭ
ವಾಃ। ನಿಬಧ್ನಂತಿಮಹಾಬಾಹೋದೇಹೇದೇಹಿನ
ಮವ್ಯಯಂ॥ ॥೫॥

ಪ॥ ಸತ್ವಂ-ರಜಃ-ತಮಃ-ಇತಿ-ಗುಣಾಃ-ಪ್ರಕೃತಿಸಂಭವಾಃ।ನಿಬಧ್ನಂತಿ-ಮಹಾಬಾಹೋ-ದೇಹೇ-ದೇಹಿನಂ-ಅವ್ಯಯಂ॥

ಅ॥ ಹೇ ಮಹಾಬಾಹೋ-ಮಹತ್ತಾದ ಬಾಹುಗಳುಳ್ಳ ಎಲೈ ಅರ್ಜುನನೇ ! ಪ್ರಕೃತಿ ಸಂಭವಾಃ-ಪ್ರಕೃತಿಯಿಂದುಂಟಾಗಿರುವ, ಸತ್ವಂ ರಜಸ್ತಮ ಇತಿಗಣಾಃ-ಸತ್ವರಜಸ್ತಮಸ್ಸುಗಳೆಂಬ ಗುಣಗಳು,ದೇಹೇ-ದೇಹದಲ್ಲಿರುವ,ಅವ್ಯಯಂ-ನಾಶರಹಿತನಾದ,ದೇಹಿನಂ-ಆತ್ಮನನ್ನು, ನಿಬಧ್ನಂತಿ-ಕಟ್ಟುವುವು ॥೫॥

(ಶಂ॥ ಭಾ॥) ಎಲೈ ಅರ್ಜುನನೇ, ಗುಣಗಳ್ಯಾವವು, ಅವು ಯಾವ ರೀತಿಯಾಗಿ ಬಂಧಕಗಳಾಗುವುವು, ಎಂಬದಾಗಿ ನೀನು ಪ್ರಶ್ನೆಯನ್ನು ಮಾಡಿರುತ್ತೀಯಲ್ಲವೆ, ಅದಕ್ಕುತ್ತರವನ್ನು ಹೇಳುವೆನು ಕೇಳು. ಸತ್ತ್ವವು, ರಜಸ್ಸು, ತಮಸ್ಸು, ಎಂಬದಾಗಿ ಗುಣಗಳ ಹೆಸರುಗಳು. ಅವುಗಳ ಗುರುತಿಗಾಗಿ ಗುಣಗಳೆಂಬದಾಗಿ ಸಂಜ್ಞೆಯು ಏರ್ಪಡಿಸಲ್ಪಟ್ಟಿರುವುದಲ್ಲದೆ ರೂಪರಸಾದಿಗಳಂತೆ ಇವು ಒಂದು ದ್ರವ್ಯವನ್ನು ಆಶ್ರಯಿಸಿರುವಂತವುಗಳಲ್ಲವು. ಎಂದರೆ ರೂಪವಾದರೂ ಇತ

ರ ಗುಣಗಳಾದರೂ ಬಂದು ದ್ರವ್ಯದಲ್ಲಿರುವುದಲ್ಲದೆ ಪ್ರತ್ಯೇಕವಾಗಿ ಇರಲಾರವಾದುದರಿಂದ ಆಹಾಗ ಗುಣವೇ ಬೇರೆ, ಅಂತಹ ಗುಣಕ್ಕಾಶ್ರಯವಾದ ದ್ರವ್ಯವು(ಗುಣಿಯು) ಬೇರೆ ಎಂಬದಾಗಿ ಹೇಳಬೇಕಾಗಿರುವುದು. ಆ ಪ್ರಕಾರವಾಗಿ ಗುಣಗಳಿಗೂ ಗುಣಿಗೂ ಇರುವ ಭೇದವನ್ನಿಲ್ಲಿ ಹೇಳಲುದ್ದೇಶಿಸಿ ಇದ್ದರೆಯಲ್ಲವೆ ಸತ್ತ್ವಾದಿಗಳು ರೂಪಾದಿಗಳಂತೆ ಗುಣಗಳೆಂಬದಾಗಿ ಹೇಳಬೇಕು. ಆ ಪ್ರಕಾರವಾಗಿಲ್ಲವು. ಆದುದರಿಂದ ಅವು ಅವಿದ್ಯಾ ಸ್ವರೂಪಗಳೆಂಬದಾಗಿ ಮಾಡಿ ಗುಣಗಳಂತೆ ಕ್ಷೇತ್ರಜ್ಞನಿಗೆ ಯಾವಾಗಲೂ ಸ್ವಾಧೀನಗಳಾಗಿ ದೇಹದಲ್ಲಿದ್ದುಕೊಂಡು ದೇಹವೇ ಆತ್ಮವೆಂಬದಾಗಿ ಚಲಿಸುವಂತೆ ಕಾಣಲ್ಪಡುವ ಅವ್ಯಯನಾದ ಕ್ಷೇತ್ರಜ್ಞನನ್ನು ಬಂಧಿಸುವಂತೆ ಇರುವುದು. ಅವು ಭಗವನ್ಮಾಯೆಯಿಂದ ಹುಟ್ಟಿ ಸಮಸ್ತಕ್ಕೂ ಆಶ್ರಯವಾಗಿರುವುವಲ್ಲದೆ ಅವು ಯಾವದನ್ನಾದರೂ ಆಶ್ರಯಿಸಿ ಇರುವಂತವುಗಳಲ್ಲವೆಂದು ತಿಳಿಯ ಬರುತ್ತದೆ. ಅವ್ಯಯ ಶಬ್ದಾರ್ಥವು ಹಿಂದಿನ ಅಧ್ಯಾಯದ ೩೧ನೇದಾದ 'ಅನಾದಿತ್ವಾತ್, ಎಂಬ ಶ್ಲೋಕದಲ್ಲಿ ವಿವರಿಸಲ್ಪಟ್ಟಿರುವುದು.

ಒಳ್ಳೇದು-ದೇಹಿಯಂತೆ ತೋರಲ್ಪಡುವ ಈಶ್ವರನಿಗೆ ನಿಜವಾಗಿ ಗುಣ ಲೇಪವಿಲ್ಲವೆಂಬದಾಗಿ (೫॥ ೧೦)ನೇ ಶ್ಲೋಕದಲ್ಲಿ ಹೇಳಿ ಇಲ್ಲಿ ಬಂಧಿಸುವುವೆಂಬದಾಗಿ ಹೇಳುವುದು ಉಚಿತವೆ ? ಎಂದರೆ ಬಂಧಿಸುವಂತೆ ಇರುವುವೆಂಬದಾಗಿಯಲ್ಲವೆ(ಇವ)ಶಬ್ದದಿಂದ ಹೇಳಿರುವೆವು.ಆದುದರಿಂದ ನಿನ್ನ ಶಂಕೆಗೆ ಅವಕಾಶವೇ ಇಲ್ಲವು ॥೫॥

(ರಾ॥ ಭಾ॥) ಈ ಪ್ರಕಾರವಾಗಿ ಮಹಾ ಸರ್ಗಾದಿ ಕಾಲದಲ್ಲಿ ಪ್ರಾಚೀನಕರ್ಮವಶದಿಂದ ಪ್ರಾಪ್ತವಾದ ಅಚೇತನ ಸಂಸರ್ಗದಿಂದ ದೇವಾದಿ ಯೋನಿಗಳಲ್ಲಿ ಹುಟ್ಟಿದವರಿಗೆ ಪುನಶ್ಚ ಆಗಾಗ್ಯೆ ದೇವಾದಿ ಜನ್ಮಗಳಲ್ಲಿ ಹುಟ್ಟುವಿಕೆಗೆ ಕಾರಣವನ್ನು ಬೋಧಿಸುತ್ತಾನೆ. ಮಹತ್ತಾದ ಬಾಹುಬಲವುಳ್ಳ ಎಲೈ ಅರ್ಜುನನೆ! ಸತ್ವವೆಂತಲೂ ರಜಸ್ಸೆಂತಲೂ ತಮಸ್ಸೆಂತಲೂ ಪ್ರಕೃತಿಯೊಡನೆ ಸ್ವರೂಪಾನುಬಂಧಿಗಳಾಗಿಯೂ ಪ್ರಕಾಶಾದಿಕಾರ್ಯೈಕನಿರೂಪಣೀಯಗಳಾಗಿಯೂ ಪ್ರಕೃತ್ಯವಸ್ಥೆಯಲ್ಲಿ ಅಪ್ರಕಾಶಗಳಾಗಿಯೂ ಪ್ರಕೃತಿಯ ವಿಕಾರಗಳಾದ ಮಹದಾದಿಗಳಲ್ಲಿ ಪ್ರಕಾಶಗಳಾಗಿಯೂ ಇರುವ (ಗುಣಗಳು) ಸ್ವಭಾ

ವ ವಿಶೇಷಗಳು ಆ ಮಹದಾದಿ ತತ್ತ್ವಗಳಿಂದ ಆರಂಭಿಸಲ್ಪಟ್ಟ ದೇವಾದಿ ಶರೀರ ಸಂಬಂಧಿಯಾದ ಜೀವಾತ್ಮನನ್ನು ತನ್ನ ಸ್ವಭಾವದಿಂದ ಗುಣ ಸಂಬಂಧಾನರ್ಹನಾಗಿದ್ದರೂ ದೇಹದಲ್ಲಿರುವಿಕೆಯನ್ನು ಉಪಾಧಿಯಾಗಿ ಮಾಡಿಕೊಂಡು ಬಂಧಿಸುವುವು. ॥೫॥

(ಗೀ॥ವಿ॥) ಸತ್ವರಜಸ್ತಮೋ ಗುಣಗಳಿಗೆ ಯಥಾಕ್ರಮವೇ ಅಭಿಮಾನಿ ದೇವತೆಗಳಾದ ಲಕ್ಷ್ಮೀ ಭೂದೇವಿ ದುರ್ಗಾ ಇವರುಗಳೂ ಜಡ ಪ್ರಕೃತಿಯಿಂದುಂಟಾದ ಸತ್ವಾದಿ ಗುಣಗಳೂ ಜೀವಸಮೂಹವನ್ನು ಸುಖದುಃಖ ಮೋಹಾದಿಗಳಿಂದ ಬಂಧಿಸುತ್ತಾರೆ. ಎಂದರೆ ಸತ್ವಾಭಿಮಾನಿಯಾದ ಲಕ್ಷ್ಮೀದೇವಿಯು ದೇವತೆಗಳನ್ನೂ ರಜೋಭಿಮಾನಿಯಾದ ಭೂದೇವಿಯು ಮನುಷ್ಯರನ್ನೂ ತಮೋಭಿಮಾನಿಯಾದ ದುರ್ಗಾದೇವಿಯು ದೈತ್ಯರನ್ನೂ ಬಂಧಿಸುತ್ತಾರೆಂದು ಭಾವವು ॥೫॥

ಮೂ॥ ತತ್ರಸತ್ತ್ವಂನಿರ್ಮಲತ್ವಾತ್ಪ್ರಕಾಶಕಮನಾ
ಮಯಂ। ಸುಖಸಂಗೇನಬಧ್ನಾತಿಜ್ಞಾನಸಂಗೇ
ನಚಾನಘ॥ ॥೬॥

ಪ॥ ತತ್ರ-ಸತ್ವಂ-ನಿರ್ಮಲತ್ವಾತ್-ಪ್ರಕಾಶಕಂ-ಅನಾಮಯಂ । ಸುಖಸಂಗೇನ-ಬಧ್ನಾತಿ-ಜ್ಞಾನಸಂಗೇನ-ಚ-ಅನಘ॥

(ಆ॥ರಾ॥ಭಾ॥)ಸತ್ವರಜಸ್ತಮಸ್ಸುಗಳ ಆಕಾರವನ್ನೂ ಅವು ಆತ್ಮನನ್ನು ಬಂಧಿಸುವಪ್ರಕಾರವನ್ನೂ ಬೋಧಿಸುತ್ತಾನೆ. ಅನಘ-ಜ್ಞಾನವಿರೋಧಿಯಾದ ಪಾಪರಹಿತನಾದ ಎಲೈ ಅರ್ಜುನನೇ, ತತ್ರ-ಆ ಸತ್ವ ರಜಸ್ತಮಸ್ಸುಗಳ ಮಧ್ಯದಲ್ಲಿ,ಸತ್ವಂ-ಸತ್ವವೆಂಬ ಗುಣವು, ನಿರ್ಮಲತ್ವಾತ್ ಪ್ರಕಾಶಕಂ-ಜ್ಞಾನವನ್ನೂ ಸುಖವನ್ನೂ ಮರೆಮಾಡುವ ಸ್ವಭಾವವಿಲ್ಲದ್ದರಿಂದ ಪ್ರಕಾಶಕ್ಕೂ ಸುಖಕ್ಕೂ ಕಾರಣವಾಗಿರುವುದು. ಪ್ರಕಾಶವೆಂದರೆ ವಸ್ತುಗಳನ್ನು ಯಥಾವತ್ತಾಗಿ ತಿಳಿಯುವಿಕೆಯು. ಅನಾಮಯಂ-ಆರೋಗ್ಯಹೇತುವಾಗಿರುವುದು. (ಏಷಃ, ಎಂಬದಾಗಿ ಇಲ್ಲಿ ಬಂದು ಪದವನ್ನು ಧ್ಯಾಹರಿಸಿಕೊಳ್ಳಬೇಕು. ಏಷಃ-ಸತ್ವವೆನ್ನುವ ಈ ಗುಣವು, ಪರಾಪೇಕ್ಷಿನಂ-ಎಂಬದಾಗಿ ಅಧ್ಯಾಹರಿಸಿಕೊಳ್ಳಬೇಕು. ದೇಹದಲ್ಲಿರುವ ಈ ಜೀವಾತ್ಮನನ್ನು, ಸುಖಸಂಗೇನ-ಸುಖರೂಪವಾದ ಸಂಬಂಧವನ್ನುಂಟು ಮಾಡುವುದರಿಂದಲೂ, ಜ್ಞಾನಸಂಗೇ

ಚನ-ಜ್ಞಾನರೂಪವಾದ ಸಂಬಂಧವನ್ನುಂಟು ಮಾಡುವುದರಿಂದಲೂ, ಬಧ್ನಾತಿ-ಬಂಧಿಸುವುದು. ಪುರುಷನನ್ನು ಜ್ಞಾನದಲ್ಲಿಯೂ ಸುಖದಲ್ಲಿಯೂ ಅಪೇಕ್ಷೆಯಿಂದ ಅವುಗಳಿಗೆ ಸಾಧನಗಳಾದ ಲೌಕಿಕ ವೈದಿಕ ಕರ್ಮಗಳಲ್ಲಿ ಪ್ರವೃತ್ತಿಯನ್ನುಂಟು ಮಾಡಿ ಆ ಕರ್ಮಗಳ ಫಲಾನುಭವಾರ್ಥವಾಗಿ ಆಯಾ ಯೋನಿಗಳಲ್ಲಿ ಹುಟ್ಟಿಸುವುದರಿಂದ ಸತ್ವಗುಣವು ಜ್ಞಾನಸುಖ ಸಂಗದಿಂದ ಬಂಧಕವೆಂದು ಭಾವವು. ಜ್ಞಾನಸುಖಹೇತುವಾಗಿಯೂ ಮೇಲು ಮೇಲೆ ಜ್ಞಾನಸುಖಗಳಲ್ಲಿ ಸಂಗವನ್ನುಂಟುಮಾಡುವುದಕ್ಕೆ ಕಾರಣವಾಗಿಯೂ ಇರುವುದುಸತ್ವಗುಣವೆಂಬದಾಗಿ ಲಕ್ಷಣವನ್ನು ಹೇಳಿದ ಪ್ರಕಾರವಿದೆಂದರಿಯಬೇಕು ||೬||

(ಶಂ|| ಭಾ||) ಅಂಥಾ ಸತ್ವಾದಿಗಳಲ್ಲಿ ಸತ್ವಗುಣ ಲಕ್ಷಣವನ್ನು ಹೇಳುವೆನು ಕೇಳು. ಸ್ಫಟಕ ಶಿಲೆಯಂತೆ ನಿರ್ಮಲವಾಗಿರುವುದರಿಂದ ಪ್ರಕಾಶಪಡಿಸುವ ಸ್ವಭಾವಮುಳ್ಳದ್ದಾಗಿಯೂ ಚೈತನ್ಯಾಭಿವ್ಯಂಜಕವಾಗಿಯೂ ಇರುವ ಸತ್ತ್ವ ಗುಣವು, ನಾನು ಸುಖವುಳ್ಳವನೆಂಬ ವಿಷಯಸ್ವರೂಪವಾದ ಸುಖವನ್ನು ಆತ್ಮನಲ್ಲಿ ಸಂಕ್ರಮಿಸುವಂತೆ ಮಾಡುವುದು. ಆದರೆ ಇಂಥಾ ಅಭಿನಿವೇಶವು ಇಚ್ಛಾದಿಗಳಂತೆ ಇರುವಂತವುಗಳಾದುದರಿಂದ ಇಚ್ಛಾದಿಗಳಂತೆ ಇದೂ ಆತ್ಮಧರ್ಮವೆಂಬದಾಗಿ ಯೇತಕ್ಕೆ ಹೇಳಕೂಡದೆಂದರೆ ಇಚ್ಛಾದಿ ಧೃತಿಪರ್ಯಂತವಾದವುಗಳು ಮನೋಧರ್ಮಗಳಲ್ಲದೆ ಆತ್ಮಧರ್ಮಗಳಲ್ಲವೆಂಬದಾಗಿ ತಾನೇ ಹಿಂದಿನ ಅಧ್ಯಾಯದಲ್ಲಿ ಆರು ಶ್ಲೋಕಗಳಿಂದ ವಿವರಿಸಿರುವನು.ಸತ್ವವು ತನ್ನ ಧರ್ಮವಾಗಿಯೂ ವಿಷಯ ವಿಷಯ್ಯ ವಿವೇಕರೂಪವಾಗಿಯೂ ಇರುವ ಅವಿದ್ಯೆಯಿಂದ ಪರಮಾತ್ಮನಿಗೆ ತನ್ನದಲ್ಲದ ಸುಖದಲ್ಲಿ ತನ್ನದೆಂಬ ಅಭಿನಿವೇಶನವನ್ನುಂಟು ಮಾಡುವುದು.ಮತ್ತೂ ತನ್ನ ಪರಿಣಾಮ ರೂಪವಾದ ಜ್ಞಾನಮೂಲಕವಾಗಿ ನಾನು ಜ್ಞಾನೀ ಎಂಬ ವಿಪರೀತಾಭಿಮಾನವನ್ನುಂಟು ಮಾಡುವುದು. ಜ್ಞಾನವು ಆತ್ಮಧರ್ಮವಲ್ಲವೆ ಎಂದರೆ, ಆತ್ಮಧರ್ಮವಾಗಿದ್ದ ಪಕ್ಷದಲ್ಲಿ ಸಂಗವೂ ಬಂಧನವೂ ಸಂದರ್ಭಿಸಲಾರದು. ಎಂದರೆ ಜ್ಞಾನವು ಆತ್ಮನಿಗೆ ಸ್ವಾಭಾವಿಕ ಧರ್ಮವಾಗಿದ್ದ ಪಕ್ಷದಲ್ಲಿ ಮಧ್ಯೆ ತಟಸ್ಥಿಸಕೂಡದು. ಮೋಕ್ಷ ದಶೆಯಲ್ಲಿಯೂ ಇರಬೇ

ಕಾಗಿ ಬರುವುದು. ಆದುದರಿಂದ ಸುಖದೊಡನೆ ಹೇಳಲ್ಪಡುವುದರಿಂದ ಸುಖದಂತೆ ಜ್ಞಾನವೂ ಕ್ಷೇತ್ರವಾದ ಅಂತಃಕರಣ ಧರ್ಮವೇ ಎಂದರಿಯ ಬೇಕು. ಅನಘ-ಪಾಪಾದಿ ದೋಷವಿಲ್ಲದವನೇ, ಪಾಪಾದಿ ದೋಷ ಸಂಪರ್ಕವಿಲ್ಲದವರಿಗೇನೆ ಇಂತಹ ರಹಸ್ಯಾರ್ಥ ಶ್ರವಣದಲ್ಲಧಿಕಾರವು, ಅನ್ಯರು ಕೇಳಿದರೂ ಬೋಧಕ್ಕೆ ಬರಲಾರದು ॥೬॥

(ಗೀ॥ ವಿ॥) ಸತ್ವಾಭಿಮಾನಿಯಾದ ಲಕ್ಷ್ಮೀದೇವಿಯು ಸತ್ವ ಗುಣದೊಡನೆ ಸುಖವು, ಜ್ಞಾನವು, ಇವುಗಳಿಂದ ದೇವತೆಗಳನ್ನು ಬಂಧಿಸುತ್ತಾಳೆಂದರಿಯ ಬೇಕು ॥೬॥

ಮೂ॥ ರಜೋರಾಗಾತ್ಮಕಂವಿದ್ಧಿತೃಷ್ಣಾಸಂಗಸಮು
ದ್ಭವಂ । ತನ್ನಿಬಧ್ನಾತಿಕೌಂತೇಯಕರ್ಮ
ಸಂಗೇನದೇಹಿನಂ॥ ॥೭॥

[ಪ॥ ರಜಃ-ರಾಗಾತ್ಮಕಂ-ವಿದ್ಧಿ-ತೃಷ್ಣಾಸಂಗಸಮುದ್ಭವಂ-ತತ್-ನಿಬಧ್ನಾತಿ-ಕೌಂತೇಯ-ಕರ್ಮಸಂಗೇನ-ದೇಹಿನಂ॥

(ಅ॥ರಾ॥ಭಾ॥) ಹೇ ಕೌಂತೇಯ-ಕುಂತೀ ಪುತ್ರನಾದ ಎಲೆ ಅರ್ಜುನನೆ, ರಜಃ-ರಜೋಗುಣವನ್ನು, ರಾಗಾತ್ಮಕಂ-ರಾಗವೆಂದರೆ ಸ್ತ್ರೀ ಪುರುಷರಿಗೆ ಪರಸ್ಪರವಾಗಿ ಉಂಟಾಗುವ ಆಶೆಯು, ಅದಕ್ಕೆ ಕಾರಣವಾಗಿಯೂ, ತೃಷ್ಣಾಸಂಗಸಮುದ್ಭವಂ-ಶಬ್ದಾದಿ ವಿಷಯಾಪೇಕ್ಷೆಗೂ ಪುತ್ರಮಿತ್ರಾದಿಗಳ ಸಂಶ್ಲೇಷಾಭಿಲಾಷೆಗೂ ಕಾರಣ ಮಾಗಿಯೂ, ವಿದ್ಧಿ-ತಿಳಿದುಕೊಳ್ಳು. ತತ್-ಆ ರಜೋಗುಣವು, ಕರ್ಮಸಂಗೇನ-ಕಾಮ್ಯಕರ್ಮಗಳಲ್ಲಿ ಸಂಬಂಧವನ್ನುಂಟುಮಾಡುವುದರಿಂದ, ದೇಹಿನಂ-ದೇಹವರ್ತಿಯಾದ ಆತ್ಮನನ್ನು, ನಿಬಧ್ನಾತಿ-ಬಂಧಿಸುವುದು. ಕಾಮ್ಯ ಕರ್ಮಗಳಲ್ಲಿ ಇಚ್ಛೆಯಿಂದ ಆ ಕರ್ಮಗಳನ್ನು ಪುರುಷನು ಮಾಡುತ್ತಾನೆ. ಆ ಕರ್ಮಗಳು ಪುಣ್ಯ ಪಾಪ ರೂಪಗಳಾದುದರಿಂದ ತಮ್ಮ ತಮ್ಮ ಗಳ ಫಲಾನುಭವಕ್ಕಾಗಿ ಆಯಾಯ ಯೋನಿಗಳಲ್ಲಿ ಹುಟ್ಟಿಸುವುವು. ಆದುದರಿಂದರಜೋಗುಣವು ಕರ್ಮ ಸಂಗದಿಂದ ಪುರುಷನನ್ನು ಬಂಧಿಸುವುದೆಂದರ್ಥವು. ಸ್ತ್ರೀ ಪುರುಷರ ಪರಸ್ಪರಾಪೇಕ್ಷೆಗೂ ಪುತ್ರಮಿತ್ರಾದಿಗಳೊಡನೆ ಸೇರಬೇಕೆಂಬ ಅಪೇಕ್ಷೆಗೂ ಕಾಮ್ಯಕ

ರ್ಮಾಸಕ್ತಿಗೂ ಹೇತುವಾಗಿರುವುದು ರಜೋಗುಣ ಲಕ್ಷಣವೆಂದರಿಯ ಬೇಕು. ‖೭‖

(ಶಂ‖ ಭಾ‖) ಇನ್ನು ಮುಂದೆ ರಜೋಗುಣ ಲಕ್ಷಣವು ವಿವರಿಸಲ್ಪಡುವುದು. ರಜಸ್ಸು ಪರ್ವತಗಳಲ್ಲಿರುವ ಗೈರಿಕಾದಿ ಧಾತುಗಳು ಸಹಜವಾಗಿ ನಿರ್ಮಲವಾದ ಪದಾರ್ಥಗಳಿಗೆ ಯಾವ ರೀತಿಯಾಗಿ ತಮ್ಮ ವರ್ಣಗಳನ್ನು ಸಂಕ್ರಮಿಸುವಂತೆ ಮಾಡುವುವೋ ಆ ರೀತಿಯಾಗಿ ಸ್ವತಸ್ಸಿದ್ಧವಾಗಿ ಪರಿಶುದ್ಧನಾದ ಪುರುಷನಿಗೆ ಅಸತ್ಯಗಳಾದ ದೃಶ್ಯಪದಾರ್ಥಗಳೊಡನೆ ಸಂಪರ್ಕವನ್ನುಂಟು ಮಾಡುವಿಕೆಯನ್ನು ಸ್ವಭಾವವಾಗಿ ಉಳ್ಳದ್ದಾಗಿಯೂ ತನಗಿಲ್ಲದ ಪದಾರ್ಥಗಳಲ್ಲಿ ಅಭಿಲಾಷೆಗೂ ತನಗುಂಟಾಗಿರುವ ಪದಾರ್ಥಗಳನ್ನು ಬಿಡುವುದಕ್ಕೆ ಯತ್ನವಿಲ್ಲದಅಧಿಕ ಪ್ರೀತಿಯೊಡನೆ ಕೂಡಿರುವ ಅಭಿಮಾನಕ್ಕೂ ಮೂಲವಾದದ್ದೆಂತಲೂ ತಿಳಿದುಕೊಳ್ಳು. ಅದು ಹೇಗೆ ಬಂಧಿಸುವುದೆಂದರೆಸ್ವಭಾವದಿಂದ ಕರ್ತೃತ್ವವಿಲ್ಲದ ಪುರುಷನನ್ನು ನಾನುಮಾಡುತ್ತೇನೆಎಂಬ ಕರ್ತೃತ್ವದ್ವಾರಾ ಆಸ್ತಿಕಗಳಾದ ಐಹಿಕಾಮುಷ್ಮಿಕಭೋಗಗಳಲ್ಲಿ ಅಭಿಲಾಷೆಯನ್ನುಂಟುಮಾಡಿ ಕರ್ಮಗಳಲ್ಲಿ ಪ್ರವರ್ತಿಯನ್ನುಂಟುಮಾಡುವಿಕೆಯೆಂಬ ಬಂಧವನ್ನುಂಟುಮಾಡಿದಂತೆ ತೋರುವುದು. ‖೭‖

(ಗೀ‖ ವಿ‖) ರಜೋಭಿಮಾನಿಯಾದ ಭೂದೇವಿಯು ರಜೋಗುಣದೊಡನೆ ಮನುಜರನ್ನು ಬಂಧಿಸುತ್ತಾಳೆ. ‖೭‖

ಮೂ ‖ ತಮಸ್ತ್ವಜ್ಞಾನಜಂವಿದ್ಧಿಮೋಹನಂಸರ್ವದೇ
ಹಿನಾಂ । ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾ
ತಿಭಾರತ‖ ‖೮‖

ಪ‖ ತಮಃ-ತು-ಅಜ್ಞಾನಜಂ-ವಿದ್ಧಿ-ಮೋಹನಂ-ಸರ್ವದೇಹಿನಾಂ।ಪ್ರಮಾದಾಲಸ್ಯನಿದ್ರಾಭಿಃ-ತತ್-ನಿಬಧ್ನಾತಿ-ಭಾರತ‖

(ಅ‖ರಾ‖ಭಾ‖) ಭಾರತ-ಭರತವಂಶ್ಯನಾದ ಎಲೈಅರ್ಜುನನೆ, ತಮಸ್ತು-ತಮೋಗುಣವನ್ನೂ ಎಂದರೆ, ಅಜ್ಞಾನಜಂ- (ಜ್ಞಾನವೆಂದರೆ ವಸ್ತುಗಳನ್ನು ಯಥಾವತ್ತಾಗಿ ತಿಳಿಯುವಿಕೆಯು. ಅದಕ್ಕಿಂತಲೂ ಭಿನ್ನವಾದದ್ದು ಅಜ್ಞಾನವು. ವಸ್ತು ಒಂದಾಗಿರುವಲ್ಲಿ ಅದನ್ನು ಬೇ

ರೊಂದಾಗಿ ತಿಳಿಯುವಿಕೆಯು ಅಜ್ಞಾನವೆನ್ನಲ್ಪಡುವುದು.) ಅಂಥಾ ಅಜ್ಞಾನದಿಂದ ವೃದ್ಧಿಹೊಂದತಕ್ಕದ್ದಾಗಿಯೂ, ಸರ್ವದೇಹಿನಾಂ-ಸಮಸ್ತ ಪ್ರಾಣಿಗಳಿಗೂ,ಮೋಹನಂ-(ಮೋಹವೆಂದರೆ ವಿಪರೀತಜ್ಞಾನವು. ಒಂದಿರುವಲ್ಲಿ ಬೇರೊಂದಾಗಿ ತಿಳಿಯುವಿಕೆಯು.) ಅದಕ್ಕೆ ಕಾರಣವಾಗಿಯೂ, ವಿದ್ಧಿ-ತಿಳಿದುಕೊಳ್ಳು, ತತ್-ಆ ತಮೋಗುಣವು, ಪ್ರಮಾದಾಲಸ್ಯನಿದ್ರಾಭಿಃ-ಪ್ರಮಾದಾಲಸ್ಯ ನಿದ್ರೆಗಳಿಂದ,(ಪ್ರಮಾದವೆಂದರೆ ಮಾಡತಕ್ಕ ಕರ್ಮಗಳನ್ನು ಬಿಟ್ಟು ಮತ್ತೊಂದನ್ನು ಆರಂಭಿಸುವಂತೆ ಮಾಡುವಂತಾ ಬುದ್ಧಿಮಾಂದ್ಯವು. ಆಲಸ್ಯ ವೆಂದರೆ ; ಯಾವ ಕರ್ಮವನ್ನೂ ಮಾಡುವುದಕ್ಕೆ ಆರಂಭಿಸದಂತೆ ಮಾಡುವ ಸ್ವಭಾವವು. ನಿದ್ರೆಯೆಂದರೆ ಪುರುಷನು ಚಕ್ಷುರಾದೀಂದ್ರಿಯಗಳನ್ನು ಆಯಾ ಕಾರ್ಯಗಳಲ್ಲಿ ಪ್ರವರ್ತಿಸುವುದರಿಂದುಂಟಾದ ಆಯಾಸದಿಂದ ಯಾವಇಂದ್ರಿಯವನ್ನೂ ಪ್ರವರ್ತಿಸದಂತೆ ಮಾಡಿ ಸುಮ್ಮನಿರುವುದು.) ಅದರಲ್ಲಿ ಬಾಹ್ಯೇಂದ್ರಿಯಗಳನ್ನು ಪ್ರವರ್ತಿಸದಂತೆ ಮಾಡುವುದು ಸ್ವಪ್ನವು. ಅಂತರಿಂದ್ರಿಯವಾದ ಮನಸ್ಸನ್ನೂ ಕೂಡ ಪ್ರವರ್ತಿಸದಂತೆ ಮಾಡುವುದು ಸುಷುಪ್ತಿ ಎನ್ನಲ್ಪಡುವುದು. ಇಂತಹ ಪ್ರಮಾದಾಲಸ್ಯನಿದ್ರೆಗಳಿಂದ, ನಿಬಧ್ನಾತಿ-ದೇಹಿಯಾದ ಆತ್ಮನನ್ನು ಬಂಧಿಸುವುದು. ‖೮‖

(ಆ‖ಗಿ‖) ಮೂರುಗುಣಗಳು ಪ್ರಕೃತಿಯಿಂದಲೆ ಉಂಟಾಗಿರುವಲ್ಲ ಇಲ್ಲ ,, ಅಜ್ಞಾನಜಂ ,, ಎಂಬ ವಿಶೇಷದಿಂದೇನು ಪ್ರಯೋಜನವೆಂದರೆ ಸತ್ವ ರಜೋಗುಣಗಳು ತಮಸ್ಸಿನಂತೆ ಅಷ್ಟು ವಿವೇಕಪ್ರತಿಬಂಧಕಗಳಲ್ಲವೆಂತಲೂ ಇದು ವಿವೇಕ ಗಂಧವನ್ನು ಕೂಡ ಉಂಟುಮಾಡಲಾರದೆಂತಲೂ ತಿಳಿಸಲಭಿಪ್ರಾಯದಿಂದ ಆ ರೀತಿ ವಿಶೇಷಿಸಿ ಹೇಳಿರುತ್ತಾರೆಂದರಿಯಬೇಕು. ‖೮‖

(ಗೀ‖ ವಿ‖) ತಮೋಗುಣಾಭಿಮಾನಿಯಾದ ದುರ್ಗಾದೇವಿಯು ತಮೋಗುಣದೊಡನೆ ದೈತ್ಯರನ್ನು ಬಂಧಿಸುತ್ತಾಳೆ. ‖೮‖

ಮೂ‖ ಸತ್ತ್ವಂಸುಖೇಸಂಜಯತಿರಜಃಕರ್ಮಣಿಭಾರತ ।
ಜ್ಞಾನಮಾವೃತ್ಯತುತಮಃ ಪ್ರಮಾದೇಸಂಜ
ಯತ್ಯುತ‖ ‖೯‖

ಪ‖ ಸತ್ವಂ-ಸುಖೇ-ಸಂಜಯತಿ-ರಜಃ-ಕರ್ಮಣಿ-ಭಾರತ ! ಜ್ಞಾನಂ-ಆವೃತ್ಯ-ತು-ತಮಃ-ಪ್ರಮಾದೇ-ಸಂಜಯತಿ-ಉತ‖

(ಅ॥ರಾ॥ಭಾ॥) ಸತ್ವರಜಸ್ತಮಸ್ಸುಗಳು ಬಂಧಕಗಳಾಗುವ ಲ್ಲಿ ಮುಖ್ಯಗಳಾದ ಸಹಾಯುಗಳನ್ನು ಬೋಧಿಸುತ್ತಾರೆ. ಭಾರತ-ಭ ರತವಂಶೋದ್ಭವನಾದ ಎಲೈ ಅರ್ಜುನನೇ, ಸತ್ವಂ-ಸತ್ವಗುಣವು, ಸುಖೆ-ಸುಖದಲ್ಲಿ, ಸಂಜಯತಿ-ಅಪೇಕ್ಷೆಪಡುವಂತೆ ಮಾಡುವುದು. (ಸುಖದಲ್ಲಪೇಕ್ಷೆಯನ್ನುಂಟುಮಾಡಿ ಆ ಮಾರ್ಗವಾಗಿ ಸತ್ವ ಗುಣವು ಬಂಧಕವಾಗುವುದೆಂದರ್ಥವು. ಜ್ಞಾನಸಂಗದಿಂದಲೂ ಬಂಧಕವಾಗು ವುದೆಂಬದಾಗಿ ಹಿಂದೆಹೇಳಿರುತ್ತದೆ. ಜ್ಞಾನಸಂಗವೂ ಸುಖಾರ್ಥವೆಂತ ಲೇ ತಿಳಿಯಬೇಕು.) ರಜಃ-ರಜೋಗುಣವು, ಕರ್ಮಣಿ-ಫಲಸಾಧ ನ ಕರ್ಮಗಳಲ್ಲಿ, ಸಂಜಯತಿ-ಅಪೇಕ್ಷಿಸುವಂತೆ ಮಾಡುವುದು. (ಫಲ ಸಾಧನ ಕರ್ಮಗಳಲ್ಲಪೇಕ್ಷೆಯನ್ನುಂಟುಮಾಡಿ ಆ ಮಾರ್ಗದಿಂದ ರಜೋ ಗುಣವು ಆತ್ಮನನ್ನು ಬಂಧಿಸುವುದು. ರಾಗತೃಷ್ಣಾದಿಗಳೂ ಕರ್ಮದ ಲ್ಲಿಯೇ ವಿಶ್ರಾಂತವಾಗುವುದರಿಂದ ಕರ್ಮಸಂಗ ಪ್ರಧಾನವು ರಜಸ್ಸೆಂ ದರಿಯಬೇಕು.) ತಮಃಉತ-ತಮೊಗುಣವೂ, ಜ್ಞಾನಂ-ವಸ್ತುಗಳ ನ್ನು ಯಥಾವತ್ತಾಗಿ ತಿಳಿಯುವಿಕೆಯೆಂಬ ಜ್ಞಾನವನ್ನು, ಆವೃತ್ಯತು- ಮರೆಮಾಡಿಯೆ, ಪ್ರಮಾದೇ-ಮಾಡತಕ್ಕದ್ದು ಒಂದಾಗಿದ್ದರೂ ಮ ತ್ತೊಂದನ್ನು ಮಾಡಲುಪಕ್ರಮಿಸುವಂತೆ ಮಾಡುವ ಬುದ್ಧಿಹೀನತೆ ಯಲ್ಲಿ, ಸಂಜಯತಿ-ಅಪೇಕ್ಷಪಡುವಂತೆ ಮಾಡುತ್ತದೆ. (ವಸ್ತು ಯಾ ಥಾತ್ಮ್ಯಜ್ಞಾನವನ್ನುಮರೆಮಾಡಿ ಒಂದಿರುವಲ್ಲಿಬೇರೊಂದಾಗಿರುವಿಕೆಯು ನ್ನುಂಟುಮಾಡಿ ವಿಪರೀತ ಜ್ಞಾನಕ್ಕೆ ಕಾರಣವಾಗಿರುವುದರಿಂದ ಕರ್ತ ವ್ಯಗಳಲ್ಲಿ ವಿಪರೀತಪ್ರವೃತ್ತಿರೂಪವಾದ ಸಂಗವನ್ನೇ ಪ್ರಾಧಾನ್ಯದಿಂ ದುಂಟುಮಾಡಿತದ್ದ್ವಾರಾ ಬಂಧಕವಾಗುವದು ತಮಸ್ಸೆಂದರ್ಥವು॥೯॥

ಮೂ॥ ರಜಸ್ತಮಶ್ಚಾಭಿಭೂಯಸತ್ವಂಭವತಿಭಾ
ರತ । ರಜಸ್ಸತ್ವಂತಮಶ್ಚೈವತಮಸ್ಸತ್ವಂರಜ
ಸ್ತಥಾ॥ ॥೧೦॥

ಪ॥ ರಜಃ-ತಮಃ-ಚ-ಅಭಿಭೂಯ-ಸತ್ವಂ-ಭವತಿ-ಭಾರತ। ರಜಃ-ಸತ್ವಂ-ತಮಃ-ಚ-ಏವ-ತಮಃ-ಸತ್ವಂ-ರಜಃ-ತಥಾ ॥

(ಅ॥) ಹೇಭಾರತ-ಎಲೈಅರ್ಜುನನೆ ! ಸತ್ವಂ-ಸತ್ವಗುಣವು, ರಜಸ್ತಮಶ್ಚಾಭಿಭೂಯ-ರಜಸ್ತಮೊಗುಣಗಳನ್ನು ತಿರಸ್ಕರಿಸಿ, ಭವ

ತಿ-ತಲೆ ಎತ್ತುವುದು. ರಜಃ-ರಜೋಗುಣವು, ಸತ್ವಂತಮಶ್ಚಾಭಿಭೂಯ-ಸತ್ವತಮೋಗುಣಗಳನ್ನು ತಿರಸ್ಕರಿಸಿ, ಭವತಿ-ಸ್ವಕಾರ್ಯವನ್ನು ಮಾಡುವುದಕ್ಕಾರಂಭಿಸುವುದು. ತಥಾ-ಆಪ್ರಕಾರವೆ, ತಮಃ-ತಮೋಗುಣವು, ಸತ್ವಂರಜಶ್ಚೈವಾಭಿಭೂಯ-ಸತ್ವರಜೋ ಗುಣಗಳನ್ನು ತಿರಸ್ಕರಿಸಿ, ಭವತಿ-ಸ್ವಕಾರ್ಯವನ್ನು ಮಾಡುವುದಕ್ಕಾಗಿ ಪ್ರವರ್ತಿಸುವುದು. ||೧೦||

(ಶಂ||ಭಾ||) ಈ ಗುಣಗಳಲ್ಲಿ ಒಂದು ಗುಣವು, ಇತರ ಗುಣಗಳನ್ನು ಬಾಧಿಸದೆ ಇತರ ಗುಣಗಳಿಲ್ಲದ ಸಮಯದಲ್ಲಿ ತಾನುಂಟಾಗುವುದೋ ? ಅಥವಾ ಎಲ್ಲಾ ಗುಣಗಳು ಒಂದೇ ಸಮಯದಲ್ಲುಂಟಾಗುವುವೋ ? ಅಥವಾ ಇತರಗಳಾದ ಎರಡು ಗುಣಗಳಿರುವಲ್ಲಿ ಮೂರನೇ ಗುಣವು ವೃದ್ಧಿಹೊಂದುವುದೋ ; ಎಂಬೀಪ್ರಶ್ನೆಗಳಿಗೆ ಮೂರನೇ ಪ್ರಶ್ನವೆ ವಾಸ್ತವವೆಂಬದಾಗಿ ಸಮಾಧಾನವನ್ನು ಹೇಳುತ್ತಾರೆ. ರಜಸ್ತಮೋ ಗುಣಗಳನ್ನು ಅಣಗಿಸಿ ಸತ್ವವು ಅಭಿವೃದ್ಧವಾಗಿ ಅಂಥಾ ರಜಸ್ತಮಸ್ಸುಗಳ ತಿರೋಧಾನದಶೆಯಲ್ಲಿ ಸ್ವಜನ್ಯಗಳಾದ ಜ್ಞಾನ ಸುಖಾದಿಗಳನ್ನುಂಟುಮಾಡುವುದು. ತಮಸ್ಸತ್ವಗಳನ್ನಣಗಿಸಿ ರಜಸ್ಸು ವೃದ್ಧಿ ಹೊಂದಿದಾಗ ಸ್ವಜನ್ಯಗಳಾದ ಕರ್ಮಗಳನ್ನುಂಟು ಮಾಡುವುದು. ರಜಸ್ಸತ್ವಗಳನ್ನಣಗಿಸಿ ತಮಸ್ಸು ವೃದ್ಧಿಹೊಂದಿದಾಗ ಸ್ವಕಾರ್ಯಗಳಾದ ಜ್ಞಾನಾವರಣಾದಿಗಳಿಂದ ಪ್ರಮಾದಾಲಸ್ಯಾದಿಗಳನ್ನುಂಟು ಮಾಡುವುದು. ||೧೦||

(ರಾ|| ಭಾ||) ದೇಹಾಕಾರವಾಗಿ ಪರಿಣಮಿಸಿರುವ ಪ್ರಕೃತಿಯೊಡನೆ ಯಾವಾಗಲೂ ಸೇರಿರುವ ಸತ್ವರಜಸ್ತಮಸ್ಸುಗಳು ಪರಸ್ಪರವಿರುದ್ಧಗಳಾದ ಕಾರ್ಯಗಳನ್ನು ಹೇಗೆ ಮಾಡಬಹುದೆಂಬ ಶಂಕೆಗೆ ಸಮಾಧಾನವನ್ನು ಅನುಗ್ರಹಿಸುತ್ತಾರೆ.

ಎಲೈ ಅರ್ಜುನನೇ, ಒಂದಾನೊಂದು ಕಾಲದಲ್ಲಿ ರಜೋಗುಣವನ್ನೂ ತಮೋಗುಣವನ್ನೂ ಅಣಗಿಸಿ ಸತ್ವಗುಣವು ತಲೆಯೆತ್ತುವುದು. ಒಂದು ಸಮಯದಲ್ಲಿ ಆ ಪ್ರಕಾರವೆ ಸತ್ವಗುಣವನ್ನೂ ತಮೋಗುಣವನ್ನೂ ಅಣಗಿಸಿ ರಜೋಗುಣವು ತಲೆಯೆತ್ತುವುದು. ಮತ್ತೊಂದು ಸಮಯದಲ್ಲಿ ಆ ಪ್ರಕಾರವೇ ಸತ್ವಗುಣವನ್ನೂ ರಜೋಗುಣವ

ನ್ನು ಅಣಗಿಸಿ ತಮೋಗುಣವು ತಲೆಯೆತ್ತುವುದು. ಸತ್ವರಜಸ್ತಮ ಸ್ಸುಗಳೆಂಬೀ ಮೂರುಗುಣಗಳೂ ಪ್ರಕೃತಿಸಂಸೃಷ್ಟನಾದ ಆತ್ಮನಿ ಗೆ ಯಾವಾಗಲೂ ಸಮವಾಗಿದ್ದರೂ ಪ್ರಾಚೀನ ಕರ್ಮವಶದಿಂದ ದೇ ಹಕ್ಕೆ ಆಪ್ಯಾಯಕರಗಳಾದ (ತೃಪ್ತಿಯನ್ನುಂಟುಮಾಡುವ) ಆಹಾರ ಗಳ ವೈಷಮ್ಯದಿಂದಲೂ ಸತ್ವಾದಿಗಳು ತಮ್ಮಗಳಿಗಿಂತಲೂ ಅನ್ಯಗ ಳಾದ ಯರಡೆರಡು ಗುಣಗಳನ್ನು ಅಣಗಿಸಿ ಒಂದೊಂದು ಗುಣವುತಲೆ ಯೆತ್ತುವುದರಿಂದ ಆಯಾ ಸಮಯಗಳಲ್ಲಿ ತಮ್ಮ ತಮ್ಮ ಕಾರ್ಯಗಳನ್ನು ಮಾಡುವುದು. ಆದುದರಿಂದ ಪರಸ್ಪರವಿರುದ್ಧಗಳಾದ ಕಾರ್ಯಗಳನ್ನು ಸಮಯಭೇದದಿಂದ ಸತ್ವಾದಿಗುಣಗಳು ಮಾಡುವುವೆಂಬುವುದು ವಿರು ದ್ಧವಿಲ್ಲವೆಂದರಿಯ ಬೇಕು. ॥೧೦॥

(ಶ್ರೀ॥ ಗೀ॥ ವಿ॥ ಇವರು ಈ ಮೇಲ್ಕಂಡ ಅಭಿಪ್ರಾಯವನ್ನೆ ಆ ದರಿಸುತ್ತಾರೆ.)

(ಗೀ॥ ವಿ) ವೃದ್ಧಿಹೊಂದುವುದು ಅಣಗುವುದೆಂಬೀ ವೈಷಮ್ಯ ವು ಗುಣಗಳಿಗಲ್ಲದೆ ಗುಣಾಭಿಮಾನಿ ದೇವತೆಗಳಾದ ಲಕ್ಷ್ಮಿದೇವಿ ಮೊ ದಲಾದವರಿಗಲ್ಲವೆಂದರಿಯ ಬೇಕು. (೧೦)

ಮೂ ॥ ಸರ್ವದ್ವಾರೇಷುದೇಹೇಸ್ಮಿನ್ ಪ್ರಕಾಶಉಪಜಾ
ಯತೇ । ಜ್ಞಾನಂಯದಾತದಾವಿದ್ಯಾದ್ವಿವೃದ್ಧಂ
ಸತ್ವಮಿತ್ಯುತ॥ ॥೧೧॥

ಪ ॥ ಸರ್ವದ್ವಾರೇಷು-ದೇಹೇ-ಅಸ್ಮಿನ್-ಪ್ರಕಾಶಃ-ಉಪಜಾಯತೇ । ಜ್ಞಾನಂ-ಯದಾ-ತದಾ-ವಿದ್ಯಾತ್-ವಿವೃದ್ಧಂ-ಸತ್ವಂ-ಇತಿ-ಉತ॥

(ಅ॥ ರಾ॥ ಭಾ॥) ಈ ಸತ್ವಾದಿ ಗುಣಗಳಲ್ಲಿ ಯರಡು ಗುಣಗ ಳನ್ನು ಅಣಗಿಸಿ ಒಂದು ತಲೆಯೆತ್ತುವುದಕ್ಕೆಗುರ್ತು ಏನೆಂದರೆ ? ಅದನ್ನು ಬೋಧಿಸುತ್ತಾರೆ. ಸರ್ವದ್ವಾರೇಷು-ಸಮಸ್ತಗಳಾದ ಚಕ್ಷುರಾದಿ ಜ್ಞಾನದ್ವಾರಗಳಲ್ಲಿ, ಯದಾ-ಯಾವಸಮಯದಲ್ಲಿ, ಪ್ರಕಾಶಃ-ವಸ್ತು ಯಾಥಾತ್ಮ್ಯ ಪ್ರಕಾಶಕವಾದ, ಜ್ಞಾನಂ-ಜ್ಞಾನವು, ಉಪಜಾಯತೇ- ಉಂಟಾಗುವುದೋ, ತದಾ-ಆ ಸಮಯದಲ್ಲಿ, ಅಸ್ಮಿನ್‌ದೇಹೇ-ಈ ದೇ ಹದಲ್ಲಿ, ಸತ್ವಂ-ಸತ್ವಗುಣವು, ವಿವೃದ್ಧಮಿತ್ಯುತ-ಅಭಿವೃದ್ಧವಾಗಿರು ವುದೆಂಬದಾಗಿ, ವಿದ್ಯಾತ್-ತಿಳಿಯಬೇಕು. ॥೧೧॥

(ಶ್ರೀ) ಉತಎಂಬೀ ಪದಕ್ಕೆ ಸುಖವು ಅಸ್ತುವೆಂಬುವುದನ್ನು ತಿಳಿಯಬೇಕು. ಪ್ರಕಾಶಃ-ಉತ-ಜ್ಞಾನಸ್ವರೂಪವಾದ ಪ್ರಕಾಶವೂ ಸುಖವೂ. ॥೧೧॥

(ಶಂ॥ ಭಾ॥) ಯಾವಾಗ ಯಾವಗುಣವು ಅಭಿವೃದ್ಧಿ ದಶೆಯಲ್ಲಿರುವುದೋ ಆ ಸಂಗತಿಯು ಹೇಗೆ ತಿಳಿಯಲ್ಪಡುವುದೆಂದರೆ ಅದನ್ನು ಬೋಧಿಸುವೆನು. ಆತ್ಮನು ವಿಷಯಗಳನ್ನು ಗ್ರಹಿಸುವುದಕ್ಕೆ ದ್ವಾರಗಳಾಗಿ ಭೋಗಾಯತನವಾದ ದೇಹದಲ್ಲಿರುವ ಶ್ರೋತ್ರಾದೀಂದ್ರಿಯಗಳಿಗೆ ಶಬ್ದಾದಿ ವಿಷಯಪ್ರಕಾಶವು ಉಂಟಾಗುತ್ತಿದ್ದರೂ ಯಾವ ಸಮಯದಲ್ಲಿ ಸ್ವಸ್ವರೂಪ ಸ್ಫುರಣಕ್ಕೆ ಸಾಧನವಾಗುವ ಅಂತಃಕರಣ ವೃತ್ತಿರೂಪವಾದ ಜ್ಞಾನವು ಉಂಟಾಗುವುದೋ ಆ ಸಮಯದಲ್ಲಿ ಸತ್ವಗುಣವು ಅತ್ಯಂತಾಭಿವೃದ್ಧಿ ದಶೆಯಲ್ಲಿರುವುದೆಂದು ಗ್ರಹಿಸಬೇಕು. ॥೧೧॥

(ಆ॥ ಗಿ॥) ಉತ ಎಂಬೀ ಶಬ್ದವು ಅಪಿಶಬ್ದಕ್ಕೆ ಪರ್ಯಾಯಪದವಾಗಿ ಇಲ್ಲಿ ಅತಿಶಯಾರ್ಥವನ್ನು ಬೋಧಿಸುವುದು. (೧೧)

ಮೂ॥ ಲೋಭಃಪ್ರವೃತ್ತಿರಾರಂಭಃಕರ್ಮಣಾಮಶಮ
ಸ್ಸ್ಪೃಹಾ।ರಜಸ್ಯೇತಾನಿಜಾಯಂತೇವಿವೃದ್ಧೇಭರ
ತರ್ಷಭ॥ ॥೧೨॥

ಪ॥ ಲೋಭಃ-ಪ್ರವೃತ್ತಿಃ-ಆರಂಭಃ-ಕರ್ಮಣಾಂ-ಅಶಮಃ-ಸ್ಪೃಹಾ। ರಜಸಿ-ಏತಾನಿ-ಜಾಯಂತೇ-ವಿವೃದ್ಧೇ-ಭರತರ್ಷಭ।

(ಅ॥ ರಾ॥ ಭಾ॥) ಭರತರ್ಷಭ-ಭರತವಂಶ್ಯರಲ್ಲಿ ಶ್ರೇಷ್ಠನಾದ ಎಲೈ ಅರ್ಜುನನೆ, ಲೋಭಃ-(ತನ್ನದಾದ ಯಾವ ವಸ್ತುವನ್ನೂ ಒಬ್ಬರಿಗೂ ಕೊಡಕೂಡದೆಂಬ ಸ್ವಭಾವವೆನ್ನಲ್ಪಡುವ) ಲೋಭವು, ಪ್ರವೃತ್ತಿಃ-(ಪ್ರಯೋಜನವಿಲ್ಲದಿದ್ದರೂ ಯಾವದಾದರೊಂದು ಕಾರ್ಯವನ್ನು ಮಾಡಬೇಕೆಂಬಿರುವ) ಪ್ರವೃತ್ತಿಯೂ, ಕರ್ಮಣಾಮಾರಂಭಃ-ಫಲಸಾಧನ ಭೂತಗಳಾದ ಕರ್ಮಗಳ ಆರಂಭವು, ಅಶಮಃ-ಇಂದ್ರಿಯಗಳನ್ನು ಅಣಗಿಸದೇ ಇರುವಿಕೆಯೂ. ಸ್ಪೃಹಾ-ಶಬ್ದಾದಿವಿಷಯೇಚ್ಛೆಯೂ, ಏತಾನಿ-ಇವುಗಳು, ರಜಸಿವಿವೃದ್ಧೇ-ರಜೋಗುಣವು

ಅಭಿವೃದ್ಧಿಯನ್ನು ಹೊಂದಿದರೆ, ಜಾಯಂತೇ-ಉಂಟಾಗುವುವು ||೧೨||

ಲೋಭಃ-(ಶಂ) ಪರದ್ರವ್ಯ ವಿಷಯದಲ್ಲಿ ಇಚ್ಛೆಯು, (ಶ್ರೀ) ಅಧಿಕಾಪೇಕ್ಷೆಯು. (ರಾ||ಗೀ|| ವಿ||) ಏಕಾರ್ಥವೆ. ಪ್ರವೃತ್ತಿಃ-(ಶಂ) ಕಾರ್ಯಗಳಲ್ಲಿ ಪ್ರವೃತ್ತಿಯು. (ರಾ|| ಗೀ|| ವಿ||) ಒಂದೇ ಅರ್ಥವು. ಕರ್ಮಣಾಮಾರಂಭಃ-(ಶಂ|| ಶ್ರೀ)ಯಾವದಾದರೊಂದು ಕಾರ್ಯವನ್ನು ಮಾಡಿಕೊಂಡೇ ಇರುವಿಕೆಯು.

(ರಾ||ಗೀ||ವಿ||) ಫಲಾಪೇಕ್ಷೆಯೊಡನೆ ಕರ್ಮಗಳನ್ನು ಮಾಡುವಿಕೆಯು. ಈಅರ್ಥವು(ರಾ)ದಲ್ಲಿವಿವೃತವಾಗಿರುವುದು. ಸ್ಪೃಹಾ-ಶಂ|| ಸರ್ವ ಸಾಧಾರಣ ವಸ್ತುಗಳಲ್ಲಿರುವ ಅಪೇಕ್ಷೆಯು,(ಶ್ರೀ)ತಾನು ನೋಡಿದ ವಸ್ತುಗಳೆಲ್ಲವೂ ಉತ್ತಮವಾಗಿಯಾದರೂ ಅಧಮವಾಗಿಯಾದರೂ ಇರಲಿ, ಅವುಗಳು ತನಿಗೆ ಬೇಕೆಂಬ ಅಪೇಕ್ಷೆಯು||೧೨||

ಮೂ ||ಅಪ್ರಕಾಶೋಽಪ್ರವೃತ್ತಿಶ್ಚಪ್ರಮಾದೋ
ಮೋಹಏವಚ | ತಮಸ್ಯೇತಾನಿಜಾಯಂತೇವಿ
ವೃದ್ಧೇಕುರುನಂದನ|| ||೧೩||

ಪ|| ಅಪ್ರಕಾಶಃ-ಅಪ್ರವೃತ್ತಿಃ-ಚ-ಪ್ರಮಾದಃ-ಮೋಹಃ-ಏವ-ಚ | ತಮಸಿ-ಏತಾನಿ-ಜಾಯಂತೇ-ವಿವೃದ್ಧೇ-ಕುರುನಂದನ|

(ಅ||ರಾ||ಭಾ||) ಕುರುನಂದನ-ಕುರುಮಹಾರಾಜರಿಗೆ ಇಂಥಾ ಪುತ್ರನು ನಮ್ಮ ವಂಶದಲ್ಲಿ ಹುಟ್ಟಿರುತ್ತಾನಲ್ಲವೆ ; ನಮ್ಮ ಭಾಗ್ಯ ವೆಷ್ಟೆಂದು ಹೇಳಬೇಕೆಂಬದಾಗಿ ಸಂತೋಷವನ್ನುಂಟುಮಾಡುವ ಅರ್ಜುನನೆ, ಅಪ್ರಕಾಶಃ-ಜ್ಞಾನದ ಹುಟ್ಟದೆ ಇರುವಿಕೆಯು, ಅಪ್ರವೃತ್ತಿಃ-ಯಾವಕಾರ್ಯವನ್ನೂ ಮಾಡದೆ ಸ್ತಬ್ಧನಾಗಿರುವಿಕೆಯು, ( ಮದಯುಕ್ತನಾಗಿರುವಿಕೆಯು) ಪ್ರಮಾದಃ-ಮಾಡತಕ್ಕದ್ದಲ್ಲವನ್ನು ಮಾಡಬೇಕೆಂಬ ಬುದ್ಧಿ ಕೇಡು. ಮೋಹಃ-ಒಂದನ್ನು ಮತ್ತೊಂದನ್ನಾಗಿ ತಿಳಿಯುವಿಕೆಯು,ಏತಾನಿ-ಇವುಗಳು,ತಮಸಿ-ತಮೋಗುಣವು,ವಿವೃದ್ಧೇ-ಅಭಿವೃದ್ಧವಾದ ಕಾಲದಲ್ಲಿ, ಜಾಯಂತೇ-ಉಂಟಾಗುವುವು. ||೧೩||

ಅಪ್ರಕಾಶಃ- (ಗೀ|| ವಿ||) ಶ್ರೋತ್ರಾದೀಂದ್ರಿಯಗಳಿಗುಳ್ಳ ಜ್ಞಾನ ಹೀನತೆಯು, ಅಪ್ರವೃತ್ತಿಶ್ಚ- (ಗೀ ||ವಿ||) ಯಾವಕಾರ್ಯ

ಕಲ್ಲಿಯೂ ಪ್ರಯತ್ನ ವಿಲ್ಲದೆಇರುವಿಕೆಯು. (ಶಂ||)ಅಪ್ರಕಾಶಃ-ಅ ವಿವೇಕವೂ,ಅಪ್ರವೃತ್ತಿಃ-ಕರ್ಮ ಜ್ಞಾನಗಳಲ್ಲಿ ಪ್ರವೃತ್ತಿಯಿಲ್ಲದೆ ಸ್ತಬ್ಧ ನಾಗಿರುವಿಕೆಯು. ಪ್ರಮಾದಃ-ಅವಿವೇಕದಿಂದುಂಟಾದ ಅಜಾಗ್ರತೆ ಯು. ಮೋಹಃ-ವಿಪರೀತಜ್ಞಾನವು. ||೧೩||

ಮೂ||ಯದಾಸತ್ವೇಪ್ರವೃದ್ಧೇತುಪ್ರಳಯಂಯಾತಿದೇ
ಹಭೃತ್ । ತದೋತ್ತಮವಿದಾಂಲೋಕಾನಮ
ಲಾನ್ಪ್ರತಿಪದ್ಯತೇ|| ||೧೪||

ಪ|| ಯದಾ-ಸತ್ವೇ-ಪ್ರವೃದ್ಧೇ-ತು-ಪ್ರಲಯಂ-ಯಾತಿ-ದೇಹಭೃತ್ । ತದಾ-ಉ ತ್ತಮವಿದಾಂ-ಲೋಕಾನ್-ಅಮಲಾನ್-ಪ್ರತಿಪದ್ಯತೇ ||

(ಅ||ರಾ||) (ಸತ್ವಂಪ್ರವೃದ್ಧಂ ಎಂಬದಾಗಿ ಎರಡುಪದಗಳ ನ್ನು ಸೇರಿಸಿಕೊಳ್ಳಬೇಕು.) ಯದಾಸತ್ವಂಪ್ರವೃದ್ಧಂ-ಯಾವಸಮ ಯದಲ್ಲಿ ಸತ್ವಗುಣವು ಅಭಿವೃದ್ಧವಾಗುವುದೋ, ತದಾ-ಆ ಸಮ ಯದಲ್ಲಿ, ಸತ್ವೇಪ್ರವೃದ್ಧೇ- ಸತ್ವಗುಣವಭಿವೃದ್ಧವಾದಾಗ, ದೇಹ ಭೃತ-ದೇಹಿಯಾದಆತ್ಮನು, ಪ್ರಲಯಂ-ಮರಣವನ್ನು, ಯಾತಿಚೇತ್- ಹೊಂದಿದ್ದೇಆದರೆ, ಅಮಲಾನ್-ಅಜ್ಞಾನರಹಿತವಾದ, ಉತ್ತಮವಿ ದಾಂಲೋಕಾನ್- ಉತ್ತಮರಾದ ತತ್ವಜ್ಞಾನಿಗಳ ಸಮೂಹವನ್ನು, ಪ್ರತಿಪದ್ಯತೆ-ಹೊಂದುತ್ತಾನೆ. ಸತ್ವಗುಣವಭಿವೃದ್ಧವಾದಾಗ ಮ ರಣವನ್ನು ಹೊಂದಿದವನು ಆತ್ಮಜ್ಞಾನಿಗಳ ಕುಲದಲ್ಲಿ ಹುಟ್ಟಿ ಆತ್ಮಜ್ಞಾ ನಸಾಧನಗಳಾದ ಪುಣ್ಯಕರ್ಮಗಳಲ್ಲಾಸಕ್ತನಾಗುವನು. ||೧೪||

(ಶ್ರೀ) ಹಿರಣ್ಯಗರ್ಭೋಪಾಸಕರಿಗೆ ಪ್ರಾಪ್ಯವಾಗಿಯೂ ಪ್ರ ಕಾಶಮಯವಾಗಿಯೂ ಸುಖಾನುಭವಯೋಗ್ಯವಾಗಿಯೂ ಇರುವ ಲೋಕಗಳನ್ನು ಹೊಂದುತ್ತಾನೆ. ||೧೪||

(ಶಂ) ಪ್ರಕೃತಿತತ್ವವನ್ನು ತಿಳಿದಿರುವ ಜ್ಞಾನಿಗಳು ಹೊಂದ ತಕ್ಕ ಲೋಕಗಳನ್ನು ಹೊಂದುತ್ತಾನೆ. ||೧೪||

(ಗೀ||ವಿ||) ವಿಷ್ಣುಜ್ಞಾನಿಗಳು ಹೊಂದತಕ್ಕ ನಿರ್ದೋಷವಾದ ದೇಹವನ್ನು ಹೊಂದುತ್ತಾನೆ. ಎಂದರೆ ಉತ್ತಮರಾದವರ ಕುಲದ ಲ್ಲಿ ದೇಹವನ್ನು ಹೊಂದುತ್ತಾನೆ. ||೧೪||

ಮೂ॥ ರಜಸಿಪ್ರಳಯಂಗತ್ವಾ ಕರ್ಮಸಂಗಿಷುಜಾ
ಯತೇ॥ ॥೧೪॥

ಪ॥ ರಜಸಿ-ಪ್ರಲಯಂ-ಗತ್ವಾ-ಕರ್ಮಸಂಗಿಷು-ಜಾಯತೇ ॥

(ಅ॥ರಾ॥ಭಾ॥) (ರಜಸಿಪ್ರವೃದ್ಧೇಇತ್ಯನುಷಂಗಃ) ರಜಸಿಪ್ರವೃದ್ಧೇ-ರಜೋಗುಣವು ಅಭಿವೃದ್ಧವಾದ ಸಮಯದಲ್ಲಿ, ಪ್ರಲಯಂಗತ್ವಾ-ಮರಣವನ್ನು ಹೊಂದಿ, ಕರ್ಮಸಂಗಿಷು-ಫಲಾರ್ಥವಾಗಿ ಕರ್ಮಾನುಷ್ಠಾನವಂಮಾಡುವ ಕುಲಗಳಲ್ಲಿ,ಜಾಯತೇ-ಹುಟ್ಟುತ್ತಾನೆ. ಅಲ್ಲಿ ಹುಟ್ಟಿ ಸ್ವರ್ಗಾದಿ ಸಾಧನಗಳಾದ ಕರ್ಮಗಳಲ್ಲಾಸಕ್ತನಾಗುವನೆಂದು ಭಾವವು. ॥೧೪॥

ಮೂ॥ ತಥಾಪ್ರಲೀನಸ್ತಮಸಿಮೂಢಯೋನಿಷು
ಜಾಯತೇ॥ ॥೧೫॥

ಪ॥ ತಥಾ-ಪ್ರಲೀನಃ-ತಮಸಿ-ಮೂಢಯೋನಿಷು-ಜಾಯತೇ ॥

(ಅ॥ರಾ॥ಭಾ॥) ತಥಾ-ಆಪ್ರಕಾರವೆ,ತಮಸಿ-ತಮೋಗುಣವು, ಪ್ರವೃದ್ಧೇ-ಅಭಿವೃದ್ಧವಾದಾಗ, ಪ್ರಲೀನಃ-ಮರಣವನ್ನು ಹೊಂದಿದವನು, ಮೂಢಯೋನಿಷು-ನಾಯಿ ಹಂದಿ ಮೊದಲಾದ ಯೋನಿಗಳಲ್ಲಿ, ಜಾಯತೇ-ಹುಟ್ಟುತ್ತಾನೆ. ಭೋಗಮೋಕ್ಷ ಪ್ರವೃತ್ತಿ ಶೂನ್ಯವಾದ ಜನ್ಮವನ್ನೆತ್ತುವನೆಂದು ಭಾವವು. ॥೧೫॥

ಕರ್ಮಸಂಗಿಷು(ಶಂ)ಕರ್ಮಾಸಕ್ತಿಯುಳ್ಳ ಮನುಷ್ಯರಲ್ಲಿ(ಗೀ॥ವಿ॥) ಕಾಮ್ಯಕರ್ಮಗಳನ್ನನುಷ್ಠಿಸುವಂತವರ ಕುಲದಲ್ಲಿ ಹುಟ್ಟುತ್ತಾನೆ. ಮೂಢಯೋನಿಷು- (ಶಂ॥) ಪಶ್ವಾದಿ ಜಾತಿಗಳಲ್ಲಿ, (ಗೀ॥ವಿ॥) ದೈತ್ಯರಕುಲದಲ್ಲಿ. ॥೧೫॥

ಮೂ॥ ಕರ್ಮಣಸ್ಸುಕೃತಸ್ಯಾಹುಸ್ಸಾತ್ವಿಕಂನಿರ್ಮ
ಲಂಫಲಂ । ರಜಸಸ್ತುಫಲಂದುಃಖಮಜ್ಞಾನಂ
ತಮಸಃಫಲಂ॥ ॥೧೬॥

ಪ॥ ಕರ್ಮಣಃ-ಸುಕೃತಸ್ಯ-ಆಹುಃ-ಸಾತ್ವಿಕಂ-ನಿರ್ಮಲಂ-ಫಲಂ।ರಜಸಃ-ತು-ಫಲಂ-ದುಃಖಂ-ಅಜ್ಞಾನಂ-ತಮಸಃ-ಫಲಂ॥

(ಆ॥ ಶಂ॥ ಗೀ॥ ವಿ॥) ಸುಕೃತಸ್ಯಕರ್ಮಣಃ-ಸಾತ್ವಿಕ ಕರ್ಮಕ್ಕೆ, ಸಾತ್ವಿಕಂ-ಸತ್ವಗುಣದಿಂದುಂಟಾದ, ನಿರ್ಮಲಂ-ಪರಿಶುದ್ಧವಾದ ಸುಖವನ್ನು, (ಶ್ರೀ) ಪ್ರಕಾಶಾಧಿಕ್ಯವುಳ್ಳ ಸುಖವನ್ನು, ಫಲಂ-ಫಲವನ್ನಾಗಿಯೂ, ರಜಸಸ್ತು-ರಜೋಗುಣದಿಂದುಂಟಾಗುವ ಕರ್ಮಕ್ಕೆ, ದುಃಖಂ-ದುಃಖವನ್ನು (ಗೀ॥ ವಿ॥) ಸುಖಮಿಶ್ರವಾದ ದುಃಖವನ್ನು, ಫಲಂ-ಫಲವನ್ನಾಗಿಯೂ, ತಮಸಃ-ತಾಮಸಗುಣದಿಂದುಂಟಾಗುವ ಅಧರ್ಮರೂಪವಾದ ಕರ್ಮಕ್ಕೆ, ಅಜ್ಞಾನಂ-ಅಜ್ಞಾನವನ್ನು, ಫಲಂ-ಫಲವನ್ನಾಗಿಯೂ, ಆಹುಃ-ಹೇಳುವರು. ॥೧೬॥

(ರಾ॥ ಭಾ॥) ಪೂರ್ವೋಕ್ತ ಪ್ರಕಾರವಾಗಿ ಸತ್ವಗುಣವು ಅಭಿವೃದ್ಧವಾದ ಸಮಯದಲ್ಲಿ ಮರಣವನ್ನು ಹೊಂದಿ ಆತ್ಮಜ್ಞಾನಿಗಳ ಕುಲದಲ್ಲಿ ಹುಟ್ಟಿದವನಿಂದ ಫಲಾಭಿಸಂಧಿ ರಹಿತವಾಗಿ ನನ್ನ ಆರಾಧನರೂಪದಿಂದ ಅನುಷ್ಠಿಸಲ್ಪಡುವ ನಿತ್ಯನೈಮಿತ್ತಿಕಾದಿ ಕರ್ಮಗಳಿಗೆ ಫಲವು ಅತ್ಯಂತ ಸತ್ವಗುಣಕಾರ್ಯವಾಗಿಯೂ ದುಃಖರಹಿತವಾಗಿಯೂ ಇರುವುದೆಂದು ಸತ್ವಗುಣಪರಿಣಾಮವನ್ನು ತಿಳಿದ ಜ್ಞಾನಿಗಳು ಹೇಳುವರು. ರಜಸಸ್ತು-ಮರಣಕಾಲದಲ್ಲಿ ಅಭಿವೃದ್ಧವಾಗಿರುವ ರಜೋಗುಣಕ್ಕೆ ಫಲವು ಕಾಮ್ಯಕರ್ಮಿಗಳ ಕುಲದಲ್ಲಿ ಹುಟ್ಟಿ ಫಲಾರ್ಥಗಳಾದ ಕರ್ಮಗಳನ್ನನುಷ್ಠಿಸಿ ಅವುಗಳ ಫಲಾನುಭವಕ್ಕಾಗಿಪುನಃ ಜನಿಸಿ ರಜೋಗುಣವೃದ್ಧಿಯಿಂದ ಕರ್ಮಾನುಷ್ಠಾನ ಪರಂಪರಾರೂಪವಾದ ಸಾಂಸಾರಿಕ ದುಃಖವೆಂಬದಾಗಿ ರಜೋಗುಣಪರಿಣಾಮವನ್ನು ತಿಳಿದ ಜ್ಞಾನಿಗಳು ಹೇಳುವರು. ಅಜ್ಞಾನಂತಮಸಃಫಲಂ-ಮರಣಕಾಲದಲ್ಲಿ ಅಭಿವೃದ್ಧಿಯನ್ನು ಹೊಂದಿರುವ ತಮೋಗುಣಕ್ಕೆ ಫಲವು ಅಜ್ಞಾನಪರಂಪರಾ ರೂಪವೆಂಬದಾಗಿ ತಮೋಗುಣಪರಿಣಾಮವನ್ನು ತಿಳಿದ ಜ್ಞಾನಿಗಳು ಹೇಳುವರು. ॥೧೬॥

ಮೂ॥ ಸತ್ವಾತ್ಸಂಜಾಯತೇಜ್ಞಾನಂರಜಸೋಲೋಭ
ಏವಚ। ಪ್ರಮಾದಮೋಹೌತಮಸೋಭವತೋ
ಜ್ಞಾನಮೇವಚ॥ ॥೧೭॥

ಪ॥ ಸತ್ವಾತ್-ಸಂಜಾಯತೆ-ಜ್ಞಾನಂ_ರಜಸಃ-ಲೋಭಃ-ಏವ-ಚ। ಪ್ರಮಾದಮೊಹೌ-ತಮಸಃ-ಭವತಃ-ಅಜ್ಞಾನಃ-ಏವ-ಚ॥

ಅ ॥ ಸತ್ವಾತ್-ಸತ್ವಗುಣದ್ದೆಶೆಯಿಂದ, ಜ್ಞಾನಂ-ಜ್ಞಾನವು, (ಗೀ॥ ವಿ॥) ಸಂಸಾರನಿವೃತ್ತಿ ಸಾಧನವಾದ ಪರಮಾತ್ಮ ಜ್ಞಾನವೂ, ರಜಸಃ-ರಜೋಗುಣದ್ದೆಶೆಯಿಂದ, ಲೋಭಏವಚ-ಎಷ್ಟು ದೊರಕಿದರೂ ತೃಪ್ತಿಇಲ್ಲದ ಇಚ್ಛೆಯೂ, (ಗೀ॥ ವಿ॥) ಸ್ವರ್ಗಾದಿ ವಿಷಯಾಸಕ್ತಿಯೂ, ತಮಸಃ-ತಮೋಗುಣದ್ದೆಶೆಯಿಂದ, ಪ್ರಮಾದ ಮೋಹೌ-ಅಜಾಗ್ರತೆಯೂ ವಿಪರೀತ ಜ್ಞಾನವೂ, ಭವತಃ-ಉಂಟಾಗುವುದು. ಅಜ್ಞಾನಮೇವಚ-ಅಜ್ಞಾನವೂ ಉಂಟಾಗುವುದು. ॥೧೭॥

(ರಾ॥ ಭಾ॥) ಆ ಪ್ರಕಾರವಾಗಿ ಅಧಿಕಗಳಾದ ಸತ್ವಾದಿ ಗುಣಗಳಿಂದುಂಟಾಗುವ ನಿರ್ಮಲಾದಿ ಫಲಗಳ್ಯಾವವೆಂದರೆ ಅದನ್ನು ವಿವರಿಸುತ್ತಾರೆ. ಈ ಪ್ರಕಾರವಾಗಿ ಪರಂಪರೆಯಿಂದ ಅಭಿವೃದ್ಧಿಯನ್ನು ಹೊಂದಿರುವ ಅಧಿಕ ಸತ್ವದಿಂದ ಆತ್ಮ ತತ್ವವನ್ನು ಯಥಾವತ್ತಾಗಿ ವಿಷಯೀಕರಿಸುವಪ್ರತ್ಯಕ್ಷರೂಪವಾದ ಜ್ಞಾನವು ಉಂಟಾಗುವುದು. ಆ ಪ್ರಕಾರವೇ ಅಭಿವೃದಿಯನ್ನು ಹೊಂದಿರುವ ರಜೋಗುಣದಿಂದ ಸ್ವರ್ಗಾದಿಫಲಗಳಲ್ಲಿ ಇಚ್ಛೆಯೇ ಉಂಟಾಗುವುದು. ಆ ಪ್ರಕಾರವೇ ಅಭಿವೃದ್ಧಿಯನ್ನು ಹೊಂದಿರುವ ತಮೋಗುಣದಿಂದ ಮೊದಲು ಬುದ್ಧಿಯು ಕೆಡಕೂ ಆ ಮಾರ್ಗವಾಗಿ ಅನುಚಿತಕಾರ್ಯಗಳಲ್ಲಿ ಪ್ರವೃತ್ತಿಯೂ ವಿಪರೀತ ಜ್ಞಾನವೂ ಉಂಟಾಗುವುದು. ಅಜ್ಞಾನಮೇವಚ-ಅದರ ಮೇಲೆ ಅತ್ಯಂತವಾಗಿ ಅಭಿವೃದ್ಧವಾಗಿರುವ ತಮೋಗುಣದಿಂದ ಜ್ಞಾನಶೂನ್ಯತೆಯೂ ಉಂಟಾಗುವುದು. ॥೧೭॥

ಮೂ॥ ಊರ್ಧ್ವಂಗಚ್ಛಂತಿಸತ್ತ್ವಸ್ಥಾಮಧ್ಯೇತಿಷ್ಠಂತಿ
ರಾಜಸಾಃ । ಜಘನ್ಯಗುಣವೃತ್ತಿಸ್ಥಾಅಧೋಗ
ಚ್ಛಂತಿತಾಮಸಾಃ॥ ॥೧೮॥

ಪ ॥ ಊರ್ಧ್ವಂ-ಗಚ್ಛಂತಿ-ಸತ್ವಸ್ಥಾಃ-ಮಧ್ಯೇ-ತಿಷ್ಠಂತಿ-ರಾಜಸಾಃ।ಜಘನ್ಯಗುಣವೃತ್ತಿಸ್ಥಾಃ-ಅಧಃ-ಗಚ್ಛಂತಿ-ತಾಮಸಾಃ॥

(ಅ॥ ರಾ॥ ಭಾ॥) ಸತ್ವಸ್ಥಾಃ- ಹಿಂದೆ ವಿವರಿಸಿರುವಂತೆ ಉತ್

ರೋತ್ತರವಾಗಿ ಅಭಿವೃದ್ಧಿಯಂಗೈದು ಬರುತಲಿರುವ) ಸತ್ವಗುಣ ಮುಳ್ಳ ದೇಹದಲ್ಲಿರುವ ಚೇತನರು, ಊರ್ಧ್ವಂಗಚ್ಛಂತಿ-(ಕ್ರಮವಾಗಿ ಸಂಸಾರಬಂಧದ್ದ ಕೆಯಿಂದ) ಮೋಕ್ಷವನ್ನು ಹೊಂದುವರು. ರಾಜಸಾಃ-(ಪುರ್ರ್ವೋಕ್ತ ಪ್ರಕಾರವಾಗಿಯೇ ಮೇಲು ಮೇಲೆ ಅಭಿವೃದ್ಧಿ ವಾಗುತಲಿರುವ) ರಜೋಗುಣ ವಿಶಿಷ್ಟವಾದ ದೇಹದಲ್ಲಿರುವ ಚೇತನರು, ಮಧ್ಯೇತಿಷ್ಠಂತಿ-(ಆಯಾ ಫಲಗಳಿಗಾಗಿ ಕರ್ಮಗಳನ್ನನುಷ್ಠಿಸಿ ಅವುಗಳ ಫಲಗಳನ್ನನುಭವಿಸಿ ಪುನಶ್ಚ ಹುಟ್ಟಿ ಆ ಪ್ರಕಾರವೇ ಕಾಮ್ಯಕರ್ಮಗಳನ್ನನುಷ್ಠಿಸಿ ಸ್ವರ್ಗಲೋಕವನ್ನೇರುವುದು ಇಳಿಯುವದು ಎಂಬೀ ರೀತಿಯಾಗಿರುವುದರಿಂದ ದುಃಖಪ್ರಾಯವಾಗಿರುವುದು. ಆದುದರಿಂದ) ಈ ಸಂಸಾರ ಮಧ್ಯದಲ್ಲಿಯೇ ಇರುವರು, ತಾಮಸಾಃ-ಪೂರ್ವೋಕ್ತಪ್ರಕಾರವಾಗಿಯೇ ಉತ್ತರೋತ್ತರ ಮಭಿವೃದ್ಧವಾಗಿರುವ ತಮೋಗುಣವುಳ್ಳ ದೇಹದಲ್ಲಿರುವ ಚೇತನರು, ಜಘನ್ಯಗುಣವೃತ್ತಿಸ್ಥಾಃ-ಉತ್ತರೋತ್ತರವಾಗಿ ನಿಕೃಷ್ಟವಾದ ತಮೋಗುಣಕಾರ್ಯದಲ್ಲಿರುವಂತವರಾಗಿ, ಅಧೋಗಚ್ಛಂತಿ-ಮೊದಲು ಚಂಡಾಲರಾಗಿ ಹುಟ್ಟಿ ಅನಂತರದಲ್ಲಿ ಪಶುಪಕ್ಷ್ಯಾದಿ ಜನ್ಮಗಳನ್ನೈತ್ತಿಯೂ, ಆದಕ್ಕೆ ಮೇಲೆ ಮರಗಳಾಗಿಯೂ ಗಿಡಗಳಾಗಿಯೂ ಮುಳ್ಳುಗಿಡಗಳಾಗಿಯೂ ಹುಟ್ಟಿ ತದನಂತರದಲ್ಲಿ ಕಲ್ಲಾಗಿಯೂ ಕಾಷ್ಠವಾಗಿಯೂ ಹುಟ್ಟಿ ತದನಂತರದಲ್ಲಿ ಹುಲ್ಲಾಗಿಯೂ ಕಸವಾಗಿಯೂ ಹುಟ್ಟುವರು. ಮೇಲುಮೇಲೆ ಬೇರೆ ಬೇರೆ ಶರೀರಗಳುಂಟಾದರೂ ಪೂರ್ವ ಪೂರ್ವ ಶರೀರಗಳ ಜೊತ ಸೂಕ್ಷ್ಮಗಳನ್ನು ಗ್ರಹಿಸಿಕೊಂಡೇ ಮುಂದೇ ಬರುವ ಶರೀರಗಳಲ್ಲಿ ಪ್ರವೇಶಿಸುವುದರಿಂದ ಆಯಾ ಪ್ರತಿ ದೇಹಗಳಲ್ಲಿಯೂ ಸತ್ವಾದಿ ಗುಣಾನುವೃತ್ತಿಗೆ ಬಾಧಕವಿಲ್ಲವು. ಈ ಅರ್ಥವನ್ನು ಮುಂದಿನ ಅಧ್ಯಾಯದಲ್ಲಿ ‘‘ ಶರೀರಂಯದವಾಪ್ನೋತಿ,, ಎಂಬೀ ಶ್ಲೋಕದಲ್ಲಿ ಸ್ಪಷ್ಟವಾಗಿ ಉಪದೇಶಿಸುತ್ತಾನೆ. ॥೧೮॥

(ಶಂ॥ ಭಾ॥) ಜಘನ್ಯಗುಣವೃತ್ತಿಸ್ಥಾಃ-ನಿದ್ರಾಲಸ್ಯಾದಿ ನೀಚಗುಣಪ್ರವೃತ್ತಿಯುಳ್ಳವರಾದ ತಮೋಗುಣಾಭಿವೃದ್ಧಿಯುಳ್ಳವರು, ಪಶುಪಕ್ಷ್ಯಾದಿ ಜಂತುಗಳಲ್ಲಿ ಹುಟ್ಟುವರು. ॥೧೮॥

(ಶ್ರೀ) ಈಗ ಸತ್ವಾದಿಗುಣವೃತ್ತಿ ಶೀಲರಿಗುಂಟಾಗುವ ಫಲವ

ನ್ನು ಹೇಳುತ್ತಾನೆ. ಸತ್ವಗುಣಾಭಿವೃದ್ಧಿಯುಂಟಾದ ಕಾಲದಲ್ಲಿ ಮರಣವನ್ನು ಹೊಂದಿದವರು ತಮ್ಮಗಳ ಸತ್ವೋತ್ಕರ್ಷ ತಾರತಮ್ಯದಿಂದ ಮೇಲುಮೇಲೆ ನೂರು ನೂರಷ್ಟು ಅಧಿಕಾನಂದಗಳುಳ್ಳ ಸತ್ಯಲೋಕಪರ್ಯಂತಗಳಾದ ಮನುಷ್ಯ ಗಂಧರ್ವ ಪಿತೃದೇವಾದಿ ಲೋಕಗಳನ್ನು ಹೊಂದುತ್ತಾರೆ. ರಜೋಗುಣಾಭಿ ವೃದ್ಧಿಯುಳ್ಳವರು ತೃಷ್ಣಾದಿ ವ್ಯಾಕುಲರಾಗಿ (ತೃಷ್ಣಾ-ಆಶೆ) ಆಗಾಗ್ಯೆ ಮನುಷ್ಯಲೋಕದಲ್ಲಿ ಹುಟ್ಟುವರು. ಇಲ್ಲಿ ನೀಚವಾದ ತಮೋಗುಣಕಾರ್ಯವಾಗಿರುವ ಪ್ರಮಾದ ಮೋಹಾದಿಗಳಲ್ಲಿ ಸಿಕ್ಕಿದವರು ತಮ್ಮಗಳ ತಮೋವೃತ್ತಿತಾರತಮ್ಯದಿಂದ ತಾಮಿಸ್ರಾದಿ ನರಕಗಳನ್ನು ಹೊಂದುವರು. ॥೧೮॥

(ಗೀ॥ ವಿ॥) ಸತ್ವಾದಿ ಗುಣಾಭಿವೃದ್ಧಿಯುಳ್ಳವರು ಕ್ರಮವಾಗಿ ಸ್ವರ್ಗಲೋಕಕ್ಕಿಂತಲೂ ಶ್ರೇಷ್ಠವಾದ ಜನೋಲೋಕ ಪರ್ಯಂತಗಳಾದ ಮೇಲು ಲೋಕಗಳನ್ನೂ, ಸ್ವರ್ಗ ಭೂತಾದಿ ಮಧ್ಯಲೋಕಗಳನ್ನೂ, ನರಕಾದ್ಯಧೋ ಲೋಕಗಳನ್ನೂ, ಹೊಂದುವರು.॥೧೮॥

ಮೂ॥ ನಾನ್ಯಂಗುಣೇಭ್ಯಃಕರ್ತಾರಂಯದಾದ್ರಷ್ಟಾನು
ಪಶ್ಯತಿ । ಗುಣೇಭ್ಯಶ್ಚ ಪರಂವೇತ್ತಿಮದ್ಭಾವಂ
ಸೋಧಿಗಚ್ಛತಿ॥ ॥೧೯॥

ಪ॥ ನ-ಅನ್ಯಂ-ಗುಣೇಭ್ಯಃ-ಕರ್ತಾರಂ-ಯದಾ-ದ್ರಷ್ಟಾ-ಅನುಪಶ್ಯತಿ। ಗುಣೇಭ್ಯಃ-ಚ-ಪರಂ-ವೇತ್ತಿ-ಮದ್ಭಾವಂ-ಸಃ-ಅಧಿಗಚ್ಛತಿ॥

(ಅ) ದ್ರಷ್ಟಾ-ವಿವೇಕಿಯಾದವನು, ಗುಣೇಭ್ಯಃ-ಗುಣಗಳಿಗಿಂತಲೂ, ಅನ್ಯಂ-ಭಿನ್ನನಾದ ಬೇರೊಬ್ಬನನ್ನು, ಕರ್ತಾರಂ-ಮಾಡತಕ್ಕವನೆಂಬದಾಗಿ, ಯದಾ-ಯಾವಾಗ, ನಾನುಪಶ್ಯತಿ-ನೋಡುವುದಿಲ್ಲವೋ ಗುಣೇಭ್ಯಶ್ಚ-ಗುಣಗಳಿಗಿಂತಲೂ, ಪರಂ-ಆತ್ಮನನ್ನು ಅನ್ಯನಾಗಿ, ವೇತ್ತಿ-ತಿಳಿಯುತ್ತಾನೆಯೋ, ಸಃ-ಅಂತವನು ಮದ್ಭಾವಂ-(ನನ್ನ ಸಾಧರ್ಮ್ಯವೆಂಬ) ಮೋಕ್ಷವನ್ನು, ಅಧಿಗಚ್ಛತಿ-ಹೊಂದುತ್ತಾನೆ. ॥೧೯)

(ಶಂ॥ ಭಾ) ಪ್ರಕೃತಿಗೆ ಒಳಪಟ್ಟರುವಿಕೆಯೆಂಬ ಮಿಥ್ಯಾಜ್ಞಾನಯುಕ್ತನಾದ ಪುರುಷನಿಗೆ ಸುಖದುಃಖ ಮೋಹರೂಪಗಳಾದ ಭೋಗ್ಯ ಗುಣಗಳ ವಿಷಯವಾಗಿ ನಾನುಸುಖಿ, ನಾನು ದುಃಖಿ, ನಾ

ನು ಮೂಢನು, ಎಂಬೀ ರೀತಿಯಾಗಿ ಉಂಟಾಗುವ ಸಂಗವೇ ಪುರುಷನ ಸದಸದ್ಯೋನಿ ಜನ್ಮಪ್ರಾಪ್ತಿ ರೂಪವಾದ ಸಂಸಾರಕ್ಕೆ ಕಾರಣವೆಂಬದಾಗಿ ಹಿಂದಿನ ಅಧ್ಯಾಯದ (೨೨)ನೇ ಶ್ಲೋಕದಲ್ಲಿ ಸಂಗ್ರಹವಾಗಿ ತಿಳಿಸಲ್ಪಟ್ಟಿರುವುದು. ಈ ಅಧ್ಯಾಯದಲ್ಲಿ (೫)ನೇ ಶ್ಲೋಕವನ್ನು ಮೊದಲುಮಾಡಿಕೊಂಡು ಗುಣಗಳ ಸ್ವರೂಪಗಳೂ ಕಾರ್ಯಗಳೂ, ಗುಣಗಳೂ ತಮ್ಮ ಕಾರ್ಯಗಳದ್ವಾರಾ ಪುರುಷನನ್ನು ಬಂಧಿಸುವ ಪ್ರಕಾರಗಳೂ ಗುಣಾಧೀನವೃತ್ತಿಯುಳ್ಳ ಪುರುಷನು ಯೆಂತಹ ಗತಿಯನ್ನು ಹೊಂದುವನೋ ಅಂತಹ ಲೋಕ ಜನ್ಮಗಳೂ, ಇವೆಲ್ಲವೂ ಬಂಧಕಾರಣವಾದ ಅಜ್ಞಾನ ಮೂಲಕವೆಂಬ ಸಂದರ್ಭವನ್ನು ವಿಸ್ತಾರವಾಗಿ ತಿಳಿಯಪಡಿಸಿ ಈಗ ಸಮ್ಯಗ್ದರ್ಶನದಿಂದ (ಬ್ರಹ್ಮಜ್ಞಾನದಿಂದ ಇವೆಲ್ಲವೂ ನಿವೃತ್ತಿಸುವುವೆಂತಲೂ) ಮೋಕ್ಷವೆಂಬದಾಗಿ ಶ್ರೀಕೃಷ್ಣನು ಬೋಧಿಸುತ್ತಾನೆ. ಎಲೈ ಅರ್ಜುನನೇ ! ಕಾರ್ಯಕಾರಣ ವಿಷಯರೂಪಗಳನ್ನು ಹೊಂದುವಂಥ ಸತ್ವಾದಿಗುಣಗಳಿಗಿಂತಲೂ ಬೇರೆಯಾಗಿ ಸುಖ ದುಃಖಾದಿಗಳಿಗೆ ಮೂಲಗಳಾದ ಕರ್ಮಗಳನ್ನು ಮಾಡುವುದಕ್ಕೂ ಅಂತಹ ಕರ್ಮಫಲಗಳನ್ನನುಭವಿಸುವುದಕ್ಕೂ ಒಬ್ಬನಿರುವನೆಂಬದಾಗಿ ತಿಳಿದುಕೊಳ್ಳದೆ ಗುಣಗಳೇ ಸಮಸ್ತ ಕಾರ್ಯಕಾರಣ ವಿಷಯ ರೂಪಗಳನ್ನು ಹೊಂದಿ ಸರ್ವಕರ್ಮಗಳಿಗೂ ಕರ್ತೃಗಳಾಗಿ ಕರ್ಮಗಳನ್ನು ಮಾಡುವುವೆಂತಲೂ ಆತ್ಮನು ಗುಣ ವ್ಯಾಪಾರಗಳಿಗೆ ಸಾಕ್ಷಿಭೂತನೆಂತಲೂ, ಗುಣಸಂಪರ್ಕಶೂನ್ಯನೆಂತಲೂ ತಿಳಿಯುವ ವಿವೇಕಿಯು ಭಗವದ್ಭಾವವನ್ನು ಹೊಂದುವನು. (ಅಥವಾ) ಬ್ರಹ್ಮಾತ್ಮತತ್ವವನ್ನು ಹೊಂದುವನು. ಇವನಲ್ಲಿ ಬ್ರಹ್ಮ ಭಾವವು ಅಭಿವ್ಯಕ್ತವಾಗುವುದೆಂದರ್ಥವು. ||೧೯||

(ರಾ|| ಭಾ||) ಇನ್ನು ಮುಂದೇ ಆಹಾರವಿಶೇಷಗಳಿಂದಲೂ ಫಲಾಭಿಸಂಧಿರಹಿತವಾದ ಸುಕೃತ ವಿಶೇಷಗಳಿಂದಲೂ ಪರಂಪರೆಯಾಗಿ ಅಭಿವೃದ್ಧವಾಗಿರುವ ಸತ್ವಗುಣಯುಕ್ತರಿಗೆ ಈ ಸತ್ವಾದಿಗುಣಾತಿಕ್ರಮದ್ವಾರಾ ಊರ್ಧ್ವಗಮನ ಪ್ರಕಾರವನ್ನು ಹೇಳುತ್ತಾನೆ. ಈ ಪ್ರಕಾರವಾಗಿ ಸಾತ್ವಿಕಾಹಾರ ಸೇವೆಯಿಂದಲೂ ಫಲಾಭಿಸಂಧಿರಹಿತವಾದ ಭಗವದಾರಾಧನ ರೂಪವಾಗಿ ಅನುಷ್ಠಿಸಿದ ಕರ್ಮವಿಶೇಷಗ

ಳಿಂದಲೂ ರಜಸ್ತಮಸ್ಸುಗಳನ್ನು ಚೆನ್ನಾಗಿ ಅಣಗಿಸಿ ಬಿಟ್ಟು ಉತ್ತರೋತ್ತರವಾಗಿ ಅಭಿವೃದ್ಧವಾಗಿ ಬಂದಿರುವ ಸತ್ವಗುಣವುಳ್ಳ ದೇಹನಿಷ್ಠನಾದ ಚೇತನನು ಯಾವಾಗಲಾದರೆ ಸತ್ವಾದಿ ಗುಣಗಳಿಗಿಂತಲೂ ಭಿನ್ನವಾಗಿರುವ ಲೌಕಿಕ ವೈದಿಕ ಕ್ರಿಯೆಗಳಲ್ಲಿ ಕರ್ತನನ್ನು ನೋಡುವುದಿಲ್ಲವೊ, (ಸತ್ವಾದಿಗುಣಗಳೇ ಸ್ವಾನುಗುಣ ಪ್ರವೃತ್ತಿಗಳಲ್ಲಿ ಕರ್ತ್ರಗಳು ಎಂದರಿಯುತ್ತಾನೆಯೋ ಎಂದರ್ಥವು) ಈ ಪ್ರಕಾರವಾಗಿ ಕರ್ತ್ರ ಆದ ಸತ್ವಾದಿಗುಣಗಳಿಗಿಂತಲೂ ಭಿನ್ನನಾದ ಅಕರ್ತೃವಾಗಿರುವ ಆತ್ಮನನ್ನೂ ಯಥಾವತ್ತಾಗಿ ತಿಳಿಯುತ್ತಾನೆಯೋ, ಈ ಪ್ರಕಾರವಾಗಿ ತಿಳಿಯುವ ಚೇತನನು ನನ್ನ ಸ್ವಭಾವನನ್ನು ಹೊಂದುತ್ತಾನೆ. ಸ್ವತಃ ಪರಿಶುದ್ಧ ಸ್ವಭಾವನಾದ ಜೀವಾತ್ಮನಿಗೆ ಲೌಕಿಕ ವೈದಿಕ ಕ್ರಿಯೆಗಳಲ್ಲಿ ಕರ್ತೃತ್ವವು ಪೂರ್ವ ಪೂರ್ವ ಕರ್ಮಮೂಲವಾದ ಸತ್ವಾದಿ ಗುಣಸಂಗವನ್ನು ನಿಮಿತ್ತೀಕರಿಸಿಬಂದಿರುವುದು. ಆತ್ಮನು ಸ್ವತಃ ಅಕರ್ತ್ರ-ಅಪರಿಚ್ಛಿನ್ನ ಜ್ಞಾನೈಕಾಕಾರನು ಎಂಬದಾಗಿ ಆತ್ಮನನ್ನು ಯಾವಾಗಲಾದರೆ ನೋಡುತ್ತಾನೆಯೋ ಆವಾಗ ಭಗವದ್ಭಾವವನ್ನು ಹೊಂದುತ್ತಾನೆಂದು ತಾತ್ಪರ್ಯವು. ||೧೯||

(ತಾ|| ಚಂ|| ಮದ್ಭಾವಂಸೋಧಿಗಚ್ಛತಿ ಎಂಬ ಸ್ಥಲದಲ್ಲಿಜೀವನುಬ್ರಹ್ಮನೊಡನೆ ಐಕ್ಯವನ್ನು ಹೊಂದುತ್ತಾನೆಂದು ಬರೆದಿರುವ ವ್ಯಾಖ್ಯಾನವು „ ಮಮಸಾಧರ್ಮ್ಯಮಾಗತಾಃ ,, ಎಂಬ ಈ ಗೀತಾ ಪೂರ್ವವಾಕ್ಯಕ್ಕೆ ವಿರುದ್ಧವಾಗಿರುವುದಲ್ಲದೆ ಪರಮಸಾಮ್ಯವನ್ನು ಪ್ರತಿಪಾದಿಸುವ ಶ್ರುತಿಗೂ ವಿರುದ್ಧವಾಗಿರುವುದು. ಸಮಾನಧರ್ಮವತ್ತ್ವವಲ್ಲವೆ ಸಾಧರ್ಮ್ಯವು. ಇಲ್ಲಿ ಐಕ್ಯಕ್ಕೆ ಪ್ರತಿಪಾದಕ ಶಬ್ದವೇ ಇಲ್ಲವು. ಕಿಂಚ-„ಯಥೊದಕೆ ಶುದ್ಧೇ,, ಎಂಬ ಶ್ರುತ್ಯಂತರದಲ್ಲಿಯೂ ಒಂದು ನೀರೊಡನೆ ಮತ್ತೊಂದು ನೀರು ಸೇರಿದರೆ ಮೊದಲಿನ ನೀರಿನಂತೆಯೇ ಹೊಸದಾಗಿ ಸೇರಿರುವ ನೀರೂ ಆಗುತ್ತದೆಯೋ ಎಂಬ ಅರ್ಥವಿರುವುದರಿಂದ ಸಾಧರ್ಮ್ಯವೇ ವಿವಕ್ಷಿತವಾಯಿತು. ಇಲ್ಲಿ ಜಲದ್ವಯ ಸಂಸರ್ಗದಲ್ಲಿಯೂ ಸ್ವರೂಪೈಕ್ಯವಿಲ್ಲವಾದುದರಿಂದಲೂ ತಾದೃಕ್ಷಬ್ದ ಸ್ವಾರಸ್ಯದಿಂದಲೂ ಸಾಮ್ಯಪರತ್ವವೇ ವ್ಯಕ್ತವಾಗಿರುವುದು. ಜನಕ ವಸಿಷ್ಠ ಸಂವಾದದಲ್ಲಿಯೂ („ಪರೇಣಪರಧರ್ಮೀಚಭವತ್ಯೇ

ಷಸಮೇತ್ಯವೈ । ವಿಶುದ್ಧಧರ್ಮಾ ಶುದ್ಧೇನಬುದ್ಧೇನಚಸಬುದ್ಧಿಮಾನ್ ॥ ವಿಮುಕ್ತಧರ್ಮಾ ಮುಕ್ತೇನಸಮೇತ್ಯಹಿತದಾಭವೇತ್ । ವಿಯೋಗಧರ್ಮಿಣಾಚೈವವಿಯೋಗಾತ್ಮಾ ಭವತ್ಯಪಿ ॥ ವಿಮೋಕ್ಷಿಣಾವಿಮೋಕ್ಷೀಚಸಮೇತ್ಯೇಹತದಾಭವೇತ್। ಶುಚಿನಾಚಶುಚಿಶ್ಚೈವ ಭವತ್ಯಮಿತದೀಪ್ತಿಮಾನ್ ॥ ವಿಮಲಾತ್ಮಾ ಭವತ್ಯೇಷಸಮೇತ್ಯವಿಮಲಾತ್ಮನಾ ।. ಕೇವಲಾತ್ಮಾ ತಥಾಚೈವಕೇವಲೇನಸಮೇತ್ಯವೈ । ಸ್ವತಂತ್ರಶ್ಚಸ್ವತಂತ್ರೇಣಸತಂತ್ರತ್ವಮವಾಪ್ನುಯಾತ್ ,,) ಮುಕ್ತನಿಗೆ ಸಾಧರ್ಮ್ಯವೇ ಪ್ರತಿಪಾದಿಸಲ್ಪಟ್ಟಿರುವುದಲ್ಲದೆ ಶ್ರುತಿಸ್ಮೃತ್ಯಾದಿ ವಿರುದ್ಧವಾದ ಐಕ್ಯವನ್ನು ಹೇಳಲಿಲ್ಲವೆಂದರಿಯ ಬೇಕು. (೧೯)

(ಮ॥ ಭಾ॥) ಗುಣಗಳು ಪರಿಣಾಮಿಕರ್ತೃ ಯೆಂತಲೂ ಈಶ್ವರನು ಸ್ವತಂತ್ರ ಕರ್ತನಲ್ಲದೇ ಪರಿಣಾಮಿ ಕರ್ತೃ ಅಲ್ಲವೆಂತಲೂ ತಿಳಿಯುವಂತವನು ನನ್ನನ್ನು ಹೊಂದುವನು. ,, ಯದಾಪಶ್ಯಃಪಶ್ಯತೇರುಕ್ಮವರ್ಣಂಕರ್ತಾರಂ ,, ಎಂಬ ಶ್ರುತಿಯಲ್ಲಿ ಪರಮಾತ್ಮನನ್ನು ಕರ್ತೃಯೆಂಬದಾಗಿ ಹೇಳಿರುವುದು. ಆದುದರಿಂದ ಈಶ್ವರನನ್ನು ಕರ್ತೃ ಅಲ್ಲವೆಂದು ಹೇಳುವುದು ಅಸಾಧ್ಯವು. ಆದರೆ ಈಶ್ವರನು ಪರಿಣಾಮಿ ಕರ್ತೃ ಅಲ್ಲವು. ॥೧೯॥

(ಗೀ॥ ವಿ॥) ಪೂರ್ವೋಕ್ತ ಪ್ರಕಾರಗಳಿಂದ ಗುಣಗಳೇ ಸರ್ವಕರ್ತೃ ಯೆಂಬದಾಗಿ ತೋರುವುದರಿಂದ ಅದನ್ನುನಿರಾಕರಿಸಿ ಗುಣಗಳು ಪರಿಣಾಮಿಕರ್ತಾರ ಯೆಂತಲೂ ಸ್ವತಂತ್ರ ಕರ್ತಾರ ಈಶ್ವರನೆಂತಲೂ ಇದರಿಂದ ಹೇಳಲ್ಪಡುವುದು. ಯದಾ-ಯಾವಾಗ, ದ್ರಷ್ಟಾ-ನೋಡುವ ಪುರುಷನಾದ ಜೀವನು, ಗುಣೇಭ್ಯಃ-ಗುಣಗಳಿಗಿಂತಲೂ; ಅನ್ಯಂಕರ್ತಾರಂ-ಅನ್ಯನಾದ ಪರಮಾತ್ಮನನ್ನು ಕರ್ತನೆಂಬದಾಗಿ, ಅನುಪಶ್ಯತಿ- ನೋಡುತ್ತಾನೆಯೊ, ಯಃ-ಯಾವನು, ಗುಣೇಭ್ಯಶ್ಚ-ಗುಣಗಳಿಗಿಂತಲೂ, ಪರಂ-ಸ್ವತಂತ್ರನಾದ ಪರಮಾತ್ಮನನ್ನು, ವೇತ್ತಿ-ತಿಳಿಯುತ್ತಾನೆಯೊ, ಸಃ-ಅವನು, ಮದ್ಭಾವಂ-ನನ್ನಲ್ಲಿರುವಿಕೆಯನ್ನು, ಅಧಿಗಚ್ಛತಿ-ಹೊಂದುತ್ತಾನೆ. (ಅಥವಾ) ಯದಾ-ಯಾವಾಗ, ದ್ರಷ್ಟಾ-ಜೀವನು, ಗುಣೇಭ್ಯಃ-ಗುಣಗಳಿಗಿಂತಲೂ, ಅನ್ಯಂಕರ್ತಾರಂ-ಅನ್ಯನಾದ ಪರಿಣಾಮಿಕರ್ತನನ್ನು, ನಾನುಪಶ್ಯತಿ-ನೋಡುವುದಿಲ್ಲವೊ. ॥೧೯॥

ಮೂ॥ ಗುಣಾನೇತಾನತೀತ್ಯತ್ರೀನ್ದೇಹೀದೇಹಸಮು
ದ್ಭವಾನ್ । ಜನ್ಮಮೃತ್ಯುಜರಾದುಃಖೈರ್ವಿಮು
ಕ್ತೋಽಮೃತಮಶ್ನುತೇ॥ ॥೨೦॥

ಪ॥ಗುಣಾನ್-ಏತಾನ್-ಅತೀತ್ಯ-ತ್ರೀನ್-ದೇಹೀ-ದೇಹಸಮುದ್ಭವಾನ್। ಜನ್ಮಮೃತ್ಯುಜರಾದುಃಖೈಃ-ವಿಮುಕ್ತಃ-ಅಮೃತಂ-ಅಶ್ನುತೇ॥

(ಅ॥ರಾ॥ಭಾ॥) ಕರ್ತೃಗಳಾದ ಸತ್ವಾದಿ ಗುಣಗಳಿಗಿಂತಲೂ ಭಿನ್ನನಾದ ಅಕರ್ತಾ ಆದ ಆತ್ಮನನ್ನು ತಿಳಿದವನು ಭಗವದ್ಭಾವವನ್ನು ಹೊಂದುವನೆಂದು ಹಿಂದೇ ಹೇಳಿಆಯಿತು. ಆದರೆ ಅಂತಹ ಭಗವದ್ಭಾವವು ಎಂಥಾದ್ದೆಂದರೆ ಅದಕ್ಕುತ್ತರವನ್ನು ಹೇಳುತ್ತಾರೆ. ದೇಹೀ-ಈ ಚೇತನನು, ದೇಹಸಮುದ್ಭವಾನ್-ದೇಹಾಕಾರವಾಗಿ ಪರಿಣಮಿಸಿರುವ ಪ್ರಕೃತಿಯಲ್ಲುಂಟಾಗಿರುವ, ಏತಾನ್ತ್ರೀನ್ ಗುಣಾನ್-ಈ ಸತ್ವಾದಿ ಗುಣತ್ರಯಗಳನ್ನೂ, ಅತೀತ್ಯ-ಅತಿಕ್ರಮಿಸಿ, (ಅವುಗಳಿಗಿಂತಲೂ ಭಿನ್ನನಾದ ಜ್ಞಾನೈಕಾಕಾರನಾಗಿರುವ ಆತ್ಮನನ್ನು ನೋಡುವಂತವನು, ಜನ್ಮಮೃತ್ಯು ಜರಾದುಃಖೈರ್ವಿಮುಕ್ತಃ-ಹುಟ್ಟುವುದು ಸಾಯುವುದು ವಾರ್ಧಕ ದುಃಖ ಇವುಗಳಿಂದ ಬಿಡಲ್ಪಟ್ಟವನಾಗಿ, ಅಮೃತಮಶ್ನುತೇ-ನಿತ್ಯನಾದ ಆತ್ಮನನ್ನು ಅನುಭವಿಸುತ್ತಾನೆ. ಇದೇಭಗವದ್ಭಾವವೆಂದರ್ಥವು. ॥೨೦॥

(ಶಂ) ಅಮೃತಂ-ನನ್ನ ಸ್ವರೂಪನಾಗಿರುವಿಕೆಯನ್ನು.(ಗೀ॥ವಿ॥) ಪರಬ್ರಹ್ಮವನ್ನು. ॥೨೦॥

ಮೂ॥ ಅರ್ಜುನ ಉವಾಚ॥ ಕೈರ್ಲಿಂಗೈಸ್ತ್ರೀನ್ಗುಣಾ
ನೇತಾನತೀತೋಭವತಿಪ್ರಭೋ । ಕಿಮಾಚಾರಃ
ಕಥಂಚೈತಾಂಸ್ತ್ರೀನ್ಗುಣಾನತಿವರ್ತತೇ॥ ॥೨೧॥

ಪ॥ ಅರ್ಜುನಃ-ಉವಾಚ॥-ಕೈಃ-ಲಿಂಗೈಃ-ತ್ರೀನ್-ಗುಣಾನ್-ಏತಾನ್-ಅತೀತಃ-ಭವತಿ-ಪ್ರಭೋ। ಕಿಂ-ಆಚಾರಃ-ಕಥಂ-ಚ-ಏತಾನ್-ತ್ರೀನ್-ಗುಣಾನ್-ಅತಿವರ್ತತೇ।

(ಅ॥ರಾ॥ಭಾ॥) ಇದರಿಂದ ತ್ರಿಗುಣಾತ್ಮಕೆಯಾದ ಮಾಯೆಯನ್ನು ದಾಟದವನ ಸ್ವರೂಪಕ್ಕೆ ಗುರುತುಗಳಾದ ನಡತೆಗಳ ಪ್ರಕಾರವನ್ನೂ, ಈ ಮೂರು ಗುಣಗಳನ್ನು ಅತಿಕ್ರಮಿಸುವುದಕ್ಕೆ ತಕ್ಕ ಉಪಾಯವನ್ನೂ ಅರ್ಜುನನು ಪ್ರಶ್ನೆ ಮಾಡುತ್ತಾನೆ. ಪ್ರಭೋ? ಎ

ಲೈ ಜಗತ್ಪ್ರಭುವಾದ ಶ್ರೀಕೃಷ್ಣನೆ ! ಏತಾಂಸ್ತ್ರೀನ್ ಗುಣಾನತೀತಃ- ಈ ಸತ್ವಾದಿ ಮೂರು ಗುಣಗಳನ್ನತಿಕ್ರಮಿಸಿದವನು, ಕೈರ್ಲಿಂಗೈ ರುಪಲಕ್ಷಿತೋಭವತಿ-ಯಾವ ಲಕ್ಷಣಗಳೊಡನೆ ಕೂಡಿರುವನು ; ಕಿ ಮಾಚಾರಃ-ಯಾವ ನಡತೆಯೊಡನೆ ಕೂಡಿರುವನು ? ತ್ರಿಗುಣಾತ್ಮಿ ಕೆಯಾದ ಮಾಯೆಯನ್ನು ದಾಟದವನೆಂಬದಾಗಿ ತಿಳಿದುಕೊಳ್ಳಬೇಕಾ ದರೆ ಅವನ ಆಚಾರ ಲಕ್ಷಣಗಳು ಹ್ಯಾಗಿರುವುದೆಂದು ಭಾವನು. ಕ ಥಂಚ-ಯಾವ ಉಪಾಯದಿಂದ, ತ್ರೀನ್ ಗುಣಾನತಿವರ್ತ್ತತೆ- ಈ ಸತ್ವಾ ದಿಗುಣಗಳೆಂಬ ಮೂರನ್ನತಿಕ್ರಮಿಸುತ್ತಾನೆ. ॥೨೧॥

(ತಾ॥) ಎಂತಹ ಚಿಹ್ನಗಳೊಡನೆ ಕೂಡಿದವನಾಗಿದ್ದರೆ ಗುಣ ಗಳಿಗೂ ತತ್ಕಾರ್ಯಗಳಿಗೂ ಒಳಪಟ್ಟವನಿವನಲ್ಲವೆಂದು ಗ್ರಹಿಸಬಹು ದು ? ಅಂತವನು ಗುಣಗಳನ್ನತಿಕ್ರಮಿಸುವುಕ್ಕಾಗಿ ತತ್ಪೂರ್ವದಲ್ಲಿ ಯೂ, ಅತಿಕ್ರಮಿಸಿದಮೇಲೂ ಅಯತ್ನಸಿದ್ಧಗಳಾದ ಎಂತಹ ನಡತೆ ಗಳೊಡನೆ ಸೇರಿರುವನು ? ಇಂತಹ ಗುಣಸಂಬಂಧವನ್ನು ಹೋಗ ಲಾಡಿಸಿಕೊಳ್ಳುವುದಕ್ಕೆ ತಕ್ಕ ಸಾಧನವ್ಯಾವದು ? ॥೨೧॥

ಮೂ॥ ಶ್ರೀಭಗವಾನುವಾಚ ॥ ಪ್ರಕಾಶಂಚಪ್ರವೃತ್ತಿಂ
ಚಮೋಹಮೇವಚಪಾಂಡವ । ನದ್ವೇಷ್ಟಿಸಂ
ಪ್ರವೃತ್ತಾನಿನನಿವೃತ್ತಾನಿಕಾಂಕ್ಷತಿ. ॥೨೨॥

ಪ॥ ಶ್ರೀಭಗವಾನ್-ಉವಾಚ ॥ ಪ್ರಕಾಶಂ-ಚ-ಪ್ರವೃತ್ತಿಂ-ಚ-ಮೋಹಂ-ಏವ-ಚ-ಪಾಂಡವ। ನ-ದ್ವೇಷ್ಟಿ-ಸಂಪ್ರವೃತ್ತಾನಿ-ನ-ನಿವೃತ್ತಾನಿ-ಕಾಂಕ್ಷತಿ ॥

(ಅ॥ರಾ) ಶ್ರೀಭಗವಾನ್-ಉವಾಚ ॥ ಶ್ರೀಕೃಷ್ಣನು ಹೇಳಿದ ನು. ಪಾಂಡವ-ಪಾಂಡುರಾಜಕುಮಾರನಾದ ಎಲೈ ಅರ್ಜುನನೆ ! ಸಂ ಪ್ರವೃತ್ತಾನಿ-ಆತ್ಮಕ್ಕಿಂತಲೂ ವ್ಯತಿರಿಕ್ತವಾದ ಅನಿಷ್ಟವಸ್ತುಗಳಲ್ಲಿ ಪ್ರವೇಶಿಸಿರುವ, ಪ್ರಕಾಶಂಚಪ್ರವೃತ್ತಿಂಚಮೋಹಮೇವಚ- ಸತ್ವಗು ಣಕಾರ್ಯವಾದ ಜ್ಞಾನವನ್ನೂ (ಇಲ್ಲಿ ಯಃ ಎಂಬ ಪದವನ್ನುಮುಂದಿನ ಶ್ಲೋಕದಿಂದ ಆಕರ್ಷಿಸಿಕೊಳ್ಳಬೇಕು.) ಯಃ-ಯಾವನು, ನದ್ವೇ ಷ್ಟಿ-ದ್ವೇಷಿಸುವುದಿಲ್ಲವೊ, ನಿವೃತ್ತಾನಿ-ಆತ್ಮವ್ಯತಿರಿಕ್ತವಾದ ಇಷ್ಟವ ಸ್ತುಗಳ ದೆಶೆಯಿಂದ ಬಿಡಲ್ಪಟ್ಟು ಹಿಂದಕ್ಕೆ ತೆರಿಗಿರುವ, (ಇಲ್ಲಿತಾನ್ಯೇ ವ ಎಂಬದಾಗಿ ಸೇರಿಸಿಕೊಳ್ಳಬೇಕು.) ತಾನ್ಯೇವ-ಸತ್ವಾದಿಗುಣ

ಕಾರ್ಯಗಳಾದ ಪ್ರಕಾಶ ಪ್ರವೃತ್ತಿ ಮೋಹಗಳಾದ ಅವುಗಳನ್ನೇ, ನ ಕಾಂಕ್ಷತಿ-ಇಚ್ಛಿಸುವುದಿಲ್ಲವೊ. ॥೨೨॥

(ಶಂ॥ಭಾ॥) ಎಲೈ ಅರ್ಜುನನೆ ? ಗುಣಾತೀತನ ಲಕ್ಷಣವನ್ನು ಹೇಳುವೆನು ಕೇಳು. ನನಿಗೆ ತಾಮಸ ವಿಷಯಾನುಭವವುಂಟಾಗಿರುವುದು, ಅದದಿಂದ ಮೂಢನಾಗಿರುವೆನೆಂತಲೂ, ದುಃಖಸ್ವರೂಪವಾದ ರಾಜಸ ವಿಷಯಾನುಭವವು ನನಿಗುಂಟಾಗಿರುವುದು, ಅದರ ದೆಸೆಯಿಂದ ರಜೋಗುಣದಿಂದ ಪ್ರವರ್ತಿತನಾಗಿ ಸ್ವಭಾವದಿಂದ ಚಾಂಚಲ್ಯವನ್ನು ಹೊಂದಿರುವೆನು, ಸ್ವಭಾವಾತಿಕ್ರಮರೂಪವಾದ ಕಷ್ಟವು ನನಿಗೆ ಪ್ರಾಪ್ತವಾಯಿತೆಂತಲೂ, ಮತ್ತೂ ಸಾತ್ವಿಕಗುಣವು ನನಿಗೆ ವಿವೇಕವನ್ನುಂಟುಮಾಡುತಾ ಅಸ್ಥಿರಸುಖಗಳನ್ನು ನನಿಗೆ ಕೊಟ್ಟು ಕೊಂಡು ಬಂಧವನ್ನುಂಟುಮಾಡಿರುವುದೆಂತಲೂ, (ಈ ಪ್ರಕಾರವಾಗಿ ಸತ್ವರಜಸ್ತಮೊಗುಣ ತತ್ಕಾರ್ಯಗಳಲ್ಲಿ ದ್ವೇಷಬುದ್ಧಿಯುಳ್ಳವನು ಸಂಪೂರ್ಣಜ್ಞಾನವಿಲ್ಲದವನಾದುದರಿಂದ) ಆರೀತಿಯಾಗಿ ಗುಣಾತೀತನು ಯಾವುದರಲ್ಲಿಯೂ ದ್ವೇಷ ಬುದ್ಧಿಯುಂಟಾಗಿರಲಾರನು. ಸಾತ್ವಿಕ ರಾಜಸ ತಾಮಸಪುರುಷರು ತಮ್ಮಗಳಿಗೆ ಪ್ರಾಪ್ತಗಳಾದ ಸಾತ್ವಿಕಾದಿಕಾರ್ಯಗಳಲ್ಲಿ ಅಪೇಕ್ಷಾ ಯುಕ್ತರಾಗಿರುವಂತೆ ಗುಣಾತೀತನು ಅವುಗಳಲ್ಲಿ ಅಪೇಕ್ಷಾಯುಕ್ತನಾಗಿರಲಾರನು. ಈ ಚಿಹ್ನಗಳು ಅನ್ಯರಿಗೆ ತಿಳಿಯತಕ್ಕದ್ದಲ್ಲವು. ಸ್ವಾತ್ಮ ಪ್ರತ್ಯಕ್ಷವಾಗಿರುವುದರಿಂದ ಈ ಲಕ್ಷಣವು ಅವನೊಬ್ಬನಿಗೆನೆ ಗೋಚರವಾಗಿರುವುದು. ಲೋಕದಲ್ಲಿ ಒಬ್ಬನಿಗುಂಟಾಗಿರುವ ರಾಗದ್ವೇಷಗಳು ಅವನ ಮನಸ್ಸಿನಲ್ಲಿಯೇ ಇರುವುದರಿಂದ ಇತರರಿಗೆ ಕಾಣಲ್ಪಡಲಾರವಷ್ಟೆ, ಆದುದರಿಂದ ಇಂತಹ ಲಕ್ಷಣಮುಳ್ಳವನೇ ಗುಣಾತೀತನು. ॥೨೨॥

ಮೂ॥ ಉದಾಸೀನವದಾಸೀನೋಗುಣೈರ್ಯೋನವಿಚಾ
ಲ್ಯತೇ । ಗುಣಾವರ್ತಂತಇತ್ಯೇವಯೋವತಿಷ್ಠ
ತಿನೇಂಗತೇ॥ ॥೧೩॥

ಪ॥ ಉದಾಸೀನವತ್-ಆಸೀನಃ-ಗುಣೈಃ-ಯಃ-ನ-ವಿಚಾಲ್ಯತೇ । ಗುಣಾಃ-ವರ್ತಂತೆ-ಇತಿ-ಏವ-ಯಃ-ಅವತಿಷ್ಠತಿ-ನ-ಇಂಗತೆ ॥

(ಅ॥ರಾ) ಯಃ-ಯಾವನು, ಉದಾಸೀನವದಾಸೀನಃ-ಗುಣಕ

ಳಿಗಿಂತಲೂ ಭಿನ್ನನಾದ ಆತ್ಮನನ್ನು ನೋಡುವುದರಿಂದುಂಟಾದ ತೃಪ್ತಿಯಿಂದ ಇತರ ವಿಷಯದಲ್ಲಿ ಸಂಬಂಧಿಸಲ್ಪಡದವನಂತೆ ಇರುವಂತವನಾಗಿ, ಗುಣೈಃ-ಸತ್ವಾದಿಗುಣಗಳಿಂದ, ನವಿಚಾಲ್ಯತೆ-ದ್ವೇಷೇಚ್ಛಾದ್ವಾರವಾಗಿ ಚಲಿಸಲ್ಪಡುವುದಿಲ್ಲವೊ, ಯಃ-ಯಾವನು, ಗುಣಾಃ-ಸತ್ವಾದಿಗುಣಗಳು, ವರ್ತಂತಇತ್ಯೇವ-ಸ್ವಕಾರ್ಯಗಳಾದ ಪ್ರಕಾಶಾದಿಗಳಲ್ಲಿ ಇರುತ್ತವೆಂಬದಾಗಿಯೆ ಅನುಸಂಧಿಸಿಕೊಂಡು, ಅವತಿಷ್ಠತಿ, ಸುಮ್ಮನಿರುವನೊ, ನೇಂಗತೆ-ಸತ್ವಾದಿಗುಣಕಾರ್ಯಾನುಗುಣವಾಗಿ ಚಲಿಸುವುದಿಲ್ಲವೊ. ॥೨೩॥

(ಶಂ॥ಭಾ) ಈಗ ಗುಣಾತೀತನು ಯಾವ ನಡತೆಯುಳ್ಳವನೆಂಬದಾಗಿ ಮಾಡಲ್ಪಟ್ಟ ಅರ್ಜುನನ ಪ್ರಶ್ನೆಗೆ ಉತ್ತರವನ್ನುಹೇಳುತ್ತಾನೆ. ಲೋಕದಲ್ಲಿ ಉದಾಸೀನನಾದವನು ಯಾವ ಪಕ್ಷದಲ್ಲಿಯೂ ಹ್ಯಾಗೆ ಇರಲಾರನೊ, ಆ ಪ್ರಕಾರವೆ ಗುಣಾತೀತತ್ವೋಪಾಯ ಮಾರ್ಗದಲ್ಲಿರುವ ಪುರುಷನು ಗುಣಗಳಿಂದ ವಿವೇಕದರ್ಶನಾವಸ್ಥಾದಶೆಯಿಂದಚಲಿಸಲ್ಪಡದೆ ಕಾರ್ಯಕಾರಣ ವಿಷಯಾಕಾರವನ್ನು ಹೊಂದಿ ಗುಣಗಳೇಪ್ರವರ್ತಿಸುವುವೆಂದು ತಿಳಿದು ಕರ್ತೃತ್ವಾಭಿಮಾನವನ್ನು ಬಿಟ್ಟು ಸ್ವಸ್ವರೂಪಾನುಭವದೃಶೆಯಿಂದ ಚಲಿಸಲಾರನು. ಯೊನುತಿಷ್ಠತಿ ಎಂಬದಾಗಿಯೂ ಒಂದು ಪಾಠಾಂತರವು. ಆವಾಗ ಕರಣಾಕಾರದಿಂದ ಪರಿಣತಗಳಾದ ಗುಣಗಳೇ ವಿಷಯಾಕಾರತ್ವೇನ ಪರಿಣತಗಳಾದ ತಮ್ಮಗಳಲ್ಲಿ ಪ್ರವರ್ತಿಸುವುವಲ್ಲದೆ ನನಿಗವುಗಳಲ್ಲಿ ಲೇಪವಿಲ್ಲವೆಂಬದಾಗಿ ತಿಳಿದುಕೊಂಡು ಶರೀರಧಾರಣಮಾತ್ರೋಪ ಯೋಗಕ್ಕೋಸ್ಕರ ಅಭಿಮಾನಶೂನ್ಯನಾಗಿ ಕರ್ಮಾಚರಣವನ್ನುಮಾಡುತಲಿರುವನು. ಇಲ್ಲಿ ಕರ್ಮಾನುಷ್ಠಾನವು ಬಾಧಿತಾನುವೃತ್ತಿಮಾತ್ರವಾಗಿರುವುದು ॥೨೩॥

(ಗೀ॥ ವಿ॥) ಉದಾಸೀನವದಾಸೀನಃ- ವಿಷ್ಣುಸಂಬಂಧವಾದ ಕರ್ಮಗಳನ್ನಲ್ಲದೆ ತದಿತರಕರ್ಮಗಳಲ್ಲಿ ಉದಾಸೀನನಾದವನು. ಗುಣೈರ್ನವಿಚಾಲ್ಯತೆ-ಸತ್ವಾದಿ ಗುಣಗಳಿಂದುಂಟಾದ ವಿಕಾರಗಳನ್ನುಹೊಂದುವುದಿಲ್ಲವು. ಗುಣಾಃ-ಸತ್ವಾದಿ ಗುಣಗಳು ಸ್ವಾತಂತ್ರ್ಯದಿಂದಲ್ಲವೆ ಪರಮೇಶ್ವರೇಚ್ಛೆಯಿಂದಲೆ, ನೇಂಗತೆ-ವಿಷ್ಣುಸಂಬಂಧವಾದ ಕಾರ್ಯಗಳನ್ನು ಮಾಡುವುದರಲ್ಲಿ ಚಲಿಸುವುದಿಲ್ಲವೊ. ॥೨೩॥

ಮೂ॥ ಸಮದುಃಖಸುಖಸ್ಸ್ವಸ್ಥಸ್ಸಮಲೋಷ್ಟಾಶ್ಮಕಾಂ
ಚನಃ । ತುಲ್ಯಪ್ರಿಯಾಪ್ರಿಯೊಧೀರಸ್ತುಲ್ಯನಿಂ
ದಾತ್ಮಸಂಸ್ತುತಿಃ॥ ॥೨೪॥ ಮಾನಾವಮಾನಯೊ
ಸ್ತುಲ್ಯಸ್ತುಲ್ಯೋಮಿತ್ರಾರಿಪಕ್ಷಯೋಃ।ಸರ್ವಾರಂ
ಭಪರಿತ್ಯಾಗೀಗುಣಾತೀತಸ್ಸಉಚ್ಯತೇ॥ ॥೨೫॥

ಪ॥ ಸಮದುಃಖಸುಖಃ-ಸ್ವಸ್ಥಃ-ಸಮಲೋಷ್ಟಾಶ್ಮಕಾಂಚನಃ । ತುಲ್ಯಪ್ರಿಯಾಪ್ರಿಯಃ-ಧೀರಃ-ತುಲ್ಯನಿಂದಾತ್ಮಸಂಸ್ತುತಿಃ । ಮಾನಾವಮಾನಯೋಃ-ತುಲ್ಯಃ-ತುಲ್ಯಃ-ಮಿತ್ರಾರಿಪಕ್ಷಯೋಃ-ಸರ್ವಾರಂಭಪರಿತ್ಯಾಗೀ-ಗುಣಾತೀತಃ-ಸಃ-ಉಚ್ಯತೇ॥

(ಅ॥ ರಾ॥ ಭಾ॥) ಯಃ-ಯಾವನು, ಸಮದುಃಖಸುಖಃ-ಸುಖದುಃಖಗಳು ಪ್ರಾಪ್ತಗಳಾದರೂ ಸಮಚಿತ್ತನಾಗಿರುವನೊ, ಸ್ವಸ್ಥಃ-ಆತ್ಮನಲ್ಲಿಯೇ ಇರುವಂತವನೋ, (ಆತ್ಮೈಕ ಪ್ರಿಯನಾಗಿರುವುದರಿಂದ ಪುತ್ರಜನ್ಮ ಪುತ್ರಮರಣಾದಿ ಸುಖ ದುಃಖಗಳಲ್ಲಿ ಸಮಚಿತ್ತನಾಗಿರುವನೆಂದರ್ಥವು) ಸಮಲೋಷ್ಟಾಶ್ಮಕಾಂಚನಃ-ತೆಂಗಿನಕಾಯಿ ಚಿಪ್ಪೆ ಕಲ್ಲು, ಪಶು ಚಿನ್ನ ಇವುಗಳಲ್ಲಿ ಪೂರ್ವೋಕ್ತ ಕಾರಣದಿಂದಲೇ ಸಮಸ್ತದಲ್ಲಿಯೂ ಏಕರೂಪದಿಂದ ಉದಾಸೀನನಾಗಿರುವನೋ, ತುಲ್ಯಪ್ರಿಯಾಪ್ರಿಯಃ-ಆ ಕಾರಣದಿಂದಲೆ ಇಷ್ಟಾನಿಷ್ಟಗಳಲ್ಲಿ ಏಕರೂಪನಾಗಿರುವನೂ, ಧೀರಃ-ಪ್ರಕೃತಿಯನ್ನೂ ಆತ್ಮವನ್ನೂ ಚನ್ನಾಗಿ ವಿವೇಕಿಸುವುದಕ್ಕೆ ಸಮರ್ಥನಾಗಿರುವನೊ, ತುಲ್ಯನಿಂದಾತ್ಮಸಂಸ್ತುತಿಃ-ತನ್ನ ಸ್ತೋತ್ರದಲ್ಲಿಯೂ ನಿಂದೆಯಲ್ಲಿಯೂ ಏಕರೂಪನಾಗಿರುವನೊ, ಆತ್ಮನಲ್ಲಿ ಮನುಷ್ಯತ್ವಾಭಿಮಾನ ಮೂಲಕಗಳಾದ ಗುಣದೋಷಗಳನ್ನು ನಿಮಿತ್ತೀಕರಿಸಿ ಮಾಡಲ್ಪಡುವ ಸ್ತುತಿ ನಿಂದೆಗಳಲ್ಲಿ ಇವನು ಮನುಷ್ಯತ್ವಾದ್ಯಭಿಮಾನವನ್ನು ಬಿಟ್ಟವನಾಗಿರುವುದರಿಂದ ತನಗೆ ಸಂಬಂಧವಿಲ್ಲದಿರುವಿಕೆಯನ್ನನು ಸಂಧಾನಮಾಡಿ ಸಮಚಿತ್ತನಾಗಿರುವನೋ ಎಂದರ್ಥವು) ಮಿತ್ರಾರಿಪಕ್ಷಯೊಸ್ತುಲ್ಯಃ-ಅಂತಹ ಮಾನಾವಮಾನಗಳನ್ನು ಮಾಡುತಲಿರುವ ಮಿತ್ರವರ್ಗದಲ್ಲಿಯೂ ಶತ್ರುವರ್ಗದಲ್ಲಿಯೂ ಹಿಂದೆ ಹೇಳಿರುವ ಕಾರಣದಿಂದಲೇ ಸಮಚಿತ್ತನಾಗಿರುವನೊ, ಸರ್ವಾರಂಭ ಪರಿತ್ಯಾಗೀ-ದೇಹಿತ್ವ ಪ್ರಯುಕ್ತಗಳಾದ ಸರ್ವ

ಕಾರ್ಯಾರಂಭಗಳನ್ನು ಯಾವನಾದರೆ ಬಿಟ್ಟಿರುತ್ತಾನೆಯೊ, ಸಃ-ಅವನು, ಗುಣಾತೀತಃಉಚ್ಯತೆ-ಸತ್ವಾದಿ ಗುಣಗಳನ್ನತಿಕ್ರಮಿಸಿದವನೆಂಬದಾಗಿ ಹೇಳಲ್ಪಡುತ್ತಾನೆ. ॥೨೪॥ ೨೫॥)

(ಗೀ॥ ವಿ॥) ಸಮದುಃಖಸುಖಃ-ದುಃಖಕ್ಕೆ ಸಮವಾದ ವಿಷಯ ಸುಖವನ್ನು ಹೊಂದಿರುವಂತವನಾಗಿಯೂ, ಎಂದರೆ ದುಃಖದಂತೆ ಸುಖದಲ್ಲಿಯೂ ಅಪೇಕ್ಷೆಯಂ ಬಿಟ್ಟವನು. ಸ್ವಸ್ಥಃ-ವಿಕಾರಶೂನ್ಯನಾಗಿಯೂ, (ಶಂ) ಸ್ವಾತ್ಮನಿಷ್ಠನಾಗಿಯೂ, ಸಮಲೋಷ್ಟಾಶ್ಮಕಾಂಚನಃ-(ಗೀ॥ ವಿ॥) ಸ್ವರ್ಣವನ್ನು ಮೃತ್ಪಾಷಾಣಾದಿಗಳೊಡನೆ ಸಮವಾಗಿ ನೋಡುವಂತವನಾಗಿಯೂ, ತುಲ್ಯನಿಂದಾತ್ಮಸಂಸ್ತುತಿಃ-ಆತ್ಮಸ್ತುತಿಯನ್ನು ನಿಂದೆಗೆ ಸಮವಾಗಿ ನೆನೆಯುವಂತವನಾಗಿಯೂ, ಮಾನಾಪಮಾನಯೊಸ್ತುಲ್ಯಃ-ತನ್ನ ಅವಮಾನ ಬಹುಮಾನಗೆಳಲ್ಲ ಸಮನಾದವನು. (ಅಥವಾ) ವಿಷ್ಣು ಭಕ್ತಿಮಾಡುವುದರಿಂದ ಅವಮಾನವಾದರೂ ವಿಷ್ಣುಭಕ್ತಿಯಂ ಬಿಡುವುದರಿಂದ ಬಹುಮಾನವಾದರೂ ವಿಷ್ಣುಭಕ್ತಿಯನ್ನು ಬಿಡದೆ ಇರುವಂತವನಾಗಿಯೂ, ಸರ್ವಾರಂಭಪರಿತ್ಯಾಗೀ(ಶಂ)ದೃಷ್ಟಾದೃಷ್ಟ ವಿಷಯಗಳಿಗಾಗಿ ಕರ್ಮಗಳನ್ನು ಮಾಡತಕ್ಕವನಲ್ಲನು.ಎಂದರೆ ಆಹಾರಾದಿಗಳಿಗಪೇಕ್ಷಿತ ವಾದವುಗಳನ್ನಲ್ಲದೆ ತದಿತರಗಳನ್ನಪೇಕ್ಷಿಸಿ ಪ್ರಯತ್ನಮಾಡದವನು. (ಗೀ॥ವಿ)) ವೈಷ್ಣವ ಕರ್ಮಗಳನ್ನಲ್ಲದ ಇತರ ಕರ್ಮಗಳನ್ನು ಮಾಡದವನು. ॥೨೪॥೨೫॥

ಮೂ॥ ಮಾಂಚಯೋಽವ್ಯಭಿಚಾರೇಣಭಕ್ತಿಯೋಗೇನಸೇ
ವತೇ । ಸಗುಣಾನ್‌ಸಮತೀತ್ಯೈತಾನ್‌ಬ್ರಹ್ಮ
ಭೂಯಾಯಕಲ್ಪತೇ॥ ॥೨೬॥

ಪ॥ ಮಾಂ-ಚ-ಯಃ-ಅವ್ಯಭಿಚಾರೇಣ-ಭಕ್ತಿಯೋಗೇನ-ಸೇವತೆ । ಸಃ-ಗುಣಾನ್ ಸಮತೀತ್ಯ-ಏತಾನ್-ಬ್ರಹ್ಮಭೂಯಾಯ-ಕಲ್ಪತೆ॥

(ಅ॥ ರಾ॥ ಭಾ॥) ಇದು ಮೊದಲು ಇಂತಹ ಸತ್ವಾದಿಗುಣಗಳನ್ನು ಅತಿಕ್ರಮಿಸುವುದಕ್ಕೆ ಪ್ರಧಾನಕಾರಣವನ್ನು ಹೇಳುತ್ತಾರೆ. ಯಃ-ಯಾವನು, ಮಾಂ-(ಸತ್ಯಸಂಕಲ್ಪನಾಗಿಯೂ ಪರಮಕಾರುಣಿಕನಾಗಿಯೂ ಆಶ್ರಿತವಾತ್ಸಲ್ಯ ಜಲಧಿಯಾಗಿಯೂ ಇರುವ) ನನ್ನನ್ನು,ಅವ್ಯಭಿಚಾರೇಣ-ದೇವತಾಂತರ ಪ್ರಯೋಜನಾಂತರ ಸಂಬಂಧ

ಶೂನ್ಯವಾಗಿರುವ, ಭಕ್ತಿಯೊಗೇನ-ಭಕ್ತಿಯೋಗದಿಂದ,ಸೇವತೇಚ-ಉಪಾಸನ ಮಾಡುತ್ತಾನೆಯೊ, ಸಃ-ಅವನು,ಏತಾನ್ಗುಣಾನ್ಸಮತೀತ್ಯ-ಈ ಸತ್ವಾದಿ ಮೂರುಗುಣಗಳನ್ನೂ ಅತಿಕ್ರಮಿಸಿ,ಬ್ರಹ್ಮಭೂಯಾಯ-ಬ್ರಹ್ಮಭಾವಕ್ಕೋಸ್ಕರ, ಕಲ್ಪತೆ-ಯೋಗ್ಯನಾಗುತ್ತಾನೆ. ಯಥಾವಸ್ಥಿತವಾಗಿಯೂ ಅಮೃತವಾಗಿಯೂ ಇರುವ ಅವ್ಯಯವಾದ ಆತ್ಮಸ್ವರೂಪವನ್ನು ಹೊಂದುತ್ತಾನೆಂದರ್ಥವು. ಕೇವಲಪ್ರಕೃತ್ಯಾತ್ಮವಿವೇಕಾನುಸಂಧಾನಮಾತ್ರದಿಂದ ಗುಣತ್ರಯಾತಿಕ್ರಮಣವು ಸಂದರ್ಭಿಸಲಾರದು. ಅದನ್ನು ಅನಾದಿಕಾಲದಿಂದ ಪ್ರವರ್ತಿಸಿರುವ ವಿಪರೀತವಾಸನೆಯು ಬಂಧಿಸಿ ಬಿಡುವುದು. ಆದುದರಿಂದ ನನ್ನಲ್ಲಿ ಏಕಾಂತಿಕವಾದ ಭಕ್ತಿಯುಇದ್ದರೇನೆ ಗುಣತ್ರಯಾತೀತನಾಗಿ ಯಥಾವಸ್ಥಿತವಾದ ಆತ್ಮಸ್ವರೂಪವನ್ನು ಹೊಂದಬಹುದೆಂದಭಿಪ್ರಾಯವು॥೨೬॥

(ಶಂ॥ಭಾ) ಈಗ ಮೂರು ಗುಣಗಳನ್ನು ಹೇಗೆ ಅತಿಕ್ರಮಿಸುತ್ತಾನೆಂಬ ಪ್ರಶ್ನೆಗೆ ಪ್ರತ್ಯುತ್ತರವು ಹೇಳಲ್ಪಡುವುದು. ಯಾವಯತಿಯು ಅಥವಾ ಕರ್ಮಿಯಾದವನು ಸಕಲಭೂತಗಳ ಹೃದಯವಾಸಿಯಾದ ಈಶ್ವರನೂ ನಾರಾಯಣನೂ ಆದ ನನ್ನನ್ನು ಯಾವ ಕಾಲದಲ್ಲಿಯೂ ಅನ್ಯವಿಷಯಗಳಲ್ಲಿ ಪ್ರವೃತ್ತಿಯಿಲ್ಲದೆ ಭಜನಮಾಡುವುದೆಂಬ ಯೋಗದಿಂದ (ಎಂದರೆ ವಿವೇಕವಿಜ್ಞಾನವೆಂಬ ಯೋಗದಿಂದ) ಉಪಾಸನ ಮಾಡುತ್ತಾನೆಯೊ ಅಂತವನು ಭಗವದನುಗ್ರಹಕ್ಕೆ ಪಾತ್ರನಾಗಿ ಗುಣಗಳನ್ನತಿಕ್ರಮಿಸಿ ಬ್ರಹ್ಮ ಭವನವೆಂಬ ಮೋಕ್ಷವನ್ನು ಹೊಂದುವುದಕ್ಕೆ ಅರ್ಹನಾಗುತ್ತಾನೆ. ॥೨೬॥

(ಮ॥ಭಾ॥ಗೀ॥ವಿ) ಬ್ರಹ್ಮಭೂಯಾಯಕಲ್ಪತೆ-ಚಿತ್ಪ್ರಕೃತಿಯಂತೆ ಯೋಗ್ಯನಾಗುವನು. ಎಂದರೆ ಚಿತ್ಪ್ರಕೃತಿಯು ಹೇಗಾದರೆ ಶ್ರೀಮಹಾ ವಿಷ್ಣುವಿಗೆ ಪ್ರಿಯಳೊ ಆ ಪ್ರಕಾರವಾಗಿ ಈ ಭಕ್ತನು ಪ್ರಿಯನಾಗುತ್ತಾನೆ. (ಅಥವಾ) ಚಿತ್ಪ್ರಕೃತಿಯನ್ನು ಹೊಂದುತ್ತಾನೆ. ॥೨೬॥

ಮೂ॥ ಬ್ರಹ್ಮಣೋಹಿಪ್ರತಿಷ್ಠಾಹಮಮೃತಸ್ಯಾವ್ಯಯಸ್ಯಚ । ಶಾಶ್ವತಸ್ಯಚಧರ್ಮಸ್ಯಸುಖಸ್ಯೈಕಾಂತಿಕಸ್ಯಚ॥ ॥೨೭॥

ಪ॥ ಬ್ರಹ್ಮಣಃ-ಹಿ-ಪ್ರತಿಷ್ಠಾ-ಅಹಂ-ಅಮೃತಸ್ಯ-ಅವ್ಯಯಸ್ಯ-ಚ! ಶಾಶ್ವತಸ್ಯ-ಚ-ಧರ್ಮಸ್ಯ-ಸುಖಸ್ಯ-ಏಕಾಂತಿಕಸ್ಯ-ಚ॥

(ಅ॥ರಾ॥ಭಾ) ಹಿ-ಯಾವಕಾರಣದಿಂದ, ಅಹಂ-ನಾನು, (ಎಂದರೆ ಅವ್ಯಭಿಚರಿತವಾದ ಭಕ್ತಿಯೋಗದಿಂದ ಉಪಾಸನೆ ಮಾಡಲ್ಪಡುವನಾನು) ಅಮೃತಸ್ಯ ಅವ್ಯಯಸ್ಯ ಬ್ರಹ್ಮಣಃಪ್ರತಿಷ್ಠಾ-ಸ್ವತೋಮರಣಾದಿ ಶೂನ್ಯನಾಗಿಯೂ ಅಪರಿಚ್ಛಿನ್ನಜ್ಞಾನಾ ಕಾರನಾಗಿಯೂ ಇರುವ ಜೀವಾತ್ಮನ ಸ್ವರೂಪಲಾಭಕ್ಕೆ ಮೂಲಕಾರಣನೂ, (ಶಾಶ್ವತಸ್ಯಧರ್ಮಸ್ಯಚಪ್ರತಿಷ್ಠಾ ಎಂಬದಾಗಿ ಅನುಷಂಗವು) ಶಾಶ್ವತಸ್ಯಧರ್ಮಸ್ಯಚಪ್ರತಿಷ್ಠಾ-ಅಪ್ರಕಾರವೆ ಅತಿಶಯಿತವಾಗಿರುವ ನಿತ್ಯವಾದ ಐಶ್ವರ್ಯಕ್ಕೂ ಮೂಲಕಾರಣನೊ, ಏಕಾಂತಿಕಸ್ಯಸುಖಸ್ಯಚ-(ಇಲ್ಲಿಯೂ ಪ್ರತಿಷ್ಠಾ ಎಂಬ ಪದವನ್ನು ಸೇರಿಸಿಕೊಳ್ಳಬೇಕು.) ಜ್ಞಾನಿಯಾದವನಿಗೆ ಪ್ರಾಪ್ಯವಾದ ಮೋಕ್ಷಸುಖಕ್ಕೂ ಮೂಲಕಾರಣನೊ, ಆದುದರಿಂದ ನನ್ನನ್ನು ಅವ್ಯಭಿಚಾರಿಯಾದ ಭಕ್ತಿಯೋಗದಿಂದಯಾವನಾದರೆ ಉಪಾಸನೆಮಾಡುತ್ತಾನೆಯೊ ಅವನೇಗುಣತ್ರಯಾತೀತನಾಗಿ ಶುದ್ಧವಾದ ಆತ್ಮಸ್ವರೂಪವನ್ನು ಹೊಂದುವನೆಂಬದಾಗಿ ಹಿಂದಿನ ಶ್ಲೋಕದೊಡನೆ ಅನ್ವಯವು. ಇಲ್ಲಿ ಶಾಶ್ವತಧರ್ಮ ಶಬ್ದವು ಸಾಧನವಾಚಿಯಾಗಿದ್ದರೂ ಕೆಳಗೆಯೂ ಮುಂದೆಯೂ ಪ್ರಾಪ್ಯಗಳಾದ ಜೀವಾತ್ಮಸ್ವರೂಪವನ್ನೂ ಮೋಕ್ಷಸುಖವನ್ನೂ ಹೇಳುವುದರಿಂದ ಈ ಶಬ್ದವುಅತಿಶಯಿತ ನಿತ್ಯೈಶ್ವರ್ಯವೆಂಬ ಫಲವಾಚಿಯೆಂದರಿಯಬೇಕು. ಹಿಂದೆ "ದೈವೀಹ್ಯೇಷಾಗುಣಮಯೀಮಮಮಾಯಾದುರತ್ಯಯಾ। ಮಾಮೇವಯೆಪ್ರಪದ್ಯಂತೆಮಾಯಾಮೇತಾಂತರಂತಿತೆ" (೭) ಎಂಬದಾಗಿ ತ್ರಿಗುಣಾತ್ಮಿಕೆಯಾದಮಾಯೆಯನ್ನು ದಾಟುವುದು ಭಗವತ್ಪ್ರಪತ್ತಿಯನ್ನಂಗಮಾಗಿಯುಳ್ಳ ಭಕ್ತಿಯೋಗದಿಂದಲೆ ಎಂತಲೂ ಆ ತ್ರಿಗುಣಾತಿ ಕ್ರಮದೊಡನೆ ಸಂಬಂಧಿಸಿರುವ ಪ್ರತ್ಯಗಾತ್ಮಪ್ರಾಪ್ತಿಯೇನು, ಅತಿಶಯಿತ ನಿತ್ಯೈಶ್ವರ್ಯ ಪ್ರಾಪ್ತಿಯೇನು, ಇವುಗಳೂ ಭಗವತ್ಪ್ರಪತ್ತ್ಯಂಗಕ ಭಕ್ತಿಸಾಧ್ಯವೆಂಬದಾಗಿ ಪ್ರತಿಪಾದಿಸಿರುವುದರಿಂದ ಗುಣತ್ರಯಾತಿ ಕ್ರಮವೂ ತತ್ಪೂರ್ವಕವಾದ ಆತ್ಮ ಯಾಥಾತ್ಮ್ಯಪ್ರಾಪ್ತಿಯೂ ಭಗವತ್ಪ್ರಪತ್ತ್ಯಂಗಕವಾದ ಭಕ್ತಿಯೊಂದರಿಂ

ದಲೇ ಸಾಧ್ಯವಾಗುವುದೆಂಬದಾಗಿ ಇಲ್ಲಿಹೇಳಿರುವುದೆಂದು ಇಲ್ಲಿನ ನಿಷ್ಕರ್ಷವನ್ನರಿಯಬೇಕು. ‖೨೭‖

(ಶಂ‖ಭಾ) ಬ್ರಹ್ಮೋಪಾಸಕನಾದ ಜ್ಞಾನಿಯು ಬ್ರಹ್ಮಸ್ವರೂಪಿಯಾಗಿ ಹೇಗಾಗುವನು ? ಎಂಬೀಅಂಶಕ್ಕೆ ಪ್ರತ್ಯುತ್ತರವು ಹೇಳಲ್ಪಡುವುದು. ಯಾವ ಕಾಲದಲ್ಲಿಯೂ ನಾಶವಿಲ್ಲದವನಾಗಿಯೂ ವೃದ್ಧಿಕ್ಷಯಾದಿ ವಿಕಾರಶೂನ್ಯನಾಗಿಯೂ ಕಾಲತ್ರಯಾ ಬಾಧ್ಯನಾಗಿಯೂ ಜ್ಞಾನಯೋಗವೆಂಬ ಧರ್ಮಾಚರಣದಿಂದ ಹೊಂದತಕ್ಕವನಾಗಿಯೂ ಪರಮಾನಂದರೂಪನಾಗಿಯೂ ಅರ್ಥೇಂದ್ರಿಯ ಸಂಬಂಧದ್ಧಶೆಯಿಂದುಂಟಾಗುವ ಸುಖಗಳ ಸಂಪರ್ಕವಿಲ್ಲದವನಾಗಿಯೂ ಇರುವ ಪರಮಾತ್ಮನೇ ನಾನು. ಅಮೃತಾದಿ ಸ್ವಭಾವನಾದ ಪರಮಾತ್ಮನ ಘನೀಭೂತ ಸ್ವರೂಪನಾಗಿ ಯಾವ ಕಾರಣದಿಂದ ಪ್ರತ್ಯಗಾತ್ಮನಿರುವನೊ ಆ ಕಾರಣದಿಂದಲೆ ಪ್ರತ್ಯಗಾತ್ಮನು ಪರಮಾತ್ಮತ್ವೇನ ಸಮ್ಯಗ್ಜ್ಞಾನದಿಂದ ನಿಶ್ಚಯಿಸಲ್ಪಡುತ್ತಾನೆ. ಈ ಅರ್ಥವೆ ಹಿಂದಿನ ಶ್ಲೋಕದಲ್ಲ " ಬ್ರಂಹಭೂಯಾಯಕಲ್ಪತೆ ,, ಎಂಬೀಪಾದದಿಂದ ಹೇಳಲ್ಪಟ್ಟಿತು. ಯಾವ ಈಶ್ವರಶಕ್ತಿಯಿಂದ ಬ್ರಹ್ಮವು ಭಕ್ತಾನುಗ್ರಹಾರ್ಥವಾಗಿ ಪ್ರವರ್ತಿಸುತ್ತದೆಯೊ ಅಂತಹ ಶಕ್ತಿರೂಪನಾದ ಪರಮಾತ್ಮನು ನಾನೆ. ಶಕ್ತಿಯೂ ಶಕ್ತಿವಂತನೂ ಬೇರೆಅಲ್ಲವಾದುದರಿಂದ ಈ ಪ್ರಕಾರವಾಗಿ ಹೇಳಬಹುದು. (ಅಥವಾ) ಬ್ರಹ್ಮಶಬ್ದವಾಚ್ಯವಾಗಿರುವುದರಿಂದ ಸವಿಕಲ್ಪಕ ಬ್ರಹ್ಮವು ಬ್ರಹ್ಮಶಬ್ದದಿಂದ ಹೇಳಲ್ಪಡುವುದು. ಅಂತಹ ಮರಣ ಧರ್ಮವಿಲ್ಲದವನಾಗಿಯೂ ವ್ಯಯರಹಿತನಾಗಿಯೂಇರುವ ಬ್ರಹ್ಮಕ್ಕೆ ನಿರ್ವಿಕಲ್ಪಕ ಬ್ರಹ್ಮನಾದ ನಾನೊಬ್ಬನೆ ಆಶ್ರಯವಲ್ಲದೆ ಬೇರೆಯಾವನೂ ಅಲ್ಲನು. ಮತ್ತು ನಿತ್ಯವಾಗಿರುವ ಜ್ಞಾನನಿಷ್ಠಾ ಲಕ್ಷಣವಾದ ಧರ್ಮಕ್ಕೂ ಪರಮಾನಂದರೂಪವಾದ ಜ್ಞಾನನಿಷ್ಠಾಲಕ್ಷಣವಾದ ಧರ್ಮದಿಂದುಂಟಾದ ಏಕಾಂತ ನಿಯತವಾಗಿರುವ ಸುಖಕ್ಕೂ ನಾನಾಶ್ರಯವು. ‖೨೭‖

(ಶ್ರೀ)ನನ್ನನ್ನು ಉಪಾಸನೆ ಮಾಡುವಂತವನು ಪರಬ್ರಹ್ಮನಾಗಿ ಹೇಗೆ ಆಗುತ್ತಾನೆಂದರೆ ಅದಕ್ಕೆ ಕಾರಣವು ಹೇಳಲ್ಪಡುವುದು. ಪ್ರಕಾಶಗಳ ಸಮೂಹವು ಸೂರ್ಯಮಂಡಲತ್ವೇನ ಹೇಗಾದರೆ ಕಾಣ

ಲ್ಪಡುವುದೊ ಅದರಂತೆ ನಾನು ಪರಬ್ರಹ್ಮಕ್ಕೆ ಪ್ರತಿಮೆಯಾಗಿರುವೆನು. ಎಂದರೆ ಪರಬ್ರಹ್ಮವೆ ನಾನೆಂದುಭಾವವು. ಕೃಷ್ಣಾಧೀನಗುಣಾಸಂಗಪ್ರಸಂಜಿತಭವಾಂಬುಧಿಂ । ಸುಖಂತರತಿತದ್ಭಕ್ತ ಇತ್ಯಭಾಣಿಚತುರ್ದಶೆ ॥ ಶ್ರೀಕೃಷ್ಣಾಧೀನದಿಂದ ಬಂದಿರುವ ಗುಣಸಂಪರ್ಕದಿಂದ ಪ್ರಸಕ್ತವಾದ ಸಂಸಾರ ಸಾಗರವನ್ನು ಆ ಶ್ರೀಕೃಷ್ಣನ ದಿವ್ಯಚರಣಾರವಿಂದ ಭಕ್ತಿಯಿಂದಲೆ ಭಗವದ್ಭಕ್ತನು ಸುಖವಾಗಿ ದಾಟುವನೆಂಬದಾಗಿ ಈ ಹದಿನಾಲ್ಕನೇ ಅಧ್ಯಾಯದಿಂದ ಹೇಳಲ್ಪಟ್ಟಿತು. ॥೨೭॥

(ಗೀ॥ವಿ) ಗುಣಾತೀತನು ನನ್ನನ್ನು ಹೊಂದುತ್ತಾನೆಂತಲೆ ಹೇಳಬೇಕಲ್ಲದೆ ಲಕ್ಷ್ಮೀದೇವಿಯನ್ನು ಹೊಂದುತ್ತಾನೆಂಬದಾಗಿ ಯೇತಕ್ಕೆ ಹೇಳಬೇಕು ? ಎಂದರೆ ಲಕ್ಷ್ಮೀದೇವಿಯು ಯಾವಾಗಲೂ ನನ್ನಲ್ಲಿರುವಂತವಳಾದುದರಿಂದ ಅವಳನ್ನು ಹೊಂದಿದರೆ ನನ್ನನ್ನು ಹೊಂದಿದಂತೆಯೆ ಆಗುವುದೆಂದು ಇದರಿಂದ ಹೇಳಲ್ಪಡುವುದು. ಅಹಂ-ನಾನು, ಬ್ರಹ್ಮಣಃ-ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಗೂ, ಅವ್ಯಯಸ್ಯ ಅಮೃತಸ್ಯ-ಮುಕ್ತರಸಮೂಹಗಳಿಗೂ, ಶಾಶ್ವತಸ್ಯಧರ್ಮಸ್ಯ-ಅಕ್ಷಯವಾದ ಬಲವನ್ನುಂಟು ಮಾಡುವ ಧರ್ಮಕ್ಕೂ, ಏಕಾಂತಿಕಸ್ಯಸುಖಸ್ಯ-ಮೋಕ್ಷಸುಖಕ್ಕೂ, ಪ್ರತಿಷ್ಠಾ-ಆಧಾರನಾಗಿರುವೆನು. ॥೨೭॥

---

## ಅದ್ವೈತಸಿದ್ಧಾಂತಾನುಸಾರಿಯಾದ
## ಅಧ್ಯಾಯಸಂಗ್ರಹ ಶ್ಲೋಕವು.

ಮೂ ॥ ಏಕೋಪಾದಾನಕರ್ತ್ರೇಪ್ಯತನುವಿಧಮಭೂದ್ವ್ಯ
ರ್ಗುಣೈರ್ವಿಶ್ವಮೇತೆಬಧ್ನನ್ತ್ಯಜ್ಞಾನಜಂತೂನ್ನ
ಚಮದನುಚರಾಂಸ್ತೂಪಲೋಭಪ್ರಮಾದ್ಯೈಃ ।
ಸ್ವೀಕುರ್ವ೯ಶುದ್ಧಸತ್ವಂಜಯತಿತದಿತರಾಯಸ್ಸ
ಮಾಮೇತಿಸತ್ಯಂಪ್ರೋಕ್ತಸ್ಸಮ್ಯಕ್ಪತುರ್ಭಿಸ್ಸ
ಮಧಿಕದಶಮೇಸ್ಸಾಗುಣಾತೀತಯೋಗಃ॥ ॥೧೪॥

ತಾ॥ ಒಂದಾದ ಪ್ರಕೃತಿಯೇ ಈ ಜಗತ್ತಿಗೆ ಉಪಾದಾನಕಾರಣವಾಗಿದ್ದರೂ ಸತ್ವರಜಸ್ತಮೊ ಗುಣಗಳ ವೈಚಿತ್ರ್ಯದಿಂದ ಬಹುವಿಚಿತ್ರವಾಗಿ ಪ್ರಪಂಚವು ವಿಸ್ತರಿಸಿರುವುದು. ಅಂತಹ ಗುಣಗಳು ಸಾತ್ವಿಕವಾದ ಸುಖದಿಂದಲೂ, ರಾಜಸವಾದ ಲೋಭದಿಂದಲೂ, ತಾಮಸವಾದ ಪ್ರಮಾದದಿಂದಲೂ, ಅಜ್ಞಾನಿಗಳನ್ನು ಸಂಸಾರಚಕ್ರದಲ್ಲಿ ಬಂಧಿಸಿ ತಿರಿಗಿಸುವುದಲ್ಲದೆ ಬ್ರಹ್ಮಾನುಭೂತಿತತ್ಪರರಾದ ಬ್ರಹ್ಮಜ್ಞಾನಿಗಳನ್ನ ಯೇನೂಮಾಡಲಾರವು. ಆದುದರಿಂದ ಯಾವನಾದರೆ ರಾಜಸ ತಾಮಸಗುಣ ಸಂಪರ್ಕವಿಲ್ಲದ ಶುದ್ಧಸತ್ವವನ್ನು ಸ್ವೀಕರಿಸಿ ತದಿತರಗಳಾದ ರಜಸ್ತಮೊ ಗುಣಗಳನ್ನು ಜಯಿಸುವನೊ ಅಂತವನೇ ಬ್ರಹ್ಮದೊಡನೆ ಐಕ್ಯವನ್ನು ಹೊಂದುವನು. ಎಂಬದಾಗಿ ಗುಣಾತೀತಯೋಗವೆಂಬ ತತ್ವಾರ್ಥವು. ಈ ಹದಿನಾಲ್ಕನೆ ಅಧ್ಯಾಯದಲ್ಲಿ ಶ್ರೀಕೃಷ್ಣಸ್ವಾಮಿಯಿಂದ ಅರ್ಜುನನಿಗುಪದೇಶಿಸಲ್ಪಟ್ಟಿತು. ॥೨೪॥

---

ಶ್ರೀಮದ್ಯಾಮುನಾಚಾರ್ಯರವರ ಅಧ್ಯಾಯಾರ್ಥ
ಸಂಗ್ರಾಹಕವಾದ ಶ್ರೀಮದ್ಗೀತಾರ್ಥ
ಸಂಗ್ರಹ ಶ್ಲೋಕವು.

ಮೂ॥ ಗುಣಬಂಧವಿಧಾತೇಷಾಂಕರ್ತೃತ್ವಂತನ್ನಿವರ್ತ
ನಂ । ಗತಿತ್ರಯಸ್ವಮೂಲತ್ವಂಚತುರ್ದಶಉ
ದೀರ್ಯತೇ॥ ॥೧೮॥

ತಾ॥ ಸತ್ವಾದಿ ಗುಣತ್ರಯವು ಕ್ರಮವಾಗಿ ಜ್ಞಾನಕರ್ಮ ನಿದ್ರಾದಿ ಸಂಗದ್ವಾರಾ ಪುರುಷನನ್ನು ಬಂಧಿಸುವ ಪ್ರಕಾರವೂ, ತ್ರೈಗುಣ್ಯವೆ ಸಮಸ್ತಗಳಾದ ಕರ್ಮಗಳನ್ನು ಗ್ರಹಿಸಲು ವ್ಯಾಪರಿಸಿದ ಪ್ರಕಾರವೂ, ತ್ರಿಗುಣಾತ್ಮಿಕೆಯಾದ ಮಾಯೆಯನ್ನು ದಾಟುವ ಪ್ರಕಾರವೂ, ಕೈವಲ್ಯ ಐಶ್ವರ್ಯ ಮೋಕ್ಷರೂಪವಾದ ಪುರುಷಾರ್ಥತ್ರಯವನ್ನು ತಾನೆ ಕೊಟ್ಟು ರಕ್ಷಿಸುವ ಪ್ರಕಾರವೂ ಈ ಅಧ್ಯಾಯದಲ್ಲಿ ಪ್ರತಿ

ಪಾದಿಸಲ್ಪಟ್ಟತೆಂದು ತಿಳಿಯಬೇಕು. ,, ಬ್ರಹ್ಮಣೋಹಿಪ್ರತಿಷ್ಠಾಹ ಮಮೃತಸ್ಯಾವ್ಯಯಸ್ಯಚ । ಶಾಶ್ವತಸ್ಯಚಧರ್ಮಸ್ಯಸುಖಸ್ಯೈಕಾಂ ತಿಕಸ್ಯಚ ,, ಎಂಬೀಶ್ಲೋಕದಲ್ಲಿ ಪ್ರತಿಪಾದಿತವಾದ ಗತಿತ್ರಯವೇ ಇಲ್ಲಿವಿವಕ್ಷಿತವಲ್ಲದೆ ,, ಊರ್ಧ್ವಂಗಚ್ಛಂತಿಸತ್ವಸ್ಥಾಃ ,, ಇತ್ಯಾದ್ಯು ಕ್ತಗತಿತ್ರಯವು ಇಲ್ಲಿ ಪ್ರತಿಪಾದಿಸಲ್ಪಡಲಿಲ್ಲವು. ಈ ಗತಿತ್ರಯ ವಿ ವಕ್ಷೆಯಲ್ಲ ಸಂಗ್ರಹ ಕ್ರಮಭಂಗವೂ ಪ್ರಾಪ್ತವಾಗುವುದೆಂದರಿಯ ಬೇಕು. ॥೧೮॥

---

ಶ್ರೀಮನ್ನಿಗಮಾನ್ತಮಹಾದೇಶಿಕರಿಂದ ಅನುಗೃಹೀತ

ವಾದ ಶ್ರೀಮದ್ಗೀತಾರ್ಥಸಂಗ್ರಹ

ಗಾಥೆಯು.

ಮೂ॥ ಮುಕ್ಕಣಮೇಯುಯಿರ್ಮುತ್ತವುಂಕಟ್ಟಿಡ
ಮೂಣ್ಡುಮೈಯುಮ್,ಮುಕ್ಕಣಮೇಯುನ್ನೈತ್ತ
ಮ್ವಿನ್ನೈಕೊಳ್ಳಮುಯನ್ನಮೈಯುಮ್,ಮುಕ್ಕ
ಣಮಾಯ್ಕೈಕಡತ್ತಲುಮುಕ್ಕತಿತನ್ದಳಿಪ್ಪುಮ್,
ಮುಕ್ಕಣಮತ್ತಪಿರಾಱ್ವೊೞಿನ್ದಾೞ್ಮುಡಿಯೊ
ನ್ತನಕ್ಕೆ॥ ॥೧೫॥

ಟೀ॥ ಇದರಿಂದ ,, ಗುಣಬಂಧವಿಧಾತೇಷಾಂ ,, ಎಂಬೀ ಸಂಗ್ರ ಹ ಶ್ಲೋಕದಂತೆ ಈ ಅಧ್ಯಾಯಾರ ವನ್ನೊಂದು ಗಾಥೆಯಿಂದ ಸಂ ಗ್ರಹಿಸುತ್ತಾರೆ. ಮುಕ್ಕಣಮ್-ತ್ರೈಗುಣ್ಯದಿಂದ, ಅತ್ತ-ಶೂನ್ಯ ನಾದ,ಪಿರಾಱ್-ಪರಮೋಪಕಾರಕನು, ,, ಸತ್ವಾದಯೊನಸಂತೀಶೇ,, ಎಂಬಿವೇಮೊದಲಾದ ಪ್ರಮಾಣಾನುಸಾರವಾಗಿ ಸತ್ವರಜಸ್ತಮೋರೂ ಪಗುಣತ್ರಯ ತತ್ಕಾರ್ಯ ಭೂತಪ್ರಕೃತಿ ಸಂಬಂಧಾದಿ ರಹಿತನಾದ ಮಹೋಪಕಾರಕನು. ಮುಕ್ಕಣಮೆ-ತ್ರೈಗುಣ್ಯವೇತಾನೆ, ಉ ಯಿರೈ-ಆತ್ಮನನ್ನು, ಮುತ್ತವುಮ್-ಸಂಪೂರ್ಣವಾಗಿ, ಕಟ್ಟಿಡ-ಸಂ ಬಂಧಿಸಲು, ಮೂಣ್ಡುಮೈಯುಮ್-ಪ್ರವರ್ತಿಸಿದ ಪ್ರಕಾರವನ್ನೂ,

ಸತ್ವಾದಿ ಗುಣತ್ರಯವು ಕ್ರಮವಾಗಿ ಜ್ಞಾನಕರ್ಮ ನಿದ್ರಾದಿ ಸಂಗ
ದ್ವಾರಾ ಪುರುಷನನ್ನು ಬಂಧಿಸಿ ನಿರಂತರ ಸಂಸಾರಿಯನ್ನಾಗಿ ಮಾ
ಡುವ ಪ್ರಕಾರವನ್ನೆಂದುಭಾವವು. ಮುಕ್ಕುಣವೋ-ತ್ರೈಗುಣ್ಯವೇ,
ಅನೈತ್ತುಮ್-ಸಮಸ್ತಗಳಾದ, ವಿನೈ-ಕರ್ಮಗಳನ್ನು, ಕೊಳ್ಳ-ಗ್ರಹಿ
ಸಲು, ಮುಯನ್ನವ್ವೈಯುಮ್-ವ್ಯಾಪರಿಸಿದ ಪ್ರಕಾರವನ್ನೂ, ಪ್ರಾ
ಪ್ತಾಪ್ರಾಪ್ತವಿವೇಕದಿಂದ ಸಕಲವಾದ ಸಾಂಸಾರಿಕ ವ್ಯಾಪಾರಗಳ
ಲ್ಲಿಯೂ ಗುಣತ್ರಯವೇ ಕರ್ತೃಭೂತವೆಂಬ ಅನುಸಂಧಾನ ಪ್ರಕಾ
ರವನ್ನೂ ಎಂದರ್ಥವು. ಮುಕ್ಕಣ-ತ್ರಿಗುಣೆಯಾದ, ಮಾಯೈ-ಮಾ
ಯೆಯನ್ನು, ಕಡತ್ತಲುಮ್-ದಾಟುವ ಪ್ರಕಾರವನ್ನೂ, ಕಾರ್ಯಕಾರ
ಣರೂಪದಿಂದ ಬಹುಪ್ರಕಾರವಾಗಿ ಪರಿಣಾಮವನ್ನು ಹೊಂದಿರುವ
ಗುಣತ್ರಯ ಪ್ರಕೃತ್ಯಪರ ಪರ್ಯಾಯ ದುರತ್ಯಯ ಮಾಯಾತರಣ
ಪ್ರಕಾರವನ್ನೂ ಎಂದರ್ಥವು. ಮುಕ್ಕತಿ-ಗತಿತ್ರಯವನ್ನೂ, ತನ್ನಾಳಿ
ಪ್ಪುವುಮ್-ಕೊಟ್ಟು ರಕ್ಷಿಸುವಿಕೆಯನ್ನೂ, "ಬ್ರಹ್ಮಣೋಹಿಪ್ರತಿಷ್ಠಾ
ಹಮಮೃತಸ್ಯಾವ್ಯಯಸ್ಯಚ । ಶಾಶ್ವತಸ್ಯಚಧರ್ಮಸ್ಯಸುಖಸ್ಯೈಕಾಂ
ತಿಕಸ್ಯಚ ,, ಎಂಬೀ ಅಧ್ಯಾಯದ ಕಡೆ ಶ್ಲೋಕದಲ್ಲಿ ಪ್ರತಿಪಾದಿತ
ವಾದ ಕೈವಲ್ಯ ಐಶ್ವರ್ಯ ಮೋಕ್ಷರೂಪ ಪುರುಷಾರ್ಥತ್ರಯಗಳ ಕೊ
ಡುವಿಕೆಯನ್ನೂ ಎಂದರ್ಥವು. ಮುಡಿಯೋರ್ತನಕ್ಕು-ಕಿರೀಟಶಾಲಿ
ಯಾದ ಅರ್ಜುನನಿಗೆ, ಮೊಳಿನ್ದಾನ್-ಉಪದೇಶಿಸಿದನು. ॥೧೪॥

ಶ್ರೀಮದ್ಗೀತಾರ್ಥಸಾರೆ ಚತುರ್ದಶಾಧ್ಯಾಯಸ್ಸಮಾಪ್ತಃ.
ಶ್ರೀಕೃಷ್ಣಾಯಪರಮಾತ್ಮನೇನಮೋನಮಃ–

ಶ್ರೀಯೈಶ್ರೀರುಕ್ಮಿಣ್ಯೈನಮಃ.

---

ಶ್ರೀಕೃಷ್ಣಾಯ ಪರಮಾತ್ಮನೇನಮಃ.
ಶ್ರೀಮದ್ಗೀತಾರ್ಥಸಾರೇಪಂಚದಶಾಧ್ಯಾಯಪ್ರಾರಂಭಃ.

(ಶಂ॥ಭಾ) ಯಾವಕಾರಣದಿಂದ ಕರ್ಮನಿಷ್ಠರ ಸ್ವರ್ಗಾದಿಫಲಗ
ಳೂ ಜ್ಞಾನನಿಷ್ಠರ ಮೋಕ್ಷರೂಪಫಲವೂ ನನ್ನ ಅಧೀನವೋ (ಫಲಮು

ತಃಉಪಪತ್ತೇಃ-ಬ್ರ॥ಸೂ॥೩-೨-೩೮) ಮತ್ತು (ತತೋಽಹ್ಯಸ್ಯಬಂಧವಿಪರ್ಯಯೌ. ೩-೨-೫ನೆ ಸೂ) ಎಂಬೀಸೂತ್ರಗಳಲ್ಲಿ ಹೇಳಿರುವಂತೆ ಬಂಧಮೋಕ್ಷಗಳೂ ನನ್ನ ಅಧೀನಗಳಾಗಿರುವುವೊ, ಆ ಕಾರಣದಿಂದ ಹಿಂದಿನಅಧ್ಯಾಯದ ೨೬ನೇ ಶ್ಲೋಕದಲ್ಲಿ ಹೇಳಿರುವಂತೆ ಭಕ್ತಿಯೋಗದಿಂದ ನನ್ನನು ಸೇವಿಸುವಂತವರು ನನ್ನ ಅನುಗ್ರಹದ್ವಾರೆಯಿಂದ ಕ್ರಮವಾಗಿ ಜ್ಞಾನವನ್ನು ಹೊಂದಿ ಗುಣಾತೀತರಾಗಿ ಮೋಕ್ಷವನ್ನು ಹೊಂದುತಲಿರುವಲ್ಲಿ ಆತ್ಮ ತತ್ವವನ್ನು ಚನ್ನಾಗಿ ತಿಳಿದವರು ಮೋಕ್ಷವನ್ನು ಹೊಂದುವವಿಷಯದಲ್ಲಿ ಹೇಳಬೇಕಾದದ್ದೇನಿರುವುದು. ವೈರಾಗ್ಯವಿಲ್ಲದವನಿಗೆ ಏಕಾಂತ ಭಕ್ತಿ ಯುಂಟಾಗಲಾರದಾದುದರಿಂದ ಅಂತಹ ವೈರಾಗ್ಯ ಸಿದ್ಧಿಗಾಗಿ ಗುಣತ್ರಯ ವಿಚಿತ್ರ, ವಿಸ್ತಾರರೂಪವಾದ ಸ್ಥೂಲ ಪ್ರಪಂಚವನ್ನು (ಸಂಸಾರಾಕಾರವನ್ನು) ವೃಕ್ಷರೂಪವಾಗಿ ಕಲ್ಪಿಸಿ (ಈ ಅರ್ಥವು ಅರ್ಜುನನಿಂದ ಪ್ರಶ್ನೆಮಾಡಲ್ಪಡದೇ ಇದ್ದಾಗ್ಯೂ) ಉಪದೇಶಿಸುತ್ತಾನೆ. ಸಂಸಾರವೆಂಬ ವೃಕ್ಷವನ್ನು ವೈರಾಗ್ಯವೆಂಬ ಖಡ್ಗದಿಂದ ಛೇದಿಸಿದವನಿಗಲ್ಲವೆ ಬ್ರಹ್ಮತತ್ವ ಜ್ಞಾನವಿಷಯದಲ್ಲಿ ಅಧಿಕಾರವಲ್ಲವೆ ಅನ್ಯರಿಗಿಲ್ಲವಷ್ಟೆ. (ಆದುದರಿಂದಲೇ ಶ್ರೀಕೃಷ್ಣಸ್ವಾಮಿಯು ಈ ರೀತಿಯಾಗಿ ಉಪದೇಶ ಮಾಡಲಾರಂಭಿಸುತ್ತಾನೆ.)

(ಶ್ರೀ) ವೈರಾಗ್ಯೇಣ ವಿನಾಜ್ಞಾನಂನಚಭಕ್ತಿರತಸ್ಸ್ಫುಟಂ । ವೈರಾಗ್ಯೋಪಸ್ಕೃತಂಜ್ಞಾನಮೀಶಃಪಂಚದಶೇಬ್ರವೀತ್ ॥ ಪೂರ್ವಾಧ್ಯಾಯದ ಕಡೆಯಲ್ಲಿ ,, ಮಾಂಚಯೋವ್ಯಭಿಚಾರೇಣಭಕ್ತಿಯೋಗೇನ ಸೇವತೆ ,, (೨೬ನೇ ಶ್ಲೋ) ಇತ್ಯಾದಿಯಿಂದ ಪರಮೇಶ್ವರನನ್ನು ಏಕಾಂತಭಕ್ತಿಯಿಂದ ಭಜನ ಮಾಡುವಂತವನಿಗೆ ಭಗವತ್ಪ್ರಸಾದದಿಂದುಂಟಾದ ಜ್ಞಾನದಿಂದ ಬ್ರಹ್ಮಭಾವ ಮುಂಟಾಗುವುದೆಂದು ಪ್ರತಿಪಾದಿತವಾಯಿತು. ಅಂತಹ ಏಕಾಂತ ಭಕ್ತಿಯಾದರೂ ಜ್ಞಾನವಾದರೂ ವೈರಾಗ್ಯರಹಿತನಿಗೆ ಉಂಟಾಗಲಾರದೆಂದು ನೆನಸಿ ವೈರಾಗ್ಯಪೂರ್ವಕವಾಗಿ ಜ್ಞಾನವನ್ನುಪದೇಶಿಸಲಿಚ್ಛೈಸಿ ಮೊದಲು (೨೫) ಶ್ಲೋಕಗಳಿಂದ ಸಂಸಾರ ಸ್ವರೂಪವನ್ನು ವೃಕ್ಷರೂಪಕಾಲಂಕಾರದಿಂದ ವರ್ಣಿಸುವಂತವನಾಗಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು ಹೇಳುತ್ತಾನೆ.

(ರಾ॥ಭಾ॥) ಕ್ಷೇತ್ರಾಧ್ಯಾಯದಲ್ಲಿ ಕ್ಷೇತ್ರವೆಂತಲೂ ಕ್ಷೇತ್ರಜ್ಞನೆಂತಲೂ ಹೇಳಲ್ಪಟ್ಟ ಪ್ರಕೃತಿಪುರುಷರ ಸ್ವರೂಪವನ್ನು ಶೋಧಿಸಿ ಪರಿಶುದ್ಧನಾಗಿರುವ ಅಳವಿಡಲ್ಪಡದ ಜ್ಞಾನೈಕಾಕಾರನಾದ ಆತ್ಮನಿಗೆ ಗುಣಸಂಬಂಧ ಪ್ರವಾಹಮೂಲಕವಾಗಿ ದೇವಾದಿರೂಪದಿಂದ ವಿಕಾರ ಪಡುವ ಪ್ರಕೃತಿಸಂಬಂಧನು ಅನಾದಿ ಎಂಬದಾಗಿಯೂ ಹೇಳಲ್ಪಟ್ಟಿತು. ಹದಿನಾಲ್ಕನೇ ಅಧ್ಯಾಯದಲ್ಲಿ ಪುರುಷನಿಗೆ ಕಾರ್ಯಕಾರಣವೆಂಬೀ ಅವಸ್ಥಾದ್ವಯದಲ್ಲಿಯೂ ಗುಣಸಂಬಂಧದಿಂದ ಬಂದಿರುವ ಪ್ರಕೃತಿಸಂಬಂಧವು ಪರಮಾತ್ಮನಿಂದಲೆ ಮಾಡಲ್ಪಟ್ಟಿತೆಂಬದಾಗಿ ಹೇಳಿ ಗುಣಸಂಗ ಪ್ರಕಾರವನ್ನು ಸವಿಸ್ತರವಾಗಿ ಉಪದೇಶಿಸಿ, ಗುಣಸಂಬಂಧವನ್ನು ಬಿಟ್ಟು ಆತ್ಮನ ಯಥಾವತ್ತಾದ ಸ್ವರೂಪವನ್ನು ಹೊಂದುವುದೂ ಭಗವಚ್ಚರಣಾರವಿಂದದಲ್ಲಿ ಮಾಡುವ ಅವ್ಯಭಿಚರಿತ ಭಕ್ತಿಯಿಂದಲೆ ಎಂಬದಾಗಿಯೂ ಹೇಳಿದನು. ಈ ಅಧ್ಯಾಯದಲ್ಲಿ ಭಜನೀಯನಾದ ಪರಮಪುರುಷನು ಕ್ಷರಅಕ್ಷರಶಬ್ದಗಳಿಂದ ಹೇಳಲ್ಪಡುವ ಬದ್ಧಮುಕ್ತರೆಂಬ ವಿಭೂತಿ ಯುಕ್ತನಾಗಿರುವಿಕೆಯನ್ನೂ ವಿಭೂತಿಭೂತರಾದ ಆಕ್ಷರಾಕ್ಷರವೆನ್ನಲ್ಪಡುವ ಈ ದ್ವಿವಿಧ ಪುರುಷರಿಗಿಂತಲೂ ನಿಖಿಲಹೇಯ ಪ್ರತ್ಯನೀಕ ಕಲ್ಯಾಣವೆ ಸ್ವರೂಪವಾಗಿ ಅತ್ಯಂತ ಶ್ರೈಷ್ಠ್ಯದಿಂದ ಲೋಕೋತ್ತರವಾಗಿರುವ ತತ್ವವೆ ಪುರುಷೋತ್ತಮ ತತ್ವವೆಂಬೀ ಅರ್ಥವನ್ನೂ ಉಪದೇಶಿಸಲುಪಕ್ರಮಿಸುತ್ತಾನೆ. ಅದರಲ್ಲೀಗ ಅಸಂಗ ಶಸ್ತ್ರದಿಂದ ಬಂಧವನ್ನು ಛೇದಿಸಲ್ಪಟ್ಟ ಅಕ್ಷರವೆಂಬ ಐಶ್ವರ್ಯವನ್ನು ಹೇಳುವುದಕ್ಕಾಗಿ ಛೇದ್ಯರೂಪ ಬಂಧಾಕಾರದಿಂದ ವಿಸ್ತರಿಸಿರುವ ಅಚಿತ್ಪರಿಣಾಮ ವಿಶೇಷವನ್ನು ಅಶ್ವತ್ಥ ವೃಕ್ಷಾಕಾರವನ್ನಾಗಿಕಲ್ಪಿಸಿ ಶ್ರೀಭಗವತ್ಕೃಷ್ಣನು ಹೇಳುತ್ತಾನೆ.

(ಗೀ॥ವಿ॥) ಹದಿಮೂರನೇ ಅಧ್ಯಾಯದಲ್ಲಿ ಸಂಸಾರಹೇತುಭೂತವಾಗಿಯೂ ಪ್ರಕೃತಿ ಮಹದಹಂಕಾರಾದಿ ತತ್ವಸಮೂಹರೂಪವಾಗಿಯೂ ಕ್ಷೇತ್ರ ಶಬ್ದದಿಂದ ಹೇಳಲ್ಪಡುವುದಾಗಿಯೂ ಇರುವ ಜಗತ್ಸ್ವರೂಪವು ಹೇಳಲ್ಪಟ್ಟಿತು. ‘‘ ಯಏನಂವೇತ್ತಿಪುರುಷಂ ,, ಇತ್ಯಾದಿಯಿಂದ ಸಂಸಾರ ನಿವೃತ್ತ್ಯುಪಾಯವು ಭಗವದಾದಿ ಜ್ಞಾನರೂಪವಾಗಿರುವುದೆಂತಲೂ ಹೇಳಲ್ಪಟ್ಟಿತು. ಈ ಎರಡರ್ಥಗಳನ್ನೂ ಇಲ್ಲಿ

ತೋರಿಸುತ್ತಾನೆ. ಆದರೆ ಪೂರ್ವಾಧ್ಯಾಯದಲ್ಲಿಯೇ ಈ ಅರ್ಥವು ತೋರಿಸಲ್ಪಟ್ಟಿರುವಲ್ಲಿ ಪುನಃ ಈ ವಿಷಯೊಪನ್ಯಾಸವು ಪುನರುಕ್ತವಲ್ಲವೇ? ಎಂದರೆ ಅಲ್ಲಿಸಂಸಾರಕ್ಕೆಕಾರಣೈಕದೇಶವಾದಗುಣಗಳಿಗೆ ಮಾತ್ರವೆ ಪ್ರವೃತ್ತಿಯು ತೋರಿಸಲ್ಪಟ್ಟಿತು. ಇಲ್ಲಿ ಸಮಗ್ರ ಸಂಸಾರಹೇತುವಾದ ಪ್ರಕೃತ್ಯಾದಿ ಜಗತ್ಸ್ವರೂಪವನ್ನು ತೋರಿಸಿ ಆ ಸಂಸಾರನಿವೃತ್ತಿಗೆ ತಕ್ಕ ಇಚ್ಛೆಯನ್ನುಂಟುಮಾಡಿ ಅದಕ್ಕೆ ತಕ್ಕ ಸಾಧನವನ್ನು ಕೇಳಬೇಕೆಂಬದಾಗಿ ಇಚ್ಛೈಸುವ ಅರ್ಜುನನಿಗೆ ಸಂಸಾರಾತ್ಯಯರೀತಿಯನ್ನು ಉಪದೇಶಿಸುತ್ತಾನೆ. ಆದುದರಿಂದ ಪೂರ್ವಾಧ್ಯಾಯಕ್ಕೆ ಇದು ಅನಂತರಾಧ್ಯಾಯವಾಯಿತು. ಸಂಸಾರನಿವೃತ್ತ್ಯುಪಾಯವನ್ನು ಉಪದೇಶಿಸುವ ಪ್ರಸಂಗದಿಂದಲೆ ಭಗವನ್ಮಹಿಮೆಯನ್ನೂ ತೋರಿಸುತ್ತಾನೆಂದರಿಯಬೇಕು.

(ಅ॥) ಯಂ-ಯಾವ ಅಶ್ವತ್ಥ ವೃಕ್ಷವನ್ನು, (ಸಂಸಾರವೆಂಬ ಯಾವ ಅಶ್ವತ್ಥವನ್ನು) ಊರ್ಧ್ವಮೂಲಂ-ಮೇಲೆ ಯೆದ್ದಿರುವ ಬೇರುಗಳುಳ್ಳದ್ದನ್ನಾಗಿಯೂ, ಅಧಶ್ಶಾಖಂ-ಕೆಳಗೆ ಇಳಿದಿರುವ ರೆಂಬೆಗಳುಳ್ಳದ್ದನ್ನಾಗಿಯೂ, ಅವ್ಯಯಂ-ಶಾಶ್ವತವನ್ನಾಗಿಯೂ, ಶ್ರುತಯಃ ವೇದಗಳು, ಪ್ರಾಹುಃ-ಹೇಳುವುವೋ, ಯಸ್ಯ-ಯಾವ ಅಶ್ವತ್ಥ ವೃಕ್ಷಕ್ಕೆ, ಛಂದಾಸಿ-ವೇದಗಳನ್ನು, ಪರ್ಣಾನಿ-ಎಲೆಗಳನ್ನಾಗಿಯೂ, ಪ್ರಾಹುಃ-ಹೇಳುವುವೊ, ಯಃ-ಯಾವನಾದರೆ, ತಂ-ಆ ಸಂಸಾರಾಶ್ವತ್ಥವನ್ನು, ವೇದ ತಿಳಿಯುತ್ತಾನೆಯೊ, ಸಃ-ಅವನು, ವೇದವಿತ್-ವೇದಾರ್ಥವನ್ನು ತಿಳಿದವನು. ॥೧॥

(ಶಂ॥ ಭಾ॥) ಊರ್ಧ್ವಮೂಲಂ-ಕಾಲಕ್ಕಿಂತಲೂ ಸೂಕ್ಷ್ಮವಾಗಿಯೂ (ಅಥವಾ) ಕಾಲದಿಂದ ಸೂಕ್ಷ್ಮವಾಗಿಯೂ, ನಿತ್ಯವಾಗಿಯೂ ಸಮಸ್ತಕ್ಕೂ ಕಾರಣವಾಗಿಯೂ ಅವ್ಯಕ್ತವೆಂಬ ಮಾಯೆಯನ್ನು ಶಕ್ತಿಯಾಗಿವುಳ್ಳದ್ದಾಗಿಯೂ ಇರುವ ಪರಬ್ರಹ್ಮವು ಊರ್ಧ್ವವು. ಅಂಥಾ ಬ್ರಹ್ಮವನ್ನುಮೂಲವಾಗಿಯುಳ್ಳ ಸಂಸಾರ ವೃಕ್ಷವು, ಅಧಶ್ಶಾಖಂ-ಮಹತ್ತತ್ವವು ಅಹಂಕಾರತತ್ವವು ಪಂಚಭೂತಗಳು ಶಬ್ದಾದಿ ವಿಷಯಗಳು ಇವುಗಳನ್ನು ರೆಂಬೆಗಳಾಗಿಯುಳ್ಳದ್ದಾಗಿರುವುದು. ಈ ಸಂಸಾರ ಮಾಯಾಸ್ವರೂಪವು, ಅವ್ಯಯಂ-ನಾಶರಹಿತ

ವಾದದ್ದು, ಮಾಯೆಯು ಅನಾದಿಯಾದುದರಿಂದ ಆ ಮಾಯಾಮಯವಾ ದ ಸಂಸಾರವೂ ಆದ್ಯಂತ ಶೂನ್ಯವಾಗಿರುವುದು. ಅನಾದ್ಯನಂತ ಪ್ರವಾಹಾದಿ ಸಂತಾನಾಶ್ರಯವೆಂಬದಾಗಿ ಪ್ರಸಿದ್ಧವಲ್ಲವೆ ಈ ಸಂಸಾರವು. (ಆ ಸಂಸಾರವೃಕ್ಷಕ್ಕೇನೆ ಇದು ಮತ್ತೊಂದು ವಿಶೇಷಣವು) ಯಸ್ಯ-ಯಾವ ಸಂಸಾರಾಶ್ವತ್ಥ ವೃಕ್ಷಕ್ಕೆ, ಛಂದಾಂಸಿಪರ್ಣಾನಿ-ವೇದಗಳು ಎಲೆಗಳಂತೆ ಇರುವುವೋ, ಹೇಗಂದರೆ ಮರಗಳನ್ನು ಎಲೆಗಳು ಹೇಗಾದರೆ ಬಿಸಿಲು ಮೊದಲಾದವುಗಳಿಂದ ರಕ್ಷಿಸುವುವೋ ಆ ಪ್ರಕಾರ ವೇದಗಳು ಧರ್ಮಾಧರ್ಮಗಳನ್ನು ಹೊರಪಡಿಸಿ ಸುಖಪ್ರಾಪ್ತಿಗೂ ದುಃಖನಿವೃತ್ತಿಗೂ ಮಾರ್ಗದರ್ಶಿಯಾಗಿರುವುದರಿಂದ ಎಲೆಗಳೆಂಬದಾಗಿ ಹೇಳಲ್ಪಟ್ಟವು. ಇಂತಹ ಸಮೂಲವಾದ ಸಂಸಾರ ವೃಕ್ಷವನ್ನು ಯಾವನಾದರೆ ತಿಳಿಯುತ್ತಾನೆಯೋ ಅವನು ವೇದಾರ್ಥವನ್ನು ಪೂರ್ಣನಾಗಿ ತಿಳಿದವನು. ಬ್ರಹ್ಮವೆಂಬ ಮೂಲವನ್ನೂ ಅದಕ್ಕಿಂತಲೂ ಅನ್ಯವಾದ ಪ್ರಪಂಚವನ್ನೂ ತಿಳಿದ ಸರ್ವಜ್ಞನಾಗುತ್ತಾನೆ. ಸಮೂಲವಾದ ಈ ಸಂಸಾರ ವೃಕ್ಷಕ್ಕಿಂತಲೂ ಅನ್ಯವಾದ ಜ್ಞೇಯವು ಅಣುಮಾತ್ರವೂ ಯಿರಲಾರದೆಂಬ ಕಾರಣದಿಂದ ಇದನ್ನು ತಿಳಿದವನು ಸರ್ವ ವೇದಾರ್ಥವನ್ನು ತಿಳಿದವನೆಂಬದಾಗಿ ಸಮೂಲ ವೃಕ್ಷಜ್ಞಾನವನ್ನು ಸ್ತುತಿಸಿದನು. ಇಲ್ಲಿ ಇತರ ವೃಕ್ಷಗಳನ್ನು ಪ್ರತಿಪಾದಿಸದೆ ಅಶ್ವತ್ಥವೃಕ್ಷವನ್ನು ಮಾತ್ರವೆ ಪ್ರತಿಪಾದಿಸಿದ್ದಕ್ಕೆ ಕಾರಣವೇನೆಂದರೆ ಅಶ್ವತ್ಥವೆಂದರೆ ಉತ್ತರ ಕ್ಷಣದಲ್ಲಿ ನಿಲ್ಲತಕ್ಕದ್ದಲ್ಲವೆಂಬ ಅರ್ಥಸೂಚಕವಾಗಿರುವುದರಿಂದಲೂ ಸಂಸಾರವೂ ಅಂತಹ ಸ್ವಭಾವವುಳ್ಳದ್ದಾಗಿರುವುದರಿಂದಲೂ ಅಶ್ವತ್ಥವೆಂಬದಾಗಿ ಹೇಳಿತು.

(ಶ್ಲೋ॥) ಅಶ್ವತ್ಥಎಂಬೀ ಪದದಲ್ಲಿ, ಅ-ನ್ಞರ್ಥವು, ಅಲ್ಲನು, ಶ್ವ-ಶ್ವಃ-ನಾಳೇ ದಿವಸ, ತ್ಥ-ಸ್ಥ-ಸ್ಥಾತಾ, ಇರುವಂಥಾದ್ದು. ಉತ್ತರ ಕ್ಷಣದವರೆಗೂ ಇರುವಂಥಾದ್ದಲ್ಲವೆಂದು ಭಾವವು.) ಸಂಸಾರ ವೃಕ್ಷಕ್ಕೂ ಅಶ್ವತ್ಥವೃಕ್ಷಕ್ಕೂ ಅನೇಕ ಸಾಮ್ಯಗಳುಂಟೆಂಬುವುದು ಶ್ರುತಿಪುರಾಣ ಪ್ರಮಾಣಗಳಿಂದ ವ್ಯಕ್ತವಾಗಿರುವುದು. ಶ್ರು॥ "ಊರ್ಧ್ವಮೂಲಮವಾಕ್‌ಶಾಖಏಷೋಶ್ವತ್ಥಸ್ಸನಾತನಃ" ಎಂಬುವುದೆ

ಪುರಾಣ ವಚನಗಳು ಯಾವವೆಂದರೆ ‟ಅವ್ಯಕ್ತಮೂಲಪ್ರಭವಸ್ತ
ಸ್ಯೈವಾನುಗ್ರಹೋಚ್ಛ್ರಿತಃ। ಬುದ್ಧಿಸ್ಕಂಧಮಯಶ್ಚೈವ ಇಂದ್ರಿಯಾಂ
ತರಕೋಟರಃ ॥ ಮಹಾಭೂತವಿಶಾಖಶ್ಚ ವಿಷಯೈಃ ಪತ್ರಶಾಖವಾನ್।
ಧರ್ಮಾಧರ್ಮಸುಪುಷ್ಪಶ್ಚ ಸುಖದುಃಖಫಲೋದಯಃ ॥ ಆಜೀವ್ಯಸ್ಸ
ರ್ವಭೂತಾನಾಂ ಬ್ರಹ್ಮವೃಕ್ಷಸ್ಸನಾತನಃ ! ಏತದ್ಬ್ರಹ್ಮವನಂ ಚೈವ
ಬ್ರಹ್ಮವೃಕ್ಷಸ್ಯ ತಸ್ಯ ತತ್ ॥ ಏತದ್ಛಿತ್ವಾ ಚ ಭಿತ್ವಾ ಚ ಜ್ಞಾನೇನ ಪರಮಾ
ಸಿನಾ । ತತಶ್ಚಾತ್ಮರತೋಽಪ್ರಾಪ್ಯ ಯಸ್ಮಾನ್ನಾವರ್ತತೇ ಪುನಃ,, ಎಂ
ಬಿವುಗಳ. ಬ್ರಹ್ಮವೆಂಬ ಬೇರಿನಿಂದುಂಟಾದದ್ದಾಗಿಯೂ ಆ ಬ್ರಹ್ಮದ
ಅನುಗ್ರಹದಿಂದಲೇ ವೃದ್ಧಿಹೊಂದಿರುವಂತಾದ್ದಾಗಿಯೂ ಬುದ್ಧಿಯೆಂಬ
ಸ್ಕಂಧ (ಸ್ಕಂಧವೆಂದರೆ ರೆಂಬೆಗಳು ಹೊರಪಡುವುದಕ್ಕೆ ಮೂಲವಾ
ದಸ್ಥಾನವು) ಮಯವಾಗಿಯೂ ಇಂದ್ರಿಯಗಳೆಂಬ ತೊರ್ರೆಗಳೊಡನೆ
ಕೂಡಿರುವುದಾಗಿಯೂ ಮಹಾಭೂತಗಳನ್ನೇ ಮರದ ಕೆಳಗಿನ ಭಾಗ
ವಾಗಿಯೂ ಶಬ್ದಾದಿ ವಿಷಯಗಳೇ ರೆಂಬೆಗಳಾಗಿಯೂ ಯೆಲೆಗಳಾ
ಗಿಯೂ ಧರ್ಮಾಧರ್ಮಗಳನ್ನು ಪುಷ್ಪಗಳನ್ನಾಗಿ ಉಳ್ಳದ್ದಾಗಿಯೂ ಸು
ಖದುಃಖಗಳನ್ನೇ ಫಲಗಳಾಗಿಯೂ ಸರ್ವಭೂತಗಳು ಚಲಿಸುವು
ದಕ್ಕೆ ಆಧಾರವಾಗಿಯೂ ಬ್ರಹ್ಮಕ್ಕೆ ವಾಸಸ್ಥಾನವಾಗಿಯೂ ಅನಾದಿ
ಯಾಗಿಯೂ ಇರುವ ಈ ಸಂಸಾರವೃಕ್ಷದ ಸ್ವರೂಪವನ್ನು ಜ್ಞಾನವೆಂ
ಬ ಖಡ್ಗದಿಂದ ಛೇದಿಸಿ ಭೇದಿಸಿದವನು ಯಾವ ಬ್ರಹ್ಮಾನಂದದಿಂದ
ಹಿಂದಕ್ಕೆ ತಿರಗಲಾರನೋ ಅಂತಹ ಬ್ರಹ್ಮಾನಂದವನ್ನು ಹೊಂದು
ತ್ತಾನೆಂಬದಾಗಿ ಈ ಶ್ಲೋಕಗಳ ತಾತ್ಪರ್ಯವು. ।೧॥

(ರಾ॥ ಭಾ॥ ಎಲೈ ಅರ್ಜುನನೇ ಯಾವ ಸಂಸಾರವೆಂಬ ಅಶ್ವ
ತ್ಥವೃಕ್ಷವನ್ನು ‟ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಸ್ಸ
ನಾತನಃ ॥ ಊರ್ಧ್ವಮೂಲಮವಾಕ್ಶಾಖಂ ವೃಕ್ಷಂ ಯೋ ವೇದ ಸಂಪ್ರ
ತಿ,, ಇತ್ಯಾದಿ ಶ್ರುತಿಗಳು ಮೇಲ್ಭಾಗದಲ್ಲಿ ಬೇರುಗಳುಳ್ಳದ್ದನ್ನಾಗಿ
ಯೂ ಕೆಳಭಾಗದಲ್ಲಿ ರೆಂಬೆಗಳುಳ್ಳದ್ದನ್ನಾಗಿಯೂ ಹೇಳುವುವು. ಸಂ
ಸನಿವೃತ್ತಿಗೆ ಕಾರಣವಾದ ತತ್ವಜ್ಞಾನವುಂಟಾಗುವ ವರೆಗೂ ಯಾವ
ಅಶ್ವತ್ಥವಾದರೆ ನಾಶಹೊಂದತಕ್ಕದ್ದಲ್ಲವೋ, ಯಾವುದಕ್ಕಾದರೆ ವೇದ

ಗಳನ್ನ ಎಲೆಗಳನ್ನಾಗಿ ಹೇಳುವರೊ ("ವಾಯವ್ಯಗ್‌ಶ್ವೇತಮಲಭೇತಭೂತಿಕಾಮಃ-ಇಂದ್ರಾಗ್ನಮೇಕಾದಶಕಪಾಲಂನಿರ್ವಪೇತ್ಪ್ರಜಾಕಾಮಃ" ಈ ಪ್ರಕಾರವಾಗಿ ಶ್ರುತಿಗಳಲ್ಲಿ ಹೇಳಲ್ಪಟ್ಟ ಕಾಮ್ಯಕರ್ಮಗಳಿಂದ ವೃದ್ಧಿಹೊಂದುವುದರಿಂದ ಈ ಮರಕ್ಕೆ ಶ್ರುತಿಗಳೇ ಎಲೆಗಳೆಂದು ತಿಳಿಯಬೇಕು. ಎಲೆಗಳಿಂದಲ್ಲವೆ ವೃಕ್ಷವು ವೃದ್ಧಿಹೊಂದುತ್ತದೆ. ಅಂತಹ ಈ ವೃಕ್ಷವನ್ನು ಯಾವನು ತಿಳಿಯುತ್ತಾನೆಯೋ ಅವನು ವೇದವಿತ್ತೆಂಬದಾಗಿ ಹೇಳಲ್ಪಡುವನು. (ಎಂದರೆ ವೇದವೋ ಸಂಸಾರವೆಂಬ ವೃಕ್ಷವನ್ನು ಛೇದಿಸುವ ಮಾರ್ಗವನ್ನ ಹೇಳುತ್ತದೆ. ಛೇದಿಸಲರ್ಹವಾದ ವೃಕ್ಷಸ್ವರೂಪವನ್ನು ತಿಳಿಯುವಿಕೆಯು ಛೇದನೋಪಾಯ ಜ್ಞಾನಕ್ಕೆ ಉಪಯುಕ್ತವಾಗಿರುವುದರಿಂದ ಈ ವೃಕ್ಷವನ್ನು ತಿಳಿದವನು ವೇದವಿತ್ತೆಂದು ಹೇಳಿತು. ||೧||

(ಮ || ಭಾ||) ಸಂಸಾರ ಸ್ವರೂಪವೂ ಅದನ್ನು ನಿವೃತ್ತಿಸಿಕೊಳ್ಳುವುದಕ್ಕೆತಕ್ಕ ಸಾಧನಗಳೂ ಅವುಗಳ ಜ್ಞಾನವೂ ಈ ಅಧ್ಯಾಯದಲ್ಲಿ ಹೇಳಲ್ಪಡುವುದು. ಊರ್ಧ್ವಮೂಲಂ-ಸರ್ವೋತ್ತಮವಾದ ವಿಷ್ಣುವನ್ನು ಮೂಲವಾಗಿ ಉಳ್ಳದ್ದು, ಅಧಶ್ಶಾಖಂ-ವಿಷ್ಣುವಿಗಿಂತಲೂ ಕೆಳಗಿರುವ ಸರ್ವ ಪ್ರಪಂಚಗಳನ್ನೂ ರೆಂಬೆಗಳಾಗಿಯುಳ್ಳದ್ದು. ಅಶ್ವತ್ಥಂ-ಏಕರೂಪವಾಗಿ ನಾಳೇ ದಿವಸದಲ್ಲಲ್ಲದೇ ಇರುವುದು, ಅವ್ಯಯಂ-ಪ್ರವಾಹರೂಪದಿಂದ ನಾಶರಹಿತವಾಗಿರುವುದು. (ಪೂರ್ವ ಬ್ರಹ್ಮಕಲ್ಪದಲ್ಲದ್ದ ಈ ಪ್ರಪಂಚವೇ ಈ ಕಲ್ಪದಲ್ಲಿಯೂ ಉಂಟಾಗುತ ಪ್ರತಿಸೃಷ್ಟಿಯಲ್ಲಿಯೂ ಇರುವುದರಿಂದ ಪ್ರವಾಹತಃ ನಾಶವಿಲ್ಲವೆಂದರಿಯ ಬೇಕು.) ಛಂದಾಂಸಿಯಸ್ಯಪರ್ಣಾನಿ-ವೇದಗಳು ಎಲೆಗಳೆಂದರೆ ವೃಕ್ಷದಲ್ಲಿ ಎಲೆಗಳುಂಟಾದ ಮೇಲೆಯಲ್ಲವೆಕಾಯಿ ಮೊದಲಾದವುಗಳುಂಟಾಗುವುವು. ಅದರಂತೆ ವೇದಗಳಿಂದ ಸುಕೃತ ದುಷ್ಕೃತ ಫಲಗಳುಂಟಾಗುವುವೆಂದಭಿಪ್ರಾಯವು. ||೧||

(ಗೀ|| ವಿ||) ಅಶ್ವತ್ಥಂ-ನಾಳೇ ದಿವಸದವರೆಗೂ ಕೂಡ ಏಕಪ್ರಕಾರದಿಂದ ಇರುವುದಿಲ್ಲವಾದುದರಿಂದ ಅಶ್ವತ್ಥವೆಂಬ ನಾಮವುಳ್ಳ ಜಗದ್ವೃಕ್ಷವನ್ನು, (ಅಥವಾ) ಅಶ್ವದಂತೆ (ಕುದರೆ) ಚಂಚಲವಾದಕಾ

ರಣ ಅಶ್ವತ್ಥನಾಮಕವಾದ ಜಗದ್ವೃಕ್ಷವನ್ನು, ಊರ್ಧ್ವಮೂಲಂ-ಊರ್ಧ್ವ-ಸರ್ವೋತ್ತಮನಾದ ಪರಮಾತ್ಮನು, ಹಾಗೆಯೇ ಪರತಂತ್ರರ ಮಧ್ಯದಲ್ಲಿ ಉತ್ತಮಳಾದ ಲಕ್ಷ್ಮೀದೇವಿಯು, ತಥಾ-ಅಚೇತನ ಮಧ್ಯದಲ್ಲಿ ಉತ್ತಮವಾದ ಜಡಪ್ರಕೃತಿಯೂ, ಇವರನ್ನು ಮೂಲಂ-ಮೂಲವಾಗಿಯುಳ್ಳದ್ದಾಗಿಯೂ, (ಅದರಲ್ಲಿ ಪ್ರಸಿದ್ಧ ವೃಕ್ಷಕ್ಕೆ ಹ್ಯಾಗಾದರೆ ಪೃಥಿವ್ಯಭಿಮಾನಿ ದೇವತೆಯಾದ ಧರಾದೇವಿಯು ನಿಮಿತ್ತ ಕಾರಣವಾಗಿರುವಳೊ ಆ ರೀತಿಯಾಗಿಯೇ ಪರಮಾತ್ಮನು ಜಗದ್ವೃಕ್ಷಕ್ಕೆ ನಿಮಿತ್ತಕಾರಣನಾಗಿರುವುದರಿಂದ ಮೂಲನೆನ್ನಲ್ಪಡುತ್ತಾನೆ) ಜಡಪ್ರಕೃತಿಯು ಮಣ್ಣಿನಂತೆಉಪಾದಾನಕಾರಣವಾದ್ದರಿಂದ ಮೂಲವೆನ್ನಲ್ಪಟ್ಟಿತು ಜಡಪ್ರಕೃತಿಯುಲ್ಲಧಿಷ್ಠಿತಗಳಾದ ಚೇತನಪ್ರಕೃತಿಯಾಗಿರುವಲಕ್ಷ್ಮೀದೇವಿಯು ಮೃತ್ತಿಕೆಯಲ್ಲಧಿಷ್ಠಿತವಾದಚೇತನದಂತೆ ಉಪಾದಾನದಲ್ಲಧಿಷ್ಠಿತಳಾದ ಕಾರಣ ಮೂಲವೆನ್ನಲ್ಪಡುತ್ತಾಳೆ.(ಹಾಗೆಯೇ ಸತ್ವಾದಿಗುಣಗಳೂ ಭೂಮಿಯ ಒಳಗಿರುವ ಬೇರುಗಳಂತೆ ಜಗದ್ವೃಕ್ಷಕ್ಕೆ ಮೂಲವೆನ್ನಲ್ಪಡುವುವು. ಅಧಶ್ಶಾಖಂ-ಅಧಃ-ಜಗದ್ವೃಕ್ಷಕ್ಕೆಮೂಲವಾದ ಲಕ್ಷ್ಮೀ ಪರಮಾತ್ಮ ಜಡಪ್ರಕೃತಿಗಳಿಗಿಂತಲೂ ನೀಚವಾದ ಮಹದಹಂಕಾರ ಬುದ್ಧಿ ಪಂಚ ಮಹಾಭೂತಗಳೇನು ಇವುಗಳಅಭಿಮಾನ ದೇವತೆಗಳೇನು, ಇವರನ್ನೇ ; ಶಾಖಂ-ರೆಂಬೆಗಳನ್ನಾಗಿಯೂ, ಪ್ರಸಿದ್ಧ ವೃಕ್ಷದಲ್ಲಿ ಮೂಲಭಾಗಕ್ಕಿಂತಲೂ ರೆಂಬೆಗಳು ಹ್ಯಾಗಾದರೆ ನೀಚವೋ ಅದರಂತೆ ಲಕ್ಷ್ಮೀ ಪರಮಾತ್ಮ ಜಡಪ್ರಕೃತಿಗಳಿಗಿಂತಲೂ ಮಹತ್ವಾದಿಗಳು ನೀಚಗಳೆಂದರಿಯಬೇಕು.) ಅವ್ಯಯಂ-(ಮ) ಪ್ರಕಾರವೇ ಅರ್ಥವು, ಪ್ರಾಹುಃ-ಹೇಳುವರು, ಯಸ್ಯ-ಯಾವ ಜಗದ್ವೃಕ್ಷಕ್ಕೆ, ಛಂದಾಂಸಿ-ವೇದಗಳು, ಪರ್ಣಾನಿ-ಎಲೆಗಳ ಸ್ಥಾನೀಯಗಳೋ, ಯಃ-ಯಾವನಾದರೆ, ತಂ-ಅಂಥಾ ಜಗದ್ವೃಕ್ಷವನ್ನು, ವೇದ-ತಿಳಿಯುತ್ತಾನೆಯೋ, ಸಃ-ಅವನು, ವೇದವಿತ್-ವೇದಾರ್ಥವನ್ನು ತಿಳಿದವನು, ಇಲ್ಲಿ ಹೇಳಿರುವ ಜಗದ್ವೃಕ್ಷವು ವೇದ ಪ್ರತಿಪಾದ್ಯವೆಂದಭಿಪ್ರಾಯವು. ॥೧॥

ಮೂ॥ಅಧಶ್ಚಮೂಲಾನ್ಯನುಸಂತತಾನಿಕರ್ಮಾನುಬಂ
ಧೀನಿಮನುಷ್ಯಲೋಕೇ॥ ॥೨॥

ಪ॥ ಅಧಃ-ಚ-ಊರ್ಧ್ವಂ-ಚ-ಪ್ರಸೃತಾಃ-ತಸ್ಯ-ಶಾಖಾಃ-ಗುಣಪ್ರವೃದ್ಧಾಃ-ವಿಷಯಪ್ರವಾಲಾಃ-ಅಧಃ-ಚ-ಮೂಲಾನಿ-ಅನುಸಂತತಾನಿ-ಕರ್ಮಾನುಬಂಧೀನಿ-ಮನುಷ್ಯಲೋಕೇ॥

(ಅ॥ರಾ॥ಭಾ॥)ತಸ್ಯ-ಮನುಷ್ಯಾದಿಶಾಖಾಯುಕ್ತನಾದಸಂಸಾರಾಶ್ವತ್ಥಕ್ಕೆ, ಗುಣಪ್ರವೃದ್ಧಾಃ-ಸತ್ವಾದಿಗುಣಗಳಿಂದ ವೃದ್ಧಿಹೊಂದಿದವುಗಳಾಗಿಯೂ, ವಿಷಯಪ್ರವಾಲಾಃ-ಶಬ್ದಸ್ಪರ್ಶರೂಪರಸಗಂಧಗಳೆಂಬ ವಿಷಯಗಳನ್ನು ಚಿಗುರುಗಳಾಗಿ ಉಳ್ಳದ್ದಾಗಿಯೂ ಇರುವ, ಅಧಶ್ಶಾಖಾಃ-ಕೆಳಗೆ ಇರುವ ರೆಂಬೆಗಳು, ಪ್ರಸೃತಾಃ-ಬಂದು ರೆಂಬೆಗಳಿಂದ ಮತ್ತೆ ಕೆಲವು ರೆಂಬೆಗಳು ಅವುಗಳಿಂದ ಇನ್ನೂ ಕೆಲವು ಎಂಬೀ ರೀತಿಯಾಗಿ ಮೇಲು ಮೇಲೆ ಮನುಷ್ಯ ಪಶ್ವಾದಿ ರೂಪಗಳಾಗಿ ವೃದ್ಧಿ ಹೊಂದಿರತಕ್ಕವುಗಳಾಗಿರುವುವು. ಊರ್ಧ್ವಂಚ-ಮೇಲೆಯೂ ಪ್ರಸೃತಾಃ-ಗಂಧರ್ವ ಯಕ್ಷ ದೇವಾದಿ ರೂಪಗಳಾಗಿ ವೃದ್ಧಿಹೊಂದತಕ್ಕವುಗಳಾಗಿರುವುವು.

ಈ ವೃಕ್ಷಕ್ಕೆ ಮೇಲೆಯೂ ರೆಂಬೆಗಳುಂಟೆಂದರೆ ಕೆಳಭಾಗದಲ್ಲಿ ಬೇರುಗಳಿರಬೇಕಲ್ಲವೆ ? ಅವು ಉಂಟೋ ? ಅವು ಯಾವವೆಂದರೆ ಅದನ್ನು ಹೇಳುತ್ತಾರೆ. ತಸ್ಯ-ಬ್ರಹ್ಮಲೋಕವನ್ನು ಬೇರಾಗಿಯೂ, ಮನುಷ್ಯ ಲೋಕವನ್ನು ಅಗ್ರಭಾಗವಾಗಿಯೂಉಳ್ಳ ಆ ಸಂಸಾರಾಶ್ವತ್ಥಕ್ಕೆ, ಅಧಃ-ಮನುಷ್ಯಲೋಕೇಚ-ಕೆಳಗೆ ಮನುಷ್ಯ ಲೋಕದಲ್ಲಿಯೂ, ಕರ್ಮಾನುಬಂಧೀನಿ-ಪುಣ್ಯಪಾಪ ಕರ್ಮಗಳನ್ನು ಸಂಬಂಧಿಸಿಬರುವ, ಮೂಲಾನಿ-ಬೇರುಗಳು, ಅನುಸಂತತಾನಿ-ವೃದ್ಧಿಹೊಂದಿರುವುವು. ಮನುಷ್ಯನಾಗಿ ಹುಟ್ಟಿದಾಗ ಮಾಡಿರುವ ಕರ್ಮಗಳಿಂದಲ್ಲವೆ ಪುನಶ್ಚ ಮನುಷ್ಯಪಶ್ವಾದಿಗಳಾಗಿಯೂ ಮೇಲು ಲೋಕದಲ್ಲಿ ದೇವಾದಿಗಳಾಗಿಯೂ ಹುಟ್ಟುವುದೆಂದು ಭಾವವು. ಆದುದರಿಂದ ಕರ್ಮವೆಂಬ ಬೇರು ಕೆಳಗೆ ಇರುವುದರಿಂದ ದೇವಗಂಧರ್ವಾದಿ ರೂಪಗಳಾದ ರೆಂಬೆಗಳು ಮೇಲೆಯೂ ವೃದ್ಧಿಹೊಂದಿರುವುವು. ॥೨॥

(ಶಂ॥ ಭಾ॥) ಆ ಸಂಸಾರವೃಕ್ಷದ ಇತರಾವಯವಗಳ ಕಲ್ಪನೆಯು ಇಲ್ಲಿ ವಿವರಿಸಲ್ಪಡುವುದು. ಮನುಷ್ಯರಿಗಿಂತಲೂ ನಿಕೃಷ್ಟಗಳಾದ ಸ್ಥಾವರಗಳನ್ನು ಮೊದಲು ಮಾಡಿಕೊಂಡು ಸೃಷ್ಟಿಗೆ ಒಳಪಟ್ಟ ಸಮಸ್ತ ಪದಾರ್ಥಗಳಿಗಿಂತಲೂ ಶ್ರೇಷ್ಠನೂ ಸೃಷ್ಟಿಕರ್ತನೂ ಆದ ಚತುರ್ಮುಖ ಬ್ರಹ್ಮನವರೆಗೂ ಅವರವರು ಮಾಡಿರುವ ಕರ್ಮಾನುಸಾರವಾಗಿಯೂ ಶಾಸ್ತ್ರಶ್ರವಣಾನುಸಾರವಾಗಿ ಸಿದ್ಧಿಸುವ ಜ್ಞಾನಕರ್ಮ ಮೋಹಾದಿಗಳು ಸತ್ವರಜಸ್ತಮೋ ಗುಣಗಳಿಂದ ವೃದ್ಧಿ ಹೊಂದಲ್ಪಡುವುವು. ಶಬ್ದಾದಿ ವಿಷಯಗಳೆಂಬ ಚಿಗುರುಗಳುಳ್ಳ ದೇಹಾದಿಕರ್ಮಫಲಗಳೆಂಬ ರೆಂಬೆಗಳಿಂದ ಹುಟ್ಟುವುವು. ವಿಷಯಗಳೆಂಬ ಚಿಗುರುಗಳುಳ್ಳದ್ದಾಗಿರುವ ಜ್ಞಾನಕರ್ಮಫಲಗಳೆಂಬ ರೆಂಬೆಗಳುಳ್ಳ ಸಂಸಾರವೃಕ್ಷಕ್ಕೆ ಸತ್ವ ರಜಸ್ತಮೋ ಗುಣಗಳೇ ತಾಯಿಬೇರು. ಕರ್ಮಫಲದಿಂದುಂಟಾದ ರಾಗದ್ವೇಷಾದಿ ವಾಸನೆಗಳೆಂಬ ಬೇರುಗಳು ಮನುಷ್ಯ ಲೋಕದಲ್ಲಿ ಧರ್ಮಾಧರ್ಮ ಪ್ರವೃತ್ತಿಗೆ ಕಾರಣಗಳಾಗಿ ತಾಯಿಬೇರೆನ್ನಲ್ಪಡುವಗುಣಗಳನ್ನಾಶ್ರಯಿಸಿ ಮಧ್ಯೆಮಧ್ಯೆ ಉಂಟಾಗುವುವು. ಎಂದರೆ ಮನುಷ್ಯರಿಗೇನೆ ಕರ್ಮಾಧಿಕಾರವು ಉಂಟಾಗಿರುವುದರಿಂದ ಮನುಷ್ಯ ಲೋಕದಲ್ಲಿ ಆ ಕರ್ಮಫಲಗಳನ್ನನುಭವಿಸುತ್ತಾರೆಂದು ತಿಳಿಯಬೇಕು. ೧೨॥

(ಶ್ರೀ॥) ಚತುರ್ಮುಖಬ್ರಹ್ಮನೂ ಅವರಿಗಿಂತಲೂ ಕೆಳಗಿರುವ ಸಮಸ್ತ ಜೀವಕೋಟಿಗಳೂ ಸಂಸಾರವೃಕ್ಷಕ್ಕೆ ರೆಂಬೆಗಳಾಗಿ ಹೇಳಲ್ಪಟ್ಟಿರುತ್ತಾರೆ. ಆ ಜೀವಕೋಟಿಗಳಲ್ಲಿ ಪಾಪಕರ್ಮಗಳನ್ನು ಮಾಡಿದವರು ಭೂಲೋಕದಲ್ಲಿ ಪಶುಪಕ್ಷ್ಯಾದಿ ಜನ್ಮಗಳನ್ನು ಹೊಂದಿ ವಿಸ್ತರಿಸಿರುವರು. ಪುಣ್ಯಕರ್ಮಿಗಳು ಮೇಲು ಲೋಕದಲ್ಲಿ ದೇವತಾದಿ ಜನ್ಮಗಳನ್ನು ಹೊಂದಿ ವಿಸ್ತರಿಸಿರುವರು. ಈ ಪ್ರಕಾರವಾಗಿ ಕೆಳಗೆಯೂ ಮೇಲೆಯೂ ವಿಸ್ತರಿಸಿರುವ ಮನುಷ್ಯದೇಹಾದಿಗಳೇ ಈ ಸಂಸಾರ ವೃಕ್ಷಕ್ಕೆ ಕೆಳಗೆಯೂ ಮೇಲೆಯೂಇರುವ ರೆಂಬೆಗಳು. ಈ ರೆಂಬೆಗಳು ಸತ್ವಾದಿಗುಣಗಳಿಂದ ವೃದ್ಧಿಹೊಂದಿರುವುವು, ವೃಕ್ಷದ ರೆಂಬೆಗಳು ನೀರಿನಿಂದ ವೃದ್ಧಿಹೊಂದುವ ರೀತಿಯಾಗಿ ಈ ಜೀವರೆಂಬ

ಸಂಸಾರವೃಕ್ಷದ ರೆಂಬೆಗಳು ಸತ್ವಾದಿಗುಣಗಳಿಂದ ವೃದ್ಧಿಹೊಂದಿರು ವುವು. ಆ ರೆಂಬೆಗಳಿಗೆ ವಿಷಯಗಳೆಂಬ ಶಬ್ದಸ್ಪರ್ಶಾದಿಗಳೆ ಚಿಗುರು ಗಳು. ಆ ವೃಕ್ಷದ ಬೇರುಗಳು ಕೆಳಗಿನ ಲೋಕದಲ್ಲಿಯೂ ಮೇಲಿನ ಲೋಕದಲ್ಲಿಯೂ ವಿಸ್ತೃತವಾಗಿರುವುವು. ಅವುಗಳಲ್ಲಿ ಮುಖ್ಯವಾದ ಬೇರು ಪರಮಾತ್ಮನೊಬ್ಬನೆ. ಇತರ ಬೇರುಗಳು ಜೀವಕೋಟಿಗಳು ಕೆಳಗಿನ ಲೋಕದಲ್ಲಿಯೂ ಊರ್ಧ್ವಲೋಕದಲ್ಲಿಯೂ ಅನುಭವಿಸಿಮಿ ಗಿಲಿರುವ (ಭುಕ್ತಶಿಷ್ಟವಾಗಿರುವ) ಕರ್ಮವಾಸನೆಗಳೆ. ಆ ಕರ್ಮವಾಸ ನೆಯು ತನ್ನ ಸಂಬಂಧದಿಂದ ಭೂಲೋಕದಲ್ಲಿ ಜನನವನ್ನುಂಟುಮಾಡಿ ತನ್ನ ಸ್ವಭಾವಾನುಗುಣವಾಗಿ ಕರ್ಮಗಳನ್ನು ಮಾಡಿಸುವುದು. ಕ ರ್ಮಾನುಷ್ಠಾನವು ಭೂಲೋಕದಲ್ಲಲ್ಲದೆ ಇತರಲೋಕಗಳಲ್ಲಿ ಸಂ ಭವಿಸುವುದಿಲ್ಲವಾದುದರಿಂದ ಈ ಭೂಲೋಕದಲ್ಲಿ ಕರ್ಮಗಳನ್ನು ಮಾ ಡಿಸುತ್ತದೆಂಬದಾಗಿ ಹೇಳಲ್ಪಟ್ಟಿತು. ||೨||

(ಮ||ಭಾ||)ರೆಂಬೆಗಳೆಂಬ ಪಂಚಮಹಾ ಭೂತಗಳೂ,ಊರ್ಧ್ವಂ ಚ-ಮೊದಲನೇದಾದಕಾರಣ ಪ್ರಕೃತಿಯಲ್ಲಿ ಸೂಕ್ಷ್ಮವಾಗಿಯೂ, ಅಧಃ-ಹಿಂದಿನ ದೇಹಾದಿಕಾರ್ಯ ಪ್ರಕೃತಿಯಲ್ಲಿ ಸ್ಥೂಲವಾಗಿಯೂ ವ್ಯಾಪಿಸಿರುವುವು. ಭೂತಗಳು ತಾನೆಗುಣಗಳಿಂದ ಅಭಿವೃದ್ಧಿಹೊಂ ದಿರುವುವು. ನೋಡಿದಮಾತ್ರದಿಂದಲೆ ಸುಖವಾಗಿ ತೋರುವುದರಿಂ ದ ವಿಷಯಗಳೆ ಚಿಗುರುಗಳಾಗ ಹೇಳಲ್ಪಟ್ಟವು. ಮೇಲಾದ ಮೂ ಲವೆಂಬ ಬೇರು ವಿಷ್ಣುರೂಪಗಳೆ. ಕೆಳಗಿನ ಮೂಲವೆಂಬ ಬೇರು ವಿಷ್ಣುವಿನ ಅವತಾರಾದಿ ರೂಪಗಳು. ಕರ್ಮಾನುಬಂಧೀನಿ-ಜೀವನು ಮಾಡುವ ಕರ್ಮಗಳನ್ನು ಅನುಸರಿಸಿ ಫಲಪ್ರದಗಳಾಗಿರುವುವು. ||೨||

(ಗೀ||ವಿ) ಈ ಜಗದ್ವೃಕ್ಷಕ್ಕೆ ರೆಂಬೆಗಳ ಸ್ಥಾನದಲ್ಲಿ ಚಿದಚಿ ದ್ರೂಪಗಳಾದ ಮಹದಾದ್ಯಷ್ಟ ತತ್ವಗಳು ಸತ್ವಾದಿಗುಣಗಳಿಂದ ಅಭಿವೃದ್ಧಿಯನ್ನು ಹೊಂದಿ ಸೂಕ್ಷ್ಮರೂಪದಿಂದ ಅವ್ಯಕ್ತದಲ್ಲಿ ಯೂ ಸ್ಥೂಲರೂಪದಿಂದ ದೇಹಾದಿಗಳಲ್ಲಿಯೂ ವ್ಯಾಪಿಸಿರುವುವು. ತಾತ್ಕಾಲಿಕ ಸುಖಹೇತುವಿನಲ್ಲಿ ಸಾಮ್ಯವಿರುವುದರಿಂದ ಶಬ್ದಾದಿವಿಷ ಯುಗಳು ಪಲ್ಲವಸ್ಥಾನೀಯುಗಳೆಂಬದಾಗಿ ಹೇಳಲ್ಪಟ್ಟವು. ವಿಷ್ಣುರೂ ಪಗಳೂ ಚಿದಚಿತ್ಪ್ರಕೃತಿಗಳೂ ಸತ್ವಾದಿಗುಣಗಳೂ ಜಗದ್ವೃಕ್ಷದ

ಕೆಳಗಿನ ಭಾಗವಾದ ಮನುಷ್ಯಲೋಕದಲ್ಲಿ ಕರ್ಮಾನುಸಾರವಾಗಿ ಫಲಪ್ರದಗಳಾಗಿ ಮಹದಹಂಕಾರಾದಿ ಸಕಲಪದಾರ್ಥಗಳಲ್ಲಿಯೂ ವ್ಯಾಪಿಸಿರುವವು. ॥೨॥

ಮೂ ॥ ನರೂಪಮಸ್ಯೇಹತಥೋಪಲಭ್ಯತೇನಾಂತೋ
ನಚಾದಿರ್ನಚಸಂಪ್ರತಿಷ್ಠಾ॥ ॥೩॥

ಪ॥ ನ-ರೂಪಂ-ಅಸ್ಯ-ಇಹ-ತಥಾ-ಉಪಲಭ್ಯತೆ-ನ-ಅಂತಃ-ನ-ಚ-ಆದಿಃ-ನ-ಚ-ಸಂಪ್ರತಿಷ್ಠಾ ॥

(ಅ॥ರಾ॥ಭಾ) ಇಹ-ಈ ಲೋಕದಲ್ಲಿ, (ಸಂಸಾರಿಭಿಃ-ಎಂಬದಾಗಿ ಸೇರಿಸಿಕೊಳ್ಳಬೇಕು.) ಸಂಸಾರಿಭಿಃ-ಸಂಸಾರಿಗಳಿಂದ, ಅಸ್ಯ-ಈ ಸಂಸಾರಾಶ್ವತ್ಥದ, ರೂಪಂ-(ಈ ವೃಕ್ಷಕ್ಕೆ ಚತುರ್ಮುಖನು ಆದಿಯಾದವನಾದುದರಿಂದ ಈ ವೃಕ್ಷವು ಊರ್ಧ್ವಮೂಲವೆಂತಲೂ ಸಂತಾನ ಪರಂಪರೆಯಿಂದ ಈ ವೃಕ್ಷಕ್ಕೆ ಮನುಷ್ಯರು ಕೊನೆಸ್ಥಾನೀಯರಾಗಿರುವುದರಿಂದ ಅಧಶ್ಶಾಖವೀವೃಕ್ಷವೆಂತಲೂ ಮನುಷ್ಯಾವಸ್ಥೆಯಲ್ಲಿ ಮಾಡಿರುವ ಕರ್ಮಗಳೆಂಬ ಬೇರುಗಳಿಂದ ಪ್ರಸಕ್ತ ಕೆಳಗೆಯೂ ಮೇಲೆಯೂ ಮನುಷ್ಯ ಪಶ್ವಾದಿರೂಪಗಳಾಗಿಯೂ ದೇವಗಂಧರ್ವಾದಿರೂಪಗಳಾಗಿಯೂ ರೆಂಬೆಗಳು ಬೆಳೆದು ಇರುವುದರಿಂದ ಈ ವೃಕ್ಷವು ಕೆಳಗೆಯೂ ಮೇಲಿನಲ್ಲಿಯೂ ರೆಂಬೆಗಳುಳ್ಳದ್ದೆಂತಲೂ) ನಾನು ನಿನಿಗೆ ಹೇಳಿರುವರೂಪವು, ತಥಾ-ನಾನು ಹೇಳಿರುವ ಪ್ರಕಾರವಾಗಿ, ನೋಪಲಭ್ಯತೆ-ತಿಳಿಯಲ್ಪಡಲಾರದು. ಅಂತಃ-ಸತ್ವಾದಿಗುಣಮಯಗಳಾದ ಭೋಗಗಳಲ್ಲುಂಟಾದ ವೈರಾಗ್ಯದಿಂದ ಈವೃಕ್ಷಕ್ಕೆನಾಶವೆಂತಲೂ, (ನೋಪಲಭ್ಯತೆ-ಎಂಬದಾಗಿ ಅನುಷಂಗವು. ಇದು ಮುಂದೆಯುಬರುವದು.) ನೋಪಲಭ್ಯತೆ-ತಿಳಿಯಲ್ಪಡುವುದಿಲ್ಲವು- ಆದಿಶ್ಚ-ಅ ಪ್ರಕಾರವೆ ಈ ವೃಕ್ಷಕ್ಕೆ ಸತ್ವಾದಿಗುಣಸಂಗವೆ ಮೂಲವೆಂತಲೂ, ನೋಪಲಭ್ಯತೆ-ಸಂಸಾರಿಗಳಿಂದ ತಿಳಿಯಲ್ಪಡುವುದಿಲ್ಲವು. ಸಂಪ್ರತಿಷ್ಠಾಚ-ಈ ವೃಕ್ಷಕ್ಕೆ ಆತ್ಮವಾಗದ ದೇಹದಲ್ಲಿ ಆತ್ಮಾಭಿಮಾನವೆಂಬ ಅಜ್ಞಾನವೆ ವಾಸಸ್ಥಾನವೆಂತಲೂ, ನೋಪಲಭ್ಯತೆ-ಸಂಸಾರಿಗಳಿಂದ ತಿಳಿಯಲ್ಪಡುವುದಿಲ್ಲವು. ಆದರೆ ಏನುತಾನೆ ಅವರಿಗೆ ತಿಳಿಯುತ್ತದೆಂದರೆ? ನಾನು ಮನುಷ್ಯನು ದೇವದತ್ತನಿಗೆ ನಾನು ಮಗನು- ಯಜ್ಞದತ್ತನಿಗೆ

ನಾನು ತೆಂಪೆಯು ಇದು ನನ್ನ ಮನೆಯು, ಇವು ನನ್ನ ಕ್ಷೇತ್ರಾದಿ ಪಶುಪ್ರಭೃತಿಗಳೆಂಬದಾಗಿ ಅದುತಾನೆ ಅವರಿಗೆ ತಿಳಿಯುವುದು. ॥೨೫॥

ಮೂ॥ ಅಶ್ವತ್ಥಮೇನಂಸುವಿರೂಢಮೂಲಮಸಂಗಶ
ಸ್ತ್ರೇಣದೃಢೇನಛಿತ್ವಾ ॥೩॥ ತತಃಪದಂತತ್ಪರಿ
ಮಾರ್ಗಿತವ್ಯಂಯಸ್ಮಿನ್ಗತಾನನಿವರ್ತಂತಿ ಭೂ
ಯಃ॥ ೩೫॥

ಪ॥ ಅಶ್ವತ್ಥಂ-ಏನಂ-ಸುವಿರೂಢಮೂಲಂ-ಅಸಂಗಶಸ್ತ್ರೇಣ-ದೃಢೇನ-ಛಿತ್ವಾ ತತಃ-ಪದಂ-ತತ್-ಪರಿಮಾರ್ಗಿತವ್ಯಂ-ಯಸ್ಮಿನ್-ಗತಾಃ॥-ನ-ನಿವರ್ತಂತಿ-ಭೂಯಃ॥

(ಅ॥ರಾ॥ಭಾ) ಸುವಿರೂಢಮೂಲಂ-ದೃಢವಾಗಿಯೂ ಚನ್ನಾಗಿಯೂ ರೂಢಮೂಲವಾದ, ಏನಂ-ಈ ಪೂರ್ವೋಕ್ತಪ್ರಕಾರವಾದ, ಅಶ್ವತ್ಥಂ-ಸಂಸಾರವೆಂಬ ಅಶ್ವತ್ಥವನ್ನು, ದೃಢೇನ-ಶ್ರೇಷ್ಠವಾದ ವಿವೇಕದಿಂದ ಜಾರದೆ ದೃಢವಾಗಿರುವ, ಅಸಂಗಶಸ್ತ್ರೇಣ-ಸತ್ವಾದಿ ಗುಣಮಯವಾದ ಭೋಗದಲ್ಲಿರುವ ವೈರಾಗ್ಯವೆಂಬ ಖಡ್ಗದಿಂದ, ಛಿತ್ವಾ-ಛೇದಿಸಿಬಿಟ್ಟು, ತತಃ-ಆ ವೈರಾಗ್ಯವೆಂಬ ಹೇತುವಿನಿಂದಲೆ, ಯಸ್ಮಿನ್ಗತಾಭೂಯಃನನಿವರ್ತಂತಿ-ಯಾವಸ್ಥಾನದಲ್ಲಿ ಸೇರಿದವರು ಪುನಶ್ಚ ಹಿಂದಕ್ಕೆ ತಿರಿಗಿಬರುವುದಿಲ್ಲವೊ,ತತ್ಪದಂ- ಆಸ್ಥಾನವು, ಪರಿಮಾರ್ಗಿತವ್ಯಂ- ಹುಡುಕತಕ್ಕದ್ದಾಗಿರುವುದು. ॥೩೫॥

ಅನಾದಿಕಾಲದಿಂದ ಪ್ರಾಪ್ತವಾಗಿರವ ಭೋಗಸಂಗವೂ ಅದಕ್ಕೆ ಮೂಲವಾದ ವಿಪರೀತಜ್ಞಾನವೂ ಯಾವ ಉಪಾಯದಿಂದ ನಿವೃತ್ತಮಾಗುವುದು? ಎಂದರೆ ಅದಕ್ಕುತ್ತರವನ್ನು ಹೇಳುತ್ತಾರೆ.

ಮೂ॥ ತಮೇವಚಾದ್ಯಂಪುರುಷಂಪ್ರಪದ್ಯೇದ್ಯತಃಪ್ರವೃ
ತ್ತಿಃಪ್ರಸೃತಾಪುರಾಣೀ॥ ॥೪॥

ಪ॥ತಂ-ಏವ-ಚ-ಆದ್ಯಂ-ಪುರುಷಂ-ಪ್ರಪದ್ಯೇತ್-ಯತಃ-ಪ್ರವೃತ್ತಿಃ-ಪ್ರಸೃತಾ-ಪುರಾಣೀ॥

(ಅ॥ರಾ॥ಭಾ) ಯಃ-ಸಮಸ್ತಕ್ಕೂ ಸೃಷ್ಟಿಕರ್ತನಾದ ಯಾವ ಪುರುಷನ ದಶೆಯಿಂದ, ಪ್ರವೃತ್ತಿಃ-ಈಗುಣಮಯವಾದ ಭೋಗದಲ್ಲಿ

ಸಂಗಪ್ರವೃತ್ತಿಯು, ಪುರಾಣೀ-ಅನಾದಿಯಾಗಿ, ಪ್ರಸೃತಾ-ಪ್ರವೃತ್ತ ವಾಯಿತೊ, ತಮೇವಚಾದ್ಯಂ ಪುರುಷಂಪ್ರಪದ್ಯೇತ್-ಅದಕ್ಕೆ ಮೂಲಕಾರಣಭೂತನಾದ "ಮಯಾಧ್ಯಕ್ಷೇಣ-ಅಹಂಸರ್ವಸ್ಯಪ್ರಭವಃ-ಮತ್ತಃಪರತರಂನಾನ್ಯತ್ ,, ಇತ್ಯಾದಿಗಳಿಂದ ಹೇಳಲ್ಪಟ್ಟ ಪುರುಷ ನನ್ನೆ ಶರಣವನ್ನಾಗಿ ಹೊಂದಬೇಕು. ಈ ಅರ್ಥವು "ದೈವೀಹ್ಯೇಷಾ ಗುಣಮಯೀಮಮಮಾಯಾದುರತ್ಯಯಾ। ಮಾಮೇವಯೇಪ್ರಪದ್ಯಂತೇಮಾಯಾಮೇತಾಂತರಂತಿತೆ ,, ಇತ್ಯಾದಿಗಳಿಂದ ನನ್ನಿಂದ ಹಿಂದೆಯೆ ಹೇಳಲ್ಪಟ್ಟತು. (ಅಥವಾ) ತಮೇವಚಾದ್ಯಂಪುರುಷಂಪ್ರಪದ್ಯ ಎಂಬ ಪಾಠವೂ ಉಂಟು. ಆ ಪಾಠದಲ್ಲಿ; ತಮೇವಚಾದ್ಯಂ ಪುರುಷಂಪ್ರಪದ್ಯ-ಆ ಆದಿಕಾರಣಭೂತನಾದ ಪುರುಷನನ್ನು ಶರಣವನ್ನಾಗಿ ಹೊಂದಿಯೆ, ಯತಃ-ಯಾವಕಾರಣದಿಂದ,ಪ್ರವೃತ್ತಿಃ-ಅಜ್ಞಾನನಿವೃತ್ತ್ಯಾದಿಗೆ ಹೇತುವಾಗಿಯೂ ಮೋಕ್ಷಮಾರ್ಗಪ್ರವೃತ್ತಿಗೆ ಮೂಲಕಾರಣವಾಗಿಯೂ ಇರುವ ವ್ಯಾಪಾರವು,ಪುರಾಣೀ-ಅನಾದಿಯಾಗಿ ಪೂರ್ವೀಕರಾದ ಮುಮುಕ್ಷುಗಳದಾಗಿ, ಪ್ರಸೃತಾ-ವಿಸ್ತೃತವಾಗಿರುವುದೊ, ಮೊದಲಿನ ಪಕ್ಷದಲ್ಲಿ ಯಾವನಿಂದಈ ಅನಾದಿಯಾದ ಭೋಗಪ್ರವೃತ್ತಿಯುಂಟಾಗಿರುವುದೊ ಅವನ ಶ್ರೀಪಾದಗಳಲ್ಲಿ ಬಿದ್ದೇ ಅದನ್ನು ನಿವೃತ್ತಿಸಿಕೊಳ್ಳಬೇಕೆಂದು ಭಾವವು. ಎರಡನೇ ಪಕ್ಷದಲ್ಲಿ ಪೂರ್ವೀಕರಾದ ಮುಮುಕ್ಷುಗಳು ಆದಿಪುರುಷನಾದ ನನ್ನನ್ನು ಶರಣ ಹೊಂದಿಯೇ ತ್ರಿಗುಣಮಾಯೆಯ ಬಂಧವನ್ನು ಬಿಡಿಸಿಕೊಂಡರು. ಆದುದರಿಂದ ಬಂಧವಿಮೋಚನವನ್ನಪೇಕ್ಷಿಸತಕ್ಕವನು ನನ್ನ ಚರಣಾರವಿಂದಗಳನ್ನಾಶ್ರಯಿಸಿಯೆ ಬಂಧವಿಮೋಚನವನ್ನು ಮಾಡಿಕೊಳ್ಳಬೇಕೆಂದುಭಾವವು. ॥೪॥

(ಗೀ॥ವಿ) ಸುವಿರೂಢಮೂಲಂ-ವಿಷ್ಣು ಮೊದಲಾದವರನ್ನು ಮೂಲವಾಗಿವುಳ್ಳ, ದೃಢೇನ-(ಶಂ) ಪರಮಾತ್ಮನನ್ನೇ ನಿಶ್ಚಯವಾಗಿ ನಂಬಿ ಆಚಾರ್ಯ್ಯರಿಂದ ವಿವೇಕಾಭ್ಯಾಸವೆಂಬ ಸಾಣೆಯಲ್ಲಿ ತೀಕ್ಷ್ಣವಾಗಿ ಮಾಡಲ್ಪಟ್ಟಿರುವ, ಅಸಂಗಶಸ್ತ್ರೇಣ-ಪುತ್ರಮಿತ್ರ ದ್ರವ್ಯಾದಿ ವಸ್ತುಗಳಲ್ಲಿರುವ ಅಭಿಮಾನವನ್ನು ಬಿಡುವುದೆ ವೈರಾಗ್ಯವು. ಈ ವೈರಾಗ್ಯವೆಂಬ ಆಯುಧದಿಂದ, (ಮ) ಸಂಗತ್ಯಾಗಮೊದಲೆ ಕೂಡಿರುವ

ಜ್ಞಾನವೆಂಬ ಆಯುಧದಿಂದ, ಛಿತ್ವಾ-(ಶಂ) ಸಂಸಾರವೃಕ್ಷವನ್ನು ಬೀಜದೊಡನೆ ನಾಶಪಡಿಸಿ, (ಮ) ಸಂಸಾರವನ್ನು ನಾಶಪಡಿಸಿ, ಪದಂ-(ಮ॥ ಗಿ॥ ವಿ॥) ತತಃ-ಪಗಂ ಎಂಬದಾಗಿ ಪಾಠವು. ಪರಾವರ ತತ್ವವಿಷಯಕವಾದ ವಿಚಾರಣಾನನ್ತರದಲ್ಲಿ. ॥೩॥ ೪॥

(ಮ॥ ಗೀ॥ ವಿ॥) ಅಸ್ಯ-ಈ ಸಂಸಾರವೃಕ್ಷಕ್ಕೆ, ಆದಿಃ-ಯಾವನು ಉತ್ಪತ್ತಿಕಾರಣನೋ, ಸಂಪ್ರತಿಷ್ಠಾ-ಯಾವನು ಸ್ಥಿತಿಕಾರಣನೋ, ಅಂತಃ-ಯಾವನು ನಾಶಕಾರಣವೊ, ಸಂಸಾರವೃಕ್ಷದಲ್ಲನುಪ್ರವೇಶಿಸಿರುವ ಆ ವಿಷ್ಣುವಿನ, ರೂಪಂ-ಸ್ವರೂಪವು, ನೋಪಲಭ್ಯತೆ-ತಿಳಿಯಲ್ಪಡುವುದಿಲ್ಲವು. ॥೩॥ ೪॥

(ಶಂ॥ ಭಾ॥) ಹಿಂದಿನ ಶ್ಲೋಕಗಳಿಂದ ವಿವರಿಸಲ್ಪಟ್ಟ ಸಂಸಾರವೃಕ್ಷವು ಆಗಾಗ್ಯೆ ರಾಗಾದಿಗಳಿಂದ ವೃದ್ಧಿಯಾಗುವುದರಿಂದ ಅನಾದಿಯಾದ ಆ ವೃಕ್ಷವು ತಾನಾಗಿಯೇ ಮುರಿದುಹೋಗುವುದಿಲ್ಲವು, ಆದರೆ ಯಾರಿಂದಲೂ ಛೇದಿಸಲ್ಪಡುವುದಕ್ಕೆ ಶಕ್ಯವಲ್ಲವೋ ? ಎಂದರೆ ಎಲೈ ಅರ್ಜುನನೇ ಅದಕ್ಕೆ ಉತ್ತರವನ್ನು ಹೇಳುವೆನು ಕೇಳು. ಈ ಸಂಸಾರವೃಕ್ಷಕ್ಕೆ ಸ್ವರೂಪವಿರುವುದಾಗಿ ಶಾಸ್ತ್ರಗಳಿಂದ ತಿಳಿಯಲ್ಪಡುತ್ತದೆ ಹೇಗೆ ಎಂದರೆ ? ಸ್ವಪ್ನದಲ್ಲಿ ಕಂಡಪದಾರ್ಥಗಳಂತೆಯೂ ಮರೀಚಿಕಾ ನೀರಿನಂತೆಯೂ ಮಾಯಾಗಂಧರ್ವ ನಗರದಂತೆಯೂ ನಿಜವಾಗಿಲ್ಲದಿದ್ದರೂ ಇರುವಂತೆ ಕಾಣಲ್ಪಟ್ಟವ ತಕ್ಷಣವೇ ನಶಿಸಿಹೋಗುವಂತೆ ಇರುವುದಾದುದರಿಂದ ಗುರೂಪದೇಶ ಶಾಸ್ತ್ರವಿಚಾರಗಳಿಂದ ಸ್ವಸ್ವರೂಪವಾದ ಜ್ಞಾನವುಂಟಾದ ಮೇಲೆ ಸಂಸಾರವೃಕ್ಷದ ಸ್ವರೂಪವು ಇಲ್ಲವೆಂಬದಾಗಿ ಊಹಿಸಲ್ಪಡುವುದು. ಅದಿಲ್ಲವಾದುದರಿಂದ ಅದಕ್ಕೆ ಆದಿಮಧ್ಯಾಂತಂಗಳಿರುವುವೆನ್ನಲು ಆಗಲಾರದು. ಆದುದರಿಂದಲೇ ಅಮೇಯವೆಂತಲೂ ಅನಿರ್ವಚನೀಯವೆಂತಲೂ ಹೇಳಲ್ಪಡುವುದು. ಈ ಪ್ರಕಾರವಾಗಿ ದೃಢವಾದ ಬೇರುಗಳಿಂದ ರೂಢಮೂಲವಾಗಿರುವಂತೆ ಕಾಣುವ ಈ ಸಂಸಾರಾಶ್ವತ್ಥವನ್ನು ಪರಮಾತ್ಮಾಭಿಮುಖ್ಯ ನಿಶ್ಚಯದಿಂದದೃಢೀಕರಿಸಲ್ಪಟ್ಟ ವಿವೇಕಾಭ್ಯಾಸವೆಂಬ ಸಾಣೆಕಲ್ಲಿನಲ್ಲ ಪುನಃ ಪುನಃ ತೀಕ್ಷ್ಣಮಾಡಲ್ಪಟ್ಟು ಇರುವ (ಈಷಣತ್ರಯವೈಮುಖ್ಯವೆಂಬ) ವೈರಾಗ್ಯರೂಪವಾದ ಖಡ್ಗದಿಂದ ಛೇದಿಸಿಬಿಟ್ಟು ಯಾವ ಅಶ್ವತ್ಥಕ್ಕೆ

ಹೊರಗಾಗಿರುವ ಸ್ವಸ್ವರೂಪಾನುಭವ ನಿಷ್ಠೆಯುಂಟಾದಮೇಲೆ ಪುನಃ ಸಂಸಾರ ಭ್ರಾಂತಿಯುಂಟಾಗಲಾರದೋ ಅಂಥಾ ಪರಮಾತ್ಮನ ಸ್ವರೂಪವೆ ತಾನೆಂಬದಾಗಿ ನಿಶ್ಚಯಿಸಿ ಈ ಸಂಸಾರವೈಚಿತ್ರ್ಯವು ಇಂದ್ರಜಾಲದಂತೆ (ಗಾರಡಿವಿದ್ಯೆಯಂತೆ) ಪರಮಾತ್ಮಸ್ವರೂಪದಲ್ಲಿ ಅನಾದಿಮಾಯಾ ಸಂಬಂಧದಿಂದ ಪ್ರತಿಭಾಸಿಸುವಂತೆ ಇರುವುದೆಂಬ ಜ್ಞಾನವುಳ್ಳವನಾಗಿ ಸರ್ವದಾ ಸ್ವಸ್ವರೂಪಾನುಭವಾ ವಸ್ಥೆಯಲ್ಲಿರುವುದಕ್ಕೆ ಪ್ರಯತ್ನಿಸ ಬೇಕು. ||೩|| ೪||

ಮೂ || ನಿರ್ಮಾನಮೋಹಾಜಿತಸಂಗದೋಷಾಅಧ್ಯಾತ್ಮ
ನಿತ್ಯಾವಿನಿವೃತ್ತಕಾಮಾಃದ್ವಂದ್ವೈರ್ವಿಮುಕ್ತಾ
ಸ್ಸುಖದುಃಖಸಂಜ್ಞೈರ್ಗಚ್ಛಂತ್ಯಮೂಢಾಃಪದ
ಮವ್ಯಯಂತತ್|| ||೫||

ಪ|| ನಿರ್ಮಾನಮೋಹಾಃ_ಜಿತಸಂಗದೋಷಾಃ-ಅಧ್ಯಾತ್ಮನಿತ್ಯಾಃ-ವಿನಿವೃತ್ತಕಾಮಾಃ| ದ್ವಂದ್ವೈಃ-ವಿಮುಕ್ತಾಃ_ಸುಖದುಃಖಸಂಜ್ಞೈಃ-ಗಚ್ಛಂತಿ_ಅಮೂಢಾಃ-ಪದಂ- ಅವ್ಯಯಂ-ತತ್ |

(ಅ|| ರಾ|| ಭಾ||) ನಿರ್ಮಾನಮೋಹಾಃ-ಈ ಪ್ರಕಾರವಾಗಿ ನನ್ನಲ್ಲಿ ಶರಣಾಗತಿಯನ್ನು ಮಾಡಿ ದೇಹಾತ್ಮಾಭಿಮಾನವೆಂಬ ಮೋಹವನ್ನು ತೊಲಗಿಸಿದವರಾಗಿಯೂ, ಜಿತಸಂಗದೋಷಾಃ-ಗುಣಮಯಭೋಗಾಸಕ್ತಿಯೆಂಬ ದೋಷವನ್ನು ಜಯಿಸಿದವರಾಗಿಯೂ, ಅಧ್ಯಾತ್ಮನಿತ್ಯಾಃ-ಆತ್ಮಜ್ಞಾನನಿರತರಾಗಿಯೂ, ವಿನಿವೃತ್ತಕಾಮಾಃ-ಇತರ ಫಲಗಳಲ್ಲಿ ಇಚ್ಛೆಯಿಲ್ಲದವರಾಗಿಯೂ, ಸುಖದುಃಖಸಂಜ್ಞೈಃದ್ವಂದ್ವೈರ್ವಿಮುಕ್ತಾಃ- ಸುಖದುಃಖರೂಪಗಳಾಗಿರುವ ಶೀತೋಷ್ಣಾದಿ ದ್ವಂದ್ವಗಳಿಂದ ಬಿಡಲ್ಪಟ್ಟವರಾಗಿಯೂ ಇರುವ, ಅಮೂಢಾಃ-ಆತ್ಮಾನಾತ್ಮಸ್ವರೂಪವನ್ನು ಸಮೀಚೀನವಾಗಿ ತಿಳಿದಿರುವ ಜ್ಞಾನಿಗಳು, ತದವ್ಯಯಂಪದಂಗಚ್ಛಂತಿ-ಅಂಥಾ ನಿತ್ಯವಾದ ಸ್ಥಾನವನ್ನು ಹೊಂದುತ್ತಾರೆ. ಅಳವಿಲ್ಲದ ಜ್ಞಾನಾಕಾರನಾದ ಆತ್ಮನನ್ನು ಯಥಾವಸ್ಥಿತವಾಗಿ ಹೊಂದುತ್ತಾರೆಂದರ್ಥವು. (,,ತತಃ-ಪದಂತತ್ಪರಿಮಾರ್ಗಿತವ್ಯಂ,, ಎಂಬ ಸ್ಥಾನದಲ್ಲಿ ಹೇಳಿರುವ ಪದಶಬ್ದಾರ್ಥವಾದ ಸ್ಥಾನವೂ ಇದೆ. ಇಲ್ಲಿ ಪರಮಾತ್ಮನು ಪದಶಬ್ದದಿಂದ ಹೇಳಲ್ಪಡಲಿಲ್ಲನು. ,,ಪ್ರಾಪಣೀ

ಯಸ್ತತ್ರೈವಾತ್ಮಾಪ್ರಕ್ಷೀಣಾಶೇಷಭಾವನಃ ,, ಎಂಬೀ ರೀತಿಯಾಗಿ ಯೂ, ಪದ್ಯತ ಇತಿಪದಂ ಎಂಬ ವ್ಯುತ್ಪತ್ತ್ಯನುಸಾರವಾಗಿಯೂ ಪರಿಶುದ್ಧನಾದ ಆತ್ಮನಿಗೂ ಪರಮಾತ್ಮನಂತೆ ಪ್ರಾಪ್ಯತ್ವವಿರುವುದಷ್ಟೆ. (ತಾ॥ ಚಂ॥) ನನ್ನಲ್ಲಿ ಶರಣಾಗತಿ ಮಾಡಿದವರಿಗೆ ನನ್ನ ಅನುಗ್ರಹದಿಂದಲೆ ಈ ಸರ್ವ ಪ್ರವೃತ್ತಿಗಳೂ ಸುಖಸಾಧ್ಯಗಳಾಗಿಯೂ ಸಿದ್ಧಿಪರ್ಯಂತಗಳಾಗಿಯೂ ಆಗುವುದೆಂದು ತಾತ್ಪರ್ಯವು. ।೪॥

(ಶಂ॥ ಭಾ॥) ಎಂಥಾವರು ಅಂಥಾ ಸ್ಥಾನವನ್ನು ಹೊಂದುತ್ತಾರೆಂದರೆ ಹೇಳುವನು. ಸಮಸ್ತ ಕರ್ಮಗಳನ್ನು ಮಾಡಿ ಆ ಫಲಗಳನ್ನನುಭವಿಸುವಂತವನು ತಾನೆಂಬ ಕರ್ತೃತ್ವವನ್ನೂ, (ಸಮಸ್ತ ಪ್ರಪಂಚವೂ ನಿತ್ಯವೆಂತಲೂ ಅದು ತನಗೆ ಸುಖಗಳನ್ನುಂಟುಮಾಡುವುದೆಂತಲೂ ಉಂಟಾಗುವ) ಮೋಹವನ್ನೂ ಬಿಟ್ಟು ಕೆಲವರನ್ನು ಮಿತ್ರರನ್ನಾಗಿ ಭಾವಿಸಿ ಅವರಲ್ಲಿ ದ್ವೇಷವಿಲ್ಲದೆ ಸರ್ವ ಸಮಬುದ್ಧಿಯುಳ್ಳವನಾಗಿ ಐಹಿಕಾಮುಷ್ಮಿಕ ಫಲಗಳಲ್ಲಪೇಕ್ಷೆಗಳನ್ನು ಸವಾಸನವಾಗಿ ಬಿಟ್ಟು ಶೀತೋಷ್ಣ ಸುಖದುಃಖಾದಿ ದ್ವಂದ್ವಗಳೆಲ್ಲ ಯಾವದು ಪ್ರಾಪ್ತವಾದರೂ ಚಲಿಸದೆ ಗುರೂಪದೇಶ ಮೂಲಕವಾಗಿ ಅಜ್ಞಾನನಿವೃತ್ತಿಯನ್ನು ಮಾಡಿಕೊಂಡು ನಿರಂತರವಾಗಿ ನಿಷ್ಠೆಯನ್ನು ಮಾಡುವ ಬ್ರಹ್ಮಜ್ಞಾನಿಯು ಶಾಶ್ವತವಾದ (ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ) ವೈಷ್ಣವ ಸ್ಥಾನವನ್ನು ಹೊಂದುವನು. ॥೫॥

ಮೂ॥ ನತದ್ಭಾಸಯತೆ ಸೂರ್ಯೋ ನಶಶಾಂಕೋ ನಪಾ
ವಕಃ । ಯದ್ಗತ್ವಾನನಿವರ್ತಂತೆ ತದ್ಧಾಮ ಪರ
ಮಂಮಮ॥ ॥೬॥

ಪ॥ ನ-ತತ್-ಭಾಸಯತೆ-ಸೂರ್ಯಃ-ನ-ಶಶಾಂಕಃ-ನ-ಪಾವಕಃ।ಯತ್-ಗತ್ವಾ-ನ-ನಿವರ್ತಂತೆ-ತತ್-ಧಾಮ-ಪರಮಂ-ಮಮ॥

(ಅ॥ ಶಂ॥ ಭಾ॥) ಯತ್-ಯಾವ ವೈಷ್ಣವಸ್ಥಾನವನ್ನು, ಗತ್ವಾ-ಹೊಂದಿದ ಮೇಲೆ, ನನಿವರ್ತಂತೆ-ಹಿಂದಕ್ಕೆ ತಿರಗಲಾರರೋ, ತತ್-ಅಂತಹ ವೈಷ್ಣವಸ್ಥಾನವನ್ನು, ಸೂರ್ಯಃ-ಸೂರ್ಯನೂ, (ಸೂರ್ಯನು ಸರ್ವ ಪ್ರಕಾಶಕನಾಗಿದ್ದರೂ ಆ ಸ್ಥಾನವನ್ನು ಪ್ರಕಾಶಪಡಿಸಲಾರನು,) ಶಶಾಂಕಃ-ಚಂದ್ರನೂ, ನ-ಪ್ರಕಾಶಪಡಿಸಲಾರನು, ಪಾ

ಪಾವಕಃ-ಅಗ್ನಿಯೂ, ನ-ಪ್ರಕಾಶಪಡಿಸಲಾರನು, (ಯಾವಸ್ಥಾನವನ್ನ ಇವರು ಪ್ರಕಾಶಪಡಿಸಲಾರರೊ,) ತತ್-ಅದು, ಮಮ-ವಿಷ್ಣುವಾದ ನನ್ನ, ಪರಮಂ-ಶ್ರೇಷ್ಠವಾದ, ಧಾಮ-ತೇಜೋರೂಪವಾದ ಸ್ಥಾನವು. ||೬||

(ರಾ|| ಭಾ||) ಜೀವಾತ್ಮ ಜ್ಯೋತಿಸ್ಸನ್ನು ಸೂರ್‍ಯನು ಪ್ರಕಾಶಪಡಿಸಲಾರನು, ಚಂದ್ರನೂ ಪ್ರಕಾಶಪಡಿಸಲಾರನು, ಅಗ್ನಿಯೂ ಪ್ರಕಾಶಪಡಿಸಲಾರದು. ಅದು ಹೇಗೆಂದರೆ? ಜ್ಞಾನವಲ್ಲವೆ ಸಮಸ್ತವಸ್ತುಗಳನ್ನೂ ಪ್ರಕಾಶಪಡಿಸುವುದು. ಬಾಹ್ಯಗಳಾದ ಆದಿತ್ಯಾದಿ ಜ್ಯೋತಿಸ್ಸುಗಳು ಘಟಾದಿವಿಷಯಗಳಿಗೂ ಚಕ್ಷುರಾದೀಂದ್ರಿಯಗಳಿಗೂ ಸಂಬಂಧವುಂಟಾಗುವುದನ್ನು ವಿರೋಧಿಸುವ ಅಂಧಕಾರವನ್ನು ಹೋಗಲಾಡಿಸಿ ಆ ಮುಖದಿಂದಉಪಕಾರಕಗಳಾಗುವುವು. ಅಷ್ಟುಮಾತ್ರದಿಂದಲೆ ಅವುಗಳನ್ನು ಪ್ರಕಾಶಕಗಳೆಂಬದಾಗಿ ಉಪಚಾರದಿಂದ ಹೇಳುತ್ತಾರೆ. (ಆದರೆ ಈ ಆತ್ಮಸ್ವರೂಪಕ್ಕೆ ಪ್ರಕಾಶಕವ್ಯಾವದೆಂದರೆ? ‟ಆತ್ಮದೃಷ್ಟೇಸ್ತ್ರಯೋಪ್ಯೇತೆಯೋಗದ್ವಾರೇಣಸಾಧಕಾಃ„ ಎಂಬ ಗೀತಾರ್ಥಸಂಗ್ರಹ ವ್ಯಾಖ್ಯಾನ ಸಂದರ್ಭದಲ್ಲಿ ಶ್ರೀಗೀತಾರ್ಥ ಸಂಗ್ರಹ ರಕ್ಷೆಯಲ್ಲಿ ‟ಯೋಗೋತ್ರಸಮಾಧಿರೂಪಮನಃಕರಣೈಕಾಗ್ರ್ಯಂ„ ಎಂಬದಾಗಿ ಶ್ರೀಮನ್ನಿಗಮಾಂತ ಮಹಾದೇಶಿಕರು ಅನುಗ್ರಹಿಸಿರುವಂತೆ ಮನಸ್ಸನ್ನಾತ್ಮಸ್ವರೂಪದಲ್ಲ ನಿಲ್ಲಿಸುವಿಕೆಯೆಂಬ ಸಮಾಧಿಯು.) ಇಂತಹ ಸಮಾಧಿಗೆ ವಿರೋಧಿಯು ಅನಾದಿಕರ್ಮವು. ಆ ಕರ್ಮನಿವರ್ತಕವು ಭಗವಚ್ಚರಣಾರವಿಂದ ಶರಣಾಗತಿಮೂಲವಾಗಿ ಬಂದವೈರಾಗ್ಯಾದಿಕವೆಂಬದಾಗಿ ತಿಳಿಯಬೇಕು. ಯಾವ ಆತ್ಮಜ್ಯೋತಿಸ್ಸನ್ನು ಹೊಂದಿದವರು ಪುನಃ ಸಂಸಾರಿಗಳಾಗುವುದಿಲ್ಲವೋ? ಅಂತಹ ಉತ್ತಮವಾದ ಆತ್ಮಜ್ಯೋತಿಸ್ಸು ನನ್ನದು. ನನಗೆ ವಿಭೂತಿಯು ನನ್ನ ಅಂಶವೆಂದರ್ಥವು. ಈ ಆತ್ಮಜ್ಯೋತಿಸ್ಸು ತನ್ನ ಧರ್ಮಭೂತಜ್ಞಾನದಿಂದ ಸೂರ್‍ಯಾದಿಗಳನ್ನೂ ಪ್ರಕಾಶಪಡಿಸುವುದರಿಂದಲೂ ಸೂರ್‍ಯಾದಿ ಜ್ಯೋತಿಸ್ಸುಗಳು ಜ್ಞಾನ ಜ್ಯೋತಿಸ್ಸನ್ನು ಪ್ರಕಾಶಪಡಿಸಲಾರವಾದುದರಿಂದಲೂ ಈ ಆತ್ಮಜ್ಯೋತಿಸ್ಸನ್ನು ಉತ್ತಮವೆಂದು ಹೇಳಿತು. ಇಷ್ಟೋ ಸೂರ್‍ಯನು, ಇಷ್ಟೋ ಚಂದ್ರನು, ಇ

ದೋ ಅಗ್ನಿಯೆಂಬದಾಗಿ ಸೂರ್ಯಾದಿ ಸರ್ವವಸ್ತುಗಳನ್ನೂ ಜ್ಞಾನವಲ್ಲ
ವೇ ಪ್ರಕಾಶಪಡಿಸುತ್ತದೆ. ‖೬‖

ಮೂ‖ ಮಮೈವಾಂಶೋಜೀವಲೋಕೇಜೀವಭೂತಸ್ಸನಾ
ತನಃ । ಮನಷ್ಷಷ್ಠಾನೀಂದ್ರಿಯಾಣಿಪ್ರಕೃತಿಸ್ಥಾ
ನಿಕರ್ಷತಿ‖ ‖೭‖

ಪ‖ ಮಮ-ಏವ-ಅಂಶಃ-ಜೀವಲೋಕೇ-ಜೀವಭೂತಃ-ಸನಾತನಃ-ಮನಷ್ಷಷ್ಠಾನಿ-ಇಂ
ದ್ರಿಯಾಣಿ-ಪ್ರಕೃತಿಸ್ಥಾನಿ-ಕರ್ಷತಿ‖

(ಅ‖ ರಾ‖ ಭಾ‖) ಈ ಪ್ರಕಾರವಾಗಿ ಹೇಳಲ್ಪಟ್ಟ ನಿತ್ಯನಾದ ಆತ್ಮನು, ಮಮಾಂಶಏವಸರ್-(ಪ್ರಕಾಶ ವಿಶಿಷ್ಟವಾದ ತೇಜೋದ್ರವ್ಯಕ್ಕೆ ಪ್ರಕಾಶದಂತೆಯೂ ಘಟತ್ವ ವಿಶಿಷ್ಟಘಟಕ್ಕೆಘಟತ್ವದಂತೆಯೂ ಚೇತನಾ ಚೇತನವಸ್ತುವಿನಲ್ಲಿ ಏಕದೇಶವಾಗಿರುವುದರಿಂದ) ನನಿಗೆ ಅಂಶವಾಗಿಯೇ ಇರುವಂತವನಾಗಿ, ಜೀವಭೂತಃ-ಕರ್ಮಾವಿದ್ಯಾವೇಷ್ಟಿತನಾಗುತ, ಜೀವಲೋಕೆವರ್ತಮಾನಃ-ಈ ಜೀವಲೋಕದಲ್ಲಿ ಇರುವಂತವನಾಗಿ, ಪ್ರಕೃತಿಸ್ಥಾನಿ-ದೇವ ಮನುಷ್ಯಾದಿಶರೀರತ್ವೇನ ಪರಿಣಾಮವನ್ನು ಹೊಂದಿರುವ ಪ್ರಕೃತಿಯಲ್ಲಿರುವ, ಮನಷ್ಷಷ್ಠಾನೀಂದ್ರಿಯಾಣಿ-ಮನಸ್ಸನ್ನು ಆರನೇದಾಗಿಯುಳ್ಳ, ಕಿವಿ,ಚರ್ಮವು, ಕಣ್ಣು, ನಾಲಿಗೆ, ಮೂಗೆಂಬ ಇಂದ್ರಿಯಗಳನ್ನು, ಕರ್ಷತಿ-ಎಳದುಕೊಂಡು ಹೋಗುತ್ತಾನೆ. ಇದರ ತಾತ್ಪರ್ಯವೇನೆಂದರೆ ಒಬ್ಬನು ಪೂರ್ವೋಕ್ತವಾದ ಮಾರ್ಗದಿಂದ ಈ ಅವಿದ್ಯೆಯಿಂದ ಬಿಡಲ್ಪಟ್ಟವನಾಗಿ ತನ್ನ ಸ್ವರೂಪದೊಡನೆ ಇರುತ್ತಾನೆ. ಜೀವಭೂತನಾದ ಬದ್ಧನೋ ಎಂದರೆ ಅತಿಸಂಕುಚಿತ ಜ್ಞಾನೈಶ್ವರ್ಯಗಳುಳ್ಳವನಾಗಿ ಕರ್ಮಲಬ್ಧವಾಗಿಯೂ ಪ್ರಕೃತಿಯ ಪರಿಣಾಮ ವಿಶೇಷವಾಗಿಯೂ ಇರುವ ಶರೀರದಲ್ಲಿದ್ದುಕೊಂಡು ಮನಃಪರ್ಯಂತಗಳಾದ ಇಂದ್ರಿಯಗಳಿಗೆ ನಿಯಂತಾವಾಗಿ ಅವುಗಳನ್ನು ಕರ್ಮಾನುಸಾರವಾಗಿ ತಾನು ಪ್ರವೇಶಿಸುವ ಪ್ರತಿ ಶರೀರಗಳಲ್ಲಿಯೂ ಎಳೆದುಕೊಂಡು ಹೋಗುತ್ತಾನೆಂಬದಾಗಿ ತಿಳಿಯಬೇಕು. ‖೭‖

(ಶಂ‖ ಭಾ‖) "ಯದ್ಗತ್ವಾನನಿವರ್ತಂತೆ,, ಎಂಬದಾಗಿ ಹಿಂದಿ

ನ ಶ್ಲೋಕದಲ್ಲಿ ಹೇಳಲ್ಪಟ್ಟಿತಲ್ಲವೆ ? ಆದರೆ ಲೋಕದಲ್ಲಿ ಸಮಸ್ತವಾದ ಗಮನವು ಪುನಃ ಹಿಂದಕ್ಕೆ ತಿರಿಗಿ ಬರುವುದನ್ನೆ ಅಂತವಾಗಿವುಳ್ಳದ್ದೆಂತಲೂ ಸಂಯೋಗವು ವಿಪ್ರಯೋಗಾಂತವೆಂತಲೂ ಪ್ರಸಿದ್ಧವಾಗಿರುವಲ್ಲಿ ಬ್ರಹ್ಮಸ್ವರೂಪವನ್ನು ಹೊಂದಿದವರು ಪುನಃ ಸಂಸಾರಕ್ಕೆ ಬರಲಾರರೆಂದು ಹೇಗೆ ಹೇಳಬಹುದು ? ಎಂದರೆ ಅದಕ್ಕೆ ತಕ್ಕ ಕಾರಣವನ್ನು ಕೇಳೆಂದು ಶ್ರೀಕೃಷ್ಣನು ಬೋಧಿಸುತ್ತಾನೆ. ಪರಮಾತ್ಮನಾದ ನನ್ನ ಅಂಶನಾದ ಜೀವನು ನನ್ನ ಒಂದು ಭಾಗವಾಗಿರುತ್ತಾನೆ. ಅವನು ಅವಿದ್ಯೆ ಎನ್ನಲ್ಪಡುವ ಉಪಾಧಿಯಿಂದ ಸಂಸಾರದಲ್ಲಿ ತಾನು ಕರ್ತಾ, ತಾನು ಭೋಕ್ತಾ ಎಂಬದಾಗಿ ಬಹುಕಾಲದಿಂದ ಪ್ರಸಿದ್ಧಿಯನ್ನು ಹೊಂದಿರುತ್ತಾನೆ. ಆ ಜೀವನು ಅಖಂಡಾಕಾರವಾಗಿಯೂ ಒಂದೇ ವಸ್ತುವಾಗಿರುವ ನನ್ನ ಅಂಶವಾಗಿಯೂ ನನಗಿಂತಲೂ ಅನ್ಯನಲ್ಲವೆಯೂ ಹೇಗೆ ಇರಬಹುದೆಂದರೆ ? ಸೂರ್ಯನು ಜಲದಲ್ಲಿ ಕಾಣಲ್ಪಡುತ್ತಾನೆ, ಜಲದಲ್ಲಿ ಕಾಣಲ್ಪಡುವ ಸೂರ್ಯನು ಆಕಾಶ ಮಾರ್ಗದಲ್ಲಿರುವ ಸೂರ್ಯನ ಪ್ರತಿಬಿಂಬವಲ್ಲದೆ ಇತರವಾದದ್ದಲ್ಲವಷ್ಟೆ. ಆದರೆ ಜಲವೆಂಬ ಉಪಾಧಿಯಿಂದ ಬೇರೆ ಯಾಗಿರುವಂತೆ ಕಾಣಲ್ಪಡುತ್ತದೆ. ಉಪಾಧಿಯಾದ ಜಲಕ್ಕೆ ಅಪಾಯವುಂಟಾದರೆ ಸೂರ್ಯಪ್ರತಿಬಿಂಬವು ಕಾಣಲ್ಪಡುವುದಿಲ್ಲವು. ಯಾವಜಲದಲ್ಲಿ ಕಾಣಲ್ಪಟ್ಟಿತೋ ಆಜಲವನ್ನು ಬಿಟ್ಟುನೋಡಿದರೆ ಒಂದೆ ಸೂರ್ಯನು ಕಾಣಲ್ಪಡುತ್ತಾನಲ್ಲದೆ ಈ ಎರಡು ಪ್ರದೇಶಗಳಲ್ಲಿ ಎರಡು ಸೂರ್ಯರು ಕಾಣಲ್ಪಡುವುದಿಲ್ಲವು. ಆಕಾಶದಲ್ಲಿ ಒಂದೇ ಸೂರ್ಯನಿರುವನು. ಆ ಪ್ರಕಾರವೆ ಘಟಾದ್ಯುಪಾಧಿಯಿಂದ ಕೂಡಿರುವ ಘಟಾದ್ಯಾಕಾಶವೂ ಆಕಾಶಾಂಶವಾಗಿದ್ದುಕೊಂಡೆ ಘಟಾದ್ಯುಪಾಧಿಗೆ ಅಪಾಯ ಉಂಟಾದರೆ ಘಟಾಕಾಶವು, ಮಹಾಕಾಶಕ್ಕಿಂತಲೂ ಅನ್ಯವಲ್ಲವೆಂಬದಾಗಿಯೇ ಕಾಣಲ್ಪಡುತ್ತದೆ. (ಇಲ್ಲಿಯೂ ಎರಡಾಕಾಶವಿಲ್ಲವು) ಇದರಂತೆ ಬ್ರಹ್ಮಾಂಶವಾಗಿಯೂ ಬ್ರಹ್ಮಕ್ಕಿಂತಲೂ ಅನ್ಯನಲ್ಲವಾಗಿಯೂ ಇರುವ ಜೀವಾತ್ಮನು ಮಾಯಾಕಾರ್ಯವಾದ ಅವಿದ್ಯಾ ಎಂಬ ಉಪಾಧಿಯಿಂದ ದೇಹಾದಿಗಳಲ್ಲಿ ಬೇರೆಯಾಗಿ ಕಾಣಲ್ಪಟ್ಟರೂ ಉಪಾಧಿನಿವೃತ್ತಿಯಾದಮೇಲೆ ಆ ಜೀವನು ಯಾವ ಬ್ರಹ್ಮಾಂಶನೊ ಆ ಆತ್ಮ

ಶಿಯಾದ ಬ್ರಹ್ಮವೆ ಆಗುತ್ತಾನೆ. ಅಂಶವು ಅಂಶಿಯನ್ನು ಹೊಂದಿದರೆ ಪುನಃ ಹಿಂದಕ್ಕೆ ತಿರುಗಿಬರುವುದಿಲ್ಲವು. ಜೀವನು ಈಶ್ವರ ಭಿನ್ನನು ಅವನು ಕರ್ತಾ ಭೋಕ್ತಾ ಜನನಮರಣಾದಿಗಳುಳ್ಳವನೆಂಬೀ ವಾದಗಳೆಲ್ಲವು ಅವಿದ್ಯಾ ಸ್ವರೂಪವಾದ ಅಜ್ಞಾನದಿಂದ ಉಂಟಾಗಿರುವುವೆ. ಅವಿದ್ಯಾ ನಿವೃತ್ತಿಯಾದಮೇಲೆ ನಿಂತಿರುವುದು ಬ್ರಹ್ಮವಲ್ಲದೆ ಬೇರೆಯಾವದೂ ಇಲ್ಲವು. ಆದುದರಿಂದ ‟ ಯದ್ಗತ್ವಾನನಿವರ್ತಂತೇ „ ಎಂಬದಾಗಿ ಹೇಳಿದ್ದು ಯುಕ್ತವೇಸರಿ.

ಆದರೆ ನಿರವಯವನಾದ ಪರಮಾತ್ಮನಿಗೆ ಅವಯವಗಳೆಲ್ಲಿ ? ಅವಯವಗಳುಂಟೆಂದರೆ ಅವಯವಗಳುಳ್ಳ ವಸ್ತುಗಳೆಲ್ಲವೂ ನಾಶ ಹೊಂದುವುದರಿಂದ ಪರಮಾತ್ಮನಿಗೂ ನಾಶಪ್ರಸಂಗವುಂಟಾಗಲಾರದೊ ? ಎಂದರೆ ಇದರಿಂದ ಪರಮಾತ್ಮನಿಗೆ ಯಾವದೋಷವೂಇಲ್ಲವು. ಏತಕ್ಕೆಂದರೆ ? ಅವಿದ್ಯೋಪಾಧಿ ಪರಿಚ್ಛಿನ್ನವಾದ ಪರಮಾತ್ಮೈಕ ದೇಶಾಂಶದಂತೆ ಕಲ್ಪಿತಗಳಾಗಿರುವುದರಿಂದ ಈ ದೋಷವಿಲ್ಲವು. ಈ ಅಂಶವು ಕ್ಷೇತ್ರಕ್ಷೇತ್ರಜ್ಞವಿಭಾಗ ಪ್ರಕರಣದಲ್ಲಿ (೧೩ನೆ ಅಧ್ಯಾಯದ ೩ನೆ ಶ್ಲೋಕದಲ್ಲಿ) ವಿಸ್ತಾರವಾಗಿ ವ್ಯಾಖ್ಯಾತವಾಗಿರುವುದು. ನನ್ನ ಅಂಶವಾಗಿ ಕಲ್ಪಿತನಾದ ಜೀವನು ಹೇಗೆ ಸಂಸಾರಿಯಾಗಿರುವನೊ ಹೇಗೆ ಮುಕ್ತನಾಗುವನೊ ಆ ಸಂದರ್ಭವನ್ನು ತಿಳಿಸುವೆನು ಕೇಳು. ತ್ವಕ್ಚಕ್ಷುಶ್ಶ್ರೋತ್ರಜಿಹ್ವಾಘ್ರಾಣಾಂತಃಕರಣ ರೂಪಗಳಾದಇಂದ್ರಿಯಗಳೆಂಬ ಅವಿದ್ಯಾ ಜನ್ಯೋಪಾಧಿಗಳೊಡನೆ ಸಂಪರ್ಕವೆ ಸಂಸಾರವೆನ್ನಲ್ಪಡುವುದು. ಅವು ಸ್ವಸ್ವರೂಪಸ್ವಾನುಭವದ್ದಶೆಯಿಂದ ನಿವೃತ್ತವಾಗುವುದೆ ಮುಕ್ತಿಯೆನ್ನಲ್ಪಡುವುದು. ‖೭‖

(ಗೀ‖ವಿ‖ ಜಗದ್ವೃಕ್ಷವನ್ನು ಛೇಧಿಸುವುದಕ್ಕೆ ಬ್ರಹ್ಮಾದಿವಿಷಯಕವಾದ ಪ್ರತಿಪತ್ತಿಯೇ ಸಾಕಾಗಿರುವಲ್ಲಿ ಭಗವತ್ಪ್ರತಿ ಪತ್ತಿಯಿಂದ ಆಗಬೇಕಾದದ್ದೇನು ? ಎಂದರೆ ಸಮಾಧಾನವನ್ನು ಹೇಳುತ್ತಾರೆ. ಬ್ರಹ್ಮಾದಿ ದೇಹಗಳಲ್ಲಿರುವ ಜೀವರು ನನ್ನ ಅಂಶವೆ, ಅವರು ನನಗೆ ಅನ್ಯರಾಗಿದ್ದರೂ (ಸೂರ್ಯನಿಗೆ ಖದ್ಯೋತಗಳೆಂಬ ಹುಳಗಳಂತೆ ಸ್ವಲ್ಪ ಸಾದೃಶ್ಯಮಾತ್ರದಿಂದ ಅಂಶವೆನ್ನಲ್ಪಡುವರು.) ನನ್ನ ಅಂಶಾಭಾಸರಾಗಿಯೇ ಇರುವರು. ಆ ಭಾಸಾಂಶರಾಗಿರುವುದರಿಂದ ಅಶಕ್ತತ್ವ

ವು ಬ್ರಹ್ಮಾದಿಗಳಿಗೆ ಸಂಭವಿಸಿರುವುದರಿಂದ ಆ ಬ್ರಹ್ಮಾದಿಗಳ ಪ್ರತಿಪತ್ತಿಯನ್ನು ಮಾಡುವ ಭಗವತ್ಪ್ರತಿಪತ್ತಿಯನ್ನೇ ಮಾಡಬೇಕೆಂದು ಭಾವವು. ಬ್ರಹ್ಮಾದಿಗಳು ಮತ್ಸ್ಯಾದಿಗಳಂತೆ ಸ್ವರೂಪಾಂಶರಲ್ಲವೆಂದರಿಯಬೇಕು. ಜೀವರಿಗೆ ಅಂಶಾಭಾಸತ್ವವನ್ನು ಹೇಳುವಪಕ್ಷದಲ್ಲಿ ಇವರಿಗೆ ಯಾವ ಕಾರ್ಯದಲ್ಲಿಯೂ ಶಕ್ತಿಯುಂಟಾಗದೆ ಇರಬೇಕಲ್ಲವೆ, ಎಂದರೆ? ಮನಸ್ಸಿನೊಡನೆ ಕೂಡಿ ಆರು ಇಂದ್ರಿಯಗಳನ್ನು ವಿಷಯಗಳಲ್ಲಿ ಎಳೆದುಕೊಳ್ಳುವ ವಿಷಯದಲ್ಲಿ ಮಾತ್ರವೆ ಕರ್ತೃತ್ವವು ಉಂಟು. ಸ್ಥಿತಿದಶೆಯಲ್ಲಿ ಇಂದ್ರಿಯಗಳನ್ನು ವಿಷಯಗಳಲ್ಲಿ ಎಳೆದುಕೊಳ್ಳುತ್ತಾನೆ, ಮರಣದಲ್ಲಿ ದೇಹದ್ವಾರೆಯಿಂದ ಇಂದ್ರಿಯಗಳನ್ನು ಎಳೆದುಕೊಳ್ಳುತ್ತಾನೆ. ‖೭‖

(ಶ್ಲೋ‖) ಪ್ರಕೃತಿಬಂಧವನ್ನು ನಿವೃತ್ತಿಸಿಕೊಳ್ಳದವರು ಕರ್ಮಶೇಷಗಳೊಡನೆ ಪ್ರಲಯಕಾಲದಲ್ಲಿಯೂ ಸುಷುಪ್ತಿ (ನಿದ್ರಾ)ಕಾಲದಲ್ಲಿಯೂ ಪ್ರಕೃತಿಯೊಡನೆ ಕೂಡಿರುವ ಈಶ್ವರನಲ್ಲಿ ಅಡಗಿರುತ್ತಾರೆ. ಅನಂತರ ಸೃಷ್ಟಿಕಾಲದಲ್ಲಿ ಹಿಂದಕ್ಕೆ ತಿರುಗುತ್ತಾರಲ್ಲದೆ ಕರ್ಮಬಂಧವನ್ನು ನಾಶಪಡಿಸಿಕೊಂಡು ಶುದ್ಧಬ್ರಹ್ಮವನ್ನು ಹೊಂದಿದವರು ಪುನಃ ಸಂಸಾರಿಗಳಾಗಲಾರರು. ‖೭‖

ಮೂ ‖ ಶರೀರಂಯದವಾಪ್ನೋತಿಯಚ್ಚಾಪ್ಯುತ್ಕ್ರಾ
ಮತೀಶ್ವರಃ । ಗೃಹೀತ್ವೈತಾನಿಸಂಯಾತಿವಾ
ಯುರ್ಗಂಧಾನಿವಾಶಯಾತ್‖ ‖೮‖

ಪ‖ ಶರೀರಂ-ಯತ್-ಅವಾಪ್ನೋತಿ-ಯತ್-ಚ-ಅಪಿ-ಉತ್ಕ್ರಾಮತಿ-ಈಶ್ವರಃ-ಗೃಹೀತ್ವಾ-ಏತಾನಿ-ಸಂಯಾತಿ-ವಾಯುಃ-ಗಂಧಾನ್-ಇವ-ಆಶಯಾತ್ ‖

(ಅ‖ರಾ‖ಭಾ) ಯಚ್ಛರೀರಮವಾಪ್ನೋತಿ-ಯಾವ ಶರೀರವನ್ನು ಹೊಂದುತ್ತಾನೆಯೊ, ಯದಪಿಚಉತ್ಕ್ರಾಮತಿ- (ಈವಾಕ್ಯದಲ್ಲಿರುವ ಯತ್ಪದವು, ಪಂಚಮ್ಯಂತಾರ್ಥಕವು.) ಯಾವ ಶರೀರದ್ವಾರೆಯಿಂದಮೇಲೆ ಏಳುತ್ತಾನೆಯೊ, (ತತ್ರ-ಎಂಬದಾಗಿಶೇಷವು.) ತತ್ರ-ಅಲ್ಲ, ಈಶ್ವರಃ-ಇಂದ್ರಿಯಗಳಿಗೆ ನಿಯಂತಾ ಆದ ಈ ಜೀವನು, ವಾಯುಃ-ವಾಯುವು, ಆಶಯಾತ್-ಉತ್ತಮವಾದ ಪುಷ್ಪಮಾಲಿಕೆಯು ಚಂದನವು ಕಸ್ತೂರಿ ಇವೇ ಮೊದಲಾದ ವಸ್ತುಗಳ ಬಳಭಾಗದಿಂದ, ಗಂಧಾನಿವ-

ಅವುಗಳ ಸೂಕ್ಷ್ಮಾಂಶದೊಡನೆಕೂಡ ಅಲ್ಲಿರುವ ಪರಿಮಳಗಳಂತೆ, ಏ ತಾನಿ-ಈ ಇಂದ್ರಿಯಗಳನ್ನು, ಭೂತಸೂಕ್ಷ್ಮಗಳೊಡನೆಕೂಡ; ಗೃಹೀತ್ವಾ-ಗ್ರಹಿಸಿಕೊಂಡು, ಸಂಯಾತಿ-ಹೋಗುತ್ತಾನೆ. ॥೮॥

(ಶಂ॥ಭಾ) ಹಿಂದಿನ ಶ್ಲೋಕದಲ್ಲಿ ಹೇಳಿದಪ್ರಕಾರವಾಗಿ ಮನಷ್ಷಷ್ಠಗಳಾದ ಇಂದ್ರಿಯಗಳನ್ನು ಜೀವನು ಯಾವಕಾಲದಲ್ಲಿ ಎಳೆಯುತಲಿರುವುನೊ ಅದನ್ನು ಹೇಳುವೆನುಕೇಳು. ದೇಹೇಂದ್ರಿಯಾದಿ ಸಂಘಾತಾಭಿಮಾನಿಯಾದ ಜೀವನು ಒಂದು ಶರೀರದಿಂದ ಮತ್ತೊಂದು ಶರೀರದಲ್ಲಿ ಪ್ರವೇಶಿಸುವಾಗ ಪರಿಮಳಾಶ್ರಯವಾದ ಪುಷ್ಪಗಳದಸೆಯಿಂದ ವಾಯುವು ಪರಿಮಳವನ್ನು ಎಳೆದುಕೊಂಡು ಹೋಗುವಂತೆ ಮನಷ್ಷಷ್ಠಗಳಾದ ಇಂದ್ರಿಯಗಳನ್ನು ಎಳೆದುಕೊಂಡು ಹೋಗುವನು. ॥೮॥

(ಮ) ಭಾ॥) ಜೀವನು ಯಾವಾಗಲಾದರೆ ಒಂದು ಶರೀರವನ್ನು ಬಿಟ್ಟು ಬೇರೊಂದು ಶರೀರವನ್ನು ಹೊಂದುತ್ತಾನೆಯೋ ಆವಾಗ, ಈಶ್ವರಃ-ಈಶ್ವರನು, ಅವನೊಡನೆ ಕೂಡಾ ಇಂದ್ರಿಯಗಳನ್ನೂ ಎಳೆದುಕೊಂಡು ಹೋಗುತ್ತಾನೆ. ಏತಕ್ಕೆಂದರೆ, ಕರ್ಮಫಲಪ್ರದನು ಈಶ್ವರನಾದುದರಿಂದ ಕರ್ಮ ಫಲವನ್ನನುಭವಿಸುವುದಕ್ಕಾಗಿ ಆ ಜೀವನಿಗೆ ಕೊಟ್ಟಿರುವ ಹೊಸದೇಹದ ಮೂಲಕವಾಗಿ ಅನುಭವಿಸಬೇಕಾದ ಕರ್ಮಫಲವನ್ನು ಅನುಭವಿಸಲು ಅನುಕೂಲವಾಗಿರುವಂತೆ ಇಂದ್ರಿಯಗಳನ್ನೂ ಈಶ್ವರನು ಗ್ರಹಿಸಿಕೊಂಡು ಹೋಗುತ್ತಾನೆ. ಜೀವನಿಗೆ ಗ್ರಹಿಸಿಕೊಂಡು ಹೋಗಲು ಸ್ವಾತಂತ್ರ್ಯವಿಲ್ಲವು. ಸರ್ವಸ್ವತಂತ್ರನು ಈಶ್ವರನೆ. ॥೮॥

(ಗೀ॥ ವಿ॥) ಅಥವಾ-ಈಶ್ವರನು ಒಂದು ದೇಹದಲ್ಲಿ ಪ್ರವೇಶಿಸುವಾಗಲೂ ಒಂದು ದೇಹವನ್ನು ಬಿಟ್ಟು ಹೋಗುವಾಗಲೂ ಜೀವನನ್ನೂ ಅವನಿಗೆ ಸೇರಿದ ಇಂದ್ರಿಯಾದಿ ಸೂಕ್ಷ್ಮಗಳನ್ನೂ ಗ್ರಹಿಸಿಕೊಂಡು ಹೋಗುತ್ತಾನೆ. ॥೮॥

ಮೂ ॥ ಶ್ರೋತ್ರಂಚಕ್ಷುಸ್ಸ್ಪರ್ಶನಂಚರಸನಂಘ್ರಾಣ
ಮೇವಚ । ಅಧಿಷ್ಠಾಯಮನಶ್ಚಾಯಂವಿಷಯಾ
ನುಪಸೇವತೇ॥ ॥೯॥

ಪ। ಶ್ರೋತ್ರಂ-ಚಕ್ಷುಃ-ಸ್ಪರ್ಶನಂ-ಚ-ರಸನಂ-ಘ್ರಾಣಂ-ಏವ-ಚ ।ಅಧಿಷ್ಠಾಯ-ಮನಃ-ಚ-ಅಯಂ-ವಿಷಯಾನ್ -ಉಪಸೇವತೇ ॥

(ಅ॥ರಾ॥ಭಾ) ಹಿಂದಿನಶ್ಲೋಕದಲ್ಲಿ ಹೇಳಲ್ಪಟ್ಟ ಇಂದ್ರಿಯಗ ಳ್ಯಾವವೆಂದರೆ ಅದಕ್ಕೆಪ್ರತ್ಯುತ್ತರವನ್ನು ಹೇಳುತ್ತಾರೆ. ಶ್ರೋತ್ರಂ-ಶ್ರೋತ್ರೇಂ (ಕಿವಿ)ದ್ರಿಯವನ್ನೂ, ಚಕ್ಷುಃ-ಚಕ್ಷು (ಕಣ್ಣು)ರಿಂದ್ರಿ ಯವನ್ನೂ, ಸ್ಪರ್ಶನಂಚ-ತ್ವಗಿಂದ್ರಿಯವನ್ನೂ, ರಸನಂ-ಜಿಹ್ವೇಂದ್ರಿ ಯವನ್ನೂ(ಜಿಹ್ವಾ-ನಾಲಿಗೆ) ಘ್ರಾಣಮೇವಚ-ಘ್ರಾಣ (ಮೂಗು) ಇಂದ್ರಿಯವನ್ನೂ ,ಮನಶ್ಚ-ಸರ್ವಜ್ಞಾನಸಹಕಾರಿಯಾದಮನಸ್ಸನ್ನೂ, ಅಧಿಷ್ಠಾಯ-ಅದರ ವಿಷಯಗಳಲ್ಲಿ ಪ್ರವರ್ತಿಸುವಂತೆ ಮಾಡಿಕೊಂ ಡು, ಅಯಂ-ಈ ಜೀವನು, ವಿಷಯಾನ್-ಶಬ್ದಸ್ಪರ್ಶರೂಪ ರಸಗಂಧ ಗಳೆಂಬ ವಿಷಯಗಳನ್ನು, ಉಪಸೇವತೇ-ಅನುಭವಿಸುತ್ತಾನೆ. ॥೯॥

(ಗೀ॥ವಿ॥) ಇಂದ್ರಿಯಗಳನ್ನು ವಿಷಯಗಳಲ್ಲಿ ಪ್ರವರ್ತಿಸುವಂತೆ ಮಾಡಿ ಅದರಿಂದುಂಟಾದ ಫಲವನ್ನು ಈಶ್ವರನನುಭವಿಸುತ್ತಾನೆಂದ ರಿಯಬೇಕು. ॥೯॥

ಮೂ ॥ ಉತ್ಕ್ರಾಮಂತಂಸ್ಥಿತಂವಾಪಿಭುಂಜಾನಂವಾ
ಗುಣಾನ್ವಿತಂ ।ವಿಮೂಢಾನಾನುಪಶ್ಯಂತಿಪಶ್ಯಂ
ತಿಜ್ಞಾನಚಕ್ಷುಷಃ॥ ॥೧೦॥

ಪ। ಉತ್ಕ್ರಾಮಂತಂ-ಸ್ಥಿತಂ-ವಾ-ಅಪಿ-ಭುಂಜಾನಂ-ವಾ-ಗುಣಾನ್ವಿತಂ।ವಿಮೂಢಾಃ-ನ-ಅನುಪಶ್ಯಂತಿ-ಪಶ್ಯಂತಿ-ಜ್ಞಾನಚಕ್ಷುಷಃ ॥

(ಅ॥ರಾ॥ಭಾ) ಗುಣಾನ್ವಿತಂ-ಸತ್ವಾದಿ ಗುಣನಿಧಿಯಾದ ಪ್ರ ಕೃತಿಯ ಪರಿಣಾಮ ವಿಶೇಷವಾಗಿರುವ ದೇವಮನುಷ್ಯಾದಿ ಶರೀರಗ ಳೊಡನೆ ಸೇರಿರುವವನಾಗಿಯೂ, ಉತ್ಕ್ರಾಮನ್ತಂ-ಶರೀರವನ್ನು ಬಿಟ್ಟ ಮೇಲೆ ಉತ್ಕ್ರಾಂತಿಯನ್ನು ಹೊಂದುವಂತವನಾಗಿಯೂ, ಸ್ಥಿ ತಂವಾಪಿ-ಶರೀರವಿಶೇಷದಲ್ಲಿರುವಂತವನಾಗಿಯೂ, ಭುಂಜಾನಂವಾ-ಸತ್ವಾದಿಗುಣಮಯಗಳಾದಶಬ್ದಾದಿವಿಷಯಗಳನ್ನು ಅನುಭವಿಸುವಂತ ವನಾಗಿಯೂ ಇರುವ ಈ ಆತ್ಮನನ್ನು, ಪ್ರಕೃತಿಪರಿಣಾಮವಿಶೇಷವಾ ದ ಮನುಷ್ಯಾದಿ ಶರೀರಕ್ಕಿಂತಲೂ ಭಿನ್ನನನ್ನಾಗಿಯೂ ಜ್ಞಾನೈಕಾಕಾ

ಧನನ್ನಾಗಿಯೂ, ವಿಮೂಢಾಃ-ದೇಹವನ್ನೆ ಆತ್ಮನನ್ನಾಗಿ ತಿಳಿದುಕೊಂ ಡಿರುವ ಮೂಢಜನರು, ನಾನುಪಶ್ಯಂತಿ-ಒಂದು ಕಾಲದಲ್ಲಿಯೂ ತಿಳಿ ಯಲಾರರು. ಜ್ಞಾನಚಕ್ಷುಷಸ್ತು-ಶರೀರವನ್ನೂ ಆತ್ಮನನ್ನೂ ಬೇರೆ ಯಾಗಿ ಚನ್ನಾಗಿ ತಿಳಿದುಕೊಳ್ಳುವಿಕೆ ಎಂಬ ಜ್ಞಾನವನ್ನು ಕಣ್ಣಾಗಿಉಳ್ಳ ಪಂಡಿತರೊ ಎಂದರೆ, ಸ್ಥಿತಿ ಉತ್ಕ್ರಮಣವೇಮೊದಲಾದ ಸರ್ವಾವಸ್ಥೆಗಳಲ್ಲಿಯೂ ಆತ್ಮನನ್ನು ಎಳ್ಳಿನಲ್ಲಿ ತೈಲದಂತೆಯೂ ಮೊಸರಿನಲ್ಲಿ ತುಪ್ಪದಂತೆಯೂ ದಾರುವಿನಲ್ಲಿ ಬೆಂಕಿಯಂತೆಯೂ ಸಮೀಚೀನವಾಗಿ ಪೃಥಕ್ತ್ವೇನ ತಿಳಿದುಕೊಳ್ಳುತ್ತಾರೆ. ||೧೦||

(ಶಂ||ಭಾ) “ಶರೀರಂ„ ಇತ್ಯಾದಿ ಶ್ಲೋಕದಲ್ಲಿ ದೇಹಕ್ಕಿಂತಲೂ ಆತ್ಮನು ಬೇರೆ ಎಂಬದಾಗಿ ಹೇಳಿ (೯) ನೇ ಶ್ಲೋಕದಲ್ಲಿ ತನಿಗಿಷ್ಟವಾದ ವಿಷಯಗಳಲ್ಲಿ ಇಂದ್ರಿಯಗಳನ್ನು ಪ್ರವರ್ತಿಸುವಂತೆ ಮಾಡುವನೆಂಬದಾಗಿ ಹೇಳಿರುವಲ್ಲಿ ದೇಹೇಂದ್ರಿಯ ವ್ಯತಿರಿಕ್ತನಾಗಿ ಆತ್ಮನು ಯೇತಕ್ಕೆ ಕಾಣಲ್ಪಡಲಾರನೆಂದರೆ ಕೇಳು ಅರ್ಜುನನೆ? ದೇಹದ ದಶೆಯಿಂದ ಹೊರಡುವಂತವನಾಗಿಯೂ ದೇಹದಲ್ಲಿರುವಂತವನಾಗಿಯೂ ಶಬ್ದಾದಿವಿಷಯಗಳನ್ನು ಅನುಭವಿಸುವಂತವನಾಗಿಯೂ ಸುಖದುಃಖಮೊಹಗಳೆಂಬ ಗುಣಗಳುಳ್ಳವನಾಗಿಯೂ ಇರುವ ಇಂತಹ ಜೀವನು ನೋಡಲ್ಪಡುವುದಕ್ಕೆ ಸುಸಾಧ್ಯನಾಗಿದ್ದರೂ ದೃಷ್ಟಾದೃಷ್ಟವಿಷಯ ಭೋಗಬಲದಿಂದ ಆಕರ್ಷಿಸಲ್ಪಟ್ಟ ಚಿತ್ತಗಳುಳ್ಳವರಾಗಿರುವದರಿಂದ ಅಜ್ಞಾನಿಗಳು ನೋಡಲಾರರು. ಎಂಥಾ ಕಷ್ಟವು. ಗುರೂಪದೇಶದಿಂದ ಪ್ರಾಪ್ತವಾದ ಶಾಸ್ತ್ರಜನ್ಯ ಜ್ಞಾನವನ್ನು ದೃಢಪಡಿಸಿಕೊಂಡು ಪರಬ್ರಹ್ಮಸ್ವರೂಪವನ್ನು ಅನುಭವಿಸುವ ವಿವೇಕಿಗಳು ಜ್ಞಾನವೆಂಬ ಕಣ್ಣಿನಿಂದ ನೋಡುತ್ತಾರೆ. ||೧೦||

(ಗೀ||ಪ್ರ) ದೇಹವನ್ನು ಬಿಟ್ಟು ಹೋಗುವಂತವನಾಗಿಯೂ ದೇಹದಲ್ಲಿರುವಂತವನಾಗಿಯೂ ಶುಭಫಲವನ್ನನುಭವಿಸುವಂತವನಾಗಿಯೂ ಅನೇಕ ಗುಣಗಳೊಡನೆ ಕೂಡಿರುವಂತವನಾಗಿಯೂ ಇರುವ ಈಶ್ವರನನ್ನು ಅಜ್ಞಾನಿಗಳು ನೋಡಲಾರರು, ಜ್ಞಾನಿಗಳು ನೋಡುತ್ತಾರೆ. ||೧೦||

ಮೂ॥ಯತಂತೋಯೋಗಿನಶ್ಚೈನಂಪಶ್ಯಂತ್ಯಾತ್ಮನ್ಯವ
ಸ್ಥಿತಮ್ । ಯತಂತೋಪ್ಯಕೃತಾತ್ಮಾನೋನೈ
ನಂಪಶ್ಯಂತ್ಯಚೇತಸಃ॥ ॥೧೧॥

ಪ॥ ಯತಂತಃ-ಯೋಗಿನಃ-ಚ-ಏನಂ-ಪಶ್ಯಂತಿ-ಆತ್ಮನಿ-ಅವಸ್ಥಿತಂ । ಯತಂತಃ-ಅಪಿ-ಅಕೃತಾತ್ಮಾನಃ-ನ-ಏನಂ-ಪಶ್ಯಂತಿ-ಅಚೇತಸಃ॥

(ಅ॥ರಾ॥ಭಾ) ಯತಂತಃ-ನನ್ನಲ್ಲಿ ಶರಣಾಗತಿಯನ್ನುಮಾಡಿ ಕರ್ಮಯೋಗಾದಿಗಳಲ್ಲಿ ಪ್ರವರ್ತಿಸಿರುವುದರಿಂದ ನಿರ್ಮಲಾಂತಃಕರಣರಾದ, ಯೋಗಿನಃ- ಯೋಗಾನುಷ್ಠಾನಪರರಾದ ಅಧಿಕಾರಿಗಳು, (ಆತ್ಮಸ್ವರೂಪದಲ್ಲಿ ನಿರಂತರವಾಗಿ ಮನಸ್ಸನ್ನಿಡುವುದೆಂಬ ಸಮಾಧಿದೃಷ್ಟಿಯಿಂದ) ಆತ್ಮನಿ-ಶರೀರದಲ್ಲಿ, ಅವಸ್ಥಿತಂ-ಇದ್ದರೂ ಶರೀರಧ್ವಂಸದಿಂದ ವಿಭಕ್ತವಾದ ಸ್ವರೂಪದೊಡನೆ ಇರುತಲಿರುವ,ಏನಂ-ಈ ಜೀವಾತ್ಮಸ್ವರೂಪವನ್ನು, ಪಶ್ಯಂತಿ-ನೋಡುತ್ತಾರೆ. ಯತಂತೋಪಿ-ಪ್ರಯತ್ನಮಾಡುವಂತವರಾದರೂ,ಅಕೃತಾತ್ಮಾನಃ-ನನ್ನಲ್ಲಿ ಶರಣಾಗತಿ ಮಾಡದೆ ಇರುವುದರಿಂದ ಸಂಸ್ಕರಿಸಲ್ಪಡದ ಮನಸ್ಸುಳ್ಳವರಾಗಿಯೂ, ಆಕಾರಣದಿಂದಲೆ, ಅಚೇತಸಃ-ಆತ್ಮಸ್ವರೂಪದರ್ಶನಕ್ಕೆ ಸಮರ್ಥವಾದ ಮನಸ್ಸಿಲ್ಲದವರಾಗಿಯೂ ಇರುವ ಪುರುಷರು, ಏನಂ-ಈ ಆತ್ಮನನ್ನು, ನಪಶ್ಯಂತಿ-ನೋಡುವುದಿಲ್ಲವು. ॥೧೧॥

(ಶಂ॥ಭಾ) ಹಿಂದಿನ ಶ್ಲೋಕದಲ್ಲಿ ಜ್ಞಾನಚಕ್ಷುಸ್ಸುಳ್ಳವರೆಂದರೆ ನ್ಯಾಯಾನುಗೃಹೀತ ಶಾಸ್ತ್ರಜ್ಞಾನವೇ ಸಾಧನವೆಂಬದಾಗಿ ಹೇಳಲ್ಪಟ್ಟಿರುವುದಷ್ಟೆ? ಆ ಪ್ರಕಾರವಾಗಿ ಕೇವಲ ಶಾಸ್ತ್ರಜ್ಞಾನದಿಂದ ಆತ್ಮಸಾಕ್ಷಾತ್ಕಾರವುಂಟಾಗುವುದೊ? ಎಂದರೆ ಆ ಪ್ರಕಾರವಾಗಿ ಉಂಟಾಗಲಾರದೆಂಬ ಅಂಶವನ್ನು ವಿಶದಪಡಿಸುತ್ತಾನೆ. ಗುರೂಪದಿಷ್ಟ ಮಹಾ ವಾಕ್ಯಾರ್ಥ ಶ್ರವಣ ಮನನಮೂಲಕವಾಗಿ ಚಿತ್ತಸ್ಥೈರ್ಯವುಂಟಾಗಿ ಧ್ಯಾನಾಭ್ಯಾಸದಿಂದ ಸ್ವಸ್ವರೂಪವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಪಡುತಲಿರುವ ಜ್ಞಾನಿಗಳು “ ಅಹಂಬ್ರಹ್ಮಾಸ್ಮಿ ” ಎಂಬದಾಗಿ ಹೃದಯಾಕಾಶವರ್ತಿಯಾದ ಬ್ರಹ್ಮದೊಡನೆ ತನಗಿರುವ ಐಕ್ಯವನ್ನು ಅನುಭವಿಸುತ್ತಾರಲ್ಲದೆ ಶಾಸ್ತ್ರಾಭ್ಯಾಸಪರರಾಗಿದ್ದರೂ ಚಿತ್ತಸ್ಥೈರ್ಯವಿಲ್ಲದೆ ದುರ್ಗುಣಗಳನ್ನೂ ದುರ್ವ್ಯಾಪಾರಗಳನ್ನೂ ಬಿಡದೆ

ಶಾನ್ತವಾಗದ ಅಹಂಕಾರಮುಳ್ಳ ಅವಿವೇಕಿಗಳಿಗೆ ಶ್ರವಣಾದಿಗಳುಂ ಟಾದರೂ ಸ್ವಾನುಭವನು ಎಂದಿಗೂ ಪ್ರಾಪ್ತವಾಗಲಾರದು. ನಿಶ್ಚಯನು. ॥೧೧॥

(ಗೀ॥ವಿ) ಜ್ಞಾನಿಗಳು ಪರಮಾತ್ಮನನ್ನು ನೋಡುತ್ತಾರೆ. ಅಜ್ಞಾನಿಗಳು ಪರಮಾತ್ಮನನ್ನು ನೋಡಲಾರರು. ॥೧೧॥

ಮೂ॥ ಯದಾದಿತ್ಯಗತಂತೇಜೋಜಗದ್ಭಾಸಯತೇಖಿ
ಲಂ ।ಯಚ್ಚಂದ್ರಮಸಿಯಚ್ಚಾಗ್ನೌತತ್ತೇಜೋ
ವಿದ್ಧಿಮಾಮಕಂ॥ ॥೧೨॥

ಪ॥ ಯತ್-ಆದಿತ್ಯಗತಂ-ತೇಜಃ-ಜಗತ್-ಭಾಸಯತೇ-ಅಖಿಲಂ । ಯತ್-ಚಂದ್ರಮಸಿ-ಯತ್-ಚ-ಅಗ್ನೌ-ತತ್-ತೇಜಃ-ವಿದ್ಧಿ-ಮಾಮಕಂ ।

(ಅ॥) ಆದಿತ್ಯಗತಂ-ಸೂರ್ಯನಲ್ಲಿರುವ, ಯತ್ತೇಜಃ-ಯಾವತೇಜಸ್ಸುಂಟೊ,ಚಂದ್ರಮಸಿಯತ್-ಚಂದ್ರನಲ್ಲಿ ಯಾವತೇಜಸ್ಸುಂಟೊ, ಯದಖಿಲಂಜಗದ್ಭಾಸಯತೆ-ಯಾವ ತೇಜಸ್ಸು ಸಮಸ್ತ ಪ್ರಪಂಚವನ್ನು ಪ್ರಕಾಶಪಡಿಸುವುದೋ, ತತ್ತೇಜಃ-ಆ ತೇಜಸ್ಸು ಯಾವತ್ತನ್ನೊ, ಮಾಮಕಂವಿದ್ಧಿ-ನನ್ನದನ್ನಾಗಿ ತಿಳಿದುಕೊಳ್ಳು. ॥೧೨॥

(ಶಂ॥ಭಾ॥ ಸರ್ವಪ್ರಕಾಶಕಗಳಾಗಿದ್ದರೂ ಅಗ್ನಿಯೇ ಮೊದಲಾದ ತೇಜಸ್ಸುಗಳು ಯಾವ ತೇಜಸ್ಸನ್ನು ಪ್ರಕಾಶಪಡಿಸಲಾರವೋ, ಮುಮುಕ್ಷುಗಳು ಯಾವ ತೇಜಸ್ಸನ್ನು ಹೊಂದಿದ ಮೇಲೆ ಪುನಶ್ಚ ಸಂಸಾರಾಭಿಮುಖರಾಗಿ ಹಿಂದಕ್ಕೆ ತಿರಗಲಾರರೋ, ಉಪಾಧಿ ಭೇದಗಳ ದಶೆಯಿಂದ ಏರ್ಪಟ್ಟಿರುವ ಜೀವರು ಘಟಾಕಾಶಾದಿಗಳು ಮಹಾಕಾಶಾದಿಗಳಂತೆ ಯಾವ ತೇಜಸ್ಸಿಗೆ ಅಂಶಗಳೊ ಅಂತಹ ತೇಜಸ್ಸು ಸರ್ವಸ್ವರೂಪವೆಂತಲೂ ಸರ್ವವ್ಯವಹಾರಗಳಿಗೂ ಆಧಾರವೆಂತಲೂ ತಿಳಿಸಲುದ್ದೇಶಿಸಿ ಇಲ್ಲಿಂದ ನಾಲ್ಕು ಶ್ಲೋಕಗಳಿಂದ ಭಗವದ್ವಿಭೂತಿಯನ್ನು ಸಂಗ್ರಹವಾಗಿ ಉಪದೇಶಿಸುತ್ತಾನೆ. ಎಲೈ ಅರ್ಜುನನೇ ! ಸೂರ್ಯಮಂಡಲವನ್ನಾಶ್ರಯವಾಗಿವುಳ್ಳ ಯಾವ ಪ್ರಕಾಶವು ಸಮಸ್ತ ಜಗತ್ತನ್ನು ಪ್ರಕಾಶಪಡಿಸುವುದೊ ಚಂದ್ರನಲ್ಲಿಯೂ ಅಗ್ನಿಯಲ್ಲಿಯೂ ಸರ್ವ ಪ್ರಕಾಶಕಗಳಾದ ಯಾವ ತೇಜಸ್ಸುಂಟೋ ಅದು ವಿಷ್ಣುವಾದ ನನ್ನ ತೇಜಸ್ಸೇ ಎಂಬದಾಗಿ ತಿಳಿದುಕೊಳ್ಳು. (ಅಥವಾ)

ಚಂದ್ರಸೂರ್ಯಮಂಡಲ ಮಧ್ಯವರ್ತಿಯಾಗಿಯೂ ಅಗ್ನಿಯಲ್ಲಿರುವುದಾಗಿಯೂ ಇರುವ ಚೈತನ್ಯಾತ್ಮಕವಾದ ಯಾವ ತೇಜಸ್ಸುಂಟೋ, ಅಂತಹ ಚಿದ್ರೂಪವಾದ ತೇಜಸ್ಸು ವಿಷ್ಣುವಾದ ನನ್ನದೇ ಎಂಬದಾಗಿ ತಿಳಿದುಕೊಳ್ಳು. ಆದರೆ ಸ್ಥಾವರ ಜಂಗಮಗಳಲ್ಲಿ ಸರ್ವತ್ರ ಚೈತನ್ಯಾತ್ಮಕವಾದ ತೇಜಸ್ಸು ಸಮವಾಗಿರುವಲ್ಲಿ ಸೂರ್ಯ ಚಂದ್ರಾದಿಗಳಲ್ಲಿರುವ ತೇಜೋಮಾತ್ರವನ್ನು ವಿಶೇಷಿಸಿ ಹೇಳುವುದಕ್ಕೆ ಯೇನು ಕಾರಣವು? ಎಂದರೆ ಆ ರೀತಿಯಾಗಿ ಹೇಳುವುದರಿಂದ ದೋಷವಿಲ್ಲವು. ಸತ್ವಗುಣಾಧಿಕ್ಯದಿಂದ ಆಧಿಕ್ಯವು ಸೂರ್ಯಾದಿಗಳಲ್ಲಿರುವುದು. ಅದು ಹೇಗೆಂದರೆ, ಸೂರ್ಯಾದಿ ತೇಜೋವಸ್ತುಗಳಲ್ಲಿರುವ ಸತ್ವವು ಸಮಸ್ತವನ್ನು ಸವಿಶಾಚೀನವಾಗಿ ಪ್ರಕಾಶಪಡಿಸುತ ಸ್ವಯಮವಾಗಿಯೂ ಅತ್ಯಂತಪ್ರಕಾಶ ವಸ್ತುಗಳಾದುದರಿಂದ ಅವು ವಿಶೇಷಿಸಿ ಹೇಳಲ್ಪಟ್ಟವುವು. ಅಷ್ಟಲ್ಲದೆ ಬ್ರಹ್ಮ ತೇಜಸ್ಸು ಅಲ್ಲಿಮಾತ್ರ ಅಧಿಕವಾಗಿರುವುದೆಂದು ತಿಳಿಯತಕ್ಕದು. ಅದು ಹೇಗೆಂದರೆ, ಲೋಕದಲ್ಲಿ ಕಾಷ್ಠಕುಡ್ಯಾದಿಗಳಿಗೆ (ಕಾಷ್ಠವೆಂದರೆ ಸೌದೆ ಕುಡ್ಯವೆಂದರೆ ಗೋಡೆ) ಎದುರಾಗಿ ನಿಂತಿದ್ದರೆ ಮುಖ ಸಂಸ್ಥಾನವು ಏಕರೂಪವಾಗಿದ್ದರೂ ಅವುಗಳಲ್ಲಿ ಪ್ರತಿಫಲಿಸದೆ ಸ್ವಚ್ಛವು ಸ್ವಚ್ಛತರವೂ ಆದ ಕನ್ನಡಿ ಮೊದಲಾದವುಗಳಲ್ಲಿ ತಾರತಮ್ಯದಿಂದ ಹೇಗೆ ಮುಖವು ಪ್ರತಿಫಲಿಸುವುದೋ ಅದರಂತೆ ಇಲ್ಲಿಯೂ ತಿಳಿಯಬೇಕು. ||೧೨||

(ಶ್ರೀ||) ಪರಮಾತ್ಮಶಕ್ತಿಯು ವಿಚಿತ್ರ ಶಕ್ತಿಯಿಂದ ಕೂಡಿರುವುದೆಂಬೀ ಅಂಶವು ಇದು ಮೊದಲು ನಾಲ್ಕು ಶ್ಲೋಕಗಳಿಂದ ವಿವರಿಸಲ್ಪಡುವುದು. ||೧೨||

(ರಾ|| ಭಾ||) ಈ ಪ್ರಕಾರವಾಗಿ ಪ್ರಕಾಶಕಗಳಾದ ಸೂರ್ಯಚಂದ್ರಾದಿ ಜ್ಯೋತಿಸ್ಸುಗಳಿಗೂ ಪ್ರಕಾಶಕವಾದ ಜ್ಞಾನಜ್ಯೋತಿಸ್ಸನ್ನುಳ್ಳವನಾಗಿಯೂ ಮುಕ್ತಾವಸ್ಥನಾಗಿಯೂ ಬದ್ಧಾವಸ್ಥನಾಗಿಯೂ ಇರುವ ಜೀವಾತ್ಮನು ಭಗವದ್ವಿಭೂತಿ ಎಂಬದಾಗಿ “ತದ್ಧಾಮಪರಮಂಮಮ || ಮಮೈವಾಂಶೋಜೀವಲೋಕೇಜೀವಭೂತಸ್ಸನಾತನಃ (೧೫ನೇ ಅ|| ೬-೭ನೆ ಶ್ಲೋ||) ಇತ್ಯಾದಿಗಳಿಂದ ಹೇಳಲ್ಪಟ್ಟಿತು. ಇನ್ನು ಮುಂದೆ ಅಚಿತ್ಪರಿಣಾಮ ವಿಶೇಷವಾದ ಆದಿತ್ಯಾದಿಗ

ಳ ಜ್ಯೋತಿಸ್ಸೂ ಭಗವದ್ವಿಭೂತಿ ಎಂಬದಾಗಿ ಹೇಳುತ್ತಾರೆ. ಸಮಸ್ತ ಜಗತ್ತಿಗೂ ಪ್ರಕಾಶಕವಾದ ಆದಿತ್ಯ ಚಂದ್ರಾದಿಗಳಲ್ಲಿ ಯಾವ ತೇಜಸ್ಸಿರುವುದೋ ಅದು ನನ್ನ ತೇಜಸ್ಸೆಂಬದಾಗಿ ತಿಳಿದುಕೊಳ್ಳು. ಅವರವರಿಂದ ಆರಾಧಿತನಾದ ನಾನು ಅವರಿಗೆ ಈ ತೇಜಸ್ಸನ್ನು ಕೊಟ್ಟಿರುವೆನೆಂದು ತಿಳಿದುಕೊಳ್ಳು. ॥೧೨॥

(ಗೀ॥ ವಿ॥) ಸೂರ್ಯಾದಿಗಳ ತೇಜಸ್ಸು ನನ್ನ ಅಧೀನವಾದದ್ದೆಂಬದಾಗಿ ತಿಳಿದುಕೊಳ್ಳು. ॥೧೨॥

ಮೂ॥ ಗಾಮಾವಿಶ್ಯಚಭೂತಾನಿಧಾರಯಾಮ್ಯಹಮೋಜಸಾ॥ ॥೧೩॥

ಪ॥ ಗಾಂ-ಆವಿಶ್ಯ-ಚ-ಭೂತಾನಿ-ಧಾರಯಾಮಿ-ಅಹಂ-ಓಜಸಾ॥

(ಅ॥ ರಾ॥ ಭಾ) ಭೂಮಿಗಿರುವ ಸರ್ವ ಪ್ರಾಣಿಧಾರಕತ್ವ ಶಕ್ತಿಯೂ ನನ್ನದೆ ಎನ್ನುತ್ತಾರೆ. ಅಹಂ-ನಾನೆ, ಗಾಂ-ಭೂಮಿಯನ್ನು, ಆವಿಶ್ಯ-ಪ್ರವೇಶಿಸಿ, ಭೂತಾನಿ-ಸರ್ವ ಪ್ರಾಣಿಗಳನ್ನೂ, ಓಜಸಾ-ಎದುರಿಲ್ಲದ ನನ್ನ ಸಾಮರ್ಥ್ಯದಿಂದ, ಧಾರಯಾಮಿ-ಧರಿಸುವೆನು. ॥೧೩॥

ಮೂ ॥ ಪುಷ್ಣಾಮಿಚೌಷಧೀಸ್ಸರ್ವಾಸ್ಸೋಮೋಭೂತ್ವಾರಸಾತ್ಮಕಃ॥ ॥೧೩॥

ಪ ॥ ಪುಷ್ಣಾಮಿ-ಚ-ಔಷಧೀಃ-ಸರ್ವಾಃ-ಸೋಮಃ-ಭೂತ್ವಾ-ರಸಾತ್ಮಕಃ॥

(ಅ॥ ರಾ॥ ಭಾ॥) ರಸಾತ್ಮಕಸ್ಸೋಮೋಭೂತ್ವಾ-ನಾನೆ ಆ ಪ್ರಕಾರದಿಂದ ಅಮೃತರಸಮಯನಾದ ಚಂದ್ರನಾಗಿ, ಸರ್ವಾ ಔಷಧೀಶ್ಚ-ಸಮಸ್ತಗಳಾದ ಓಷಧಿಗಳನ್ನೂ, ಪುಷ್ಣಾಮಿ-ಪೋಷಿಸುವೆನು. ॥೧೩॥

(ಶಂ॥ ಭಾ॥) ಭಗವಂತನಿಗೆ ಸರ್ವಾತ್ಮತ್ವದಲ್ಲಿ ಕಾರಣಾಂತರವನ್ನು ಹೇಳುತ್ತಾರೆ. ನಾನು ಭೂಮಿಯಲ್ಲಿ ಪ್ರವೇಶಿಸಿ ನನ್ನ ಬಲದಿಂದ ಚರಾಚರಾತ್ಮಕವಾದ ಜಗತ್ತುಗಳನ್ನು ಧರಿಸುತ್ತೇನೆ. ಎಂದರೆ ಕಾಮರಾಗವಿಹೀನವಾಗಿಯೂ ಈಶ್ವರ ಸಂಬಂಧವಾಗಿಯೂ ಇರುವ ಯಾವ ಬಲವು ಜಗದ್ಧಾರಣಾರ್ಥವಾಗಿ ಭೂಮಿಯಲ್ಲಿ ಪ್ರವೇಶಿಸಿರುವುದೋ, ಯಾವದರಿಂದ ಮಹತ್ತಾದ ಭೂಮಿಯು ಕೆಳಗೆ ಬೀ

ಳವೆ ನಿಂತಿರುವುದೊ, ಶಿಳಿಹೋಗುವುದಿಲ್ಲವೊ, ಅಂತಹ ಬಲದಿಂದ ಚ
ರಾಚರಾತ್ಮಕ ಸರ್ವಪ್ರಪಂಚಗಳನ್ನು ಧರಿಸುತ್ತೇನೆ. ಇದಕ್ಕೆ ಮಂ
ತ್ರವರ್ಣಗಳೂ ಪ್ರಮಾಣವಾಗಿರುವುವು. ಅವು ಯಾವವೆಂದರೆ ನಿ
"ಏನದ್ಯಾರುಗ್ರಾಪೃಥಿವೀಚದೃಢಾ॥ಸದಾಧಾರಪೃಥಿವೀಂ, ಇತ್ಯಾದಿ
ಗಳೆ. ಮತ್ತು ನಾನು ಸಮಸ್ತರಸಾತ್ಮಕನೂ ಸರ್ವ್ವರಸಾಕರನೂ
ಆದ ಚಂದ್ರನಾಗಿ ಭೂಮಿಯಲ್ಲಿ ಹುಟ್ಟುವ ವ್ರೀಹ್ಯಾದಿಸಮಸ್ತ ಸಸ್ಯ
ಗಳನ್ನೂ ನನ್ನ ರಸಾನುಪ್ರವೇಶದಿಂದ ವೃದ್ಧಿಹೊಂದಿಸುವೆನು, ರಸ
ಯುಕ್ತವಾಗಿಯೂ ರುಚಿಯುಕ್ತವಾಗಿಯೂ ಮಾಡುವೆನು. ಆ ಓಷ
ಧಿಗಳ ಮೂಲಕವಾಗಿ ಸಮಸ್ತಪ್ರಾಣಿಗಳನ್ನು ಪೋಷಿಸುವೆನು ॥೧೩॥

ಮೂ॥ ಅಹಂವೈಶ್ವಾನರೋಭೂತ್ವಾಪ್ರಾಣಿನಾಂದೇಹ
ಮಾಶ್ರಿತಃ । ಪ್ರಾಣಾಪಾನಸಮಾಯುಕ್ತಃಪಚಾ
ಮ್ಯನ್ನಂಚತುರ್ವ್ವಿಧಂ॥ ॥೧೪॥

ಪ॥ ಅಹಂ-ವೈಶ್ವಾನರಃ-ಭೂತ್ವಾ-ಪ್ರಾಣಿನಾಂ-ದೇಹಂ-ಆಶ್ರಿತಃ । ಪ್ರಾಣಾಪಾ
ನಸಮಾಯುಕ್ತಃ-ಪಚಾಮಿ-ಅನ್ನಂ-ಚತುರ್ವ್ವಿಧಂ॥

(ಅ॥ ರಾ॥ ಭಾ।) ಅಹಂ-ನಾನೆ, ವೈಶ್ವಾನರೊಭೂತ್ವಾ-ಜಾ
ಠರಾಗ್ನಿಯಾಗಿ, ಪ್ರಾಣಿನಾಂ-ಸರ್ವ್ವಪ್ರಾಣಿಗಳ,ದೇಹಮಾಶ್ರಿತಃ-ಶರೀ
ರವನ್ನು ಹೊಂದಿದವನಾಗಿ, ಚತುರ್ವ್ವಿಧಂ-ಖಾದ್ಯಚೋಷ್ಯಲೇಹ್ಯಪೇ
ಯಗಳೆಂಬ ಚತುರ್ವ್ವಿಧವಾದ ಅನ್ನವನ್ನು (ಖಾದ್ಯವೆಂದರೆ ಹಲ್ಲುಗಳಿಂ
ದ ಕಡಿದುಣ್ಣುವಂಥಾ ಅನ್ನವು, ಕಡಿಯದೇ ಉಣ್ಣುವುದಕ್ಕೆ ಚೋ
ಷ್ಯವೆಂತಲೂ ನಾಲಿಗೆಯಿಂದ ಗ್ರಹಿಸುವುದಕ್ಕೆ ಲೇಹ್ಯವೆಂತಲೂ
ಕುಡಿಯುವುದಕ್ಕೆಪೇಯವೆಂತಲೂ ಹೇಳುವರು.) ಪ್ರಾಣಾಪಾನಸ
ಮಾಯುಕ್ತಃ-ಹೃದಯಾದಿ ಸ್ಥಾನಭೇದದಿಂದಲೂ ವ್ಯಾಪಾರಭೇದದಿಂ
ದಲೂ ಪ್ರಾಣನೆಂತಲೂ ಅಪಾನನೆಂತಲೂ ವ್ಯಾನನೆಂತಲೂ ಉ
ದಾನನೆಂತಲೂ ಸಮಾನನೆಂತಲೂ ನಾಮಗಳುಳ್ಳ ವಾಯುವಿನೊಡನೆ
ಸೇರಿಕೊಂಡು, ಪಚಾಮಿ-ಪಾಕವನ್ನು ಮಾಡುವೆನು. (ಜೀರ್ಣಪ
ಡಿಸುವೆನು.) ಇಲ್ಲಿ ಪರಮಪುರುಷ ವಿಭೂತಿಭೂತಚಂದ್ರಜಾಠರಾ
ಗ್ನಿವಾಚಕಗಳಾದ ಸೋಮವೈಶ್ವಾನರ ಶಬ್ದಗಳು (ಅಹಂಸೋಮೊ
ಭೂತ್ವಾ-ಅಹಂವೈಶ್ವಾನರೊಭೂತ್ವಾ, ಎಂಬದಾಗಿ ಭಗವದ್ವಾಚಿ

ಯಾದ ಅಹಂಶಬ್ದದೊಡನೆ ಅಭೇದವು ತೋರುವಂತೆ ನಿರ್ದೇಶಿಸಲ್ಪಟ್ಟಿರುವುದು. ॥೧೪॥

(ಶಂ॥ಶ್ರೀ॥ಗೀ॥ವಿ॥ ಭಕ್ಷ್ಯವೆಂದರೆ ಹಲ್ಲುಗಳಿಂದ ಕಡಿದು ತಿನ್ನುವ ವಸ್ತುಗಳು, ಭೋಜ್ಯಂ-ಹಲ್ಲುದಳಿಂದ ಕಡಿಯದೆ ತಿನ್ನತಕ್ಕದ್ದಲ್ಲದೆ ನಾಲಿಗೆಯಿಂದ ಗ್ರಹಿಸತಕ್ಕ ವಸ್ತುಗಳು. ಲೇಹ್ಯಂ-ಚಟ್ನಿ ಮೊದಲಾದವುಗಳು. ಚೋಷ್ಯಂ-(ಶಂ॥ಶ್ರೀ) ಬಾಯಿಯಿಂದ ಗ್ರಹಿಸತಕ್ಕ ವಸ್ತುಗಳು (ಗೀ॥ವಿ॥ರಾ) ರಸಾದಿಗಳು. ॥೧೪॥

ಮೂ॥ ಸರ್ವಸ್ಯಚಾಹಂಹೃದಿಸನ್ನಿವಿಷ್ಟೋಮತ್ತಃಸ್ಮೃ
ತಿರ್ಜ್ಞಾನಮಪೋಹನಂಚ । ವೇದೈಶ್ಚಸರ್ವೈ
ರಹಮೇವವೇದ್ಯೋವೇದಾಂತಕೃದ್ವೇದವಿದೇವ
ಚಾಹಂ॥ ॥೧೫॥

ಪ॥ ಸರ್ವಸ್ಯ- ಚ-ಅಹಂ-ಹೃದಿ-ಸನ್ನಿವಿಷ್ಟಃ-ಮತ್ತಃ-ಸ್ಮೃತಿಃ-ಜ್ಞಾನಂ-ಅಪೋಹನಂ-ಚ ।ವೇದೈಃ-ಚ-ಸರ್ವೈಃ-ಅಹಂ-ಏವ-ವೇದ್ಯಃ-ವೇದಾನ್ತಕೃತ್-ವೇದವಿತ್-ಏವ-ಚ-ಅಹಂ ॥

(ಅ॥) ಸರ್ವಸ್ಯಚ-ಸಕಲಪ್ರಾಣಿಗಳ, ಹೃದಿ-ಹೃದಯದಲ್ಲಿ, ಅಹಂ-ನಾನು, ಸನ್ನಿವಿಷ್ಟಃ- ಅಂತರ್ಯಾಮಿಯಾಗಿರುವೆನು ; ಮತ್ತಃ-ನನ್ನಿಂದಲೆ, ಸ್ಮೃತಿಃ-ಸ್ಮರಣವೂ, ಜ್ಞಾನಂ-ಜ್ಞಾನವೂ, ಅಪೋಹನಂಚ-ವಿಸ್ಮೃತಿಯೂ. ಸರ್ವೈಃ-ಸಮಸ್ತಗಳಾದ,ವೇದೈಶ್ಚ-ವೇದಗಳಿಂದಲೂ, ಅಹಮೇವ-ನಾನೆ, ವೇದ್ಯಃ-ತಿಳಿಯತಕ್ಕವನು. ಅಹಮೇವ-ನಾನೆ, ವೇದವಿತ್-ವೇದಾರ್ಥಗಳನ್ನು ತಿಳಿದವನು. ವೇದಾಂತಕೃಚ್ಚ-(ರಾ) ವೇದಗಳಿಗೆ ಫಲವನ್ನುಂಟುಮಾಡುವಂತವನೂ, (ಶಂ) ವೇದಾಂತಸಂಪ್ರದಾಯವನ್ನುಂಟುಮಾಡಿದವನೂ, (ಗೀ॥ವಿ) ವೇದವ್ಯಾಸಾವತಾರದಿಂದ ಬ್ರಹ್ಮಸೂತ್ರಗಳನ್ನು ಮಾಡಿದವನೂ, ಅಹಮೇವ-ನಾನೆ. ॥೧೫॥

(ಶಂ॥ಭಾ) ಈ ಕಾರಣದಿಂದಲೂ ಸರ್ವಾತ್ಮತ್ವೇನ ಸರ್ವವ್ಯವಹಾರಾಸ್ಪದತ್ವವು ಈಶ್ವರನಿಗುಂಟಾಗಿರುವುದೆನ್ನುತ್ತಾರೆ. ಸಮಸ್ತಪ್ರಾಣಿಸಮೂಹಗಳಿಗೂ ನಾನಂತರ್ಯಾಮಿಯಾಗಿದ್ದುಕೊಂಡು ಅವರ ಅಂತಃಕರಣದಲ್ಲಿ ಅಂತರ್ಯಾಮಿ ರೂಪಿಯಾಗಿರುವೆನು. ಯಾ

ವ ಪುಣ್ಯಕರ್ಮಗಳಿಗೆ ಪುಣ್ಯಕರ್ಮಾನುಸಾರವಾಗಿ ಜ್ಞಾನಸ್ಮೃತಿಗಳುಂ ಟಾಗುವವೊ ಆಪ್ರಕಾರವೆ ಪಾಪಕರ್ಮಗಳಿಗೂ ಪಾಪಕರ್ಮಾನುಸಾರ ವಾಗಿ ಸ್ಮೃತಿಜ್ಞಾನಗಳ ಮರೆಯುವಿಕೆ ಯುಂಟಾಗುವುದು. ಪರಮಾ ತ್ಮನಾದ ನಾನೆ ಸಮಸ್ತ ವೇದಾಂತಗಳಿಂದ ತಿಳಿಯತಕ್ಕವನು. ವೇ ದಾಂತಾರ್ಥ ಸಂಪ್ರದಾಯ ಸ್ಥಾಪಕನೂ ನಾನೆ. ಸ್ಮೃತಿ ಎಂದರೆ ಜನ್ಮಾಂತರದಲ್ಲಿ ಅನುಭವಿಸಲ್ಪಟ್ಟ ಅಂಶಗಳು ಜ್ಞಾಪಕಕ್ಕೆ ಬರುವಿಕೆ ಯು. ಜ್ಞಾನವೆಂದರೆ ದೇಶಕಾಲ ಸ್ವಭಾವಗಳಿಂದ ದೂರವಾದದ್ದನ್ನು (ಆತ್ಮವನ್ನು) ತಿಳಿದುಕೊಳ್ಳುವಿಕೆಯು. ತಾನೇ ವೇದಾಂತಕೃತ್ತೆಂ ಬದಾಗಿ ಹೇಳಿರುವುದರಿಂದ ಉಪನಿಷತ್ತುಗಳಿಗೆ ಪೌರುಷೇಯತ್ವವ ನ್ನು ಹೇಳುವ ದೋಷವು ಪರಿಹೃತವಾಯಿತೆಂದರಿಯಬೇಕು. ॥೧೫॥

(ರಾ॥ ಭಾ॥ ಇಲ್ಲಿ ಪರಮಪುರುಷ ವಿಭೂತಿಭೂತಚಂದ್ರಜಾ ಠರಾಗ್ನಿವಾಚಕಗಳಾದ ಸೋಮವೈಶ್ವಾನರ ಶಬ್ದಗಳು (ನಾನು ಸೂ ರ್ಯನಾಗಿ, ನಾನು ಚಂದ್ರನಾಗಿ ಎಂಬದಾಗಿ) ಭಗವದ್ವಾಚಿಯಾದ ಅಹಂ ಶಬ್ದದೊಡನೆ ಅಭೇದವು ತೋರುವಂತೆ ನಿರ್ದೇಶಿಸಲ್ಪಟ್ಟಿರುವುವು. ಅನ್ನುಮುಂದೆ ನಿರ್ದೇಶಕನ್ನೂ ಸರ್ವಭೂತವಾಚಿ ಶಬ್ದಗಳೊಡನೆ ಭಗ ವದ್ವಾಚಕ ಶಬ್ದಗಳನ್ನು ನಿರ್ದೇಶಿಸುವಿಕೆಗೂ ಹೇತುವನ್ನು ಹೇಳು ತ್ತಾರೆ. ಎಲೈ ಅರ್ಜುನನೇ, ಸರ್ವಸ್ಯಚ-ಹಿಂದೆ ಹೇಳಲ್ಪಟ್ಟ ಸೋ ಮವೈಶ್ವಾನರರ (ಚಂದ್ರಾಗ್ನಿ) ಗಳಿಗೂ ಸರ್ವಭೂತ ವರ್ಗಕ್ಕೂ, ಹೃದಿ-ಸಕಲಪ್ರವೃತ್ತಿ ನಿವೃತ್ತಿ ಮೂಲವಾದ ಜ್ಞಾನೋತ್ಪತ್ತಿ ಸ್ಥಾನವಾ ಗಿರುವ ಹೃದಯದೇಶದಲ್ಲಿ, ಅಹಂ-ನಾನು, ಸರ್ವಪ್ರಪಂಚವನ್ನೂ ಸಂಕಲ್ಪದಿಂದ ನಿಯಮಿಸುವಂತವನಾಗಿ, ಸನ್ನಿವಿಷ್ಟಃ-ಅಂತರಾತ್ಮ ನಾಗಿ ಪ್ರವೇಶಿಸಿರುವೆನು. ಈ ಪ್ರಕಾರವೇ “ ಅಂತಃಪ್ರವಿಷ್ಟ ಶ್ಶಾಸ್ತಾಜನಾನಾಂಸರ್ವಾತ್ಮಾ- ಯಃಪೃಥಿವ್ಯಾಂತಿಷ್ಠನ್-ಯಆತ್ಮನಿ ತಿಷ್ಠನ್ನಾತ್ಮನೋನ್ತರೋಯಮಯತಿ-ಅಥಯದಿದಮಸ್ಮಿನ್‌ಬ್ರಹ್ಮಪುರೆ ದಹರಂಪುಂಡರೀಕಂವೇಶ್ಮ,, ಇತ್ಯಾದಿ ಶ್ರುತಿಗಳೂ “ಶಾಸ್ತಾವಿಷ್ಣು ರಶೇಷಸ್ಯ ಜಗತೋಯೋಜಗನ್ಮಯಃ। ಪ್ರಶಾಸಿತಾರಂಸರ್ವೇಷಾಮ ಣೀಯಾಂಸಮಣೀಯಸಾಂ- ಯಮೋವೈವಸ್ವತೋರಾಜಾಯಸ್ತವೈ ಷಹೃದಿಸ್ಥಿತಃ,, “ ಇತ್ಯಾದಿ ಸ್ಮೃತಿಗಳೂ ಹೇಳುವುವು. ಮತ್ತಃ-

ನನ್ನಿಂದಲೆ, ಸ್ಮೃತಿಃ-ಪೂರ್ವದಲ್ಲನುಭವಿಸಲ್ಪಟ್ಟ ವಸ್ತುವಿಷಯವಾಗಿ ಆ ಅನುಭವದಿಂದುಂಟಾದ ಸಂಸ್ಕಾರದಿಂದಲೇಹುಟ್ಟುವ ಜ್ಞಾನವೂ, (ಜಾಯತೆ-ಉಂಟಾಗುವುದು.) ಜ್ಞಾನಂ-ಚಕ್ಷುರಾದೀಂದ್ರಿಯಗಳಿಂದಲೂ ವ್ಯಾಪ್ಯಲಿಂಗಗಳಿಂದಲೂ ಶ್ರುತಿಗಳಿಂದಲೂ ಅಷ್ಟಾಂಗಯೋಗಶಕ್ತಿಯಿಂದಲೂ ಉಂಟಾಗಿರುವಶಕ್ತನಿಶ್ಚಯವೂ, (ಇಲ್ಲಿಯೂ ಅಪೋಹನಂಚ ಎಂಬ ಸ್ಥಾನದಲ್ಲಿಯೂ ಜಾಯತೆ ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು.) ಜಾಯತೆ ಉಂಟಾಗುವುದು. ಅಪೋಹನಂಚ-ಜ್ಞಾನನಾಶವೂ, (ಅಥವಾ) ಅಪೋಹನಂಚ-ಊಹವೆಂದರೆ, ಈ ಪ್ರಮಾಣವು ಈ ರೀತಿಯಾಗಿ ಪ್ರವರ್ತಿಸತಕ್ಕದ್ದೆಂಬ ಪ್ರಮಾಣಪ್ರವೃತ್ತಿಯೋಗ್ಯತಾವಿಷಯಕವಾಗಿಯೂ ಸಾಮಗ್ರ್ಯಾದಿ ನಿರೂಪಣದಿಂದುಂಟಾದುದ್ದಾಗಿಯೂ ಪ್ರಮಾಣಕ್ಕೆ ಅನುಗ್ರಾಹಕವಾಗಿಯೂ ಇರುವ ಜ್ಞಾನವು. ಇಂಥಾ ವೂಹವೂ ನನ್ನಿಂದಲೆ, ಜಾಯತೆ-ಉಂಟಾಗುವುದು. ಸರ್ವೈಃ-ಸಮಸ್ತಗಳಾದ, ವೇದೈಶ್ಚ-ವೇದಗಳಿಂದಲೂ, ಅಹಮೇವವೇದ್ಯಃ-(ಹಿಂದಿನ ಅಧ್ಯಾಯಗಳ ಅನೇಕಪ್ರದೇಶಗಳಲ್ಲಿಯೂ ಈ ಶ್ಲೋಕದಲ್ಲಿ ಸರ್ವಸ್ಯಚಾಹಂಹೃದಿಸನ್ನಿವಿಷ್ಟಃ ಎಂಬಸ್ಥಾನದಲ್ಲಿಯೂ ಹೇಳಿರುವಂತೆ ಅಗ್ನಿ ಸೂರ್ಯ ವಾಯು ಸೋಮೇಂದ್ರಾದಿಗಳಿಗೆ ನಾನು ಅಂತರ್ಯಾಮಿಯಾಗಿ ಆತ್ಮನಾಗಿರುವುದರಿಂದ ಶರೀರಭೂತರಾದ ಆ ಅಗ್ನ್ಯಾದಿಗಳಿಗೆ ವಾಚಕಗಳಾದ ಅಗ್ನ್ಯಾದಿ ಶಬ್ದಗಳೊಡನೆ ಸೇರಿದ) ಸರ್ವವೇದಗಳಿಂದಲೂ (ಶರೀರವಾಚಿಗಳಾದ ದೇವಮನುಷ್ಯಾದಿ ಶಬ್ದಗಳಿಂದಲೂ ಜೀವಾತ್ಮನಂತೆ) ನಾನೇ ಅರಿಯತಕ್ಕವನು. ವೇದಾಂತಕೃತ್-"ಇಂದ್ರಂಯಜೇತ-ವರುಣಂಯಜೇತ.,, ಎಂಬಿವೇ ಮೊದಲಾದ ವೇದಗಳಿಗೆ ಪರ್ಯವಸಾನ ಭೂಮಿಯಾದುದರಿಂದ ಅಂತವನ್ನಲ್ಪಡುವ ಫಲವನ್ನುಂಟುಮಾಡುವಂತವನು, ಅಹಂ ನಾನೇ. ವೇದೋಕ್ತಗಳಾದ ಯಾಗಾದಿಗಳನ್ನು ಅನುಷ್ಠಿಸುವಂತವರಿಗೆ ಅವುಗಳಲ್ಲಿ ಹೇಳಿರುವ ಫಲವನ್ನು ಕೊಡುವಂತವನು ನಾನೇ ಎಂಬದಾಗಿ ಭಾವವು. ಈ ಅರ್ಥವು "ಯೋಯೋಯಾಂಯಾಂತನುಂ,, ಎಂಬದಾಗಿ ಉಪಕ್ರಮಿಸಿ "ಲಭತೇಚತತಃಕಾಮಾನ್-ಅಹಂಹಿಸರ್ವಯಜ್ಞಾನಾಂ,, ಎಂಬೀಪರ್ಯಂತವಾಗಿ ಹೇಳಲ್ಪಟ್ಟಿರುವುದು. ವೇದವಿಚ್ಚ ಅಹಮೇವ-ನನ್ನನ್ನೇ ಪ್ರತಿಪಾದಿ

ಸುವ ವೇದಗಳ ಅರ್ಥಗಳನ್ನು ತಿಳಿದವನೂ ನಾನೆ. ಇದಕ್ಕೆ ವಿಪರೀತವಾಗಿ ಹೇಳುವಂತವನು ವೇದವಿತ್ತಲ್ಲವೆಂದು ತಾತ್ಪರ್ಯವು ॥೧೫॥

ಮೂ॥ ದ್ವಾವಿಮೌಪುರುಷೌಲೋಕೇಕ್ಷರಶ್ಚಾಕ್ಷರಏವಚ ।
ಕ್ಷರಸ್ಸರ್ವಾಣಿಭೂತಾನಿಕೂಟಸ್ಥೋಕ್ಷರಉಚ್ಯತೇ॥ ॥೧೬॥

ಪ॥ ದ್ವೌ-ಇಮೌ-ಪುರುಷೌ-ಲೋಕೇ-ಕ್ಷರಃ-ಚ-ಅಕ್ಷರಃ-ಏವ-ಚ। ಕ್ಷರಃ-ಸರ್ವಾಣಿ-ಭೂತಾನಿ-ಕೂಟಸ್ಥಃ ಅಕ್ಷರಃ-ಉಚ್ಯತೇ॥

(ಅ) ಲೋಕೇ-ಲೋಕದಲ್ಲಿ, (ಶಂ) ಸಂಸಾರದಲ್ಲಿ, ಕ್ಷರಶ್ಚ-ಕ್ಷರನೆಂತಲೂ, (ಶಂ) ನಾಶಹೊಂದುವಂತವನೆಂತಲೂ, (ರಾ) ಬದ್ಧ ಜೀವನೆಂತಲೂ, (ಮ॥ ಗೀ॥ ವಿ॥) ಬ್ರಹ್ಮಾದಿ ಜೀವಕೋಟಿಗಳೆಂತಲೂ, ಅಕ್ಷರಏವಚ-ಅಕ್ಷರನೆಂತಲೂ, (ರಾ) ಮುಕ್ತ ಜೀವರೆಂತಲೂ ಹೇಳಲ್ಪಡುವ, ದ್ವಾವಿಮೌಪುರುಷೌ-ಈ ಎರಡು ಪುರುಷರುಂಟು. ಸರ್ವಾಣಿಭೂತಾನಿ-ಸಮಸ್ತ ಭೂತಗಳೂ, ಕ್ಷರಃ-ಕ್ಷರವೆಂತಲೂ, ಕೂಟಸ್ಥಃ-ಕೂಟಸ್ಥನು, ಅಕ್ಷರಃ-ಅಕ್ಷರನೆಂತಲೂ, ಉಚ್ಯತೆ-ಹೇಳಲ್ಪಡುವನು. ॥೧೬॥

(ಶ್ರೀ) ಕೂಟಸ್ಥನಾದ ಜೀವಾತ್ಮನನ್ನೇ ಅಕ್ಷರನೆಂತ ಹೇಳುವುದು ಹೇಗೆಂದರೆ, ಕೂಟ ಇದ-ಕಲ್ಲುಗಳ ರಾಶಿಗಳು ಅಡಗಿರುವ ಪರ್ವತದಂತೆ, ಸ್ಥಃ-ಇರುವಂತವನು, ಎಂದರೆ ದೇಹವು ನಾಶ ಹೊಂದಿದರೂ ಇವನು ಚಲಿಸದೆ ಪರ್ವತದಂತೆ ಇರುವಂತವನೆಂದು ತಾತ್ಪರ್ಯವು. ॥೧೬॥

(ಶಂ॥ ಭಾ॥) “ಯದಾದಿತ್ಯಗತಂತೇಜಃ,, (೧೫॥ ೧೨) ಎಂಬ ಶ್ಲೋಕದ ಮೊದಲು ನಾರಾಯಣನೆನ್ನಲ್ಪಡುವ ಸರ್ವೇಶ್ವರನ ವಿಭೂತಿಯು ಸಂಗ್ರಹವಾಗಿ ಹೇಳಲ್ಪಟ್ಟಿತು. ಇನ್ನು ಮುಂದೆ ಸ್ವತಸ್ಸಿದ್ಧವಾಗಿ ನಿರುಪಾಧಿಕನೂ ಶುದ್ಧನೂ ಆದ ಈಶ್ವರನ ಸತ್ಯಸ್ವರೂಪವನ್ನು ಪರಾಪರ ರೂಪೋಪಾಧಿ ವಿಭಾಗ ಮೂಲಕವಾಗಿ ವ್ಯಕ್ತಪಡಿಸುವ ಇಚ್ಛೆಯಿಂದ ಈ ಶ್ಲೋಕವಾರಂಭಿಸಲ್ಪಡುವುದು. ಆದರೆ ನಿರೂಪಾಧಿಕಾತ್ಮಸ್ವರೂಪ ನಿರ್ಧಾರಣಕ್ಕಾಗಿಯೇ ಈ ಉತ್ತರ ಗ್ರಂಥವು ಆರಂಭಿಸಲ್ಪಡಲಾಪದು. ಮತ್ತೇನೆಂದರೆ, ಸಮಸ್ತವಾದ ಗೀತಾ ಶಾಸ್ತ್ರದ ಅರ್ಥ ನಿರ್ಣಯಕ್ಕೋಸ್ಕರವಾಗಿಯೂ ಆರಂಭಿಸ

ಲ್ಪಡುವುದೆಂದರಿಯ ಬೇಕು. ಆ ಸಂದರ್ಭದಲ್ಲಿ ಇದುವರೆಗೂ ಹಿಂದೆ ಅತೀತವಾಗಿಯೂ ಮುಂದೆ ಬರುವದಾಗಿಯೂ ಇರುವ ಅಧ್ಯಾಯಗಳಲ್ಲಿ ವಿವರಿಸಲ್ಪಟ್ಟಿರುವ ಸರ್ವಾರ್ಥಗಳನ್ನೂ ಮೂರು ವಿಧವಾಗಿ ವಿಭಾಗ ಮಾಡಿ ಅವುಗಳಲ್ಲಿಯಿರಡರ್ಥಗಳನ್ನು ಇಲ್ಲಿ ವಿವರಿಸಿ ಬೋಧಿಸುತ್ತಾನೆ. ಹೇಗೆಂದರೆ, ನಾಶಹೊಂದುವ ವಿಕಾರಗಳೆಲ್ಲವೂ ಕ್ಷರವೆನ್ನಲ್ಪಡುವುದರಿಂದ ಸಮಸ್ತ ಪ್ರಾಣಿಗಳೂ ಕ್ಷರಗಳು. ಕ್ಷರವೆನ್ನಲ್ಪಡುವ ಜೀವನ ಉತ್ಪತ್ತಿಗೆ ಮೂಲವೂ ಅನೇಕ ಸಂಸಾರ ಕಾಮುಕರ್ಮಾದಿ ಸಂಸ್ಕಾರಾಶ್ರಯವೂ ಆಗಿರುವ ಭಗವನ್ಮಾಯಾ ಶಕ್ತಿಯು ಜ್ಞಾನೋತ್ಪತ್ತಿ ಪರ್ಯಂತವಾಗಿ ಪ್ರವಾಹರೂಪವಾಗಿರುತ ನಾಶರಹಿತವಾಗಿರುವುದರಿಂದ ಅಕ್ಷರವೆನ್ನಲ್ಪಡುವುದು. ಕೂಟವೆಂದರೆ ರಾಶಿಯು. ಆದುದರಿಂದ ಸಮಸ್ತ ಪ್ರಾಣಿರಾಶಿಗಳಿಗೂ ವಾಸಸ್ಥಾನವಾಗಿರುವುದರಿಂದ ಮಾಯೆಯೇ ಕೂಟಸ್ಥವೆನ್ನಲ್ಪಡುವುದು. ಅಥವಾ-ಕೂಟವು-ಮಾಯಾ-ವಂಚನಾ-ಜಿಂಹತಾ-ಕುಟಲತಾ ಎಂಬೀ ಪದಗಳೆಲ್ಲವೂ ಪರ್ಯಾಯಗಳು. ಅನೇಕಪ್ರಕಾರವಾಗಿರುವ ಕಾರಣದಿಂದ ಕೂಟಸ್ಥವೆಂದು ಮಾಯೆಗೇನೆ ಹೆಸರು. ಮತ್ತು ಪುರುಷನಿಗೆ ಸಂಸಾರ ಬೀಜಗಳು ಅನೇಕಗಳಾಗಿರುವುದರಿಂದ (ಅವು ನಾಶಹೊಂದದೆ ಇರುವುದರಿಂದಲೂ) ಅಕ್ಷರವೆಂದು ಹೇಳಲ್ಪಟ್ಟಿತು. ॥೧೬॥

(ರಾ॥ಭಾ) ಹಿಂದಿನ ಶ್ಲೋಕದಲ್ಲಿ “ಸೋಮೋಭೂತ್ವಾ„ ಎಂಬಸ್ಥಾನದಲ್ಲಿ ಸೋಮಶರೀರಕನಾಗಿ ಎಂತಲೂ, “ವೈಶ್ವಾನರೋಭೂತ್ವಾ„ ಎಂಬ ಸ್ಥಾನದಲ್ಲಿ ನಾನು ಜಾಠರಾಗ್ನಿ ಶರೀರಕನಾಗಿ ಎಂತಲೂ ಅರ್ಥವಾದುದರಿಂದ ಶರೀರಶರೀರಿ ಭಾವವನ್ನು ಕುರಿತ ಸಾಮಾನಾಧಿಕರಣ್ಯ ನಿರ್ದೇಶವಲ್ಲದೆ ಸ್ವರೂಪೈಕ್ಯಪ್ರಯುಕ್ತವಾಗಿ ಈ ಸಾಮಾನಾಧಿಕರಣ್ಯ ನಿರ್ದೇಶವು ಬಂದಿಲ್ಲವೆಂತಲೂ ಈ ಮಾರ್ಗವು ವೇದದಲ್ಲಿಯೂ ಸರ್ವ ದೇವತಾದಿವಾಚಕ ಶಬ್ದಗಳಿಗೂ ಭಗವದ್ವಾಚಕ ಶಬ್ದಸಾಮಾನಾಧಿಕರಣ್ಯ ವಿದ್ದರೂ ಇಲ್ಲದೆಇದ್ದರೂ ತಿಳಿದುಕೊಳ್ಳಲ್ಪಡತಕ್ಕದ್ದೆಂಬದಾಗಿ ಸೂಚಿತವಾಯಿತಷ್ಟೆ. ಆದುದರಿಂದ ನಮ್ಮಲ್ಲಿ ಸರ್ವ ವೇದಸಾರಾರ್ಥವನ್ನು ಕೇಳೆಂದು ಶ್ರೀಕೃಷ್ಣನುಪದೇಶಿಸುತ್ತಾನೆ. ಕ್ಷರಶ್ಚಾಕ್ಷರವಿವಚ-ಕ್ಷರನೆಂತಲೂ ಅಕ್ಷರನೆಂತಲೂ ಪ್ರಸಿದ್ಧರಾದ, ದ್ವಾವಿ

ದ್ವೌ ಪುರುಷೌ-ಇಬ್ಬರಾದ ಈ ಪುರುಷರು, ಲೋಕೇ-ಲೋಕದಲ್ಲಿ, (ಪ್ರಥಿತೌ-ಪ್ರಸಿದ್ಧರಾಗಿರುವರು.) ಕ್ಷರಃ-ಅವರಲ್ಲಿ ಕ್ಷರಶಬ್ದ ನಿರ್ದಿಷ್ಟನಾದ ಪುರುಷನು, ಸರ್ವಾಣಿಭೂತಾನಿ-ಜೀವಶಬ್ದದಿಂದ ಹೇಳಲ್ಪಡುವುದಾಗಿಯೂ ಬ್ರಹ್ಮಾದಿಸ್ತಂಬಪರ್ಯಂತಗಳಾಗಿಯೂ ಇರುವ ಸ್ವರೂಪವಿಕಾರವೆಂಬ ಕ್ಷರಣವನ್ನು ಸ್ವಭಾವವಾಗಿವುಳ್ಳ ಅಚಿತ್ತಿನೊಡನೆ ಸಂಬಂಧಿಸಿ ವರ್ತಿಸುತಲಿರುವ ಸರ್ವಭೂತಗಳು, (ಅಚೇತನಸಂಸರ್ಗವೆಂಬ ಏಕೋಪಾಧಿಯಿಂದ ‘ ಪುರುಷಃ ’ ಎಂಬದಾಗಿ ಏಕವಚನವು.) ಅಕ್ಷರಃ-ಅಕ್ಷರಶಬ್ದ ನಿರ್ದಿಷ್ಟನಾದ ಪುರುಷನೊ ಎಂದರೆ, ಕೂಟಸ್ಥಉಚ್ಯತೆ-ಅಚಿತ್ಸಂಸರ್ಗವನ್ನು ಬಿಟ್ಟು ತನ್ನ ಸ್ವರೂಪಗೊಡನೆ ಇರುತಲಿರುವ ಮುಕ್ತಾತ್ಮನಾದುದರಿಂದ ಆ ಆತ್ಮನು, ಅಚಿತ್ಪರಿಣಾಮವಿಶೇಷಗಳಾದ ಬ್ರಹ್ಮಾದಿ ದೇಹಗಳಿಗೆ ಅಸಾಧಾರಣನಾಗುವುದಿಲ್ಲವಾದುದರಿಂದ ಕೂಟಸ್ಥನೆಂದು ಹೇಳಲ್ಪಡುತ್ತಾನೆ. ಇಲ್ಲಿಯೂ ಅಚಿತ್ಸಂಸರ್ಗವಿಲ್ಲದ ಏಕೋಪಾಧಿಯಿಂದಲೇ ಏಕವಚನವಲ್ಲವೆ. ಇದಕ್ಕೆ ಹಿಂದೆ ಅನಾದಿಕಾಲದಲ್ಲಿ ಮುಕ್ತನಾದವನು ಒಬ್ಬನೆ ಅಲ್ಲವು. ಅನೇಕರು ಮುಕ್ತರಾಗಿರುವರು. “ ಬಹವೋಜ್ಞಾನತಪಸಾಪೂತಾಮದ್ಭಾವಮಾಗತಾಃ ॥ ಸರ್ಗೇಪಿನೋಪಜಾಯಂತೆಪ್ರಲಯೇನವ್ಯಥಂತಿಚ ” ಎಂಬೀಪ್ರಮಾಣದಲ್ಲಿ ಅನೇಕರು ಮುಕ್ತರಾಗಿರುವಂತೆ ಪ್ರತಿಪಾದಿಸಲ್ಪಟ್ಟಿರುವರು. ಅದುದರಿಂದ ಆತ್ಮೈಕ್ಯವಿವಕ್ಷೆಯಿಂದ ಇಲ್ಲಿ ಏಕವಚನವು ಪ್ರಯುಕ್ತವಾಗಲಿಲ್ಲವು. ॥೧೬॥

(ಮ॥ಗೀ॥ವಿ) ಬ್ರಹ್ಮಾದಿಜೀವರು ಕ್ಷರರು, ಏತಕ್ಕೆಂದರೆ ದೇಹನಾಶವಿರುವುದರಿಂದ; ಲಕ್ಷ್ಮೀ ಅಕ್ಷರಳು. ಇವಳು ವಿಕಾರರಹಿತಳಾಗಿಯೂ ಪುರುಷನಂತೆ ಶಕ್ತಿಯುಳ್ಳವಳಾಗಿಯೂ ಇರುವುದರಿಂದ ಕೂಟಸ್ಥನೆಂಬದಾಗಿ ಪುಲ್ಲಿಂಗಪದದಿಂದ ಹೇಳಲ್ಪಟ್ಟಳು. ॥೧೬॥

ಮೂ॥ ಉತ್ತಮಃಪುರುಷಸ್ತ್ವನ್ಯಃಪರಮಾತ್ಮೇತ್ಯುದಾ
ಹೃತಃ। ಯೋಲೋಕತ್ರಯಮಾವಿಶ್ಯಬಿಭರ್ತ್ಯವ್ಯ
ಯಈಶ್ವರಃ॥ ॥೧೭॥

ಪ॥ ಉತ್ತಮಃ-ಪುರುಷಃ-ತು-ಅನ್ಯಃ-ಪರಮಾತ್ಮಾ-ಇತಿ-ಉದಾಹೃತಃ। ಯಃ-ಲೋಕತ್ರಯಂ-ಆವಿಶ್ಯ-ಬಿಭರ್ತಿ-ಅವ್ಯಯಃ-ಈಶ್ವರಃ।

(ಅ॥ರಾ॥ಭಾ) ಯಃ-ಯಾವನು, ಪರಮಾತ್ಮೇತ್ಯುದಾಹೃತಃ- ಪರಮಾತ್ಮನೆಂಬದಾಗಿ ಸಮಸ್ತಗಳಾದ ಶ್ರುತಿಗಳಲ್ಲಿಯೂ ನಿರ್ದೇಶಿಸ ಲ್ಪಟ್ಟಿರುವನೊ, ಯಃ-ಯಾವಪರಮಾತ್ಮನು, ಲೋಕತ್ರಯಂ-(ಅಚೇ ತನವೇನು, ಅದರೊಡನೆ ಕಲೆತಿರುವ ಬದ್ಧಜೀವನೇನು, ಮುಕ್ತಜೀವ ನೇನು. ಈ ಪ್ರಕಾರವಾಗಿ ಪ್ರಮಾಣಪ್ರತಿಪನ್ನವಾದ) ವಸ್ತುತ್ರ ಯವನ್ನು, ಆವಿಶ್ಯ-ಪ್ರವೇಶಿಸಿ, ಬಿಭರ್ತಿ-ಭರಿಸುತ್ತಾನೆಯೊ, (ಈಪ್ರ ಕಾರವಾಗಿ ಪರಮಾತ್ಮನೆಂಬದಾಗಿ ಹೇಳುವುದರಿಂದಲ್ಲವೆ ಉತ್ತಮಪು ರುಷನು ಬದ್ಧಮುಕ್ತ ಪುರುಷರಿಗಿಂತಲೂ ಭಿನ್ನಪಟ್ಟವನೆಂದು ತಿಳಿ ಯಲ್ಪಡುತ್ತದೆ. ಅದು ಹೇಗೆಂದರೆ ಈ ಮೇಲೆ ವಿವರಿಸಲ್ಪಟ್ಟ ವಸ್ತು ತ್ರಯವನ್ನು ಆತ್ಮನಾಗಿ ಪ್ರವೇಶಿಸಿ ಧರಿಸುವಂತವನು ಯಾವನೊ ಅ ವನು ಧರಿಸಲ್ಪಡುವಂತವುಗಳಿಗಿಂತಲೂ ಭಿನ್ನಪಟ್ಟವನಲ್ಲವೆ. ಇದ ರಿಂದಲೂ ಪರಮಾತ್ಮನು ಮೇಲೆ ವಿವರಿಸಲ್ಪಟ್ಟ ವಸ್ತುತ್ರಯಕ್ಕಿಂತ ಲೂ ಭಿನ್ನನಾದವನೆಂದು ತಿಳಿಯಲ್ಪಡುತ್ತದೆ. ಯಃ-ಯಾವನು, ಅ ವ್ಯಯಃ-ಸ್ವರೂಪವಿಕಾರವೂ ಸ್ವಭಾವಭೂತ ಜ್ಞಾನಸಂಕೋಚ ವಿ ಕಾಸರೂಪವಿಕಾರವೂ, ಅಂಥಾ ಸ್ವಭಾವ ವಿಕಾರಯೋಗ್ಯತೆಯೂ ಇಲ್ಲದವನೊ, ಯಃ-ಯಾವ ಪರಮಾತ್ಮನು, ಈಶ್ವರಃ-ಸ್ವಾಮಿಯೊ, (ಅವ್ಯಯನಾಗಿರುವಿಕೆ ಎಂದರೆ ನಾಶಹೊಂದುವದೇ ಸ್ವಭಾವವಾಗಿ ಯುಳ್ಳಅಚೇತನವೇನು, ಅದರ ಸಂಬಂಧದಿಂದ ತದನುಸಾರಿಯಾದ ಚೇ ತನನೇನು, ಆಪ್ರಕಾರವೆ ಪೂರ್ವದಶೆಯಲ್ಲಿ ಅದರ ಸಂಬಂಧಕ್ಕೆಯೋ ಗ್ಯವಾಗಿದ್ದ ಮುಕ್ತಸ್ವರೂಪವೇನು, ಈ ಮೂರಿಗಿಂತಲೂ ಭಿನ್ನಪ ಟ್ಟಿರುವಿಕೆಯು. ಈಶ್ವರನಾಗಿರುವಿಕೆ ಎಂದರೆ, ತನ್ನಿಂದಾಳಲ್ಪಡುವವ ಸ್ತುಗಳಿಗಿಂತಲೂ, ತಾನುಬೇರೆಯಾಗಿರುವಿಕೆಯೇ.) ಸಃಉತ್ತಮಃಪು ರುಷಸ್ತು-ಅಂಥಾಪರಮಪುರುಷನೊ ಎಂದರೆ, ಅನ್ಯಃ-ಕೆಳಗೆ ಕ್ಷರಾ ಕ್ಷರಶಬ್ದನಿರ್ದಿಷ್ಟರಾದ ಬದ್ಧಮುಕ್ತರಿಗಿಂತಲೂ ಬೇರೆಯಾದವನು॥೧೭॥

(ಶಂ॥ಭಾ) ಹಿಂದಿನ ಶ್ಲೋಕದಲ್ಲಿ ವಿವರಿಸಲ್ಪಟ್ಟ ಕ್ಷರಾಕ್ಷರರಿ ಗಿಂತಲೂ ವಿಲಕ್ಷಣನಾಗಿಯೂ, ಕ್ಷರಾಕ್ಷರರೂಪವಾದ ಉಪಾಧಿದ್ವ ಯದೋಷಗಳಿಂದ ಅಂಟದವನಾಗಿಯೂ ನಿತ್ಯಶುದ್ಧ ಬುದ್ಧ ಮುಕ್ತ ಸ್ವಭಾವನಾಗಿಯೂ ಇರುವ ಶ್ರೇಷ್ಠತಮನಾದ ಪುರುಷನು ದೇಹಾ

ವ್ಯಾವ್ಯಾಕೃತ ಸ್ವರೂಪಗಳುಳ್ಳ ಮಾಯಾದಿ ಪಂಚ ಕೋಶಗಳಿಗಿಂತಲೂ ಅತಿವಿಲಕ್ಷಣನಾದ ಪರಮಾತ್ಮನೆಂಬದಾಗಿ ವೇದಾಂತಗಳಲ್ಲಿ ಹೇಳಲ್ಪಟ್ಟಿರುವನು. ಅಂತಹ ಪರಮಪುರುಷನೆ ಭೂರ್ಭುವಸ್ಸ್ವರ್ಲೋಕಗಳನ್ನು ತನ್ನ ಚೈತನ್ಯಬಲ ಶಕ್ತಿಯಿಂದ ಪ್ರವೇಶಿಸಿ ಭರಿಸುತ್ತಾನೆ. ಆ ಪರಮಾತ್ಮನು ನಾಶರಹಿತನು, ಸರ್ವಜಗನ್ನಿಯಾಮಕನು, ಸರ್ವಜ್ಞನು, ನಾರಾಯಣನೆಂಬ ನಾಮವುಳ್ಳವನು. ತಾನು ಸ್ವರೂಪದೊಡನೆ ಇರುವಿಕೆಯೇ ಇಲ್ಲಿ ಭರಿಸುವಿಕೆಯೆಂಬದಾಗಿ ಹೇಳಲ್ಪಟ್ಟಿರುತ್ತದೆ. ಇಲ್ಲಿನ ಈಶ್ವರ ಶಬ್ದದಿಂದ "ಸಂಯುಕ್ತಮೇತತ್ಕ್ಷರಮಕ್ಷರಂ ಚವ್ಯಕ್ತಾವ್ಯಕ್ತಂಭರತೇವಿಶ್ವಮೀಶಃ" ಎಂಬ ಶ್ರುತ್ಯರ್ಥವೂ ಗೃಹೀತವಾಗುವುದು. ॥೧೭॥

ಈಶ್ವರಃ-(ಶಂ) ಸರ್ವಜ್ಞನಾದ ನಾರಾಯಣನೆಂಬ ನಾಮವುಳ್ಳ ಜಗನ್ನಿಯಾಮಕನು, ಲೋಕತ್ರಯಂ-(ಶಂ॥ಗೀ॥ವಿ) ಭೂರ್ಭುವಸ್ಸ್ವರ್ಲೋಕಗಳು. ಆವಿಶ್ಯ-ತನ್ನ ಬಲಶಕ್ತಿಗಳಿಂದ ಪ್ರವೇಶಿಸಿ, ಬಿಭರ್ತಿ-(ಶಂ॥ಗೀ॥ವಿ) ಭರಿಸುತ್ತಾನೆಯೊ, ಅನ್ಯಃ-(ಶಂ) ಕ್ಷರಾಕ್ಷರೋಪಾಧಿಗಳಸಂಬಂಧವಿಲ್ಲದ ನಿತ್ಯಶುದ್ಧ ಮುಕ್ತಸ್ವಭಾವನುಳ್ಳವನು. ॥೧೭॥

ಮೂ॥ ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿಚೋ
ತ್ತಮಃ । ಅತೋಽಸ್ಮಿಲೋಕೇವೇದೇಚಪ್ರಥಿತಃ
ಪುರುಷೋತ್ತಮಃ॥ ॥೧೮॥

ಪ॥ ಯಸ್ಮಾತ್-ಕ್ಷರಂ-ಅತೀತಃ-ಅಹಂ-ಅಕ್ಷರಾತ್-ಅಪಿ-ಚ-ಉತ್ತಮಃ।ಅತಃ-ಅಸ್ಮಿ-ವೇದೇ-ಲೋಕೇ-ಚ-ಪ್ರಥಿತಃ-ಪುರುಷೋತ್ತಮಃ ॥

(ಅ॥)ಅಹಂ-ನಾನು,ಯಸ್ಮಾತ್-ಯಾವಕಾರಣದಿಂದ, ಕ್ಷರಂ-(ರಾ) ಬದ್ಧಜೀವನನ್ನೂ, (ಶಂ) ಅಶ್ವತ್ಥವೆಂಬದಾಗಿ ಪೂರ್ವದಲ್ಲಿ ಹೇಳಲ್ಪಟ್ಟ ಸಂಸಾರ ಮಾಯಾವೃಕ್ಷವನ್ನು, ಅತೀತಃ-ಕೆಳಗೆ ಹೇಳುವ ಸ್ವಭಾವಗಳಿಂದ ಅತಿಕ್ರಮಿಸಿರುವವನೊ, (ಗೀ॥ವಿ) ಕ್ಷರಾಕ್ಷರಗಳನ್ನತಿಕ್ರಮಿಸಿರುವನೊ, ಅಕ್ಷರಾದಪಿಉತ್ತಮಃ-(ರಾ) ಅಕ್ಷರಶಬ್ದಿತನಾದ ಮುಕ್ತಾತ್ಮನಿಗಿಂತಲೂ ಕೆಳಗೆ ಹೇಳುವ ಸ್ವಭಾವಗಳಿಂದ ಶ್ರೇಷ್ಠನಾದವನೊ, (ಶಂ) ಸಂಸಾರವೃಕ್ಷಕ್ಕೆ ಮೂಲವಾಗಿರುವ ಮಾಯೆಗಿಂತಲೂ ಮೇಲೇ ಇರುವಂತಹವನೊ, (ಮ॥ಗೀ॥ವಿ) ಅಕ್ಷರ ಶಬ್ದನಿರ್ದಿ

ಷ್ವಭಾವದ ಅಪ್ರಿಂಗಿಂತಲೂ ಶ್ರೇಷ್ಠನೊ, ಅತಃ-ಆಕಾರಣದಿಂದ, ಲೋಕೇ-ಪ್ರಪಂಚದಲ್ಲಿ ಜನಗಳಿಂದಲೂ ಕಾವ್ಯಾದಿಗಳಲ್ಲಿ ಕವಿಗಳಿಂದಲೂ, (ರಾ॥ಗೀ॥ವಿ) ಸ್ಮೃತಿಯಲ್ಲಿಯೂ, ವೇದೇಚ-ವೇದದಲ್ಲಿಯೂ, ಪುರುಷೋತ್ತಮಇತಿ- ಪುರುಷಶ್ರೇಷ್ಠನೆಂಬದಾಗಿ, ಪ್ರಥಿತೊಸ್ಮಿ-ಪ್ರಸಿದ್ಧನಾಪೆನು. ॥೧೮॥

(ರಾ॥ ಭಾ॥) ಯಾವ ಕಾರಣದಿಂದ ನಾನು ಕೆಳಗೆ ಹೇಳಿರುವ ಸ್ವಭಾವಗಳಿಂದ ಕ್ಷರಶಬ್ದಿತನಾದ ಬದ್ಧ ಪುರುಷನನ್ನು ಅತಿಕ್ರಮಿಸಿರುವೆನೋ, ಅಕ್ಷರಶಬ್ದಿತನಾದ ಮುಕ್ತಪುರುಷನಿಗಿಂತಲೂ ಹಿಂದೆ ವಿವರಿಸಿರುವ ನನ್ನ ಸ್ವಭಾವಗಳಿಂದ ಶ್ರೇಷ್ಠತಮನಾಗಿರುವೆನೋ, ಆ ಕಾರಣದಿಂದ (ಬದ್ಧರಾದಿಯೂ ಮುಕ್ತರಾಗಿಯೂ ಇರುವ ಪುರುಷಶಬ್ದದಿಂದ ಪ್ರತಿಪಾದಿತರಾದ ಜೀವರಿಗಿಂತಲೂ ಉತ್ಕೃಷ್ಟ (ಶ್ರೇಷ್ಠ) ನಾದುದರಿಂದ ನಾನು ಸ್ಮೃತಿಯಲ್ಲಿಯೂ ವೇದದಲ್ಲಿಯೂ ಪುರುಷೋತ್ತಮನೆಂಬದಾಗಿ ಪ್ರಸಿದ್ಧನಾಗಿರುವೆನು. ತಾನು ಒಂದು ಅರ್ಥವನ್ನು ಹೇಳುವಲ್ಲಿ ಮೂಲಭೂತವಾದ ವೇದವನ್ನು ನಿರೀಕ್ಷಿಸುವುದರಿಂದ ಲೋಕ ಶಬ್ದವು ಸ್ಮೃತಿ ಎನ್ನಲ್ಪಟ್ಟಿತು. ಶೃತಿಗಳು ‟ಪರಂಜ್ಯೋತಿರುಪ ಸಂಪದ್ಯಸ್ವೇನರೂಪೇಣಾಭಿನಿಷ್ಪದ್ಯತೆಸ ಉತ್ತಮಃ ಪುರುಷಃ„ ಇತ್ಯಾದಿಗಳು. ಸ್ಮೃತಿಗಳು ‟ಅಂಶಾವತಾರಂಪುರುಷೋತ್ತಮಸ್ಯಹ್ಯನಾದಿಮಧ್ಯಾಂತಮಜಸ್ಯವಿಷ್ಣೋಃ„ ಇತ್ಯಾದಿಗಳು. ॥೧೮॥

ಮೂ॥ ಯೋಮಾಮೇವಮಸಮ್ಮೂಢೋಜಾನಾತಿಪುರು
ಷೋತ್ತಮಂ । ಸಸರ್ವವಿದ್ಭಜತಿಮಾಂಸರ್ವಭಾ
ವೇನಭಾರತ॥ ॥೧೯॥

ಪ॥ ಯಃ-ಮಾಂ-ಏವಂ-ಅಸಮ್ಮೂಢಃ-ಜಾನಾತಿ-ಪುರುಷೋತ್ತಮಂ । ಸಃ-ಸರ್ವವಿತ್-ಭಜತಿ-ಮಾಂ-ಸರ್ವಭಾವೇನ-ಭಾರತ॥

(ಅ॥ ರಾ॥ ಭಾ॥) ಭಾರತ-ಭರತವಂಶ್ಯನಾದ ಎಲೈ ಅರ್ಜುನನೇ! ಏವಂ-ಕೆಳಗೆ ಹೇಳಿರುವ ನಿಮಿತ್ತ ಪ್ರಕಾರವಾಗಿ, ಪುರುಷೋತ್ತಮಂ-ಬದ್ಧಮುಕ್ತವಿಲಕ್ಷಣ ಸ್ವಭಾವನಾದ, ಮಾಂ-ನನ್ನನ್ನು, ಅಸಮ್ಮೂಢಃ-(ಜಾನಾತಿ-ಅನ್ಯಯುಸ್ವಭಾವನಾದುದರಿಂದಲೂ ಸರ್ವವಸ್ತುವಿನಲ್ಲಿಯೂ ವ್ಯಾಪಿಸಿರುವುದರಿಂದಲೂ ಸರ್ವವಸ್ತುವನ್ನೂ ಭ

ಳಿಸುವುದರಿಂದಲೂ ಸ್ವಾಮಿಯಾಗಿರುವುದರಿಂದಲೂ ಬದ್ಧಮುಕ್ತರೆಂಬ ಸಮಸ್ತ ಜೀವರಿಗಿಂತಲೂ ವಿಲಕ್ಷಣನೆಂಬದಾಗಿ ಚನ್ನಾಗಿ ತಿಳಿಯುತ್ತಾನೆಯೊ; ಸಃ-ಅವನು, ಸರ್ವವಿತ್-ನನ್ನ ಪ್ರಾಪ್ತಿಗೆ ಸಾಧನತ್ವೇನ ಎಷ್ಟು ತಿಳಿಯಬೇಕೊ ಅಷ್ಟೂ ತಿಳಿದವನೆ, ಸರ್ವಭಾವೇನಮಾಂಭಜತಿ-ನನ್ನ ಪ್ರಾಪ್ತಿಗೆ ಉಪಾಯಗಳಾದ ಭಜನಪ್ರಕಾರಗಳು ಎಷ್ಟು ಶಾಸ್ತ್ರಸಿದ್ಧಗಳೊ ಆ ಸರ್ವಪ್ರಕಾರಗಳಿಂದಲೂ ನನ್ನನ್ನೆ ಭಜಿಸುತ್ತಾನೆ. ನನ್ನ ವಿಷಯವಾದ ಸರ್ವಜ್ಞಾನಗಳಿಂದಲೂ ನನಗೆಯಾವ ಪ್ರೀತಿಯುಂಟಾಗುವುದೊ ನನ್ನನ್ನು ಸರ್ವಭಜನ ಪ್ರಕಾರಗಳಿಂದಲೂ ಭಜಿಸಿದರೆ ಯಾವ ಪ್ರೀತಿ ಯುಂಟಾಗುವುದೊ; ಆ ದ್ವಿವಿಧವಾದ ಪ್ರೀತಿಯೂ ಈ ಪುರುಷೋತ್ತಮತ್ವಜ್ಞಾನದಿಂದ ಉಂಟಾಗುವುದೆಂದು ತಾತ್ಪರ್ಯವು. ॥೧೯॥

(ಶಂ॥ಭಾ) ಈ ಶ್ಲೋಕದಿಂದ, ಪೂರ್ವಶ್ಲೋಕಗಳಲ್ಲಿ ನಿರ್ಣೀತನಾದ ನನ್ನನ್ನು ಯಾವನು ತಿಳಿದುಕೊಳ್ಳುವನೊ ಅವನಿಗುಂಟಾಗುವ ಫಲವು ಹೇಳಲ್ಪಡುವುದು. ಗುರೂಪದೇಶಾದಿಗಳಿಂದ ಪ್ರಾಪ್ತವಾದ ಬ್ರಹ್ಮಜ್ಞಾನವುಳ್ಳವನಾಗಿ ದೇಹಾದಿಗಳಲ್ಲಿ ಆತ್ಮೀಯತ್ವ ಬುದ್ಧಿರಹಿತನಾಗಿ (ಅಹಂಕಾರಮಮಕಾರಗಳನ್ನು ಸವಾಸನವಾಗಿ ಬಿಟ್ಟವನಾಗಿ) ಹಿಂದೇ ಹೇಳಿರುವಂಥಾ ಸ್ವರೂಪ ಸ್ವಭಾವಗಳುಳ್ಳ ಈಶ್ವರನಾದ ನಾನು ಪುರುಷೋತ್ತಮನೆಂಬದಾಗಿ ತಿಳಿದು ಬ್ರಹ್ಮಸ್ವರೂಪಾನುಭವಶೀಲನಾದ ಮಹಾತ್ಮನು ಸರ್ವಂ ಬ್ರಹ್ಮಮಯವೆಂಬದಾಗಿ ತಿಳಿದುಕೊಂಡು ಧ್ಯಾನಿಸುತ್ತಾನಾದುದರಿಂದ ಸರ್ವವನ್ನು ತಿಳಿದವನೆಂಬದಾಗಿ ಹೇಳಲ್ಪಡುವನು. ಜಾನಾತಿ= ಅಯಮಹಮಸ್ಮೀತಿ-ನನ್ನನ್ನೇ ತಾನೆಂಬದಾಗಿ ತಿಳಿಯುತ್ತಾನೆಯೊ. ॥೧೯॥

ಮೂ॥ ಇತಿಗುಹ್ಯತಮಂಶಾಸ್ತ್ರಮಿದಮುಕ್ತಂಮಯಾ
ನಘ । ಏತದ್ಬುದ್ಧ್ವಾಬುದ್ಧಿಮಾನ್ಸ್ಯಾತ್ಕೃ
ತಕೃತ್ಯಶ್ಚಭಾರತ॥ ॥೨೦॥

ಪ॥ ಇತಿ-ಗುಹ್ಯತಮಂ-ಶಾಸ್ತ್ರಂ-ಇದಂ-ಉಕ್ತಂ-ಮಯಾ-ಅನಘ । ಏತತ್-ಬುದ್ಧ್ವಾ-ಬುದ್ಧಿಮಾನ್-ಸ್ಯಾತ್-ಕೃತಕೃತ್ಯಃ-ಚ-ಭಾರತ ।

(ಅ॥ರಾ॥ಭಾ) ಭಾರತ-ಎಲೈಅರ್ಜುನನೆ, ಅನಘ-ಜ್ಞಾನವಿರೋ

ಥಿಯಾದ ಪಾಪವಿಲ್ಲದವನೆ, ಇತಿ-ಹೇಳಿರುವಪ್ರಕಾರವಾಗಿ, ಗುಹ್ಯತ ಮಂ-ಅತ್ಯಂತ ಗೋಪ್ಯವಾಗಿರುವ ನಮ್ಮ ಪುರುಷೋತ್ತಮತ್ವ ಪ್ರತಿಪಾದಕವಾದ, ಇದಂ ಶಾಸ್ತ್ರಂ-ಈ ಶಾಸ್ತ್ರವು; ಮಯಾ-ನನ್ನಿಂದ, (ತವ-ಈ ರಹಸ್ಯ ಶಾಸ್ತ್ರಶ್ರವಣಾಧಿಕಾರಿಯಾದ ನಿನಿಗೆ,)ಉಕ್ತಂ-ಹೇಳಲ್ಪಟ್ಟಿತು. ಏತದ್ಬುದ್ಧ್ವಾಬುದ್ಧಿಮಾನ್‌ಸ್ಯಾತ್-ಇದನ್ನು ತಿಳಿದರೆ ಮುಮುಕ್ಷುಗಳಿಗೆ ಯೆಷ್ಟು ಜ್ಞಾನವು ಬೇಕಾಗಿರುವುದೊ ಅಷ್ಟು ಜ್ಞಾನವೂ ಸಿದ್ಧವಾಗುವುದು. ಕೃತಕೃತ್ಯಶ್ಚ-ಮುಮುಕ್ಷುಗಳಿಗೆ ಯೆಷ್ಟು ಕರ್ತವ್ಯವುಂಟೊ ಅಷ್ಟೂ ಮಾಡಿದಂತಾಗುವುದು. ಈ ಶ್ಲೋಕದಿಂದ ಈ ಅಧ್ಯಾಯದ ಅಂತಿಮಭಾಗದಲ್ಲಿ ಹೇಳಲ್ಪಟ್ಟ ಪುರುಷೋತ್ತಮತ್ವ ಜ್ಞಾನವು ಶಾಸ್ತ್ರದಿಂದುಂಟಾದ ಮಾತ್ರದಿಂದಲೆ ಅಷ್ಟು ಫಲವನ್ನು ಕೊಡುವುದು; ಇತರ ವಿದ್ಯೆಗಳಿಗಂತೆ ಸಾಕ್ಷಾತ್ಕಾರ ರೂಪವಾದ ಅಭ್ಯಾಸವು ಅನಪೇಕ್ಷಿತವಾಗಿರುವುದೆಂದು ಹೇಳಿದಂತೆ ಆಯಿತು.॥೨೦॥

(ಶಂ॥ ಭಾ॥) ಈ ಅಧ್ಯಾಯದಲ್ಲಿ ಇದುವರೆಗೂ ಹೇಳಲ್ಪಟ್ಟ ಶ್ಲೋಕಗಳಿಂದ ತತ್ವಜ್ಞಾನಕ್ಕೆ ಸಂಸಾರವಿಮೋಕ್ಷವೆ ಫಲವೆಂಬದಾಗಿ ಹೇಳಿ ಈಗ ಅಂಥಾ ಜ್ಞಾನವನ್ನು ಕೊಂಡಾಡುತ್ತಾನೆ. ಇದಂಶಾಸ್ತ್ರಂ-ಈ ಅಧ್ಯಾಯವು, ಯದ್ಯಪಿಗೀತಾ ಎಂಬ ನಾಮವುಳ್ಳ ಈ ೧೮ ಅಧ್ಯಾಯಗಳೂ ಶಾಸ್ತ್ರವಾಗಿದ್ದರೂ ಇದರಲ್ಲಿ ‹‹ಯಸ್ತಂವೇದಸವೇದವಿತ್ ॥ ವೇದೈಶ್ಚಸರ್ವೈರಹಮೇವವೇದ್ಯಃ›› ಈ ಶ್ಲೋಕಗಳಿಂದ ಸರ್ವವೇದಶಾಸ್ತ್ರಾರ್ಥಗಳೂ ಹೇಳಲ್ಪಟ್ಟಿರುವುದರಿಂದ ಈ ಅಧ್ಯಾಯವೆ ಶಾಸ್ತ್ರವೆಂಬದಾಗಿ ಪ್ರಕರಣ ಬಲದಿಂದ ಸ್ತುತ್ಯರ್ಥವಾಗಿ ಹೇಳಲ್ಪಟ್ಟಿತು. ಈ ಅಧ್ಯಾಯದಲ್ಲಿ ಗೀತಾಶಾಸ್ತ್ರದ ಸರ್ವಾರ್ಥಗಳೂ ಸಂಗ್ರಹವಾಗಿ ಪ್ರತಿಪಾದಿತವಾಗಿರುವುದುಮಾತ್ರವಲ್ಲದೆ ಸರ್ವವೇದಾರ್ಥವೂ ಹೇಳಲ್ಪಟ್ಟಿರುವುದು. ಅನಘ-ಪಾಪರಹಿತನೇ, ಈ ಶಾಸ್ತ್ರವನ್ನು ತಿಳಿದವನು ಜ್ಞಾನಿಯಾಗುವನು. ಬೇರೊಂದರಿಂದಲೂ ಜ್ಞಾನಿಯಾಗಲಾರನು. ಕೃತಕೃತ್ಯಶ್ಚ-ಬ್ರಾಹ್ಮಣ ಕುಲದಲ್ಲಿ ಉತ್ತಮನಾಗಿಹುಟ್ಟಿದವನಿಂದ ಮಾಡಿಕೊಳ್ಳಬೇಕಾದ ಸಕಲವನ್ನು ಮಾಡಿಕೊಂಡವನಾಗಿಯೂ, ಸ್ಯಾತ್-ಆಗುವನು. ಆ ರೀತಿಯಾಗಿ ಆಗದಿದ್ದರೆ ಮಾಡತಕ್ಕದ್ದೆಲ್ಲವನ್ನೂ ಮಾಡಿದವನೆಂದು ಹೇಳುವುದಕ್ಕೆ ಸಾಧನವಿ

ಲ್ಪಟ್ಟ ಪಂಚಭೂತಾದಿ ಶಾಖೆಗಳು ಸರ್ವತ್ರ ವ್ಯಾಪಿಸಿರುವುವು. ಅಂಥಾ ವೃಕ್ಷಕ್ಕೆ ಶಬ್ದಾದಿ ವಿಷಯಗಳೇ ಚಿಗರುಗಳು. ಕರ್ಮವಾಸನೆಗಳೇ ಯೆಲೆಗಳು. ಇದಕ್ಕೆ ಆಧಾರಭೂತನಾದ ಪರಮಪುರುಷನನ್ನು ಆಶ್ರಯಿಸಿ ವೈರಾಗ್ಯವೆಂಬ ಖಡ್ಗದಿಂದ ಈ ಸಂಸಾರಾಶ್ವತ್ಥವನ್ನು ಛೇದಿಸೆಂಬದಾಗಿ ಈಹದಿನೈದನೇ ಅಧ್ಯಾಯದಲ್ಲಿ ಶ್ರೀಹರಿಯು ಅರ್ಜುನನಿಗೆ ಉಪದೇಶಿಸಿದನು. ||೧೪||

---

ಶ್ರೀಮದ್ಯಾಮುನಾಚಾರ್ಯ ಸ್ವಾಮಿಗಳ ಈ ಅಧ್ಯಾಯಾರ್ಥ ಸಂಗ್ರಾಹಕವಾದ ಶ್ರೀಮದ್ಗೀತಾರ್ಥ ಸಂಗ್ರಹ ಶ್ಲೋಕವು.

ಮೂ॥ ಅಚಿನ್ಮಿಶ್ರಾದ್ವಿಶುದ್ಧಾಚ್ಚ ಚೇತನಾತ್ಪುರುಷೋ
ತ್ತಮಃ । ವ್ಯಾಪನಾದ್ಭರಣಾತ್ಸ್ವಾಮ್ಯಾದನ್ಯಃ
ಪಂಚದಶೋದಿತಃ ॥ ||೧೯||

ತಾ॥ ಅಚೇತನವಾದ ದೇಹದೊಡನೆ ಕಲೆತಿರುವ ಬದ್ಧ ಜೀವನಿಗಿಂತಲೂ ಅದರಿಂದ ಬಿಡಲ್ಪಟ್ಟ ಮುಕ್ತಾತ್ಮನಿಗಿಂತಲೂ ಪುರುಷೋತ್ತಮನು “ ಯೊಲೋಕತ್ರಯಮಾವಿಶ್ಯಬಿಭರ್ತ್ಯವ್ಯಯಈಶ್ವರಃ ” ಎಂಬ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟ ವ್ಯಾಪನಭರಣ ಸ್ವಾಮ್ಯಗಳಿಂದ ಭಿನ್ನನಾಗಿರುವನೆಂಬದಾಗಿ ಈ ಹದಿನೈದನೇ ಅಧ್ಯಾಯದಲ್ಲಿ ಹೇಳಿದನು. ||೧೯||

---

ಶ್ರೀಮನ್ನಿಗಮಾನ್ತ ಮಹಾದೇಶಿಕರಿಂದ ಅನುಗ್ರಹಿಸಲ್ಪಟ್ಟ ಶ್ರೀಮದ್ಗೀತಾರ್ಥ ಸಂಗ್ರಹ ಗಾಥೆಯು.

ಮೂ॥ ಮೂವೆಟ್ಟಲುಮದಿ‌ರ್ಮೊಕಮುಡ್ಯೆಂದವುಯಿ
ರ್ಕಳಿಲುಮ್, ನಾವೆಟ್ಟಿಪ್ಪೆತ್ತುಡುನವ್ವೀಡುನ

ಣ್ಣಿನಸನ್ಮುರಿಲುಮ್, ಮೋವೆಟ್ಟುಪರ್ಕೂಣವಿ
ಣ್ಣೋರ್ಕಳಿಲುಮ್ವಿಶಯನುಕ್ಕು,ತಾವಿಟ್ಟುಲ
ಕಳಂದಾರ್ತನ್ನೈವೇರೆನ್ನುಶಾತ್ತಿನನೆ॥ ॥೧೬॥

ವ್ಯಾ॥ "ಅಚಿನ್ತ್ಯಶಾಸ್ತ್ರ" ಎಂಬ ಸಂಗ್ರಹ ಶ್ಲೋಕದಂತೆ ಪುರುಷೋತ್ತಮವಿದ್ಯಾಪರವಾದ ಹದಿನೈದನೇ ಅಧ್ಯಾಯಾರ್ಥವನ್ನು ಈ ಗಾಥೆಯಿಂದ ಸಂಗ್ರಹಿಸುತ್ತಾರೆ. ತಾವಿಟ್ಟು-ಧಾವನಮಾಡಿ, ವ್ಯಾಪಿಸಿ ಎಂದರ್ಥವು. ಉಲಕು-ಲೋಕಗಳನ್ನು, ಅಳಂದಾರ್-ಪರಿಚ್ಛೇದಿಸಿದವನು. ಈ ಲೋಕ ವಿಕ್ರಮಣೋಕ್ತಿಯಿಂದ ಸರ್ವಲೋಕಸ್ವಾಮಿತ್ವವು ಫಲಿತವಾಯಿತು. ಇದು ಭರಣಕ್ಕೂ ಉಪಲಕ್ಷಣವು. "ಯೋಲೋಕತ್ರಯಮಾವಿಶ್ಯಬಿಭರ್ತ್ಯವ್ಯಯಈಶ್ವರಃ" ಎಂಬಂತೆ ಸರ್ವಜಗದ್ವ್ಯಾಪನ ಭರಣಸ್ವಾಮ್ಯ ವಿಶಿಷ್ಟನಾದ ಎಂದರ್ಥವು. ತನ್ನೈ-ಸ್ವಸ್ವರೂಪವನ್ನು, (ಇದಕ್ಕೆ ವೇರೆನ್ನುಶಾತ್ತಿನರ್ ಎಂಬದರೊಡನೆ ಅನ್ವಯವು) ಮೂವೆಟ್ಟಿಲುಮ್ ಇಪ್ಪತ್ತನಾಲ್ಕು ಸಂಖ್ಯೆಯುಳ್ಳ ಪ್ರಕೃತಿಪ್ರಾಕೃತ ತತ್ವಗಳಿಗಿಂತಲೂ, (ಇದಕ್ಕೆ ಬೇರೆ ಎಂಬಅರ್ಥವನ್ನು ಕೊಡುವ 'ವೇರ್' ಎಂಬದರೊಡನೆ ಅನ್ವಯವು) ಹೀಗೆಯೇ ಮುಂದೆಯೂ ತಿಳಿದುಕೊಳ್ಳಬೇಕು. ಅದಿಲ್-ಆ ಇಪ್ಪತ್ತನಾಲ್ಕು ತತ್ವಗಳಲ್ಲಿ, ಮೋಕಮ್-ಮೋಹವನ್ನು, ಅಡೈಂದ-ಹೊಂದುವ, ಉಯಿರ್ಕಳಿಲುಮ್-ಆತ್ಮರಲ್ಲಿಯೂ, ಪ್ರಾಕೃತ ತತ್ವಸಂಗಾತ್ಮಕವಾದ ಕರಣಕಳೇಬರ ಸಂಬಂಧದಿಂದ ಸಂತೋಷವನ್ನು ಹೊಂದಿರುವ ಸ್ವಾಭಾವಿಕ ಜ್ಞಾನಾನಂದಮುಳ್ಳವರಾದುದರಿಂದ ಮೋಹಮುಃಪಾದ್ಯಾಶಾಂತರಾದ ಕ್ಷೇತ್ರಜ್ಞರಿಗಿಂತಲೂ ಎಂದು ಭಾವವು. ನಾ-ನಾಲಿಗೆಯಿಂದ ಉಚ್ಚರಿಸಲ್ಪಡುವ, ಎಟ್ಟೆಳುತ್ತುಡೈಯ ವೀದುನಣ್ಣಿನಸನ್ಮುರಿಲುಮ್- ಸ್ವಾಚಾರ್ಯ ಪ್ರಸಾದದಿಂದ ಹೊಂ

ದಲ್ಪಟ್ಟ ಶ್ರೀಮದಷ್ಟಾಕ್ಷರಾದಿ ಬ್ರಹ್ಮವಿದ್ಯಾ ಪ್ರಭಾವದಿಂದ ನಿಶ್ಶೇಷ ಸಂಸಾರನಿವೃತ್ತಿ ಲಕ್ಷಣವಾದ ಮೋಕ್ಷವನ್ನು ಹೊಂದಿರುವ ಮುಕ್ತಾತ್ಮರಿಗಿಂತಲೂ, ಮೇನ್ವು-ಆದರಣೀಯಗಳಾದ, ವರ್-ದೃಢಗಳಾದ, ತಿರೋಧಾನ ಗಂಧವಿಲ್ಲದೆ ನಿತ್ಯಾವಿರ್ಭೂತಗಳಾದ ಎಂದರ್ಥವು. ಕುಣ-ಗುಣಗಳುಳ್ಳ, ಅಸ್ಪೃಷ್ಟಸಂಸಾರಗಂಧತ್ವೇನ ನಿತ್ಯಾವಿರ್ಭೂತಅಪಹತಪಾಪ್ಮತ್ವಾದಿ ಗುಣಾಷ್ಟಕರಾದ ಎಂದು ಫಲಿತಾರ್ಥವು. ವಿಣ್ಣೋರ್ಕಳಿಲುಮ್-ಪರಮವ್ಯೋಮವಾಸಿಗಳಾದ ನಿತ್ಯಸೂರಿಗಳಿಗಿಂತಲೂ,(ಇದರಿಂದ ಉತ್ತಮಶಬ್ದದಲ್ಲಿರುವ ತಮಪ್ರತ್ಯಯಾರ್ಥತ್ವೇನ ವಿವಕ್ಷಿತವಾದ ಕೂಟಸ್ಥಾಕ್ಷರಶಬ್ದದಿಂದ ಕ್ರೋಡೀಕೃತವಾಗಿರುವ ನಿತ್ಯಚೇತನ ನಿರೂಪಿತಾತಿಶಯವನ್ನು ವ್ಯಕ್ತಪಡಿಸಿರುವಂತೆ ತಿಳಿಯಬೇಕು.) ವೇರು-ವಿಲಕ್ಷಣನು, ಪೂರ್ವೋಕ್ತವ್ಯಾಪನಭರಣ ಸ್ವಾಮ್ಯಾದಿಗಳಿಂದ ಅತ್ಯಂತವಿಸಜಾತೀಯನೆಂದರ್ಥವು. ಎನ್ನ-ಈ ಪ್ರಕಾರವಾಗಿ, ವಿಶಯನಕ್ಕ-ಅರ್ಜುನನಿಗೆ, ಶಾತ್ತಿನರ್-ವಿಸ್ತಾರವಾಗಿಉಪದೇಶಿಸಿದನು. " ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿಚೋತ್ತಮಃ। ಅತೋಸ್ಮಿ ಲೋಕೇವೇದೇಚಪ್ರಥಿತಃಪುರುಷೋತ್ತಮಃ" ಎಂಬಂತೆ ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧತ್ವೇನ ಉಪದೇಶಿಸಿದನೆಂದು ಭಾವವು. ॥೧೬॥

ಇತಿ ಶ್ರೀಮದ್ಗೀತಾರ್ಥಸಾರೆ ಪಂಚದಶಾಧ್ಯಾಯಃ,

---

ಶ್ರೀಪಾರ್ಥಸಾರಥಯೇಽಕ್ಷರಾಕ್ಷರಾತೀತಾಯ

ಶ್ರೀಕೃಷ್ಣಾಯ ನಮೋನಮಃ

ಶ್ರೀಃ.

ಶ್ರೀರಮಾ ಶ್ರೀರುಕ್ಮಿಣ್ಯೈ ನಮಃ.

ಶ್ರೀ ಪಾರ್ಥಸಾರಥಯೇ ಪರಬ್ರಹ್ಮಣೇ ನಮಃ.

ಶ್ರೀಮದ್ಗೀತಾಭಾಷ್ಯೇ ಷೋಡಶಾಧ್ಯಾಯಃ.

---

ಮೂ॥ ಅಭಯಂಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವ
ಸ್ಥಿತಿಃ । ದಾನಂದಮಶ್ಚಯಜ್ಞಶ್ಚಸ್ವಾಧ್ಯಾಯ
ಸ್ತಪಆರ್ಜವಂ ॥೧॥ ಅಹಿಂಸಾಸತ್ಯಮಕ್ರೋ
ಧಸ್ತ್ಯಾಗಶ್ಶಾಂತಿರಪೈಶುನಂ । ದಯಾಭೂತೇ
ಷ್ವಲೋಲುಪ್ತ್ವಂಮಾರ್ದವಂಹ್ರೀರಚಾಪಲಂ॥೨॥
ತೇಜಃಕ್ಷಮಾಧೃತಿಶ್ಶೌಚಮದ್ರೋಹೋ ನಾತಿ
ಮಾನಿತಾ । ಭವಂತಿಸಂಪದಂದೈವೀಮಭಿಜಾ
ತಸ್ಯಭಾರತ॥ ॥೩॥

ಪ॥ ಅಭಯಂ-ಸತ್ತ್ವಸಂಶುದ್ಧಿಃ-ಜ್ಞಾನಯೋಗವ್ಯವಸ್ಥಿತಿಃ-ದಾನಂ-ದಮಃ-ಚ-ಯಜ್ಞಃ-ಚ-ಸ್ವಾಧ್ಯಾಯಃ-ತಪಃ-ಆರ್ಜವಂ-ಅಹಿಂಸಾ-ಸತ್ಯಂ-ಅಕ್ರೋಧಃ-ತ್ಯಾಗಃ-ಶಾಂತಿಃ-ಅಪೈಶುನಂ-ದಯಾ-ಭೂತೇಷು-ಅಲೋಲುಪ್ತ್ವಂ-ಮಾರ್ದವಂ-ಹ್ರೀಃ-ಅಚಾಪಲಂ-ತೇಜಃ-ಕ್ಷಮಾ-ಧೃತಿಃ-ಶೌಚಂ-ಅದ್ರೋಹಃ-ನಾತಿಮಾನಿತಾ-ಭವಂತಿ-ಸಂಪದಂ-ದೈವೀಂ-ಅಭಿಜಾತಸ್ಯ-ಭಾರತ॥

(ಇಲ್ಲಿ ಭಾಷ್ಯಕಾರರುಗಳ ಅಧ್ಯಾಯ ಪೀಠಿಕೆಯನ್ನು ವಿವರಿಸಿದ ಮೇಲೆ ಈ ಮೇಲ್ಕಂಡ ಮೂರು ಶ್ಲೋಕಗಳ ಅರ್ಥವು ವಿವೃತವಾಗುವುದು.)

(ಶಂ॥ ಭಾ॥) ಒಂಭತ್ತನೇ ಅಧ್ಯಾಯದ (೧೨-೧೩ನೇ) ಶ್ಲೋಕಗಳಲ್ಲಿ ದೈವೀ-ಆಸುರೀ-ರಾಕ್ಷಸೀ ಎಂಬುದಾಗಿ ಮೂರು ವಿಧಗಳಾದ ಪ್ರಕೃತಿಗಳು ಪ್ರಾಣಿಗಳಿಗುಂಟಾಗಿರುವುವೆಂಬುದಾಗಿ ತಿಳಿಸಲ್ಪಟ್ಟಿತ್ತಷ್ಟೆ. ಹದಿನೈದನೇ ಅಧ್ಯಾಯದ ಎರಡನೇ ಶ್ಲೋಕದಲ್ಲಿ ''ಅಧಶ್ಚ

ಮೂಲಾನ್ಯನುಸಂತತಾನಿಕರ್ಮಾನುಬಂಧೀನಿಮನುಷ್ಯಲೋಕೇ,, ಎಂಬದಾಗಿ ಕರ್ಮಗಳ ದಶೆಯಿಂದುಂಟಾಗುವ ವಾಸನೆಗಳು ಸಂಸಾರಕ್ಕೆ ವಾಂತರಗಳೆಂತಲೂ ಅವು ಮನುಷ್ಯ ದೇಹದಲ್ಲಿ ಪೂರ್ವಜನ್ಮ ಸಂಬಂಧಿಗಳಾದ ಕರ್ಮಗಳನ್ನನುಸರಿಸಿ ಕಾಣಲ್ಪಡುತ ಸಾತ್ವಿಕಾದಿ ಭೇದಗಳಿಂದ ದೇವ್ಯಾದಿ ಪ್ರಕೃತಿತ್ರಯ ಸ್ವರೂಪಗಳುಳ್ಳವೆಂತಲೂ ಹೇಳಲ್ಪಟ್ಟಿರುವುದು. ಆದುದರಿಂದ ದೈವೀಪ್ರಕೃತಿಯು,ಸಂಸಾರ ವಿಮೋಕ್ಷಕ್ಕೆ ಸಾಧನವಾಗಿರುವುದರಿಂದ ಅದು ಪರಿಗ್ರಹಿಸತಕ್ಕದ್ದೆಂತಲೂ, ಇತರಗಳು (ಆಸುರೀ-ರಾಕ್ಷಸೀ) ಬಂಧಹೇತುಗಳಾದುದರಿಂದ ಬಿಡತಕ್ಕವುಗಳೆಂತಲೂ ಉಪದೇಶಿಸಲಿಚ್ಛಿಸಿ ಶ್ರೀಕೃಷ್ಣನು ಈ ಅಧ್ಯಾಯವನ್ನುಪಕ್ರಮಿಸುತ್ತಾನೆ. ಮೊದಲು ಮೂರು ಶ್ಲೋಕಗಳಿಂದ ದೈವೀಸಂಪದ್ವಿವರಣ ಮಾಡಲ್ಪಡುವುದು.

(ಶ್ರೀ॥) ಆಸುರೀಂಸಂಪದಂತ್ಯಕ್ತ್ವಾ ದೈವೀಮೇವಾಶ್ರಿತಾನರಾಃ । ಮುಚ್ಯಂತಇತಿನಿರ್ದಿಷ್ಟಂತದ್ವಿವೇಕೋಥಷೋಡಶೇ॥ ಅರ್ಥವು ಮೇಲಿನಂತೆಯೇ ತಿಳಿಯಬೇಕು.

(ರಾ॥ ಭಾ॥)ಹಿಂದಿನ ಮೂರಧ್ಯಾಯಗಳಿಂದ ಪರಸ್ಪರಸೇರಿಯೂ ಸೇರದೆಯೂ ಇರುವ ಪ್ರಕೃತಿಪುರುಷರ ಯಾಥಾತ್ಮ್ಯವೂ (ತತ್ವಸ್ಥಿತಿಯೂ)ಅವುಗಳ ಸಂಸರ್ಗವಿಯೋಗಗಳಿಗೆ ಸತ್ವಾದಿಗುಣ ಸಂಗವೇನು ಇದಿಲ್ಲದಿರುವಿಕೆಯೇನು, ಇವೇಕಾರಣವೆಂತಲೂ, ಸರ್ವಪ್ರಕಾರದಿಂದಿರುತಲಿರುವ ಪ್ರಕೃತಿಪುರುಷರು ಭಗವದ್ವಿಭೂತಿಗಳೆಂತಲೂವಿಭೂತಿಯುಕ್ತನಾದ ಪರಮಾತ್ಮನ ವಿಭೂತಿಭೂತವಾದ ಅಚಿದ್ವಸ್ತುವೇನು, ಬದ್ಧಮುಕ್ತರೆಂಬೀ ಉಭಯಾವಸ್ಥಾಯುಕ್ತನಾದ ಚಿದ್ವಸ್ತುವೇನು ಇವು (೧೫॥೧೭॥ನೇ ಶ್ಲೋಕದಲ್ಲಿ ವಿವರಿಸಲ್ಪಟ್ಟ) ಅವ್ಯಯತ್ವ ವ್ಯಾಪನಭರಣಸ್ವಾಮ್ಯಗಳಿಂದ (ಪರಮಾತ್ಮನಿಗಿಂತಲೂ) ಅನ್ಯಗಳಾದುದರಿಂದ ಪುರುಷೋತ್ತಮನೆಂಬದಾಗಿ ಭಗವದ್ಯಾಥಾತ್ಮ್ಯವೂ ವರ್ಣಿತವಾಯಿತು. ಅನಂತರದಲ್ಲಿ (ಹಿಂದೆ) ಉಪದೇಶಿಸಿರುವ ಸರ್ವಾರ್ಥಗಳನ್ನು ಸ್ಥಿರಪಡಿಸುವುದಕ್ಕಾಗಿ ಶಾಸ್ತ್ರವಶ್ಯತೆಯನ್ನು ಹೇಳಲುಪಕ್ರಮಿಸಿ ಶಾಸ್ತ್ರಕ್ಕೆ ವಶಪಟ್ಟೂ ವಶಪಡದೆಯೂ ಇರುವ ದೈವಾಸುರರುಗಳ ಸೃಷ್ಟಿಯ ವಿಭಾಗವನ್ನು ಹೇಳುತ್ತಾರೆ.

(ಗೀ॥ ವಿ) ಪೂರ್ವಾಧ್ಯಾಯದಲ್ಲಿ “ ನಿರ್ಮಾನಮೋಹಾಃ ,, ಇತ್ಯಾದಿಗಳಿಂದ ಸಂಕ್ಷೇಪವಾಗಿ ವಿವರಿಸಲ್ಪಟ್ಟ ಪುರುಷಾರ್ಥಗಳಾದ ಜ್ಞಾನಮೋಕ್ಷಗಳ ಸಾಧನಕ್ಕೂ “ ಯತಂತೋಽಪ್ಯ ಕೃತಾತ್ಮಾನಃ ,, (೧೫॥೧೧) ಇತ್ಯಾದಿಯಿಂದ ತಿಳಿಸಲ್ಪಟ್ಟ ಪುರುಷಾರ್ಥ ವಿರೋಧಿಗೂ ದೈವಾಸುರ ಲಕ್ಷಣ ರೂಪತ್ವ ವಿರುವುದರಿಂದ ಅದರ ವಿವರಣವು ಈ ಅಧ್ಯಾಯದಲ್ಲಿ ಮಾಡಲ್ಪಡುವುದೆಂದು ಅಧ್ಯಾಯ ಸಂಗತಿಯೂ ಪೌರ್ವಾಪರ್ಯ ಭೇದವೂ ತಿಳಿಯತಕ್ಕದ್ದು. ಸಾಧನಾನುಷ್ಠಾನ ಪರನಿಗೆ ವಿರೋಧಿ ಸ್ವರೂಪ ಪರಿಜ್ಞಾನವಿಲ್ಲದೆ ಹೋದರೆ ಅದರ ತ್ಯಾಗವು ಸಂಭವಿಸಲಾರದಾದುರಿಂದ ಇಲ್ಲಿ ವಿರೋಧಿಸ್ವರೂಪವು ತಿಳಿಸಬೇಕಾಯಿತು. ಅವುಗಳಲ್ಲಿಯೂ, ಸಮೀಪವಾಗಿರುವುದರಿಂದ ದೈವೀಸಂಪದ್ವಿವರಣವು, ಮೊದಲು ಮಾಡಲ್ಪಡುವುದೆಂದರಿಯಬೇಕು.

ಅಭಯಂ-(ಶಂ) ಭಯರಾಹಿತ್ಯವು (ರಾ) ಇಷ್ಟವಾದ ವಸ್ತುವು ನಷ್ಟವಾಗುವುದಕ್ಕೂ ಅನಿಷ್ಟವುಂಟಾಗುವುದಕ್ಕೂ ಕಾರಣವು ಕಾಣಲ್ಪಟ್ಟರೆ ಅದರಿಂದುಂಟಾಗುವ ದುಃಖವೇ ಭಯವು, ಅದಿಲ್ಲದೆ ಇರುವಿಕೆಯು ಅಭಯವು (ಗೀ॥ ವಿ॥) ತನ್ನಿಂದಲಾದರೂ ಅನ್ಯರಿಂದಲಾದರೂ ತನಿಗೆ ಭಯವುಂಟಾಗಲಾರದೆ ಇರುವುದು ಅಭಯವು. “ಯಸ್ಮಾನ್ನೋದ್ವಿಜತೆಲೋಕಃ,, (೧೨॥ ೧೫॥) ಎಂಬ ಶ್ಲೋಕದಲ್ಲಿ ಈ ಅರ್ಥವಿರುವುದು. ಸತ್ವಸಂಶುದ್ಧಿಃ-(ಶಂ) ಲೋಕವ್ಯವಹಾರದಲ್ಲಿ ಇತರರ ವಿಷಯವಾಗಿ ಮೋಸವು ಅಸತ್ಯವು ಕಪಟವೇ ಮೊದಲಾದವುಗಳನ್ನು ಬಿಡುವಿಕೆಯು, (ಶುದ್ಧಭಾವದಿಂದ ವ್ಯವಹಾರವೆಂದು ತಾತ್ಪರ್ಯವು) (ರಾ) ಅಂತಃಕರಣವು ರಜಸ್ತಮೋಗುಣಗಳ ಸಂಸ್ಪರ್ಶವನ್ನು ಬಿಟ್ಟಿರುವಿಕೆಯು (ಗೀ॥ವಿ॥)ಚಿತ್ತಪ್ರಸಾದವು, ಜ್ಞಾನಯೋಗವ್ಯವಸ್ಥಿತಿಃ-(ಶಂ)ಆತ್ಮಜ್ಞಾನೋಪಾಯವನ್ನು ತಿಳಿದುಕೊಂಡು ಆ ಪ್ರಕಾರವಾದ ನಿಷ್ಠೆಯಲ್ಲಿರುವಿಕೆಯು,(ಎಂದರೆ ಶಾಸ್ತ್ರಾಚಾರ್ಯೋಪದೇಶಗಳಿಂದ ಆತ್ಮಾದಿ ಪದಾರ್ಥಗಳ ತತ್ವಗಳನ್ನು ತಿಳಿದುಕೊಳ್ಳುವಿಕೆಯೇ ಜ್ಞಾನವು. ಆ ಪ್ರಕಾರವಾಗಿ ತಿಳಿದುಕೊಳ್ಳಲ್ಪಟ್ಟ ನಿಶ್ಚಯ ಜ್ಞಾನದಿಂದ ಮನಸ್ಸನ್ನು ವಿಷಯಗಳಿಂದ ನಿವೃತ್ತಿಪಡಿಸಿ ಏಕಾಗ್ರವಾಗಿ ಸ್ವಸ್ವರೂಪದಲ್ಲಿ ನಿಲ್ಲಿಸುವಿಕೆಯೇ ಯೋಗವು, ಇಂಥಾ ಜ್ಞಾನಯೋಗಗಳಲ್ಲಿ ಸ್ಥಿರವಾಗಿರುವ ನಿಷ್ಠೆಯೆ ಸಮಾಧಿಯು.(ವ್ಯವಸ್ಥಿತಿಯು) (ರಾ)ಪ್ರಕೃತಿವಿಯುಕ್ತನಾದ ಆತ್ಮನ ಸ್ವರೂಪ ವಿವೇಕದಲ್ಲಿನಿಷ್ಠೆಯುಂಟಾಗುವಿಕೆಯು,(ಗೀ॥ವಿ)ಜ್ಞಾನೋಪಾಯದ ನಿಷ್ಠನಾಗುವಿಕೆಯು,ದಾನಂ-(ಶಂ॥) ಶಕ್ತ್ಯನುಸಾರವಾಗಿ ಅನ್ನವಸ್ತ್ರಾದಿಗಳನ್ನು ದಾನಮಾಡುವಿಕೆಯು,(ರಾ)ನ್ಯಾಯಾರ್ಜಿತ ದ್ರವ್ಯಗಳನ್ನು ಸತ್ಪಾತ್ರದಲ್ಲಿವಿನಿಯೋಗಿಸುವಿಕೆಯು,(ಗೀ॥ವಿ॥)ಸತ್ಪಾತ್ರದಲ್ಲಿ ದ್ರವ್ಯಾದಿತ್ಯಾಗವು.ದಮಶ್ಚ-(ಶಂ)ಬಾಹ್ಯೇಂದ್ರಿಯ ನಿಗ್ರ

ಹವು, (ರಾ)ಮನಸ್ಸನ್ನು ವಿಷಯಗಳಿಂದ ನಿವರ್ತಿಸುವಿಕೆಯೂ,(ಗೀ|| ವಿ||) ಇಂದ್ರಿಯನಿಗ್ರಹವು.ಯಜ್ಞಶ್ಚ-(ಶಂ)ಶ್ರೌತಗಳಾದ ಅಗ್ನಿಹೋತ್ರಾದಿಗಳೂಸ್ಮಾರ್ತಗಳಾದ ದೇವಯಜ್ಞಾದಿಗಳೂ,(ಆದಿಶಬ್ದದಿಂದಪಿತೃಯಜ್ಞಭೂತಯಜ್ಞಮನುಷ್ಯಯಜ್ಞಗಳು ಹೇಳಲ್ಪಟ್ಟಿರುವುವು. ಬ್ರಹ್ಮಯಜ್ಞಕ್ಕೆ ಸ್ವಾಧ್ಯಾಯದಲ್ಲಿ ಪೃಥಕ್ಕರಣವಿರುವುದೆಂದರಿಯಬೇಕು.) (ರಾ) ಫಲಾಪೇಕ್ಷೆಯಿಲ್ಲದೆ ಭಗವದಾರಾಧನ ರೂಪವಾಗಿ ಯಜ್ಞಗಳನ್ನು ಅನುಷ್ಠಿಸುವಿಕೆಯು, (ಗೀ|| ವಿ) ದೇವಪಿತೃಯಜ್ಞಗಳು, ಅಥವಾ ಜ್ಯೋತಿಷ್ಟೋಮಾದಿಗಳನ್ನು ಮಾಡುವಿಕೆಯು.ಸ್ವಾಧ್ಯಾಯಃ-(ಶಂ) ಅದೃಷ್ಟಾರ್ಥವಾಗಿ ಋಗ್ವೇದಾದ್ಯಧ್ಯಯನವು, (ರಾ) ವಿಭೂತಿಗಳೊಡನೆ ಕೂಡಿರುವ ಪರಮಾತ್ಮನೇನು,ಅವನ ಆರಾಧನ ಪ್ರಕಾರವೇನು, ಇವುಗಳನ್ನು ಪ್ರತಿಪಾದಿಸುವುದು ಸಮಸ್ತ ವೇದವು ಎಂಬ ಅನುಸಂಧಾನದೊಡನೆಮಾಡುವ ವೇದಾಭ್ಯಾಸನಿಷ್ಠೆಯು (ಗೀ|| ವಿ||) ವೇದಾಧ್ಯಯನವು, ತಪಃ-ಮುಂದಿನ ಅಧ್ಯಾಯದಲ್ಲಿ ಹೇಳಲ್ಪಡುವ ಶಾರೀರಾದಿಯಾದ ಮೂರುವಿಧ ತಪಸ್ಸು, (ರಾ) ಭಗವತ್ಪ್ರೀತಿಕರವಾದ ಕೃಛ್ರಚಾಂದ್ರಾಯಣ ವ್ರತಗಳೇನು ದ್ವಾದಶ್ಯುಪವಾಸವೇನು, ಇವೇ ಮೊದಲಾದವುಗಳನ್ನನುಷ್ಠಿಸುವಿಕೆಯು, (ಆದರೆ ಏಕಾದಶ್ಯುಪವಾಸವು ಶಾಸ್ತ್ರಲೋಕ ಪ್ರಸಿದ್ಧವಾಗಿರುವಲ್ಲ ದ್ವಾದಶ್ಯುಪವಾಸವೆಂಬದಾಗಿ ಇಲ್ಲಿ ಹೇಳಿರುವುದಕ್ಕೆ ಕಾರಣವೇನೆಂದರೆ ? “ ಏಕಭುಕ್ತೇನ ನಕ್ತೇನ ತಥೈವಾಯಾಚಿತೇನಚ | ಉಪವಾಸೇನ ದಾನೇನ ನನಿರ್ದ್ವಾದಶಿಕೋಭವೇತ್”, ಇತ್ಯಾದಿಗಳಲ್ಲಿ ವಿಹಿತವಾಗಿರುವಂತೆ ದ್ವಾದಶೀ ಸಮಾರಾಧನಾರ್ಥವಾಗಿ ಏಕಾದಶ್ಯುಪವಾಸವು ವಿಹಿತವಾಗಿರುವುದರಿಂದಇಲ್ಲಿ ದ್ವಾದಶ್ಯುಪವಾಸವೆಂಬದಾಗಿ ಹೇಳಿತು.(ಅಥವಾ)ತಿಥಿವ್ರತಗಳಲ್ಲಿಯೂ ತಿಥಿದ್ವಯ ವ್ರತಗಳಲ್ಲಿಯೂ ದ್ವಾದಶ್ಯುಪವಾಸವು ಪ್ರಸಿದ್ಧವೇ, ದ್ವಾದಶ್ಯುಪವಾಸಾದೀತಿ ಎಂಬ ಆದಿ ಶಬ್ದದಿಂದ ಮನೋವಾಕ್ಕಾಯಗಳೆಂಬ ಕರಣತ್ರಯ ನಿಷ್ಪಾದ್ಯಗಳಾದ ಮುಂದಿನ ಅಧ್ಯಾಯದಲ್ಲಿ ವಿವರಿಸಲ್ಪಡುವ ತಪಸ್ಸುಗಳಿಗೆ ಗ್ರಹಣವು. (ಗೀ|| ವಿ||) ಬ್ರಹ್ಮಚಾರಿವ್ರತಾದಿಗಳು. ಆರ್ಜವಂ-ಸದಾ (ಏಕರೂಪನಾಗಿರುವಿಕೆಯು) ಋಜುತ್ವವು, (ರಾ|| ಗೀ||ವಿ||) ಮನೋವಾಗ್ದೇಹಗಳ ಕೃತ್ಯಗಳನ್ನು ಏಕರೂಪವಾಗಿ ಮಾಡಿಕೊಳ್ಳುವಿಕೆಯು. ||೧|| ಅಹಿಂಸಾ-ಅನ್ಯಜನರನ್ನು ಪೀಡಿಸದೆ ಇರುವಿಕೆಯು, ಸತ್ಯಂ-(ಶಂ) ಸುಳ್ಳಾಗಿಯೂ ಅನ್ಯರಿಗೆ ಅಪ್ರಿಯವಾಗಿಯೂ ಇರುವುದನ್ನು ಹೇಳದೆ ಕಂಡದ್ದನ್ನು ಹೇಳುವುದು, (ರಾ) ಕಂಡದ್ದನ್ನು ಕಂಡಂತೆ ಭೂತಹಿತವಾಗಿ ಹೇಳುವ ವಾಕ್ಯವು, (ಗೀ||ವಿ||) ಯಥಾರ್ಥವಚನವು. ಅಕ್ರೋಧಃ-(ಶಂ)ಇತರರು ತನ್ನನು ಹೊಡೆದರೂ ತನಗೆ ಹಾನಿಯನ್ನುಂಟುಮಾಡಲು ಪ್ರಯತ್ನಿಸಿದರೂ ಅವರಲ್ಲಿ ಕೋಪವಿಲ್ಲದಿರುವಿಕೆಯು,(ರಾ) ಅನ್ಯರಿಗೆ ಬಾಧೆಯನ್ನುಂಟುಮಾಡುವ ಚಿತ್ತವಿಕಾರದಿಂದ ಬಿಡಲ್ಪಟ್ಟಿರುವಿಕೆಯು, ತ್ಯಾಗಃ-(ಶಂ) ಸನ್ಯಾಸವು, ಹಿಂದೆ ದಾನವು ಹೇಳಲ್ಪಟ್ಟಿರುವುದರಿಂದ ಆ ಅರ್ಥವನ್ನೇ ಇಲ್ಲಿ ಹೇಳಕೂಡದು. (ರಾ) ಆತ್ಮಹಿತಕ್ಕೆ ವಿರೋಧಿಯಾದವುಗಳನ್ನು ಪರಿಗ್ರಹಿಸದೇ ಬಿಡುವಿಕೆಯು, (ಗೀ||ವಿ) ತ್ಯಾಗ

ವೆಂದರೆ ಔದಾರ್ಯವು, ಶಾಂತಿಃ-(ಶಂ) ಅಂತಃಕರಣ ನಿಗ್ರಹವು, (ಶ್ರೀ) ಚಿತ್ತ ಸಮಾಧಾನವು, (ರಾ) ಇಂದ್ರಿಯಗಳಿಗೆ ವಿಷಯಪ್ರಾವಣ್ಯ (ಪ್ರಾವಣ್ಯವೆಂದರೆ ಆಸಕ್ತಿಯು)ವನ್ನು ನಿರೋಧಿಸುವಿಕೆಂಬ ಪರಿಶೀಲನವು. (ಗೀ|| ವಿ) ಭಗವನ್ನಿಷ್ಠನಾಗಿರುವಿಕೆಯು. ಅಪೈಶುನಂ-(ಶಂ) ಒಬ್ಬನ ಗುಣದೋಷಗಳನ್ನು ಪ್ರಕಟ ಪಡಿಸದೆ ಇರುವಿಕೆಯು, (ರಾ) ಜನಗಳಿಗೆ ಅನರ್ಥವನ್ನುಂಟು ಮಾಡುವ ಮಾತುಗಳನ್ನು ಹೇಳದೆ ಇರುವಿಕೆಯು, (ಗೀ|| ವಿ) ರಾಜಾದಿಗಳ ಮುಂದೆ ಪರರಿಗೆ ಉಪದ್ರವಕಾರಿಯಾದ ಮಾತುಗಳನ್ನಾಡದೆ ಇರುವಿಕೆಯು, ಭೂತೇಷುದಯಾ- (ಶಂ|| ಶ್ರೀ|| ರಾ) ಸರ್ವಭೂತಗಳಲ್ಲಿಯೂ ಅವುಗಳನುಭವಿಸುವ ದುಃಖಗಳನ್ನು ಕಂಡರೆ ತಡೆಯದೆ ಇರುವಿಕೆಯು, (ಗೀ|| ವಿ) ಅನ್ಯರಿಗನುಕೂಲವಂ ಮಾಡಿ ಅನ್ಯರ ದುಃಖವನ್ನು ಸಹಿಸದೇ ಇರುವಿಕೆಯು. ಅಲೋಲುತ್ವಂ-(ಶ್ರೀ|ರಾ)ಅಲೋಲುಪ್ತ್ವಂ ಎಂಬ ಪಾಠವು. ಛಾಂದಸವು. ವಿಷಯಾಪೇಕ್ಷೆಯಿಲ್ಲದಿರುವಿಕೆಯು, (ರಾ) ಅಲೋಲುತ್ವಂ ಎಂಬದಾಗಿಯೂ ಪಾಠವಾಗಬಹುದು. (ಶಂ) ಇಂದ್ರಿಯಗಳಿಗೆ ವಿಷಯಗಳ ಸಾಮೀಪ್ಯವಿದ್ದರೂ ವಿಕಾರ ಶೂನ್ಯನಾಗಿರುವಿಕೆಯು (ಗೀ||ವಿ)ಅಲೊಲತ್ವಂ-ವಿಷಯಗಳಲ್ಲಿಇಚ್ಛಾಭಾವವು. ಮಾರ್ದವಂ-(ಶಂ) ಅಕ್ರೌರ್ಯವು,ಕ್ರೂರನಾಗದೆ ಇರುವಿಕೆಯು, (ರಾ) ಕಠಿನನಾಗದೆ ಇರುವಿಕೆಯು, ಸಾಧುಜನ ಸಂಗಕ್ಕೆ ಯೋಗ್ಯನಾಗಿರುವಿಕೆಯು ಎಂದರ್ಥವು, (ಗೀ|| ವಿ) ತನ್ನನ್ನು ದುಃಖಪಡಿಸುವುದಕ್ಕೆ ಬಂದವನಲ್ಲಿಯೂ ವಿರೋಧವಿಲ್ಲದೆ ಇರುವಿಕೆಯು. ಹ್ರೀಃ-(ಶ್ರೀ||ರಾ|| ಗೀ|| ವಿ) ಮಾಡದರ ಕೆಲಸವನ್ನು ಮಾಡುವುದರಲ್ಲಿ ಲಜ್ಜೆಯು ಅಥವಾ ನಾಚಿಕೆಯು, (ಶಂ) ಲಜ್ಜೆಯು-ನಾಚಿಕೆಯು, ಅಚಾಪಲಂ- (ಶಂ|| ಶ್ರೀ||) ಪ್ರಯೋಜನವಿಲ್ಲದ ಕಾರ್ಯವನ್ನು ಮಾಡದೆ ಇರುವಿಕೆಯು, (ರಾ) ಆಶೆಯನ್ನುಂಟುಮಾಡುವ ವಸ್ತುವು ಎದುರಿನಲ್ಲಿದ್ದರೂ ಅದರಲ್ಲಿ ಅಪೇಕ್ಷಾರಾಹಿತ್ಯವು, (ಗೀ|| ವಿ) ಸ್ಥೈರ್ಯವು. ||೨|| ತೇಜಃ-(ಶಂ) ಪ್ರಾಗಲ್ಭ್ಯವು, ಇಲ್ಲಿ ಶರೀರಗತವಾದ ತೇಜಸ್ಸು ಹೇಳಲ್ಪಡಲಾರದು. (ರಾ|| ಗೀ||ವಿ) ಅಯೋಗ್ಯರಿಂದ ಅವಮತಿಸಲ್ಪಡದೆ ಇರುವಿಕೆಯು.ಕ್ಷಮಾ-(ಶಂ)ಹೊಡೆಯಲ್ಪಟ್ಟರೂ ಉಪದ್ರವಿಸಲ್ಪಟ್ಟರೂ ಮನಸ್ಸಿನಲ್ಲಿವಿಕಾರವಿಲ್ಲದೆಇರುವಿಕೆಯು,(ಉಂಟಾಗಿರುವ ವಿಕಾರದಪ್ರಶಮನವನ್ನು ಅಕ್ರೋಧವೆಂಬದಾಗಿ ಹಿಂದೆ ಹೇಳಿರುವೆವು.) (ರಾ) ಅನ್ಯರಿಂದ ಮಾಡಲ್ಪಟ್ಟ ಪೀಡಾನುಭವದಲ್ಲಿಯೂ ಅವರ ವಿಷಯದಲ್ಲಿ ಪೀಡಾನುಭವವನ್ನು ಮಾಡಿಸದೆ ಚಿತ್ತವಿಕಾರ ರಹಿತನಾಗಿರುವಿಕೆಯು, ಅಕ್ರೋಧಕ್ಕೂ ಕ್ಷಮೆಗೂ ಭೇದವಿರುವುದು, ನಿರಪರಾಧಿಗಳಲ್ಲಿ ನಿರ್ವಿಕಾರನಾಗಿರುವಿಕೆಗೆ ಔದಾಸೀನ್ಯವೆಂದು ಹೆಸರು, ಅದು ಕ್ಷಮೆಯಲ್ಲವು, ಕೆಲವು ಸಂದರ್ಭಗಳಲ್ಲಿ ನಿರಪರಾಧಿಗಳಲ್ಲಿಯೂ ಕ್ರೋಧವು "ಬ್ರಾಹ್ಮಣಾಗಣಿಕಾ ವೈದ್ಯಾಸಾರಮೇಯಾಶ್ಚ ಕುಕ್ಕುಟಾಃ | ದೃಷ್ಟ್ವಮಾತ್ರೇಣ ಕುಪ್ಯಂತಿನಜಾನೇತತ್ರ ಕಾರಣಂ ,, ಎಂಬ ರೀತ್ಯಾ ಉಂಟಾಗುವುದಷ್ಟೆ. (ಮ) ಅಪಕಾರಿಗಳಲ್ಲಿ ಕೋಪವನ್ನೂ ಪ್ರತ್ಯಪಕಾರವನ್ನೂ ಮಾಡದೆ ಇರುವಿಕೆಯು, (ಗೀ|| ವಿ) ಅಪಕಾರಿಗಳಲ್ಲಿ ಕೋಪವಿಲ್ಲದೆ ಇರುವುದು ಮಾತ್ರವಲ್ಲದೆ ಉಪಕಾರವೂ ಮಾಡುವುದು. ಧೃತಿಃ - ಧೈರ್ಯವು, (ಶಂ) ದೇಹೇಂದ್ರಿಯಾದಿಗಳು

ನೀರಸವಾದಾಗ ಅದನ್ನು ಹೋಗಲಾಡಿಸುವ ಅಂತಃಕರಣ ವೃತ್ತಿವಿಶೇಷವು ಧೈರ್ಯವು. ಆಧೈರ್ಯದಿಂದ ದೃಢಪಟ್ಟಿರುವ ಶರೀರೇಂದ್ರಿಯಗಳು ನೀರಸಗಳಾಗಲಾರವು. (ರಾ) ಮಹಾಪತ್ಕಾಲದಲ್ಲಿಯೂ ಮಾಡತಕ್ಕದ್ದನ್ನು ಬಿಡದೆ ಮಾಡುವಿಕೆಯು, (ಗೀ|| ವಿ||) ಆತಂಕವಿಲ್ಲದೆ ಇರುವಿಕೆಯು ಶೌಚಂ-(ಶಂ) ಮೃಜ್ಜಲಗಳಿಂದ ಮಾಡಲ್ಪಡುವ ಬಾಹ್ಯಶುದ್ಧಿಯೂ ಕಾಮಕ್ರೋಧಾದಿಕಾಲುಷ್ಯರಾಹಿತ್ಯ ರೂಪವಾದ ಆಂತರವಾದ ಶುದ್ಧಿಯೂ, (ರಾ) ಇಂದ್ರಿಯಗಳು ಮನಸ್ಸು ಇವುಗಳನ್ನು ಶಾಸ್ತ್ರೋಕ್ತ ಕರ್ಮಾನುಷ್ಠಾನಕ್ಕೆ ಯೋಗ್ಯವಾಗಿ ಮಾಡಿಕೊಳ್ಳುವಿಕೆಯು, (ಗೀ|| ವಿ) ಭಗವದ್ಧ್ಯಾನಾದಿಗಳು ಆಂತರಶೌಚವು, ಮೃಜ್ಜಲಾದಿಗಳಿಂದ ಮಾಡುವ ಶೌಚವು ಬಾಹ್ಯವು. ಅದ್ರೋಹಃ-(ಶಂ|| ಶ್ರೀ) ಅನ್ಯರನ್ನು ಕೊಲ್ಲುವುದಕ್ಕೆ ಯೋಚನೆ ಮಾಡದಿರುವಿಕೆಯು. (ರಾ|| ಗೀ|| ವಿ) ಪರರ ಕಾರ್ಯಗಳಿಗೆ ವಿರೋಧನೂಡದೆ ಇರುವಿಕೆಯು. ಪರರಲ್ಲಿ ಸ್ವೇಚ್ಛಾವೃತ್ತಿಗೆ ತಡೆಮಾಡದೆ ಇರುವಿಕೆಯು ಎಂದರ್ಥವು. ನಾತಿಮಾನಿತಾ-ಗರ್ವವಿಲ್ಲದೆ ಇರುವಿಕೆಯು, (ಶಂ|| ಶ್ರೀ) ತನ್ನನ್ನು ಪರರು ಪೂಜಿಸಬೇಕೆಂತಲೂ ಮರ್ಯಾದಿಸಬೇಕೆಂತಲೂ ಇರುವ ಅಪೇಕ್ಷಾರಾಹಿತ್ಯವು, (ರಾ) ಅಸ್ಥಾನದಲ್ಲಿ ಗರ್ವವು ಅತಿಮಾನಿತ್ವವು, ಅದಿಲ್ಲದೆ ಇರುವಿಕೆಯು, (ಗೀ|| ವಿ) ಅಹಂಕಾರವಿಲ್ಲದೆ ಇರುವಿಕೆಯು. (ಏತೇಗುಣಾಃ - ಈಗುಣಗಳು,) ದೈವೀಸಂಪದಮಭಿಜಾತಸ್ಯ-ಭಗವದಾಜ್ಞಾತಿಲಂಘಿಗಳಾದ ದೈವತಗಳ ಸಂಪತ್ತನ್ನು ನೆರವೇರಿಸುವುದಕ್ಕಾಗಿ ಹುಟ್ಟಿರುವವನಿಗೇನೆ, ಭವಂತಿ - ಉಂಟಾಗುವುವು, (ಮ) ದೈವಸಂಪತ್ತನ್ನನುಭವಿಸುವುದಕ್ಕಾಗಿ ಹುಟ್ಟಿದವನಿಗೆ. (ಶಂ) ದೇವತೆಗಳು ಹೊಂದತಕ್ಕ ವೈಭವವನ್ನು ಹೊಂದಲು ಯೋಗ್ಯನಾದವನಿಗುಂಟಾಗುವುವು. ||೧೬||೩||

(ಮ|| ಭಾ|| ಮೋಕ್ಷಸಾಧನಗಳಿಗೆ ವಿರೋಧಿಯಾದವುಗಳನ್ನು ಪರಿಹರಿಸಬೇಕೆಂಬದಾಗಿ ಇದರಿಂದ ಹೇಳಲ್ಪಟ್ಟಿತು. ||೧೬||೩||

ಶ್ಲೋ|| ದಂಭೋದರ್ಪೋತಿಮಾನಶ್ಚ ಕ್ರೋಧಃಪಾರುಷ್ಯಮೇವಚ | ಅಜ್ಞಾನಂಚಾಭಿಜಾತಸ್ಯಪಾರ್ಥಸಂಪದಮಾಸುರೀಂ || ... ... || ೪ ||

ಪ|| ಡಂಭಃ-ದರ್ಪಃ-ಅತಿಮಾನಃ-ಚ-ಕ್ರೋಧಃ-ಪಾರುಷ್ಯಂ-ಏವ-ಚ | ಅಜ್ಞಾನಂ-ಚ-ಅಭಿಜಾತಸ್ಯ-ಪಾರ್ಥ-ಸಂಪದಂ-ಆಸುರೀಂ ||

(ಅ|| ರಾ|| ಭಾ) ಡಂಭಃ-ಧಾರ್ಮಿಕನೆಂಬದಾಗಿ ಹೊರಪಡಿಸುವುದಕ್ಕಾಗಿ ಧರ್ಮಾನುಷ್ಠಾನವನ್ನು ಮಾಡುವಿಕೆಯು, ದರ್ಪಃ-ಇದು ಕೃತ್ಯವು ಇದು ಅಕೃತ್ಯವು ಎಂಬ ವಿವೇಕವನ್ನು ನಾಶಪಡಿಸುವಂಥಾ ಶಬ್ದಾದಿವಿಷಯಾನುಭವಮೂಲಕವಾದ ಹರವು, ಅತಿಮಾನಶ್ಚ-ತನ್ನ ವಿದ್ಯೆಗೂ ಜಾತಿಗೂ ಯೋಗ್ಯವಾಗದ ಅಭಿಮಾನವು, ಕ್ರೋಧಃ-ಅನ್ಯರನ್ನು

ಪೀಡಿಸುವಂತೆ ಮಾಡುವ ಚಿತ್ತವಿಕಾರವು, ಪಾರುಷ್ಯಮೇವಚ-ಸಾಧು ಗಳನ್ನು ಭಯಪಡಿಸುವ ಸ್ವಭಾವವು, ಅಜ್ಞಾನಂಚ-ಪರಾವರತತ್ವಗಳ ಲ್ಲಿಯೂ ಕೃತ್ಯಾಕೃತ್ಯಗಳಲ್ಲಿಯೂ ವಿವೇಕವಿಲ್ಲದೆ ಇರುವಿಕೆಯು. (ಏ ತೇಸ್ವಭಾವಾಃ- ಈಸ್ವಭಾವಗಳು ಆಸುರೀಂ ಸಂಪದಮಭಿಜಾತಸ್ಯ- ಭಗವದಾಜ್ಞಾತಿಕ್ರಮವನ್ನು ಮಾಡುವಿಕೆಯೆಂಬ ಅಸುರ ಸಂಪತ್ತನ್ನು ನೆರವೇರಿಸುವುದಕ್ಕಾಗಿ ಹುಟ್ಟಿದವನಿಗೆ, ಭವಂತಿ ಉಂಟಾಗುವುವು. ॥೪॥

(ಶಂ) ದಂಭಃ-ಧರ್ಮಧ್ವಜಿತ್ವವು ಕಪಟವಾದ ವೇಷವು, ದ ರ್ಪಃ-ಧನಸ್ವಜನಾದಿ ನಿಮಿತ್ತವಾದ ಗರ್ವವು, ಅತಿಮಾನಃ-ತಾನೇಸರ್ವ ಶ್ರೇಷ್ಠನೆಂಬದಾಗಿಸಾಧುಗಳನ್ನು ತಿರಸ್ಕರಿಸುವಂಥಾ ದುರಹಂಕಾರವು, ಕ್ರೋಧಃ-ಅನ್ಯರಿಗೆ ಅಪಕಾರ ಮಾಡುವ ಸ್ವಭಾವಕ್ಕೆ ಕಾರಣವಾದ ನೇತ್ರಾದ್ಯವಯವ ವಿಕಾರಗಳನ್ನೆ ಗುರ್ತಾಗಿಯುಳ್ಳ ಮನೋವಿಕಾರ ರೂಪವಾದ ಕೋಪವು, (ಶ್ರೀ) ಕಠಿನವಚನವು (ಶಂ) ಸಾಧುಗಳಿಗೆ ಮನಸ್ಸಂಕಟವನ್ನುಂಟುಮಾಡುವ ಸ್ವಭಾವವು, ಅಜ್ಞಾನಮೇವಚ ಅವಿ ವೇಕಜ್ಞಾನವು, ಮಾಡತಕ್ಕದ್ದು ಮಾಡದೆ ಬಿಡತಕ್ಕದ್ದು ಇಂಥಾದ್ದು ಎಂಬದಾಗಿ ತಿಳಿಯದೆ ಅನ್ಯಥಾ ತಿಳಿಯುವಿಕೆಯು. ॥೪॥

(ಗೀ॥ ವಿ) ದಂಭಃ-ತಾನಲ್ಪನಾಗಿದ್ದರೂ ಮಹನೀಯನೆಂಬದಾಗಿ ಅನ್ಯರು ತಿಳಿದುಕೊಳ್ಳಬೇಕೆಂಬದಾಗಿ ನೆನಸಿ ಅದಕ್ಕೆ ತಕ್ಕ ಹಾಗೆ ನಡಿಯುವಿಕೆಯು, ದರ್ಪಃ-ಭಯಕಾರಣಗಳು ಕಂಡು ಬಂದರೂ ಮದ ದಿಂದ ಅದು ಇಲ್ಲವೆಂಬದಾಗಿ ತಿಳಿದುಕೊಳ್ಳುವಿಕೆಯು, ಅಭಿಮಾನಃ-ಪ್ರ ಮಾಣವನ್ನು ಅತಿಕ್ರಮಿಸುವಿಕೆಯು,ಕ್ರೋಧಃ-ಪರರಿಗೆಪೀಡಾಕರವಾದ ಚಿತ್ತವಿಕಾರವು. ಪಾರುಷ್ಯಂ-ಅನ್ಯರಿಗೆ ನಿಷ್ಠೂರವನ್ನುಂಟುಮಾಡುವ ಸ್ವಭಾವವು. ... ... ... ॥೪॥

ಶ್ಲೋ॥ದೈವೀಸಂಪದ್ವಿಮೋಕ್ಷಾಯನಿಬಂಧಾಯಾಸುರೀಮತಾ॥

ಪ॥ ದೈವೀ-ಸಂಪತ್-ವಿಮೋಕ್ಷಾಯ-ನಿಬಂಧಾಯ-ಆಸುರೀ-ಮತಾ ॥

(ಅ॥ ರಾ॥ ಭಾ) ದೈವೀಸಂಪತ್-ಭಗವದಾಜ್ಞೆಯನ್ನನುವರ್ತಿಸುವಿಕೆಎಂಬ

ದೇವಸಂಪತ್ತು, (ವಿಮೋಕ್ಷಾಯಭವತಿ-ಕ್ರಮವಾಗಿ ಬಂಧ ನಿವೃತ್ತಿಗೋಸ್ಕರ ಆಗುವುದು.) ಆಸುರೀಸಂಪತ್-ಭಗವದಾಜ್ಞೆಯನ್ನು ಅತಿಲಂಘಿಸಿ ಇರುವಿಕೆಎಂಬ ಆಸುರಸಂಪತ್ತು, ನಿಬಂಧಾಯ-ಅಧೋಗತಿಗೋಸ್ಕರವಾಗಿ, ಮತಾ-ನಿಶ್ಚಯಿಸಲ್ಪಟ್ಟಿತು ॥೪॥ ವಿಮೋಕ್ಷಾಯ-(ಗೀವಿ) ನಾನಾವಿಧವಾದ ಮೋಕ್ಷಕ್ಕೆ, ಆಸುರೀ- (ಶಂ) ಅಸುರರಾಕ್ಷಸ ಸಂಪತ್ತು, ನಿಬಂಧಾಯ- (ಗೀ॥ವಿ) ನೀಚಸ್ಥಾನವಾದ ಅಂಧಂ ತಮಸ್ಸಿನಲ್ಲಿ ವಾಸಮಾಡುವುದಕ್ಕೋಸ್ಕರ. ॥೪॥

ಶ್ಲೋ॥ ಮಾಶುಚಸ್ಸಂಪದಂದೈವೀಮಭಿಜಾತೋಸಿಪಾಂಡವ॥೫॥

ಪ॥ ಮಾಶುಚಃ-ಸಂಪದಂ-ದೈವೀಂ-ಅಭಿಜಾತಃ-ಅಸಿ-ಪಾಂಡವ ॥

(ಅ ರಾ॥ ಭಾ) ಇದನ್ನು ಕೇಳಿತಾನು ಯಾವ ಪ್ರಕೃತಿಯೊ ಎಂಬದಾಗಿ ತಿಳಿಯದೆ ಇರುವವನರಿಂದಭಯಪಟ್ಟಿರುವ ಅರ್ಜುನನನ್ನು ಕುರಿತುಹೇಳುತ್ತಾರೆ. ಪಾಂಡವ-ಪಾಂಡುಪುತ್ರನಾದ ಅರ್ಜುನನೆ? ಮಾಶುಚಃ-ಶೋಚಿಸಬೇಡ, (ವ್ಯಸನ ಪಡಬೇಡ) ದೈವೀಂ ಸಂಪದಮಭಿಜಾತೋಸಿ-ನೀನು ನಮ್ಮ ಆಜ್ಞೆಯನ್ನನುವರ್ತಿಸುವಿಕೆ ಎಂಬ ದೈವ ಸಂಪತ್ತನ್ನು ಸೇರವೇರಿಸುವುದಕ್ಕಾಗಿ ಹುಟ್ಟಿರುತ್ತಿ. ಧಾರ್ಮಿಕಾಗ್ರೇಸರನಾದಪಾಂಡು ಮಹಾರಾಜನಕುಮಾರನಾಗಿರುವ ನೀನುದೈವಪ್ರಕೃತಿಎಂಬುವುದರಲ್ಲಿಸಂದೇಹವೇನೆಂದು ತಾತ್ಪರ್ಯವು. ॥೫॥

(ತಾ॥ ಚಂ) ಇಲ್ಲಿನ ಮಾಶುಚಃ ಎಂಬ ಶೋಕನಿಷೇಧಕ ಶಬ್ದವುಈ ಶಾಸ್ತ್ರಾರಂಭದಲ್ಲುಪಕ್ರಮಿಸಲ್ಪಟ್ಟ ಶೋಚ್ಯವಿಷಯ ಶೋಕನಿಷೆಧಾರ್ಥಕವಲ್ಲವು ಆಶೋಕವು ಹಿಂದೆ 'ಅಶೋಚ್ಯಾನನ್ವಶೋಚಸ್ತ್ವಂ॥೨॥೧೦॥ ಇತ್ಯಾದಿಗಳಿಂದ ಬಹುಪ್ರಕಾರವಾಗಿ ಪರಿಹರಿಸಲ್ಪಟ್ಟಿರುವುದು. ಒಂದುವೇಳೆ ಇಲ್ಲಿಪ್ರತಿಷೇಧ ಮಾಡಿರುವಶೋಕವು ಶಾಸ್ತ್ರಾರಂಭದಲ್ಲಿ ಬಂದ ಶೋಕವೆಂತಲೇಹೇಳುವಪಕ್ಷದಲ್ಲಿ ದೈವೀಂಸಂಪದ ಮಭಿಜಾತೋಸಿ ಎಂಬುವುದು ವ್ಯರ್ಥವಾಗುವುದು.ಆದುದರಿಂದಶಾಸ್ತ್ರಾರಂಭದಲ್ಲಿಪ್ರಕಾಂತವಾದಶೋಕಕ್ಕೆ ನಿಷೇಧವನ್ನು ಹೇಳುವುದಕ್ಕಾಗುವದಿಲ್ಲವು.॥೫॥

ಶ್ಲೋ॥ ದ್ವೌಭೂತಸರ್ಗೌಲೋಕೇಸ್ಮಿನ್ದೈವಆಸುರಏವಚ। ದೈವೋವಿಸ್ತರಶಃಪ್ರೋಕ್ತ ಆಸುರಂ ಪಾರ್ಥಮೇಶೃಣು ॥ ... ... ॥೬॥

ಪ॥ದ್ವೌ-ಭೂತಸರ್ಗೌ-ಲೋಕೇ-ಅಸ್ಮಿನ್-ದೈವಃ-ಆಸುರಃ-ಏವ-ಚ-ದೈವಃ-ವಿಸ್ತರಶಃ-ಪ್ರೋಕ್ತಃ-ಆಸುರಂ-ಪಾರ್ಥ-ಮೇ-ಶೃಣು ॥

(ಅ ॥ ರಾ ॥ ಭಾ) ಅಸ್ಮಿಲ್ಲೋಕೇ - ಈ ಕರ್ಮಲೋಕದಲ್ಲಿ, ದೈವ ಆಸುರಪವಿಭಜ-
ಪ್ರಾಚೀನ ಪುಣ್ಯಪಾಪವಶದಿಂದ ಭಗವದಾಜ್ಞಾನುವೃತ್ತಿ ಸ್ವಭಾವವಾಗಿಯೂ ಭಗವದಾ
ಜ್ಞಾತಿಕ್ರಮ ಸ್ವಭಾವವಾಗಿಯೂ ಇರುವುದರಿಂದ ದೈವಪ್ರಕೃತಿ ಎಂತಲೂ ಆಸುರ
ಪ್ರಕೃತಿಯೆಂತಲೂ, ಭೂತಸರ್ಗೌ - ಕರ್ಮಕಾರಿಗಳಾದ ಭೂತಗಳ ಸೃಷ್ಟಿಯು, ದ್ವೌ-
ಎರಡು ವಿಧಗಳಾಗಿರುವುವು. ದೈವಃವಿಸ್ತರಶಃ ಪ್ರೋಕ್ತಃ-ಅವುಗಳಲ್ಲಿ ನಮ್ಮ ಆಜ್ಞೆಯ
ನ್ನನುವರ್ತಿಸುವಿಕೆ ಎಂಬ ದೈವ ಪ್ರಕೃತಿಗಳ ಉತ್ಪತ್ತಿಯು ಯಾವುದನ್ನಾಚರಿಸುವುದ
ಕ್ಕಾಗಿಯೊ ಆ ಆಚಾರವು ಕರ್ಮಯೋಗಜ್ಞಾನಯೋಗಭಕ್ತಿಯೋಗರೂಪವಾಗಿ ವಿಸ್ತಾರಕ್ರ
ಮದಿಂದ ನಿನಗೆ ಹೇಳಲ್ಪಟ್ಟಿತು. ಪಾರ್ಥ - ಕುಂತೀಪುತ್ರನಾದ ಎಲೈ ಅರ್ಜುನನೆ?
ಆಸುರಂ- ಅಸುರಸೃಷ್ಟಿಯು ಯಾವ ಆಚಾರಾನುಷ್ಠಾನಕ್ಕಾಗಿಯೊ ಆ ಆಚಾರವನ್ನು,
ಮೆ-ನಮ್ಮ ದೆಸೆಯಿಂದ, ಶೃಣು-ಕೇಳು. ॥೬॥

(ಶಂ ॥ ಭಾ ) ನಿರ್ದಯರಾದ ರಾಕ್ಷಸರ ಸಂಪತ್ತು ಏತಕ್ಕೆ
ವಿವರಿಸಲ್ಪಡಲಿಲ್ಲವೆಂದರೆ ? ಅದು ಆಸುರಸಂಪತ್ತಿನಲ್ಲಿ ಅಂತರ್ಭೂತ
ವೇ ಆಗಿರುವುದರಿಂದ ಎರಡು ಸಂಪತ್ತುಗಳೆಂಬುದಾಗಿಯೆ ಇಲ್ಲಿ ವಿವರಿಸಿ
ರುವೆವು. ಅಸ್ಮಿಲ್ಲೋಕೇ_ಈ ಸಂಸಾರದಲ್ಲಿ, ಅಭಯಂ ಸತ್ವಸಂಶು
ದ್ಧಿಃ " ಎಂಬ ಮೊದಲನೇ ಶ್ಲೋಕದ ಮೊದಲು ಇದುವರೆಗೂ ದೈವ
ಸಂಪತ್ತು ಹೇಳಲ್ಪಟ್ಟಿತು. ಮುಂದೇ ಈ ಅಧ್ಯಾಯದ ಕೊನೆವರಿಗೂ
ಅಸುರ ಸಂಪತ್ತು ವಿಸ್ತಾರವಾಗಿ ಹೇಳಲ್ಪಡುವುದು. ಅಸುರಸಂಪತ್ತೆ
ವಿಸ್ತಾರವಾಗಿ ಯೇತಕ್ಕೆ ಹೇಳಲ್ಪಡಬೇಕೆಂದರೆ ಅದನ್ನು ತಿಳಿದು
ಕೊಂಡು ಬಿಡುವದಕ್ಕಾಗಿಯೆ. ... ... ॥೬॥

ಶ್ಲೋ ॥ ಪ್ರವೃತ್ತಿಂಚನಿವೃತ್ತಿಂಚಜನಾನವಿದುರಾಸು
ರಾಃ | ನಶೌಚಂನಾಪಿಚಾಚಾರೋನಸತ್ಯಂತೇಷುವಿದ್ಯತೇ ॥
॥೭॥

ಪ ॥ ಪ್ರವೃತ್ತಿಂ - ಚ - ನಿವೃತ್ತಿಂ - ಚ - ಜನಾಃ-ನ-ವಿದುಃ - ಆಸುರಾಃ। ನ-
ಶೌಚಂ-ನ-ಅಪಿ-ಚ-ಆಚಾರಃ-ನ-ಸತ್ಯಂ- ತೇಷು - ವಿದ್ಯತೇ ॥

( ಅ ॥ ರಾ॥ ಭಾ ) ಪ್ರವೃತ್ತಿಂಚ- ಮೋಕ್ಷೇತರಫಲಸಾಧನವಾದ ಕರ್ಮವನ್ನೂ,
ನಿವೃತ್ತಿಂಚ - ಮೋಕ್ಷಸಾಧನವಾದ ಕರ್ಮವನ್ನೂ, ಆಸುರಾಜನಾನವಿದುಃ-ಅಸುರಪ್ರ
ಕೃತಿಗಳಾದ ಜನಗಳು ತಿಳಿಯಲಾರರು. ತೇಷು-ಅವರಲ್ಲಿ, ಶೌಚಂ - ಶಾಸ್ತ್ರಸಿದ್ಧವಾದ

ಬಾಹ್ಯರೂಪವಾಗಿಯೂ ಅಂತರರೂಪವಾಗಿಯೂ ಇರುವ ವೈದಿಕ ಕರ್ಮಯೋಗ್ಯತೆಯು, ನವಿದ್ಯತೆ-ಇಲ್ಲವು, ಆಚಾರೋಪಿಚ-ಅಂತಹ ಶೌಚವು ಯಾವಸಂಧ್ಯಾವಂದನಾದಿರೂಪವಾದ ಆಚಾರದಿಂದಉಂಟಾಗುವುದೋ ಅಂತಹ ಆಚಾರವೂ,ತೇಷು-ಅಂಥಾ ಅಸುರ ಪ್ರಕೃತಿಗಳಲ್ಲ, ನವಿದ್ಯತೆ-ಇರುವುದಿಲ್ಲವು, ಸತ್ಯಂ-ಕಂಡದ್ದನ್ನು ಹೇಳುವುದಾಗಿಯೂ ಭೂತಹಿತರೂಪವಾಗಿಯೂ ಇರುವ ವಚನವೆಂಬ ಸತ್ಯವೂ, ಅವರಲ್ಲಿ ಇಲ್ಲವು. ಸಂಧ್ಯಾವಂದನಾದಿರೂಪವಾದ ವರ್ಣಾಶ್ರಮ ಧರ್ಮಕ್ಕೆ "ಪ್ರಾಜಾಪತ್ಯಂಗೃಹಸ್ಥಾನಾಂ,, ಇತ್ಯಾದಿ ವಾಕ್ಯಗಳಿಂದ ಫಲಾಂತರವು ಶ್ರುತವಾಗಿರುವುದರಿಂದ ಇದಕ್ಕೆ ಶೌಚತ್ವೋಕ್ತಿಯುಂಟೊ? ಎಂದರೆ ಸಂಧ್ಯಾಹೀನೊ ಅಶುಚಿರ್ನಿತ್ಯಮನರ್ಹಸ್ಸರ್ವಕರ್ಮಸು " ಇತ್ಯಾದಿಗಳಲ್ಲಿ ಕರ್ಮಾನುಷ್ಠಾನಯೋಗ್ಯತಾಪಾದಕತ್ವರೂಪವಾದ ಶುದ್ಧಿಯು ಸಂಧ್ಯಾವಂದನಾದಿಗಳಿಗೆ ಇರುವದರಿಂದ ಶೌಚತ್ವೋಕ್ತಿಗೆ ಯಾವಲೋಪವೂ ಇರುವುದಿಲ್ಲವು. ॥೭॥

(ಶಂ॥) ಪ್ರವೃತ್ತಿಂಚ-ಯಾವ ಪುರುಷಾರ್ಥಸಾಧನವಾದ ಕಾರ್ಯದಲ್ಲಿ ಪ್ರವೃತ್ತಿಸಬೇಕೂ ಅದನ್ನೂ, ನಿವೃತ್ತಿಂಚ ಪುರುಷಾರ್ಥಕ್ಕೆಹಾನಿಕರವಾದುದರಿಂದ ಬಿಡತಕ್ಕದ್ದುಯಾವದೊ ಅದನ್ನೂ. ॥೭॥

(ಗೀ॥ವಿ) ಪ್ರವೃತ್ತಿಂಚ - ಸತ್ಕಾರ್ಯಗಳಲ್ಲಿ ಪ್ರವೇಶಿಸುವಿಕೆಯನ್ನೂ, ನಿವೃತ್ತಿಂಚ- ದುಷ್ಕಾರ್ಯಗಳಡಶೆಯಿಂದ ನಿವೃತ್ತಿಸುವಿಕೆಯನ್ನೂ. ... ... ... ॥೭॥

ಶ್ಲೋ॥ ಅಸತ್ಯಮಪ್ರತಿಷ್ಠಂತೇಜಗದಾಹುರನೀಶ್ವರಂ|ಅಪರಸ್ಪರಸಮ್ಭೂತಂಕಿಮನ್ಯತ್ಕಾಮಹೇತುಕಂ॥೮॥

ಪ॥ ಅಸತ್ಯಂ- ಅಪ್ರತಿಷ್ಠಂ- ತೇ- ಜಗತ್ ಆಹುಃ-ಅನೀಶ್ವರಂ | ಅಪರಸ್ಪರಸಂಭೂತಂ-ಕಿಂ-ಅನ್ಯತ್-ಕಾಮಹೇತುಕಂ॥

(ಅ॥ ರಾ॥ ಭಾ) ತೇ-ಆಅಸುರಪ್ರಕೃತಿಗಳು, ಜಗತ್-ಜಗತ್ತನ್ನು, ಅಸತ್ಯಂ-(ಸತ್ಯಶಬ್ದವಾಚ್ಯವಾದ ಬ್ರಹ್ಮಕ್ಕೆಕಾರ್ಯವಾಗಿರುವುದರಿಂದ ಬ್ರಹ್ಮಾತ್ಮಕವಾದದ್ದು ಸತ್ಯವು,ಆಪ್ರಕಾರವಾಗಿರದೆ ಇರುವದು ಅಸತ್ಯವು) ಇಂಥಾ ಅಸತ್ಯವೆಂತಲೂ, ಅಪ್ರತಿಷ್ಠಂ - ಬ್ರಹ್ಮರೂಪವಾದ ಅನಂತನನ್ನು ಆಧಾರವಾಗಿ ಉಳ್ಳದ್ದಲ್ಲ ವೆಂತಲೂ, ಅನೀಶ್ವರಂ - ಸತ್ಯಸಂಕಲ್ಪನಾಗಿಯೂ ಪರಬ್ರಹ್ಮಭೂತನಾಗಿಯೂ ಇರುವನನ್ನಿಂದನಿಯಮಿಸಲ್ಪಟ್ಟದ್ದಲ್ಲವೆಂತಲೂ, ಆಹುಃ-ಹೇಳುವರು. ಅಪರ

ಸ್ಪರ ಸಂಭೂತಂಕಿಮನ್ಯತ್-ಸ್ತ್ರೀಪುರುಷರ ಪರಸ್ಪರ ಸಂಬಂಧದಿಂದ ಉಂಟಾದದ್ದು ಪರಸ್ಪರ ಸಂಭೂತವು ಆ ಪ್ರಕಾರವಲ್ಲದ್ದು ಅಪರಸ್ಪರ ಸಂಭೂತವು, ಅಂಥಾದ್ದು ಬೇರೆಯಾವದಾದರೂ ಉಂಟೋ? ಮನುಷ್ಯಪಶ್ವಾದಿರೂಪವಾದ ಈ ಜಗತ್ತೆಲ್ಲವೂ ಸ್ತ್ರೀಪುರುಷರ ಪರಸ್ಪರಸಂಯೋಗವಿಂದ ಉಂಟಾದದ್ದಾಗಿ ಕಾಣಲ್ಪಟ್ಟಿರುವುದು, ಅದಕ್ಕೆ ಅತಿರಿಕ್ತವಾಗಿ ಯಾವದಾದರೂ ಕಾಣಲ್ಪಡುವುದೊ ಎಂದರ್ಥವು. ಕಾಮಹೇತುಕಂ-ಆದುದರಿಂದ ಈ ಜಗತ್ತೆಲ್ಲವೂ ಕಾಮಮೂಲಕವಲ್ಲದೆ ಬೇರೆಯಾವದೂ ಇಲ್ಲವೆಂದು ಭಾವವು. ... ... ॥೮॥

(ಶಂ ॥ ಭಾ) ವೇದೋಕ್ತಗಳಾದ ಧರ್ಮಾಧರ್ಮಗಳಲ್ಲುಂಟಾಗ ಬೇಕಾದ ಪ್ರವೃತ್ತಿ ನಿವೃತ್ತಿಗಳನು ಯೇತಕ್ಕೆ ತಿಳಿಯಲಾರರು? ಧರ್ಮಾಧರ್ಮಗಳನ್ನು ಅಂಗೀಕರಿಸದೆ ಹೋದರೆ ಜಗತ್ತಿನಲ್ಲಿ ಸುಖದುಃಖಾದಿವ್ಯವಸ್ಥೆಗಳು ಹೇಗೆ ಸಂಭವಿಸುವುದು? ಶೌಚಾಚಾರ ವಿಷಯವಾದ ಈಶ್ವರಾಜ್ಞೆಯನ್ನು ಹೇಗೆ ಅತಿಕ್ರಮಿಸಬಹುದು? ಈಶ್ವರನನ್ನು ಅಂಗೀಕರಿಸದೆ ಹೋದರೆ ಜಗದುತ್ಪತ್ತಿಯು ಹೇಗೆ ಸಂದರ್ಭಿಸುವುದು? ಎಂಬೀ ಶಂಕೆಗಳಿಗೆ ಅಸುರ ಗುಣಗಳುಂಟಾಗಿರುವ ನಾಸ್ತಿಕರೆಂಬ ಬೌದ್ಧರು ಹೇಳುವ ಸಮಾಧಾನವನ್ನು ಹೇಳುತ್ತಾರೆ. ಸತ್ಯವೆಂದರೆ ವೇದಾದಿ ಶಬ್ದಬ್ರಹ್ಮವು. ಅಂತಾ ವೇದಾದಿ ಶಬ್ದಬ್ರಹ್ಮವನ್ನು ಪ್ರಮಾಣವೆಂಬದಾಗಿ ಹೇಳಲಾರರು. ಅವರಿಗೆ ವೇದಪ್ರಾಮಾಣ್ಯವು ಇಲ್ಲವಾದುದರಿಂದ ಅವುಗಳಲ್ಲಿ ಹೇಳಿರುವ ಧರ್ಮಾಧರ್ಮವ್ಯವಸ್ಥೆಗಳಿಂದ ಅವರಿಗೆ ಪ್ರಯೋಜನವಿಲ್ಲವು. ಆದುದರಿಂದ ಆಸುರ ಪ್ರಕೃತಿಕರಾದ ನಾಸ್ತಿಕರು ವೇದಮೂಲಕವಾದ ಧರ್ಮಾಧರ್ಮವ್ಯವಸ್ಥೆಗಳೊಡನೆ ಜಗತ್ತು ಸೃಷ್ಟವಾಗಿರುವುದೆಂಬದಾಗಿ ಅಂಗೀಕರಿಸದೆ ಜಗತ್ತು ತನಗೆ ತಾನೆ ಯುಂಟಾಗಿರುವುದೆನ್ನುವರು. ಆದುದರಿಂದಲೇ ಜಗತ್ಸೃಷ್ಟಿಕರ್ತನಾಗಿಯೂ ಧರ್ಮಾಧರ್ಮಮೂಲವಾಗಿ ಜಗನ್ನಿಯಾಮಕನಾಗಿಯೂ ಇರುವ ಈಶ್ವರನು ಇಲ್ಲವೆಂತಲೂ ಹೇಳುವರು. ಆದರೆ ಜಗದುತ್ಪತ್ತಿಯು ಹೇಗೆ? ಎಂದರೆ ಸ್ತ್ರೀಪುರುಷರ ಪರಸ್ಪರ ಸಂಬಂಧ

ದಿಂದಲೇ ಎನ್ನುವರು. ಅವರ ಪರಸ್ಪರ ಸಂಬಂಧವು ಯೇತಕ್ಕೆ ?
ಎಂದರೆ ಕಾಮೋದ್ರೇಕ ಶಮನಾರ್ಥವಲ್ಲದೇ ಸತ್ಸಂತಾನಾರ್ಥವಲ್ಲವೆಂ
ತಲೂ ಹೇಳುವರು. (ಇದುಲೋಕಾಯುತಿಕರವಾದವು) ಆದುದರಿಂದ
ಸ್ತ್ರೀಪುರುಷ ದ್ವಂದ್ವಕ್ಕಿಂತಲೂ ಜಗತ್ತಿಗೆ ಕಾರಣಾಂತರವಿಲ್ಲವೆಂಬ
ದಾಗಿ ನಿರೀಶ್ವರ ವಾದಿಗಳಾದ ಅಸುರ ಪ್ರಕೃತಿಗಳು ಹೇಳುವರು. ||೮||

(ಮ|| ಗೀ|| ವಿ||) ಅಸತ್ಯಮ ಪ್ರತಿಷ್ಠಮನೀಶ್ವರಂ--ವಿಷ್ಣುವಿನಿಂ
ದ ಸೃಷ್ಟಿಸ್ಥಿತಿಮಾಡಲ್ಪಡುವುದೆಂಬುವುದಾದರೂ ಅವರು ನಿಯಾಮ
ಕರಾಗಿರುವುದಾದರೂ ಇಲ್ಲವೆಂತಲೂ, ಅಪರಸ್ಪರ ಸಂಭೂತಂ-“ಅನ್ನಾ
ದ್ಭವಂತಿ ಭೂತಾನಿ,, (೩|| ೧೪) ಎಂಬ ಶ್ಲೋಕದಲ್ಲಿ ಹೇಳಿರುವಂತೆ
ಒಂದರಿಂದೊಂದುಂಟಾಗುವುದೂ ಇಲ್ಲವೆಂತಲೂ, ಅಸುರರು ಹೇಳು
ತ್ತಾರೆ. (ಗೀ||ವಿ) ಅಥವಾ ಶುಕ್ತಿಯಲ್ಲಿ ಬೆಳ್ಳಿಯಂತೆ ಅಸತ್ಯವೆಂತಲೂ
ಜ್ಞಾನದಲ್ಲಿ ಮಿಥ್ಯೆಯಾಗುವುದರಿಂದ ಅಪ್ರತಿಷ್ಠವೆಂತಲೂ ಅವಿದ್ಯಾ ಪರಿ
ಣಾಮವಾದುದರಿಂದ ಪರಸ್ಪರ ಸಂಭೂತವಲ್ಲವೆಂತಲೂ ಸದಸದ್ವಿಲಕ್ಷ
ಣವೆಂತಲೂ ಹೇಳುವರು. ... ... ||೮||

(ಶಂ|| ಗೀ|| ವಿ|| ಮ|| ಶ್ರೀ) ಕಾಮಹೈತುಕಂಎಂಬ ಪಾಠವು. ||೮||

ಶ್ಲೋ|| ಏತಾಂದೃಷ್ಟಿಮವಷ್ಟಭ್ಯನಷ್ಟಾತ್ಮಾನೋಲ್ಪಬು
ದ್ಧಯಃ | ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯಜಗ
ತೋ (ಹಿತಾಃ) ಶುಭಾಃ|| ... |೯|

ಪ|| ಏತಾಂ-ದೃಷ್ಟಿಂ-ಅವಷ್ಟಭ್ಯ-ನಷ್ಟಾತ್ಮಾನಃ-ಅಲ್ಪಬುದ್ಧಯಃ | ಪ್ರಭವಂ
ತಿ-ಉಗ್ರಕರ್ಮಾಣಃ-ಕ್ಷಯಾಯ-ಜಗತಃ-ಅಶುಭಾಃ ||

(ಅ|| ರಾ|| ಭಾ||) ಏತಾಂದೃಷ್ಟಿಂ-ಈ ಬುದ್ಧಿಯನ್ನು, ಅವಷ್ಟ
ಭ್ಯ-ಅವಲಂಬಿಸಿಕೊಂಡು, ನಷ್ಟಾತ್ಮಾನಃ-ದೇಹಕ್ಕಿಂತಲೂ ಅನ್ಯ
ವಾದ ಆತ್ಮಸ್ವರೂಪ ಪರಿಜ್ಞಾನಶೂನ್ಯರಾಗಿಯೂ, ಅಲ್ಪಬುದ್ಧಯಃ-
ದೇಹದಲ್ಲಿ ಜ್ಞಾತಾ ಆಗಿ ದೇಹಕ್ಕಿಂತಲೂ ಭಿನ್ನಪಟ್ಟ ಆತ್ಮನು ತಿಳಿಯ
ಲ್ಪಡುವನೆಂಬದಾಗಿ ವಿವೇಕಿಸಲು ಶಕ್ತಿ ಇಲ್ಲದವರಾಗಿಯೂ, ಉಗ್ರಕ
ರ್ಮಾಣಃ-ಸರ್ವಹಿಂಸಕರಾಗಿಯೂ, ಅಶುಭಾಃ-ಅಶುಭಗಳಾದ ಕಾರ್ಯಗ

ಳನ್ನು ಪನಾಡುವಂತನರಾಗಿಯೂ, ಅಥವಾ) ಅಹಿತಾಃ ಎಂತಲೂ ಪಾಠ ವುಂಟು. ಅಹಿತಾಃ - ಶತ್ರುಗಳಾಗಿಯೂ ಇರುವ ಅಸುರ ಪ್ರಕೃತಿ ಗಳು, ಜಗತಃ ಕ್ಷಯಾಯ ಪ್ರಭವಂತಿ - ಜಗದ್ವಿನಾಶಾರ್ಥವಾಗಿ ಜನಿ ಸುತ್ತಾರೆ. ... ... ... ॥೯॥

(ಶಂ॥ ಭಾ) ನಷ್ಟಾತ್ಮಾನಃ-ಪರಲೋಕಸಾಧನವಾದ ಕಾರ್ಯ ಗಳನ್ನು ಮಾಡಿಕೊಳ್ಳದ ಕೆಟ್ಟಸ್ವಭಾವ ವುಳ್ಳವರು. ಅಲ್ಪಬುದ್ಧ ಯಃ-ವಿಷಯಾಸಕ್ತವಾದ ಬುದ್ಧಿಯುಳ್ಳವರು. (ಶ್ರೀ) ಕಾಣಲ್ಪಡುವ ವಸ್ತು ಮಾತ್ರದಲ್ಲಿ ಬುದ್ಧಿಯ್ಯಯವನ್ನು ಮಾಡುವಂತವರು. ಉಗ್ರಕ ರ್ಮಾಣಃ- (ಶಂ॥ ಶ್ರೀ) ಲೋಕದಲ್ಲಿರುವ ಪ್ರಾಣಿಗಳಿಗೆ ದುಃಖಕರವಾದ ಕಾರ್ಯಗಳನ್ನು ಮಾಡತಕ್ಕವರು. ... ... ॥೯॥

(ಗೀ॥ ವಿ॥) ಪ್ರಭವಂತಿ-ಕಲಿಯುಗಾದಿಯಲ್ಲುಂಟಾಗುವರು. ॥೯॥

ಶ್ಲೋ॥ ಕಾಮಮಾಶ್ರಿತ್ಯದುಷ್ಪೂರಂ ದಂಭಮಾನಮ
ದಾನ್ವಿತಾಃ। ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರ
ವರ್ತಂತೇಽಶುಚಿವ್ರತಾಃ ॥ ... ॥೧೦॥

ಪ॥ ಕಾಮಂ-ಆಶ್ರಿತ್ಯ-ದುಷ್ಪೂರಂ-ದಂಭಮಾನಮದಾನ್ವಿತಾಃ । ಮೋಹಾತ್-ಗೃಹೀತ್ವಾ-ಅಸದ್ಗ್ರಾಹಾನ್-ಪ್ರವರ್ತಂತೇ-ಅಶುಚಿವ್ರತಾಃ ॥

(ಅ॥ ರಾ॥ ಭಾ) ದುಷ್ಪೂರಂ ಕಾಮಮಾಶ್ರಿತ್ಯ-ಹೊಂದಲಶಕ್ಯ ವಾದ ವಿಷಯಗಳನ್ನು ಕುರಿತು ಅಪೇಕ್ಷೆಯನ್ನಾಶ್ರಯಿಸಿ, (ಅದನ್ನು ಸಾಧಿಸಬೇಕೆಂಬ ಇಚ್ಛೆಯಿಂದ,) ಮೋಹಾತ್-ಅಜ್ಞಾನದಿಂದ, ಅಸದ್ಗ್ರಾ ಹಾನ್-ದುರ್ಮತಗಳನ್ನು, ಗೃಹೀತ್ವಾ-ಪರಿಗ್ರಹಿಸಿಕೊಂಡು, ಅಶುಚಿವ್ರ ತಾಃ-ಶಾಸ್ತ್ರದಿಂದ ವಿಧಿಸಲ್ಪಡದ ವ್ರತಗಳುಳ್ಳವರಾಗಿ, ದಂಭಮಾನಮ ದಾನ್ವಿತಾಃ - ಧಾರ್ಮಿಕನೆಂಬ ಖ್ಯಾತಿಯನ್ನು ಸಂಪಾದಿಸುವುದಕ್ಕಾಗಿ ಧರ್ಮವನ್ನು ಅನುಷ್ಠಿಸುವುದೆಂಬ ದಂಭದೊಡನೆಯೂ ವಿದ್ಯಾಭಿಜನಗ ಳಿಂದ ಹಿರಿಯರನ್ನು ಅವಮಾನ ಮಾಡುವುದೆಂಬ ಮಾನದೊಡನೆಯೂ ವಿಷಯಾನುಭವದಿಂದುಂಟಾದ ಬುದ್ಧಿ ಭ್ರಂಶದೊಡನೆಯೂ ಸೇರಿದವ ರಾಗಿ, ಪ್ರವರ್ತಂತೇ-ವ್ಯಾಪರಿಸಿಕೊಂಡಿರುವರು. ... ॥೧೦॥

(ಶಂ|| ಭಾ) ದುಷ್ಪೂರಂಕಾಮಂ- ಪೂರಣಮಾಡಲಶಕ್ಯವಾದ ಇಚ್ಛಾವಿಶೇಷವನ್ನು, ಅಶುಚಿವ್ರತಾಃ-(ಶ್ರೀ)ಮಧುಮಾಂಸಾದಿಗಳನ್ನು ಭಕ್ಷಣ ಮಾಡುವವ್ರತಗಳುಳ್ಳವರಾಗಿ, ಮೋಹಾತ್-ಅವಿವೇಕದ್ದೆಶೆಯಿಂದ, ಅಸದ್ಗ್ರಾಹಾನ್ ಗೃಹೀತ್ವಾ- ಅಶುಭಗಳಾದ ನಿಶ್ಚಯಗಳನ್ನುಗ್ರಹಿಸಿ ಕೊಂಡು, ಪ್ರವರ್ತಂತೇ-ಲೋಕದಲ್ಲಿ ಸಂಚರಿಸುತ್ತಾರೆ. ||೧೦||

(ಗೀ|| ವಿ) ಮೋಹಾತ್-ಮಿಥ್ಯಾಜ್ಞಾನಸ್ವಭಾವವನ್ನು ಹೊಂದಿ, ಅಸದ್ಗ್ರಾಹಾನ್‌ಗೃಹೀತ್ವಾ- ದುಷ್ಟಶಾಸ್ತ್ರಗಳನ್ನಭ್ಯಾಸಮಾಡಿ ಅದರಿಂದುಂಟಾದ ವಿಪರೀತ ಜ್ಞಾನವನ್ನು ಹೊಂದಿ, ಪ್ರವರ್ತಂತೇ-ಪ್ರವರ್ತಿಸುತ್ತಾರೆ. ... ... ||೧೦||

ಶ್ಲೋ|| ಚಿಂತಾಮಪರಿಮೇಯಾಂಚಪ್ರಲಯಾಂತಾಮು
ಪಾಶ್ರಿತಾಃ | ಕಾಮೋಪಭೋಗಪರಮಾಏತಾವದಿತಿನಿ
ಶ್ಚಿತಾಃ || ... ... ||೧೧||

ಪ|| ಚಿಂತಾಂ-ಅಪರಿಮೇಯಾಂ-ಚ-ಪ್ರಲಯಾಂತಾಂ-ಉಪಾಶ್ರಿತಾಃ | ಕಾಮೋಪಭೋಗಪರಮಾಃ-ಏತಾವತ್-ಇತಿ-ನಿಶ್ಚಿತಾಃ ||

(ಅ|| ರಾ|| ಭಾ) ಅಪರಿಮೇಯಾಂ- ಅಳವಿಡಲಸಾಧ್ಯವಾದದ್ದಾಗಿಯೂ, ಪ್ರಲಯಾಂತಾಂಚ - ಪ್ರಾಕೃತ ಪ್ರಲಯಾವಧಿಕಾಲದಿಂದ ಸಾಧಿಸತಕ್ಕ ವಿಷಯವುಳ್ಳದ್ದಾಗಿಯೂ ಇರುವ, ಚಿಂತಾಂ-ತಾವುಗಳು ಈದಿನವೋ ನಾಳೆಯೋ ಮುಗಿಯುವಂತವರಾಗಿದ್ದರೂ ಅದನ್ನರಿಯದೆ ಪೂರ್ತಿಯಾಗದ ಚಿಂತೆಯನ್ನು, ಉಪಾಶ್ರಿತಾಃ-ಮನಸ್ಸಿನಲ್ಲಿಟ್ಟುಕೊಂಡವರಾಗಿಯೂ, ಕಾಮೋಪಭೋಗಪರಮಾಃ - ಕಾಮೋಪಭೋಗವನ್ನೇ ಪರಮಪುರುಷಾರ್ಥವನ್ನಾಗಿ ನೆನೆಯುವಂತವರಾಗಿಯೂ, ಏತಾವದಿತಿನಿಶ್ಚಿತಾಃ-ಇದಕ್ಕಿಂತಲೂ ಅಧಿಕವಾದ ಪುರುಷಾರ್ಥವಿಲ್ಲವೆಂತಲೂ ನಿಶ್ಚಯಿಸಿದವರಾಗಿಯೂ ಇರುವರು. ... ||೧೧||

(ಶಂ) ಪ್ರಲಯಾಂತಾಂ-ಮರಣಾಂತವಾದ, ||೧೧||

(ಗೀ|| ವಿ) ಏತಾವದಿತಿ-ಕಾಮಭೋಗವಲ್ಲದೆ ಬೇರೆ ಸ್ವರ್ಗಾದಿ ಭೋಗವಿಲ್ಲವೆಂಬದಾಗಿ. ... ... ||೧೧||

ಶ್ಲೋ ॥ ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ । ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥ ... ... ॥೧೨॥

ಪ ॥ ಆಶಾಪಾಶಶತೈಃ-ಬದ್ಧಾಃ-ಕಾಮಕ್ರೋಧಪರಾಯಣಾಃ। ಈಹಂತೇ- ಕಾಮಭೋಗಾರ್ಥಂ-ಅನ್ಯಾಯೇನ-ಅರ್ಥಸಂಚಯಾನ್ ॥

(ಅ ॥ ರಾ ॥ ಭಾ) ಆಶಾಪಾಶಶತೈರ್ಬದ್ಧಾಃ- ಧನೇಚ್ಛೆಯೇನು ಮಕ್ಕಳ ಇಚ್ಛೆಯೇನು ಭೋಗೇಚ್ಛೆಯೇನು, ಇದೇಮೊದಲಾದ ನಾನಾವಿಧಗಳಾದ ಆಶೆಗಳೆಂಬ ಪಾಶಗಳಿಂದ ಕಟ್ಟಲ್ಪಟ್ಟವರಾಗಿಯೂ, ಕಾಮಕ್ರೋಧಪರಾಯಣಾಃ - ಕಾಮದಲ್ಲಿಯೂ ಕೋಪದಲ್ಲಿಯೂ, ಯಾವಾಗಲೂ ನಿಷ್ಠೆಯುಳ್ಳವರಾಗಿಯೂ ಇರುವ ಆಸುರಪ್ರಕೃತಿಗಳು. ಕಾಮಭೋಗಾರ್ಥಂ - ಕಾಮಭೋಗಕ್ಕಾಗಿ, ಅನ್ಯಾಯೇನ- ಕಳ್ಳತನವೇ ಮೊದಲಾದ ತಪ್ಪಾದ ಮಾರ್ಗದಿಂದ, ಅರ್ಥಸಂಚಯಾನ್-ಧನಸಂಪಾದನಗಳನ್ನು ಕುರಿತು, ಈಹಂತೇ-ಪ್ರವರ್ತಿಸುತ್ತಾರೆ. ॥೧೨॥

ಶ್ಲೋ ॥ ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಂ ॥ ... ... ॥೧೨॥

ಪ ॥ ಇದಂ-ಅದ್ಯ-ಮಯಾ-ಲಬ್ಧಂ-ಇಮಂ-ಪ್ರಾಪ್ಸ್ಯೇ-ಮನೋರಥಂ ॥

(ಅ ॥ ರಾ ॥ ಭಾ) ಅದ್ಯ - ಈಗ, ಇದಂ-ಭೂಮಿಪಶು ಮೊದಲಾದ ಈ ವಸ್ತುವು, ಮಯಾ-ನನ್ನ ಸಾಮರ್ಥ್ಯದಿಂದಲೆ. ಲಬ್ಧಂ-ಹೊಂದಲ್ಪಟ್ಟಿತು. ಅದೃಷ್ಟದಿಂದ ಹೊಂದಲ್ಪಟ್ಟಿತೆಂಬುವುದು ದೊಡ್ಡಸುಳ್ಳು. ಇಮಂಮನೋರಥಂ- ಈ ಮನೋರಥವನ್ನೂ, ಪ್ರಾಪ್ಸ್ಯೇ-ನನ್ನ ಸಾಮರ್ಥ್ಯದಿಂದಲೇ ಹೊಂದುತ್ತೇನೆ ॥೧೨೪॥

ಶ್ಲೋ॥ಇದಮಸ್ತೀದಮಪಿಮೇಭವಿಷ್ಯತಿಪುನರ್ಧನಂ ॥೧೩॥

ಪ ॥ ಇದಂ - ಅಸ್ತಿ - ಇದಂ-ಅಪಿ-ಮೇ-ಭವಿಷ್ಯತಿ-ಪುನಃ-ಧನಂ ॥

(ಅ ॥ ರಾ ॥ ಭಾ ॥) ಇದಮಸ್ತಿ-ನನ್ನ ಸಾಮರ್ಥ್ಯದಿಂದಲೆ ಸಂಪಾದಿಸಲ್ಪಟ್ಟ ಈ ಧನವು ನನಗಿರುವುದು, ಇದಂಧನಮಪಿ-ಇನ್ನೂ

ಇದೂ ಈಧನವೂ, ಮೇನನಿಗೆ,ಪುನಃ-ತಿರಿಗಿಯೂ, ಭವಿಷ್ಯತಿ-ನನ್ನ ಸಾಮರ್ಥ್ಯದಿಂದಲೇ ಬರುತ್ತಲಿದೆ. ॥೧೩॥

ಶ್ಲೋ ॥ ಅಸೌಮಯಾಹತಶ್ಶತ್ರುರ್ಹನಿಷ್ಯೇಚಾಪರಾ
ನಪಿ॥ ... ... ॥೧೪॥

ಪ ॥ ಅಸೌ-ಮಯಾ-ಹತಃ-ಶತ್ರುಃ-ಹನಿಷ್ಯೇ-ಚ-ಅಪರಾನ್-ಅಪಿ ॥

(ಅ ॥ ರಾ ॥ ಭಾ) ಮಯಾ-ಮಹಾಬಲವಂತನಾದ ನನ್ನಿಂದ, ಅಸೌಶತ್ರುಃ-ಈ ಶತ್ರುವು ಕೊಲ್ಲಲ್ಪಟ್ಟನು ನೋಡು, ಅಪರಾನಪಿ - ಇತರ್ರು ಇವನಲ್ಲದೆ ಇರುವ ಶತ್ರುಜನಗಳನ್ನೂ, ಹನಿಷ್ಯೇ-ಮಹಾಶೂರನಾಗಿಯೂ ವೀರನಾಗಿಯೂ ಇರುವ ನಾನು ಸಂಹರಿಸುತ್ತೇನೆ. ಮಂದ ಬುದ್ಧಿಗಳಾದ ದುರ್ಬಲರಿಂದ ಕಲ್ಪಿತವಾದ ಅದೃಷ್ಟಪರಿಕರಸಾಮಗ್ರಿಗಳಿಂದ ಯೇನಾಗುವುದು. ॥೧೪॥

ಶ್ಲೋ॥ ಈಶ್ವರೋಽಹ ಮಹಂಭೋಗೀ ಸಿದ್ಧೋಽಹಂ ಬಲ
ವಾನ್ಸುಖೀ ॥ ... ... ॥೧೫॥

ಪ ॥ ಈಶ್ವರಃ-ಅಹಂ-ಹಂ-ಭೋಗೀ-ಸಿದ್ಧಃ-ಅಹಂ-ಬಲವಾನ್-ಸುಖೀ ॥

(ಅ ॥ ರಾ ॥ ಭಾ ) ಈಶ್ವರೋಽಹಂ-ಸ್ವಾಧೀನನಾಗಿಯೆಲ್ಲರನ್ನು ನಿಯಮಿಸುವಂತವನು ನಾನೊಬ್ಬನೆ, ಅಹಂಭೋಗೀ-ನನ್ನ ಶಕ್ತಿಯಿಂದಲೆ ನಾನು ಒಳ್ಳೇಭೋಗವುಳ್ಳವನಾಗಿರುವೆನು. ಸಿದ್ಧೋಽಹಂ-ಅದೃಷ್ಟವೂ ಇಲ್ಲವು ಯಾವದೂ ಇಲ್ಲವು ನಾನೇ ಒಳ್ಳೇಹೆಸರನ್ನು ಪಡವಿರುವೆನು, (ಸಿದ್ಧಃ-ಪುತ್ರಪೌತ್ರಾದಿ ಸಂಪನ್ನನು.) ಬಲವಾನ್ ಸುಖೀ-ನಾನೆ ಸ್ವಯವಾಗಿ ಒಳ್ಳೆ ಬಲಿಷ್ಠನಾದೆನು, ನಾನು ಸ್ವಯವಾಗಿಯೆ ಒಳ್ಳೇಸುಖವನ್ನು ಹೊಂದಿರುವೆನು. ॥೧೫॥

ಶ್ಲೋ ॥ ಆಢ್ಯೋಭಿಜನವಾನಸ್ಮಿಕೋನ್ಯೋಸ್ತಿಸದೃಶೋಮ
ಯಾ ॥ ... ... ॥೧೬॥

ಪ ॥ ಆಢ್ಯಃ-ಅಭಿಜನವಾನ್-ಅಸ್ಮಿ-ಕಃ-ಅನ್ಯಃ-ಅಸ್ತಿ-ಸದೃಶಃ-ಮಯಾ ॥

ಅ॥ ರಾ॥ ಭಾ॥ ಆಢ್ಯಃ-ನಾನು ಸ್ವಯಮೇವತಲೆ ಯೆತ್ತಿ ಧನಿಕನಾದೆನು, ಅಭಿಜನವಾನ್-ಉತ್ತಮ ಕುಲದಲ್ಲಿ ಹುಟ್ಟಿದವನಾಗಿ, (ಶಂ)

ಸಸ್ತಪುರುಷವಾಗಿ ಶಿಷ್ಟಾಚಾರವುಳ್ಳ ಕುಲದಲ್ಲಿ ಹುಟ್ಟಿದವನಾಗಿ, ಅಸ್ಮಿ-ಆಗಿರುವೆನು, ಮಯಾಸದೃಶಃಕೋನ್ಯಃ-ಈ ಲೋಕದಲ್ಲಿ ನನ್ನೊಡನೆ ಸಮಾನನಾದವನು ಯಾವನು ತಾನೆ ತಲೆಯೆತ್ತಿಕೊಂಡು ಇಷ್ಟು ವಿಭವವನ್ನು ಸಂಪಾದಿಸತಕ್ಕವನಿರುವನು. ... ||೧೪||

ಶ್ಲೋ|| ಯಕ್ಷ್ಯೇದಾಸ್ಯಾಮಿಮೋದಿಷ್ಯಇತ್ಯಜ್ಞಾನ ವಿಮೋ ಹಿತಾಃ || ... ... ||೧೫||

ಪ|| ಯಕ್ಷ್ಯೇ-ದಾಸ್ಯಾಮಿ-ಮೋದಿಷ್ಯೇ-ಇತಿ-ಅಜ್ಞಾನವಿಮೋಹಿತಾಃ ||

(ಅ|| ರಾ|| ಭಾ||) ಯಕ್ಷ್ಯೇ - ನನ್ನ ಸಾಮರ್ಥ್ಯದಿಂದಲೆಯಾಗವನ್ನು ಮಾಡುತ್ತೇನೆ. (ಶಂ) ನಾನು ಅಧಿಕವಾಗಿಯಾಗಗಳನ್ನು ಮಾಡಿ ನನ್ನಂತೆಯಾಗಗಳನ್ನು ಮಾಡದ ಅನ್ಯರನ್ನು ಅವಮಾನಪಡಿಸುವಂತೆ ಮಾಡುವೆನು,ದಾಸ್ಯಾಮಿ-ಯಾಚಕರಿಗೆ ಅಪೇಕ್ಷಿತ ಪೂರ್ತಿಯಾಗುವಂತೆ ಕೊಡುವೆನು, (ಶಂ|| ಶ್ರೀ) ನನ್ನನ್ನು ಕೊಂಡಾಡುವಂತಹವರಿಗೆ ಕೊಡುವೆನು. (ಶಂ) ನಾಟ್ಯವಾಡು ವಂತವರೆ ಮೊದಲಾದವರಿಗೆ ಕೊಡುವೆನು ಅನ್ನದಾನವಂ ಮಾಡುವೆನು. (ಗೀ||ವಿ) ಅನದಾನ್ನವಂ ಮಾಡುವೆನು, ಮೋದಿಷ್ಯೇ-ಸಂತೋಷಿಸುವೆನು.ಇತ್ಯಜ್ಞಾನವಿಮೋಹಿತಾಃ-ಈ ರೀತಿಯಾಗಿ ಅಜ್ಞಾನದಿಂದ ಮೋಹಗೊಂಡವರಾಗಿ,(ಮನ್ಯಂತೆ-ನೆನೆಸುತ್ತಾರೆ.||೧೫||

ಶ್ಲೋ || ಅನೇಕಚಿತ್ತ ವಿಭ್ರಾಂತಾಮೋಹಜಾಲ ಸಮಾವೃತಾಃ | ಪ್ರಸಕ್ತಾಃ ಕಾಮಭೋಗೇಷು ಪತಂತಿನರಕೇಽಶುಚೌ || ... ... ||೧೬||

ಪ || ಅನೇಕಚಿತ್ತವಿಭ್ರಾಂತಾಃ-ಮೋಹಜಾಲಸಮಾವೃತಾಃ | ಪ್ರಸಕ್ತಾಃ-ಕಾಮಭೋಗೇಷು-ಪತಂತಿ-ನರಕೆ-ಅಶುಚೌ ||

(ಅ ||ರಾ|| ಭಾ)ಅನೇಕಚಿತ್ತವಿಭ್ರಾಂತಾಃ- ಅದೃಷ್ಟೇಶ್ವರಾದಿ ಸಹ ಕಾರಿರಹಿತವಾಗಿಯೆ ನಾನೆ ಸಕಲಕಾರ್ಯವನ್ನು ಮಾಡಲು ಶಕ್ತಿಯುಳ್ಳವನೆಂಬದಾಗಿ ನೆನೆಸಿಕೊಂಡಿರುವಿಕೆಯಿಂದ ಇದನ್ನೂ ಮಾಡುವೆನು, ಅದನ್ನೂ ಮಾಡುವೆನು, ಯಾವದನ್ನೂ ಮಾಡುವೆನೆಂದು ಅನೇ

ಈ ಪ್ರಕಾರವಾದ ಚಿತ್ತಭ್ರಮೆಯುಳ್ಳವರಾಗಿಯೂ, ಮೋಹಜಾಲಸಮಾವೃತಾಃ-ಈ ಪ್ರಕಾರವಾದ ಅಜ್ಞಾನಪರಂಪರೆಯಿಂದ ಕೂಡಿರುವಂತವರಾಗಿಯೂ, ಕಾಮಭೋಗೇಷು ಪ್ರಸಕ್ತಾಃ- ಕಾಮಭೋಗಗಳಲ್ಲತ್ಯಂತಾಸಕ್ತರಾಗಿಯೂ, ಮಧ್ಯಮಕಾಲದಲ್ಲಿ ಮರಣವನ್ನು ಹೊಂದಿ ಅಶುಚೌನರಕೇಪತಂತಿ- ಅಶುದ್ಧವಾದ ನರಕದಲ್ಲಿ ಬೀಳುತ್ತಾರೆ. ||೧೬||

ಶ್ಲೋ|| ಆತ್ಮಸಂಭಾವಿತಾಸ್ತಬ್ಧಾ ಧನಮಾನಮದಾನ್ವಿತಾಃ | ಯಜಂತೇನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಂ || ... ... ||೧೭||

ಪ|| ಆತ್ಮಸಂಭಾವಿತಾಃ-ಸ್ತಬ್ಧಾಃ-ಧನಮಾನಮದಾನ್ವಿತಾಃ-ಯಜಂತೇ-ನಾಮಯಜ್ಞೈಃ-ತೇ-ದಂಭೇನ-ಅವಿಧಿಪೂರ್ವಕಂ ||

(ಅ|| ರಾ|| ಭಾ) ಆತ್ಮಸಂಭಾವಿತಾಃ-ತಮ್ಮಗಳಿಂದಲೇ ಸ್ತುತಿಸಲ್ಪಟ್ಟವರಾಗಿಯೂ. (ತಾವೇ ತಮ್ಮಗಳನ್ನು ಸ್ತುತಿಸುವಂತವರಾಗಿಯೂ ಎಂದರ್ಥವು) ಸ್ತಬ್ಧಾಃ-ತಮ್ಮಗಳನ್ನು ಯಾವದರಿಂದಲೂ ಕೊರತೆಯಿಲ್ಲದ ಪೂರ್ಣರೆಂಬದಾಗಿ ತಿಳಿದು ಯಾವ ಕಾರ್ಯವನ್ನೂ ಮಾಡದೆ ಇರುವಂತವರಾಗಿಯೂ, ಧನಮಾನಮದಾನ್ವಿತಾಃ - ಧನದಿಂದಲೂ ವಿದ್ಯಾಭಿಜನ ಧರ್ಮದಿಂದಲೂ ಉಂಟಾದ ಗರ್ವದೊಡನೆ ಸೇರಿದವರಾಗಿಯೂ ಇರುವ, ತೇ-ಆ ಆಸುರಪ್ರಕೃತಿಗಳು, ನಾಮಯಜ್ಞೈಃ- ದೀಕ್ಷಿತರೆಂಬ ನಾಮಮಾತ್ರವನ್ನೇ ಪ್ರಯೋಜನವಾಗಿ ವುಳ್ಳ ಯಜ್ಞಗಳಿಂದ, ದಂಭೇನ-ಧಾರ್ಮಿಕನೆಂಬ ಖ್ಯಾತಿಯನ್ನು ಸಂಪಾದಿಸಬೇಕೆಂಬ ಅಪೇಕ್ಷೆಯಿಂದ, ಅವಿಧಿಪೂರ್ವಕಂ-ವಿಧಿಯನ್ನನುಸರಿಸದ ಪ್ರಕಾರವಾಗಿ, ಯಜಂತೇ-ಯಾಗವನ್ನು ಮಾಡುತ್ತಾರೆ. ... ||೧೭||

ಶ್ಲೋ|| ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ | ಮಾಮಾತ್ಮಪರದೇಹೇಷು ಪ್ರದ್ವಿಷಂತೋಭ್ಯಸೂಯಕಾಃ || ... ||೧೮||

ಪ|| ಅಹಂಕಾರಂ-ಬಲಂ-ದರ್ಪಂ-ಕಾಮಂ-ಕ್ರೋಧಂ-ಚ-ಸಂಶ್ರಿತಾಃ-ಮಾಂ-ಆತ್ಮಪರದೇಹೇಷು-ಪ್ರದ್ವಿಷಂತಃ-ಅಭ್ಯಸೂಯಕಾಃ ||

( ಆ॥ ರಾ॥ ಭಾ ) ಆ ಅಸುರಪ್ರಕೃತಿಗಳು ಇಂತವರಾಗಿಯಾಗ ಮಾಡುತ್ತಾರೆನ್ನುತ್ತಾರೆ. ಅಹಂಕಾರಂ-ಈಶ್ವರಾದ್ಯನಪೇಕ್ಷನಾಗಿ ನಾನೇ ಸಕಲವನ್ನು ಮಾಡುವೆನೆಂಬ ಅಹಂಕಾರವನ್ನೂ, ಬಲಂ-ನನ್ನ ಬಲವೇ ಸಮಸ್ತ ಕಾರ್ಯಗಳನ್ನು ಮಾಡುವುದಕ್ಕೆ ಸಾಕಾಗಿರುವುದೆಂಬ ಬಲವನ್ನೂ, ದರ್ಪಂ-ಆದುದರಿಂದ ನನಿಗೆ ಸಮನಾದವನು ಈ ಲೋಕ ದಲ್ಲಿ ಯಾವನಿರುತ್ತಾನೆಂಬ ದರ್ಪವನ್ನೂ, ಕಾಮಂ-ಈ ಪ್ರಕಾರವಾಗಿ ರುವ ನನ್ನ ಇಚ್ಛಾಮಾತ್ರದಿಂದಲೆ ಸಕಲವೂ ಉಂಟಾಗುವುದೆಂಬ ಕಾಮವನ್ನೂ, ಕ್ರೋಧಂ-ನನಿಗೆ ಯಾರು ಅನಿಷ್ಟವನ್ನುಮಾಡುತ್ತಾ ರೆಯೋ ಅವರನ್ನು ಸಮೂಲವಾಗಿ ನಾನೆ ಕೊಲ್ಲುವೆನೆಂಬ ಕೋಪವ ನ್ನೂ, ಸಂಶ್ರಿತಾಃ-ಆಶ್ರಯಿಸಿದವರಾಗಿ, ಆತ್ಮಪರದೇಹೇಷು-ತನ್ನ ಶ ರೀರದಲ್ಲಿಯೂ ಅನ್ಯರ ಶರೀರಗಳಲ್ಲಿಯೂ, (ಸ್ಥಿತಂ-ಇದ್ದುಕೊಂಡು ಸರ್ವ ಕಾರ್ಯಗಳನ್ನು ಮಾಡಿಸುತಲಿರುವ ಪುರುಷೋತ್ತಮ ನಾದ ನನ್ನನ್ನು,)ಅಭ್ಯಸೂಯಕಾಃ-ಕುಯುಕ್ತಿಗಳಾದ ನನ್ನ ಸ್ಥಿತಿ ವಿಷಯ ದಲ್ಲಿ ದೋಷವನ್ನು ಪ್ರಕಾಶಪಡಿಸುವಂತವರಾಗಿಯೂ, ಪ್ರದ್ವಿಷಂತಃ-ನನ್ನಸ್ಥಿತಿಯನ್ನುಸಹಿಸದವರಾಗಿಯೂ, ಯಜಂತೆ-ಇಂತವರಾಗಿಯಾ ಗಮಾಡುತ್ತಾರೆಂಬದಾಗಿ ಪೂರ್ವಶ್ಲೋಕದೊಡನೆ ಅನ್ವಯವು. ॥೧೮॥

ಶ್ಲೋ॥ ತಾನಹಂದ್ವಿಷತಃಕ್ರೂರಾನ್ಸಂಸಾರೇಷುನ
ರಾಧಮಾನ್ । ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ
ಯೋನಿಷು॥ ... ... ॥೧೯॥

ಪ॥ ತಾನ್-ಅಹಂ-ದ್ವಿಷತಃ-ಕ್ರೂರಾನ್-ಸಂಸಾರೇಷು-ನರಾಧಮಾನ್ । ಕ್ಷಿಪಾಮಿ-ಅ ಜಸ್ರಂ-ಅಶುಭಾನ್-ಆಸುರೀಷ್ವೇವ-ಯೋನಿಷು ॥

(ಅ॥ ರಾ॥ಭಾ॥ ) ದ್ವಿಷತಃ-ನಮ್ಮ ಸ್ಥಿತಿಯನ್ನು ಸಹಿಸದಿರುವ, ತಾನ್ ಕ್ರೂರಾನ್-ಅಂತಹಹಿಂಸಕರಾದ, ಅಶುಭಾನ್-ಕೃತಾರ್ಥರಾಗಲು ಕಾರಣವಾದ ಸದ್ವ್ಯಾಪಾರವು ಯಾವದೂ ಇಲ್ಲದ, ನರಾಧಮಾನ್-ಪಾಪಿಷ್ಠ ಮನುಷ್ಯರನ್ನು, ಸಂಸಾರೇಷು-ಜನನ ಮರಣಾದಿ ಚಕ್ರ ಪರಿವೃತ್ತಿಯಲ್ಲಿ, (ಅದರಲ್ಲಿಯೂ) ಆಸುರೀಷುಯೋನಿಷ್ವೇವ-ನನ್ನ ಆ

ನುಕೊಳ್ಳುವ ಯೆಂದಿಗೂ ತಟಸ್ಥವಾಗದ ಪಾಪಿಷ್ಠಯೋನಿಗಳ ಲ್ಲಿಯೆ, ಅಜಸ್ರಂ-ಯಾವಾಗಲೂ, ಅಹಂ-ನಾನು, ಕ್ಷಿಪಾಮಿ- ತಳ್ಳು ವೆನು. ... ... ... ॥೧೯॥

(ಶಂ॥) ಸ್ತಬ್ಧಾಃ-ನಮ್ರತೆಯಿಲ್ಲದವರಾಗಿಯೂ, ಧನಮಾನ ಮದಾನ್ವಿತಾಃ-ಧನ ನಿಮಿತ್ತವಾದ ಮಾನಮದಗಳಿಂದ ಕೂಡಿದವ ರಾಗಿಯೂ, ದರ್ಪಂ-ದರ್ಪವೆಂದರೆ ? ಅಂತಃಕರಣಾಶ್ರಯವಾದ ಧ ರ್ಮಾತಿಕ್ರಮಕ್ಕೆ ಕಾರಣವಾಗಿರುವ ದೋಷ ವಿಶೇಷವು, ಆತ್ಮಪರ ದೇಹೇಷುಮಾಂಪ್ರದ್ವಿಷಂತಃ-(ಶಂ) ತಮ್ಮ(ನನ್ನನ್ನು ದ್ವೇಷಿಸುವರ) ಆತ್ಮವೂ ಅನ್ಯರ ಆತ್ಮವೂ ಚಿತ್ಸ್ವರೂಪನಾದ ನಾನೇ ಆಗಿರುವುದ ರಿಂದ ತಮ್ಮಗಳನ್ನು ದ್ವೇಷಿಸಿದರೂ ಅನ್ಯರನ್ನು ದ್ವೇಷಿಸಿದರೂ ನನ್ನ ನ್ನು ದ್ವೇಷಿಸಿದವರಂತೆ ಆಗುತ್ತಾರೆ. ಕಿಂಚ ವೇದೋಕ್ತವಾದ ಯ ಜ್ಞದಲ್ಲಿ ಅವರುಮಾಡುವ ಪಶುಹಿಂಸೆಯೂ ದೋಷವೆ,ಆಹಿಂಸೆಯು ಪ ಶುರೂಪಿಯಾದ ನನ್ನನ್ನು ಹಿಂಸಿಸಿದಂತೆ ಆಗುವುದು. ಆದುದರಿಂದ ಅವನು ದ್ವೇಷಿಯಾಗುತ್ತಾನೆ. ಪ್ರದ್ವಿಷಂತಃ-(ಶಂ) ನನ್ನ ಆಜ್ಞಾ ತಿಲಂಘನ ಮಾಡುವುದರಿಂದ ದ್ವೇಷಿಗಳಾಗುತ್ತಾರೆ. (ಗೀ॥ ವಿ) ಪರಮಾತ್ಮನೊಬ್ಬನಿರುವುದೂ ಅವರು ನಿಯಾಮಕರೆಂಬುವುದೂ ನಿ ಶ್ಚಯವಾಗಿದ್ದ ಪಕ್ಷದಲ್ಲಿ ನಾನು ಮಾಡುವ ಈ ಕಾರ್ಯವನ್ನು ತಡೆ ಮಾಡಲಿ, ನೋಡೋಣ ಎಂಬದಾಗಿ ಹೇಳುವುದು ತಾನೆ ದ್ವೇಷವು, ಅಭ್ಯಸೂಯಕಾಃ- (ಶ್ರೀ) ಸನ್ಮಾರ್ಗವರ್ತಿಗಳಾದ ಮಹನೀಯರಲ್ಲಿ ದೋಷವನ್ನು ಹೇಳುವಂತವರು. (ಗೀ॥ ವಿ) ಪರಮಾತ್ಮನೇ ಇಲ್ಲ ವೆಂಬದಾಗಿ ವಾದಿಸುವ ವಾದವೆಂಬ ಆಸೂಯಾಯುಕ್ತರು. (ರಾ॥ಶಂ॥) ಅಸೂಯಾ ಯುಕ್ತರು. ದಂಭೇನ-ತಾನು ಯೆಲ್ಲರಿಗಿಂತಲೂ ಶ್ರೇ ಷ್ಠನೆಂಬದಾಗಿ ಕಾಣಿಸುವುದರಿಂದ,ಅಸುರೀಷ್ವೇವಯೋನಿಷು- (ಶ್ರೀ- ಶಂ) ಕ್ರೂರಗಳಾದ ಹುಲಿ ಮೊದಲಾದ ಜನ್ಮಗಳಲ್ಲಿ. ॥೧೭॥೧೮॥೧೯॥

ಶ್ಲೋ ॥ ಅಸುರೀಂಯೋನಿಮಾಪನ್ನಾಮೂಢಾಜನ್ಮನಿ

ಜನ್ಮನಿ | ಮಾಮಪ್ರಾಪ್ಯೈವಕೌಂತೇಯತತೋಯಾಂ
ತ್ಯಧಮಾಂಗತಿಂ॥ ...... ॥೨೦॥

ಪ ॥ ಆಸುರೀಂ-ಯೋನಿಂ-ಆಪನ್ನಾಃ-ಮೂಢಾಃ-ಜನ್ಮನಿ-ಜನ್ಮನಿ | ಮಾಂ-ಅ
ಪ್ರಾಪ್ಯ-ಏವ-ಕೌಂತೇಯ-ತತಃ-ಯಾಂತಿ-ಅಧಮಾಂ-ಗತಿಂ॥

(ಅ॥ ರಾ॥ ಭಾ) ಹೇ ಕೌಂತೇಯ-ಎಲೈ ಕುಂತೀ ಪುತ್ರನಾದ ಅರ್ಜುನನೇ? ಆಸುರೀಂಯೋನಿಮಾಪನ್ನಾಃ- ನನ್ನ ಆನುಕೂಲ್ಯವುಳ್ಳ ದಿಗೂ ತಟಸ್ಥವಾಗದ ಜನ್ಮವನ್ನು ಹೊಂದಿದವರಾಗಿಯೂ, ಜನ್ಮನಿಜನ್ಮನಿಮೂಢಾಃ - ಮೇಲ್ ಮೇಲೆ ಒರುವ ಪ್ರತಿಜನ್ಮದಲ್ಲಿಯೂ ವಿಪರೀತ ಜ್ಞಾನವುಳ್ಳವರಾಗಿಯೂ, ಮಾಮಪ್ರಾಪ್ಯೈವ-ಸರ್ವೇಶ್ವರನಾದ ಭಗವದ್ವಾಸುದೇವನಿರುವನೆಂಬ ಜ್ಞಾನವನ್ನು ಹೊಂದದೇನೆ, ತತಃ-ಆಯಾ ಜನ್ಮಗಳ ಮಾರ್ಗವಾಗಿಯೆ, ಅಧಮಾಂಗತಿಂಯಾಂತಿ- ಅಧೋಗತಿಯನ್ನು ಹೊಂದುತ್ತಾರೆ. ... ... ॥೨೦॥

(ಶ್ರೀ) ಅಧಮಾಂಗತಿಂ-ಕ್ರಿಮಿಕೀಟಾದಿ ಜನ್ಮಗಳನ್ನು. (ಶಂ) ನಿಕೃಷ್ಟವಾದ ಜನ್ಮಗಳನ್ನು (ಗೀ॥ ವಿ) ನಿತ್ಯನರಕವನ್ನು. ॥೨೦॥

ಶ್ಲೋ॥ ತ್ರಿವಿಧಂನರಕಸ್ಯೇದಂದ್ವಾರಂನಾಶನಮಾತ್ಮ
ನಃ | ಕಾಮಃಕ್ರೋಧಸ್ತಥಾಲೋಭಸ್ತಸ್ಮಾದೇತತ್ತ್ರ
ಯಂತ್ಯಜ ॥ ... ... ॥೨೧॥

ಪ ॥ ತ್ರಿವಿಧಂ-ನರಕಸ್ಯ-ಏತತ್-ದ್ವಾರಂ-ನಾಶನಂ-ಆತ್ಮನಃ- | ಕಾಮಃ-
ಕ್ರೋಧಃ-ತಥಾ-ಲೋಭಃ-ತಸ್ಮಾತ್-ಏತತ್-ತ್ರಯಂ-ತ್ಯಜ॥

(ಅ॥ ರಾ॥ ಭಾ) ಇಂಥಾ ಅಸುರ ಸ್ವಭಾವಕ್ಕೆ ಮೂಲಕಾರಣವನ್ನು ಹೇಳುತ್ತಾರೆ. ಕಾಮಃ-ಶಬ್ದಾದಿ ವಿಷಯಗಳಲ್ಲಿರುವ ಅಪೇಕ್ಷೆಯು, ಕ್ರೋಧಃ-ಅನ್ಯರನ್ನು ಪೀಡಿಸುವಂತೆ ಮಾಡುವ ಮನೋವಿಕಾರವು, ತಥಾ-ಆ ಪ್ರಕಾರವೇ, ಲೋಭಃ-ತನ್ನ ಸ್ವತ್ತನ್ನು ಯಾವ ಸಮಯಗಳಲ್ಲಿಯೂ ಕೊಡಕೂಡದೆಂಬ ಲೋಭವು, (ಇತಿ ಈ ಪ್ರಕಾರವಾಗಿ) ನರಕಸ್ಯ-ಆಸುರ ಸ್ವಭಾವವೆಂಬ ನರಕಕ್ಕೆ, ಏತತ್ತ್ರಿವಿಧಂದ್ವಾರಂ- ಈ ಮೂರು ವಿಧವಾಗಿರುವುದು ಮಾರ್ಗವು. ಅದಕ್ಕೆ

ಕಾರಣವಾಗಿರುವುದೆಂದರ್ಥವು. ಆತ್ಮನೋನಾಶನಂ-ಆತ್ಮ ನಾಶಕರ ವಾಗಿರುವುದು. ತಸ್ಮಾತ್- ಆದಕಾರಣದಿಂದ, ಏತತ್ತ್ರಯಂ-ಈ ಮೂರನ್ನು, ತ್ಯಜ-ಬಿಟ್ಟುಬಿಡು. ... ... ॥೨೧॥

(ಶಂ) ಆತ್ಮನೋನಾಶನಂ-ಯಾವ ಪುರುಷಾರ್ಥಕ್ಕೂ ಯೋಗ್ಯವಾಗದಂತೆ ತನ್ನಾತ್ಮವನ್ನು ಕೆಡಿಸುವಂತಾದ್ದಾಗಿಯೂ (ಗೀ॥ ವಿ) ಅನರ್ಥವನ್ನುಂಟುಮಾಡುವುದಾಗಿಯೂ ಇರುವುದು. ॥೨೧॥

(ಶ್ರೀ॥ ಗೀ॥ ವಿ) ಅಸುರ ಸ್ವಭಾವಗಳಲ್ಲಿ ಸೇರಿದ ಅನೇಕ ದೋಷಗಳಲ್ಲಿ ಮುಖ್ಯಗಳಾದ ಈ ಮೂರು ದೋಷಗಳು ಆತ್ಮನಾಶಕ್ಕೆ ಕಾರಣವಾಗಿರುವುದರಿಂದ ಅವುಗಳನ್ನವಶ್ಯನಾಗಿ ಪರಿಹರಿಸಬೇಕೆಂಬದಾಗಿ ಇದರಿಂದ ಬೋಧಿತವಾಯಿತು. ... ॥೨೧॥

ಶ್ಲೋ ॥ ಏತೈರ್ವಿಮುಕ್ತಃಕೌಂತೇಯತಮೋದ್ವಾರೈಸ್ತ್ರಿಭಿರ್ನರಃ। ಆಚರತ್ಯಾತ್ಮನಶ್ಶ್ರೇಯಸ್ತತೋಯಾತಿಪರಾಂ ಗತಿಂ॥ ... ... .. ॥೨೨॥

ಪ ॥ ಏತೈಃ-ವಿಮುಕ್ತಃ-ಕೌಂತೇಯ-ತಮೋದ್ವಾರೈಃ-ತ್ರಿಭಿಃ-ನರಃ-ಆಚರತಿ-ಆತ್ಮನಃ-ಶ್ರೇಯಃ-ತತಃ-ಯಾಂತಿ-ಪರಾಂ-ಗತಿಂ॥

(ಅ॥ ರಾ॥ ಭಾ) ಹೇ ಕೌಂತೇಯ-ಎಲೈ ಅರ್ಜುನನೆ ! ಏತೈಃ-ಈ ಕಾಮ ಕ್ರೋಧ ಲೋಭಗಳೆಂಬ, ತ್ರಿಭಿಃ-ಮೂರಾಗಿರುವ, ತಮೋದ್ವಾರೈಃ-ವಿಪರೀತ ಜ್ಞಾನಹೇತುಗಳಿಂದ, ವಿಮುಕ್ತಃ-ಬಿಡಲ್ಪಟ್ಟಿರುವ, ನರಃ-ಮನುಷ್ಯನು, ಆತ್ಮನಶ್ಶ್ರೇಯಆಚರತಿ-ನನ್ನ ವಿಷಯಕವಾದ ಜ್ಞಾನವನ್ನು ಹೊಂದಿ (ನನ್ನನ್ನು ತಿಳಿದು) ನನ್ನ ಆನುಕೂಲ್ಯದಲ್ಲಿ ಪ್ರಯತ್ನಿಸುತ್ತಾನೆ. (ಗೀ॥ ವಿ) ಪುರುಷಾರ್ಥ ಸಾಧನವನ್ನು ಅನುಷ್ಠಿಸುತ್ತಾನೆ. ತತಃ-ಆ ಪ್ರಯತ್ನದಿಂದ, ಪರಾಂಗತಿಂಯಾತಿ-ಪರಮಗತಿಯಾದ ನನ್ನನ್ನೆ ಹೊಂದುತ್ತಾನೆ. (ಶಂ) ಮೋಕ್ಷವನ್ನು ಹೊಂದುತ್ತಾನೆ. ... ... ॥೨೨॥

ಶ್ಲೋ॥ ಯಶ್ಶಾಸ್ತ್ರವಿಧಿಮುತ್ಸೃಜ್ಯವರ್ತತೆ ಕಾಮಕಾರತಃ। ನಸಸಿದ್ಧಿಮವಾಪ್ನೋತಿನಸುಖಂನಪರಾಂಗತಿಂ॥೨೩॥

ಪ || ಯಃ-ಶಾಸ್ತ್ರವಿಧಿಂ-ಉತ್ಸೃಜ್ಯ-ವರ್ತತೇ-ಕಾಮಕಾರತಃ-ನ-ಸಃ-ಸಿದ್ಧಿಂ-ಅ ವಾಪ್ನೋತಿ-ನ-ಸುಖಂ-ನ-ಪರಾಂ-ಗತಿಂ ||

(ಅ|| ರಾ|| ಭಾ)ಇಂಥಾನರಕಪಾತಕ್ಕೆ ಶಾಸ್ತ್ರವನ್ನು ಅನಾದರಿಸುವಿಕೆಯು ಪ್ರಧಾನಕಾರಣವೆನ್ನುತ್ತಾರೆ. ಯಃ-ಯಾವನಾದರೆ, ಶಾಸ್ತ್ರವಿಧಿಂ-ವೇದವೆಂಬ ನನ್ನ ಶಾಸನವನ್ನು, ಉತ್ಸೃಜ್ಯ-ಬಿಟ್ಟುಬಿಟ್ಟು, ಕಾಮಕಾರತಃ-ತನ್ನ ಇಚ್ಛಾನುಗುಣವಾದ ಮಾರ್ಗದಿಂದ, ವರ್ತತೇ-ಇರುತ್ತಾನೆಯೋ, ಸಃ-ಅವನು, ಸಿದ್ಧಿಂನಾವಾಪ್ನೋತಿ-ಆಮುಷ್ಮಿಕವಾದ ಯಾವ ಸ್ಥಿತಿಯನ್ನೂ ಹೊಂದಲಾರನು. ಸುಖಂನಾವಾಪ್ನೋತಿ-ಇಹಲೋಕ ಸುಖವನ್ನೂ ಹೊಂದಲಾರನು, ಪರಾಂಗತಿಂ ನಾವಾಪ್ನೋತಿ-ಉತ್ತಮಗತಿಯಾದಮೋಕ್ಷವನ್ನೂ ಹೊಂದುವದಿಲ್ಲವು, ಇಹಲೋಕ ಪರಲೋಕ ಸುಖಗಳೇ ಇಲ್ಲದ ಮೇಲೆ ಮೋಕ್ಷವನ್ನು ಹೇಗೆತಾನೇ ಹೊಂದುತ್ತಾನೆಂದು ಭಾವವು. ... ||೨೩||

(ಶಂ) ಶಾಸ್ತ್ರವಿಧಿಂ-ಶಾಸ್ತ್ರೋಕ್ತವಾದ (ವೇದಗಳಲ್ಲಿ ಹೇಳಿರುವ) ವಿಧಿನಿಷೇಧಗಳನ್ನು, ಪರಾಂಗತಿಂ-ಸ್ವರ್ಗವನ್ನಾದರೂ ಮೋಕ್ಷವನ್ನಾದರೂ ಸಿದ್ಧಿಂ-ಪುರುಷಾರ್ಥಾಪೇಕ್ಷಿತವಾದ ಯೋಗ್ಯತೆಯನ್ನು, (ಗೀ|| ವಿ) ಪುರುಷಾರ್ಥಕ್ಕೆ ಅಪೇಕ್ಷಿತಗಳಾದ ಸಾಧನಗಳನ್ನೂ ||೨೩||

ಶ್ಲೋ|| ತಸ್ಮಾಚ್ಛಾಸ್ತ್ರಂಪ್ರಮಾಣಂತೇಕಾರ್ಯಾಕಾರ್ಯ
ವ್ಯವಸ್ಥಿತೌ| ಜ್ಞಾತ್ವಾಶಾಸ್ತ್ರವಿಧಾನೋಕ್ತಂಕರ್ಮಕರ್ತು
ಮಿಹಾರ್ಹಸಿ || ... ... ||೨೪||

ಪ|| ತಸ್ಮಾತ್-ಶಾಸ್ತ್ರಂ-ಪ್ರಮಾಣಂ-ತೇ-ಕಾರ್ಯಾಕಾರ್ಯವ್ಯವಸ್ಥಿತೌ | ಜ್ಞಾತ್ವಾ-ಶಾಸ್ತ್ರವಿಧಾನೋಕ್ತಂ-ಕರ್ಮ-ಕರ್ತುಂ-ಇಹ-ಅರ್ಹಸಿ ||

(ಅ|| ರಾ|| ಭಾ) ತಸ್ಮಾತ್-ಶಾಸ್ತ್ರವನ್ನು ಬಿಟ್ಟರೆ ಯಾವಗತಿಯು ಇಲ್ಲವಾದುದರಿಂದಲೆ,ನಿನಗೆ, ಕಾರ್ಯಾಕಾರ್ಯವ್ಯವಸ್ಥಿತೌ-ಮಾಡತಕ್ಕದ್ದು ಮಾಡದೆ ಬಿಡತಕ್ಕದ್ದೆಂಬೀನಿಶ್ಚಯದಲ್ಲಿ, ಶಾಸ್ತ್ರವೆ,ವೇದವೇ; ಪ್ರಮಾಣಂ-ಯಥಾರ್ಥವಾದ ಜ್ಞಾನವನ್ನುಂಟುಮಾಡುವುದು. ಶಾಸ್ತ್ರವಿಧಾನೋಕ್ತಂಕರ್ಮಜ್ಞಾತ್ವಾ-ಧರ್ಮಶಾಸ್ತ್ರೇತಿಹಾಸಪುರಾಣಾದಿಗಳಿಂದ

ಉಪಬ್ರುಂಹಿತಗಳಾದ ವೇದಗಳು ಯಾವ ಪುರುಷೋತ್ತಮನೆಂಬ ಪರ ತತ್ವವನ್ನೂ ಆ ಪರಮ ಪುರುಷನ ಪ್ರೀತಿ ಹೇತುವಾಗಿ ಅವನ ಪ್ರಾಪ್ತಿಗೆ ಉಪಾಯ ಭೂತವಾಗಿಯೂ ಇರುವ ಕರ್ಮವನ್ನೂ ಬೋಧಿಸು ವುವೊ ಆ ಶಾಸ್ತ್ರವಿಧಿಯಿಂದ ಹೇಳಲ್ಪಟ್ಟ ಕರ್ಮವನ್ನು ಅನ್ಯೂನಾತಿ ರಿಕ್ತವಾಗಿ (ಕೊರತೆ ಇಲ್ಲದೆಯೂ ಅಧಿಕವಿಲ್ಲದೆಯೂ ಇರುವ ರೀತಿ ಯಿಂದ) ತಿಳಿದು, ಇಹ-ಈ ಕರ್ಮಲೋಕದಲ್ಲಿ, ಕರ್ತುಮರ್ಹಸಿ- ಮಾಡ ಲಿಕ್ಕೆ ಯೋಗನಾಗಿರುತ್ತೀ, ಅದನ್ನೇ ನೀನು ಅನುಷ್ಠಿಸಬೇಕೆಂ ದರ್ಥವು. ... ... ... ||೨೪||

(ಶಂ|| ಭಾ||) ವೇದಪ್ರಮಾಣಾನುಸಾರಿ ಯಾಗದ ಕರ್ಮವು ನಿಷ್ಫಲವಾದುದರಿಂದ ವಿವೇಕಿಯಾದ ಆಸ್ತಿಕನು ಧರ್ಮಾಧರ್ಮನಿರ್ಧಾರ ಕವಾದ ವೇದವೆ ಪುರುಷಾರ್ಥ ಸಾಧನವಾದ ತತ್ವಜ್ಞಾನವನ್ನುಂಟು ಮಾಡುವುದೆಂದು ತಿಳಿದು ಕ್ರಮವಾಗಿ ಕೃತಾರ್ಥನಾಗುವನು. ಆದು ದರಿಂದ ಇದು ಮಾಡತಕ್ಕದ್ದು, ಇದು ಮಾಡತಕ್ಕದ್ದಲ್ಲವೆಂಬೀ ವಿವೇಕ ಬೋಧಕವಾದ ವೇದಾಭಿಪ್ರಾಯವನ್ನು ಚೆನ್ನಾಗಿ ತಿಳಿದು ಕ್ಷತ್ರಿಯ ನಾದ ನೀನು ನಿನ್ನ ವರ್ಣಾಶ್ರಮಾನುಗುಣವಾದ ಯುದ್ಧಾದಿ ಕರ್ಮ ವನ್ನು ಮಾಡಬೇಕು- (ಈ ಪ್ರಕಾರವಾಗಿ ಮಾಡಿದರೆ ನಿನಿಗೆ ಚಿತ್ತಶು ದ್ಧಿಯೂ ತದ್ವಾರಾಜ್ಞಾನವೂ, ಅನಂತರದಲ್ಲಿ ಮುಕ್ತಿಯೂ ಉಂಟಾ ಗುವುದು. ... ... ... ||೨೪||

(ಆ|| ಗೀ||) ಈ ಅಧ್ಯಾಯದಿಂದ ಪೂರ್ವಜನ್ಮ ಸಂಬಂಧವಾದ ಕರ್ಮವಾಸನೆಗಳನ್ನು ಅನುಸರಿಸಿ ಯುಂಟಾಗುವ ಸಾತ್ವಿಕಾದಿ ಪ್ರಕೃತಿ ತ್ರಯವನ್ನು ವಿಭಾಗಿಸಿ ದೈವಸಂಪತ್ತು ಪರಿಗ್ರಾಹ್ಯವೆಂತಲೂ ಆಸುರ ಸಂಪತ್ತು ಪರಿತ್ಯಾಜ್ಯವೆಂತಲೂ ಉಪದೇಶಿಸಿ ಪುರುಷಾರ್ಥಾಪೇಕ್ಷೆ ಯುಳ್ಳವರು ಕಾಮಕ್ರೋಧ ಲೋಭಗಳನ್ನು ಬಿಟ್ಟು ವೇದಾರ್ಥಗಳನ್ನು ಸದ್ಗುರುಗಳ ಮೂಲಕವಾಗಿ ತಿಳಿದು ಆ ಪ್ರಕಾರವಾಗಿ ಆಚರಿಸಿದ ಪಕ್ಷ ದಲ್ಲಿ ಇಹದಲ್ಲಿ ಸಕಲ ಸುಖಗಳನ್ನನುಭವಿಸಿ ಕಡೆಯಲ್ಲಿ ಮೋಕ್ಷವನ್ನೂ ಹೊಂದುವನೆಂಬದಾಗಿ ಬೋಧಿತವಾಯಿತು. ... ||೨೪||

## ಅದ್ವೈತ ಸಿದ್ಧಾಂತಾನುಸಾರಿಯಾದ ಅಧ್ಯಾಯ ಸಂಗ್ರಹ ಶ್ಲೋಕವು.

ಮೂ॥ ದೈವೀಸಂಪದ್ವಿಮುಕ್ತ್ಯೈಶಮ ದಮಸಮತಾ ಕ್ಷಾಂತಿವೈರಾಗ್ಯರೂಪಾ ಕಾಮಕ್ರೋಧಾಭಿಮಾನಾನೃತಕ ಪಟಮಯಿಚಾಸುರೀಬಂಧಹೇತುಃ । ಉತ್ಪತ್ತಿರ್ದೇವ ಸಮ್ಪದ್ಯನುಜನುರುದಿತಾಮಾಮಕಾನಾಂಜನಾನಾಂತ್ವಂ ಮಾಭೈಷೀಃ ಕಿರೀಟಿನ್ನಿತಿಮಧುರಿಪುಣಾಷೋಡಶೇಪ್ರೋ ಕ್ತಮಾಸೀತ್ ॥ ... ... ॥೧೬॥

ತಾ॥ಅಂತರಿಂದ್ರಿಯ ನಿಗ್ರಹವು ಬಹಿರಿಂದ್ರಿಯ ನಿಗ್ರಹವು,ಸರ್ವಸಮತ್ವವೆ ಮೊದಲಾದ,ಈ ಸದ್ಗುಣಗಳನ್ನೇ ಸ್ವರೂಪವಾಗಿ ಉಳ್ಳದೈವ ಸಂಪತ್ತು ಮೋಕ್ಷ ಸಾಧನವಾಗಿರುವುದು. ನೋಡಿದ ಸರ್ವವಸ್ತುಗಳಲ್ಲಿಯೂ ಅಪೇಕ್ಷೆಯು ಅದು ದೊರಿಯದೇ ಹೋದರೆ ಕೋಪವೂ ಇದು ನನ್ನದೆಂಬ ದುರಭಿಮಾನವೂ ಅಸತ್ಯ ಮಾತುಗಳನ್ನಾಡುವಿಕೆಯೂ, ಕೃತ್ರಿಮ ಸ್ವಭಾವವುಳ್ಳವನಾಗಿರುವಿಕೆಯೂ ಈ ದುರ್ಗುಣಗಳನ್ನೇ ಸ್ವರೂಪವಾಗಿ ವುಳ್ಳ ಆ ಸುರ ಸಂಪತ್ತು ಸಂಸಾರ ಪ್ರಾಪ್ತಿಗೆ ಸಾಧನ ವಾಗಿರುವುದು. ಆದರೂ ನನ್ನಲ್ಲಿ ಭಕ್ತಿಯುಳ್ಳ ಜನರು ಪ್ರಾರಬ್ಧ ಲೇಶಾನು ಭವಕ್ಕೋಸ್ಕರವಾಗಿ ಜನ್ಮಗಳನ್ನು ಹೊಂದುತಿದ್ದರೂ ಅಂಥಾ ಪ್ರತಿ ಜನ್ಮದಲ್ಲಿಯೂ ದೇವ ಸಂಪತ್ತಿಗೆ ಯೋಗ್ಯರಾಗಿರುವಂತೆಯೇ ಹುಟ್ಟುವರು. ಆದುದರಿಂದ ಎಲೈಅರ್ಜುನನೇ ನನ್ನ ಆಜ್ಞಾರೂಪವಾದ ವೇದವನ್ನು ನಂಬಿ ಅದರಲ್ಲಿ ಅನುಶಾಸನ ಮಾಡಿರುವಂತೆ ನಡದುಕೊಳ್ಳುವಂತವನಾಗು.ಅಪ್ರಕಾರವಾಗಿ ನಡದುಕೊಂಡರೆ ನೀನು ಭಯಪಡತಕ್ಕಕೆಲಸ ವಿರಲಾರದು. ಸಕಲ ಪುರುಷಾರ್ಥಗಳೂ ತಪ್ಪದೇ ನಿನಗೆ ಪ್ರಾಪ್ತಗಳಾಗುವುವು. ಎಂಬದಾಗಿ ಶ್ರೀಕೃಷ್ಣನು ಅರ್ಜುನನಿಗೆ ಬೋಧಿಸಿದನು. .. ... ... ॥೧೬॥

ಶ್ರೀಮದ್ಯಾಮುನಾಚಾರ್ಯ ಸ್ವಾಮಿಗಳವರ ಶ್ರೀಮದ್ಗೀತಾರ್ಥ ಸಂಗ್ರಹ ಶ್ಲೋಕವು.

ಮೂ ॥ ದೇವಾಸುರ ವಿಭಾಗೋಕ್ತಿ ಪೂರ್ವಿಕಾಶಾಸ್ತ್ರವಶ್ಯತಾ । ತತ್ವಾನುಷ್ಠಾನ ವಿಜ್ಞಾನಸ್ಥೇಮ್ನೇ ಷೋಡಶ ಉಚ್ಯತೇ ॥ ... ... ॥೨೦॥

(ತಾ ॥ ) ಹದಿನಾರನೇ ಅಧ್ಯಾಯದಲ್ಲಿ ಪರತತ್ವಭೂತನಾದ ಶ್ರೀಮನ್ನಾರಾಯಣನು ಪರಮ ಪ್ರಾಪ್ಯನೆಂಬ ಜ್ಞಾನವೂ, ಫಲಸಂಗ ಕರ್ತೃತ್ವತ್ಯಾಗ ಪೂರ್ವಕವಾಗಿಯೂ, ಭಗವದಾರಾಧನರೂಪವಾಗಿಯೂ, ಅವಶ್ಯಕವಾಗಿಅನುಷ್ಠಿಸತಕ್ಕದ್ದೆಂಬದಾಗಿ ಶ್ರುತಿಸ್ಮೃತಿಸೂತ್ರ ವಿಹಿತವಾದ ನಿತ್ಯನೈಮಿತ್ತಿಕಾತ್ಮಕವಾದ ಕರ್ಮವು ಭಗವತ್ಪ್ರೀಣನರೂಪವಾಗಿ ಅವನನ್ನು ಹೊಂದುವುದಕ್ಕೆ ಉಪಾಯವಾಗಿರುವುದೆಂಬ ಜ್ಞಾನವು ದೃಢಪ್ರತಿಷ್ಠಿತವಾಗುವುದಕ್ಕಾಗಿ ಭಗವದಾಜ್ಞಾನುವೃತ್ತಿಶೀಲರಾಗಿಯೂ, ಶಾಸ್ತ್ರವಶ್ಯರಾಗಿಯೂಇರುವದೇವಪ್ರಕೃತಿಗಳನ್ನೂ ಭಗವದಾಜ್ಞಾತಿಲಂಘಿಗಳಾಗಿಯೂ,ಶಾಸ್ತ್ರವಶ್ಯರಾಗದೆಯೂ ಇರುವ ಆಸುರಪ್ರಕೃತಿಗಳನ್ನೂ ಗುಣಭೇದದಿಂದಲೂ, ಆಚಾರ ಭೇದದಿಂದಲೂ ವಿಭಾಗಿಸಿ ತೋರಿಸಿದ್ದಲ್ಲದೆ ಭಗವದಾಜ್ಞಾರೂಪವಾಗಿಯೂ ಶ್ರುತಿಸ್ಮೃತಿರೂಪವಾಗಿಯೂ ಇರುವ ಶಾಸ್ತ್ರಕ್ಕೆವಶ್ಯನಾಗಿ ಅದನ್ನತಿಕ್ರಮಿಸಿದೆ ಶಾಸ್ತ್ರೋಕ್ತವಾದ ಆಚಾರಕ್ಕೆ ಬದ್ಧಪಟ್ಟು ಅನುಷ್ಠಿಸಬೇಕೆಂಬದಾಗಿ ಆದಿಷ್ಟವಾಯಿತು. ॥೨೦॥

ಶ್ರೀಮನ್ನಿಗಮಾಂತ ಮಹಾದೇಶಿಕರಿಂದ ಅನುಗ್ರಹಿಸಲ್ಪಟ್ಟ ಶ್ರೀಮದ್ಗೀತಾರ್ಥಸಂಗ್ರಹಗಾಥೆಯು.

ಮೂ ॥ಆನ್ಱ್ಯೈಮುತರಾಮರ್ತತೇವರಲ್ಲಾವಙಕೊನ್ಱೇರಶ್ಶರ್,
ಕೋಣ್ಱೈಮಾರಾತಕುಱಿಚ್ಚೆಲ್ವನೀಕುರಿಕ್ಕೈಣ್ಮಱೈಯ್ಯೈ,
ಪೇಣಿಯುತತ್ತುವಮುಮ್ ಪಿಱಿಯತ್ತಕಿರಿಶೈಕಳುಮ್,ಕಾಣ
ತನಾಲ್ವಿಶಯಾವೆನ್ರುಕಣ್ಣನಿಯಮ್ಬಿನನೆ॥ ॥೧೬॥

“ದೇವಾಸುರವಿಭಾಗೋಕ್ತಿಪೂರ್ವಿಕಾ” ಎಂಬ ಸಂಗ್ರಹಶ್ಲೋಕದಂತೆ ಈ ಅಧ್ಯಾಯಾರ್ಥಗಳನ್ನೊಂದು ಗಾಥೆಯಿಂದ ಸಂಗ್ರಹಿಸುತ್ತಾರೆ. ಕಣ್ಣನ್-ಕೃಷ್ಣನು, ವಿಶಯಾ-ಎಲೈ ಅರ್ಜುನನೆ ! ಆಣೈ-ಆಜ್ಞೆಯನ್ನು, ಮರಾತವರ್ - ಅತಿಕ್ರಮಿಸದವರು, ತೇವರ್ - ದೇವತೆಗಳು, ಅಲ್ಲಾ-ದುಷ್ಟವಾದ, ವ್ಯಕೊಕ್ಕರ್-ವ್ಯವಹಾರವುಳ್ಳವರು,ಅಶುರರ್-ಅಸುರರು, ಈ ಪ್ರಕಾರವಾದರೆ ನಾನು ಯಾವರಾಶಿಗೆ ಸೇರಿದವನೊ ಎಂಬ ಭೀತಿಯನ್ನು ಹೊಂದಿರುವ ಅರ್ಜುನನ ಅಭಿಪ್ರಾಯವನ್ನು ತಿಳಿದು ಅವಕ್ಕೆ ಪ್ರತ್ಯುತ್ತರವನ್ನು ಹೇಳುವ “ಮಾಶುಚಸ್ಸಂಪದಂ” ಎಂಬ ಶ್ಲೋಕವನ್ನು ಮುಂದೆ ಸಂಗ್ರಹಿಸುತ್ತಾರೆ. ಕೊನ್ಯ-ಸ್ವಾಮಿಯನ್ನು, ಮರಾದ-ಅತಿಕ್ರಮಿಸದೇಇರುವ,ಕುಣ-ಗುಣಗಳುಳ್ಳ, ಶೆಲ್ವ-ಸಂಪತ್ತುಳ್ಳವನಾದ,ನೀ-ನೀನು, ಮರೈಯ್ಯ-ವೇದವನ್ನು, ಕುರಿಕ್ಕೊಳ್- ಲಕ್ಷಣವಾಗಿ ಸ್ವೀಕರಿಸು, ಜ್ಞಾಪಕತ್ವೇನ ಅವಲಂಬಿಸೆಂದು ಭಾವವು. ಶಾಸ್ತ್ರವಶ್ಯನಾಗಿರೆಂದು ಫಲಿತಾರ್ಥವು. ಇದಕ್ಕೆ ಫಲವನ್ನು ಮುಂದೆಹೇಳುತ್ತಾರೆ. ಆದನಾಲ್- ಈ ವೇದವೆಂಬಶಾಸ್ತ್ರದಿಂದ, ಪೇಣಿಯ-ಆದರಣೀಯವಾದ, ತತ್ತುವಮುಮ್-ತತ್ವವನ್ನೂ,ಪಿಣಿ-ದುಃಖದಿಂದ, ಅತ್ತ-ಹೊನ್ದಾಗಿಲ್ಲದ, ಕಿರಿಶೈಕಳುಮ್- ಕ್ರಿಯೆಗಳನ್ನೂ, ಸಂಗತ್ಯಾಗವನ್ನು ಮಾಡಿರುವುದರಿಂದ ಬಾಧಕ್ಲೇಶನಿವರ್ತಕಗಳಾದ ಕರ್ಮಜ್ಞಾನ ಭಕ್ತಿರೂಪ ಪ್ರತಿಶ್ಯಕ್ತ ತತ್ವಪ್ರಾಪ್ತ್ಯುಪಾಯ ಭೂತಶಾಸ್ತ್ರಾರ್ಥಗಳನ್ನೂ ಎಂದರ್ಥವು. ಕಾಣ್-ವಿವರವಾಗಿ ತಿಳಿದುಕೊಳ್ಳು, ಎನ್ನು-ಎಂಬದಾಗಿ, ಅಯುಂಬಿನನ್- ಉಪದೇಶಿಸಿದನು. ॥೧೩॥

ಇತಿ ಶ್ರೀಮದ್ಗೀತಾರ್ಥಸಾರೇ ಷೋಡಶಾಧ್ಯಾಯಃ.

ಶ್ರೀ ಕೃಷ್ಣಾಯ ಪರಮಾತ್ಮನೇ ನಮಃ.

ಶ್ರೀ ಕೃಷ್ಣಾರ್ಪಣಮಸ್ತು.



ಶ್ರೀ ಯೈ ನ ಮಃ.

ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ.
ಶ್ರೀಮದ್ಗೀತಾರ್ಥಸಾರೇ ಸಪ್ತದಶಾಧ್ಯಾಯಃ.

(ಶಂ॥ ಭಾ ) "ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ" ಎಂಬದಾಗಿ ಹಿಂದಿನ ಅಧ್ಯಾಯದ ಕಡೆಯಲ್ಲಿ ಶ್ರೀ ಕೃಷ್ಣಪರಮಾತ್ಮನು ಹೇಳಿರುವದರಿಂದಪ್ರಶ್ನೆಮಾಡಲು ಅವಕಾಶವನ್ನು ಹೊಂದಿರುವ ಅರ್ಜುನನು ಮುಂದೇಹೇಳುವ ರೀತಿಯಿಂದ ಪ್ರಶ್ನೆಮಾಡುತ್ತಾನೆ.

(ಶ್ರೀ) ಉಕ್ತಾಧಿಕಾರ ಹೇತೂನಾಂಶ್ರದ್ಧಾ ಮುಖ್ಯೇತುಸಾತ್ವಿಕೀ। ಇತಿಸಪ್ತದಶೇಗೌಣಶ್ರದ್ಧಾ ಭೇದಸ್ತ್ರಧೋಚ್ಯತೇ ॥ ಹಿಂದಿನ ಅಧ್ಯಾಯಾಂತ್ಯದಲ್ಲಿ "ಯಶ್ಶಾಸ್ತ್ರವಿಧಿಮುತ್ಸೃಜ್ಯವರ್ತತೆ ಕಾಮಕಾರತಃ। ನಸಸಿದ್ಧಿಮವಾಪ್ನೋತಿ" ಎಂಬುವುದರಿಂದ ಶಾಸ್ತ್ರೋಕ್ತವಿಧಿಗಳನ್ನು ಬಿಟ್ಟು ಸ್ವೇಚ್ಛೆಯಾಗಿರುವಂತವನಿಗೆ ಜ್ಞಾನಾಧಿಕಾರವಿಲ್ಲವೆಂಬದಾಗಿ ಹೇಳಿತು.ಆದರಲ್ಲಿಯೂ,ಶಾಸ್ತ್ರವಿಧಿಗಳನ್ನು ಬಿಟ್ಟುಸ್ವೇಚ್ಛೆಯಿಂದಿರದೆ ಶ್ರದ್ಧಾಳುಗಳಾಗಿರುವಂತವರಿಗೆ ಜ್ಞಾನದಲ್ಲಧಿಕಾರವುಂಟೆ ? ಇಲ್ಲವೇ ? ಎಂಬೀ ಅಂಶವನ್ನು ನಿರ್ಧರಿಸಿಕೊಳ್ಳುವುದಕ್ಕಾಗಿ ಅರ್ಜುನನು ಪ್ರಶ್ನೆ ಮಾಡುತ್ತಾನೆಂದರಿಯ ಬೇಕು.

(ರಾ॥ ಭಾ ॥ ) ದೈವಸೃಷ್ಟಿಯನ್ನೂ ಅಸುರಸೃಷ್ಟಿಯನ್ನೂ ವಿಭಾಗಿಸಿ ಹೇಳುವವ್ಯಾಜದಿಂದ ಮನುಷ್ಯನಿಂದ ಹೊಂದಲ್ಪಡತಕ್ಕ ತತ್ವವಿಷಯವಾದ ಜ್ಞಾನವು ವೇದಮೂಲಕವಾಗಿಯೆ ತಿಳಿಯತಕ್ಕದ್ದಾಗಿರುವುದೆಂದು ಹೇಳಿದರು. ಈಗ ಶಾಸ್ತ್ರವಿಹಿತವಲ್ಲದ್ದೆಲ್ಲವೂ ಆಸುರತ್ವೇನ ನಿಷ್ಫಲವೆಂತಲೂ, ಶಾಸ್ತ್ರವಿಹಿತವಾದವುಗಳೂ ತ್ರಿವಿಧಗಳೆಂತಲೂ, ಅವುಗಳಲಕ್ಷಣವು ಇದೆಂತಲೂ ಹೇಳಲ್ಪಡುವುದು. ಆದರಲ್ಲಿ, ಶಾಸ್ತ್ರವಿಹಿತಗಳಲ್ಲದವುಗಳು ನಿಷ್ಫಲಗಳು ಎಂಬುವುದನ್ನು ಅರಿಯದ ಅರ್ಜುನನು ಯಾಗಾದಿಗಳು ಶ್ರದ್ಧೆಯೊಡನೆ ಮಾಡಲ್ಪಟ್ಟರೆ

ಅವುಗಳಿಗೆ ಸತ್ವಾದಿಗುಣಾನುಗುಣವಾಗಿ ಫಲಭೇದಗಳುಂಟೋ? ಎಂಬು ವುದನ್ನು ತಿಳಿಯಬೇಕೆಂಬದಾಗಿ ಪ್ರಶ್ನೆಮಾಡುತ್ತಾನೆ.

(ಮ ॥ ಗೀ ॥ ವಿ) ೧೪ ನೇ ಅಧ್ಯಾಯದಲ್ಲಿ "ನಾನ್ಯಂಗುಣೇಭ್ಯಃ ಕರ್ತಾರಂ,, ಎಂಬ ಶ್ಲೋಕದಿಂದಹೇಳಲ್ಪಟ್ಟಗುಣಗಳಿಂತವುಗಳೆಂತಲೂ, ಅವುಗಳ ಕಾರ್ಯಗಳಿಂತವುಗಳೆಂತಲೂ, ಈ ಅಧ್ಯಾಯದಲ್ಲಿ ಹೇಳಲ್ಪಡುವುದು. (ಸತ್ವಾದಿಗುಣಕೃತಗಳಾದ (ಸತ್ವಾದಿಗುಣಭೇದದಿಂದ ಸದಸದ್ರೂಪಗಳಾದ) ಶ್ರದ್ಧೆಗಳಿಗೂ ಆಹಾರಕ್ಕೂ ತಪಃಪ್ರಭೃತಿಕರ್ಮಗಳಿಗೂ ಭೇದಪ್ರದರ್ಶನವಂ ಮಾಡಿ ವಿಸ್ತರಿಸಿ ಹೇಳಲ್ಪಡುವುದು.

ಶ್ಲೋ ॥ ಅರ್ಜುನಉವಾಚ ॥ ಯೇಶಾಸ್ತ್ರವಿಧಿಮುತ್ಸೃ
ಜ್ಯಯಜಂತೇಶ್ರದ್ಧಯಾನ್ವಿತಾಃ । ತೇಷಾಂನಿಷ್ಠಾತುಕಾ
ಕೃಷ್ಣಸತ್ತ್ವಮಾಹೋರಜಸ್ತಮಃ ... ॥೧॥

ಪ ॥ ಯೇ-ಶಾಸ್ತ್ರವಿಧಿಂ-ಉತ್ಸೃಜ್ಯ-ಯಜಂತೇ-ಶ್ರದ್ಧಯಾ-ಅನ್ವಿತಾಃ । ತೇಷಾಂ-ನಿಷ್ಠಾ-ತು-ಕಾ-ಕೃಷ್ಣ-ಸತ್ವಂ-ಆಹೋ-ರಜಃ-ತಮಃ ॥

(ಅ ॥ ರಾ ॥ ಭಾ) ಕೃಷ್ಣ-ಎಲೈ ಶ್ರೀಕೃಷ್ಣನೆ, ಶಾಸ್ತ್ರವಿಧಿಮುತ್ಸೃಜ್ಯ-ವೇದವೆಂಬ ನಮ್ಮ ಆಜ್ಞೆಯನ್ನು ಬಿಟ್ಟು ಬಿಟ್ಟು, ಶ್ರದ್ಧಯಾ ಅನ್ವಿತಾಃ-ಇದುನಮ್ಮ ಇಷ್ಟವನ್ನು ಸಾಧಿಸಿಕೊಳ್ಳುಂಡುವುದೆಂಬ ವಿಶ್ವಾಸದೊಡನೆ (ಸಾಧನದಲ್ಲಿ ತ್ವರೆಯು ಶ್ರದ್ಧೆಯು) ಕೂಡಿದವರಾಗಿ, ಯೇ-ಯಾರಾದರೆ, ಯಜಂತೇ-ಯಾಗವನ್ನು ಅನುಷ್ಠಿಸುತ್ತಾರೆಯೋ, ತೇಷಾಂ-ಅವರುಗಳಿಗೆ, ನಿಷ್ಠಾ-ಮೂಲಾಧಾರವು, ಕಾತು-ಯಾವುದು? ಸತ್ವಂ-ಸತ್ವಗುಣವೊ, ಆಹೋ-ಅಥವಾ, ರಜಃ-ರಜೋಗುಣವೊ, ಆಹೋತಮಃ-ಅಥವಾ ತಮೋಗುಣವೊ. ... ॥೧॥

(ಶ್ರೀ) ಶ್ರದ್ಧಾಸ್ವರೂಪವು ಸಾತ್ವಿಕವಾಗಿದ್ದರೂ ಅಶಕ್ತಿ ಅಥವಾ ಆಲಸ್ಯಗಳಿಂದ ಶಾಸ್ತ್ರವಿಧಿಯನ್ನು ತಿಳಿದುಕೊಳ್ಳದ ಸ್ಥಿತಿಯೊಡನೆ ಕೂಡಿದ ಶ್ರದ್ಧೆಯು ರಾಜಸ ತಾಮಸಗಳಲ್ಲಿ ಸೇರುವುದೋ ಎಂಬ ಸಂದೇಹದಿಂದ ಮೂರನ್ನು ಸೇರಿಸಿ ಪ್ರಶ್ನೆಮಾಡಿರುವುದಾಗಿ ತಿಳಿಯ ಬರುತ್ತದೆ. ... ... ... ॥೧॥

(ಶಂ॥ ಭಾ) ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ಪ್ರವೃತ್ತಿಯೆಗಳನ್ನು ಅನುಸರಿಸದೆ ಆಸ್ತಿಕ್ಯ ಬುದ್ಧಿಯೊಡನೆ ಕೂಡಿದವರಾಗಿ ದೇವಾದಿಗಳನ್ನು ಪೂಜಿಸುತ್ತಾರೆಯೊ ? (ಎಂದರೆ ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ಅಂಶಗಳನ್ನು ಸ್ವಲ್ಪವೂ ತಿಳಿಯದೆ ಇದ್ದರೂ ವೃದ್ಧವ್ಯವಹಾರ ದರ್ಶನದಿಂದಲೆ (ವೃದ್ಧರು ಈ ಪ್ರಕಾರವಾಗಿ ಅನುಷ್ಠಿಸುತ್ತಾರಾದುದರಿಂದ ನಾವು ಈ ರೀತಿಯಾಗಿ ಅನುಷ್ಠಿಸುವುದೇ ಉಚಿತವೆಂಬ ಆಸ್ತಿಕ್ಯ ಬುದ್ಧಿಯೊಡನೆ) ದೇವಾದಿಗಳನ್ನು ಪೂಜಿಸುವಂತವರೆ ಇಲ್ಲಿ "ಯಃಶಾಸ್ತ್ರವಿಧಿ ಮುತ್ಸೃಜ್ಯಯಜಂತೆಶ್ರದ್ಧಯಾನ್ವಿತಾಃ ,, ಎಂಬದಾಗಿ ಹೇಳಲ್ಪಟ್ಟಿರುವಂತೆ ತಿಳಿಯಬರುವುದಲ್ಲದೆ, ಶಾಸ್ತ್ರವಿಧಿಯನ್ನು ತಿಳಿದಿದ್ದರೂ ಅದನ್ನು ಬಿಟ್ಟು ತಮ್ಮಗಳಿಗೆ ತೋರಿದಂತೆ ದೇವಾದಿಗಳನ್ನು ಪೂಜಿಸುವಂತವರು ಹೇಳಲ್ಪಟ್ಟಿರುವರೆಂಬದಾಗಿ (ಶ್ರದ್ಧೆಯೊಡನೆ ಕೂಡಿದವರೆಂಬ ವಿಶೇಷಣವನ್ನು ಹೇಳಿರುವುದರಿಂದ) ತಿಳಿಯಕೂಡದು. ದೇವಾದಿ ಪೂಜೆಯನ್ನು ಬೋಧಿಸುವ ಶಾಸ್ತ್ರವಿಧಿಯನ್ನು ತಿಳಿದೂ ಅದನ್ನು ಬಿಟ್ಟವರು ಶ್ರದ್ಧಾಹೀನರೆಂತಲೆ ಹೇಳಲ್ಪಡುವರಷ್ಟೆ ? ಆವಾಗ ಅವರು ಶಾಸ್ತ್ರವಿಹಿತವಾದ ದೇವಾದಿ ಪೂಜೆಯಲ್ಲಿ ಶ್ರದ್ಧಾಯುಕ್ತರೆಂದು ಹೇಳುವುದಕ್ಕೇನೇ ಯತ್ನವಿಲ್ಲವು. ಶಾಸ್ತ್ರವನ್ನು ತಿಳಿದರೂ ಅದನ್ನು ಬಿಟ್ಟು ಸ್ವೇಚ್ಛೆಯಾಗಿ ದೇವಾದಿ ಪೂಜೆಗಳನ್ನು ಮಾಡುವಂತವರು ಅಸುರರೆನ್ನಲ್ಪಡುವರು, ಈ ಅಂಶವು ಇದುವರೆಗೂ ಹಿಂದೆಯೇ ವಿಸ್ತೃತವಾಗಿರುವುದು. ಈ ಅಧ್ಯಾಯವು ಆಸ್ತಿಕರ ವಿಷಯವಲ್ಲವೆ ? ಆದ್ದರಿಂದ ಶ್ರುತಿಸ್ಮೃತಿಗಳಲ್ಲಿ ಪ್ರವೇಶವಿಲ್ಲದೆ ಇರುವುದರಿಂದ (ಶ್ರುತಿಸ್ಮೃತಿಗಳಲ್ಲಿ ಈರೀತಿಯಾಗಿ ಹೇಳಲ್ಪಟ್ಟಿರುವುದರಿಂದ ನಾನೂ ಈರೀತಿಯಾಗಿ ಮಾಡಬೇಕೆಂಬುವುದನ್ನು ತಿಳಿಯದೆ) ಕೇವಲವಾಗಿ ವೃದ್ಧರು ಈರೀತಿಯಾಗಿ ಅನುಷ್ಠಿಸುವುದರಿಂದ ನಾನೂ ಈರೀತಿಯಾಗಿ ಅನುಷ್ಠಿಸುವೆನೆಂಬದಾಗಿ ದೇವಾದಿ ಪೂಜೆಯನ್ನು ಮಾಡುವಂತವರು ಯಾರೊ ಅಂತವರ ಆಶ್ರಯವು (ದೇವಾದಿ ಪೂಜಾವಿಷಯಕವಾದ ಪ್ರವೃತ್ತಿಯು) ಸಾತ್ವಿಕವೇ ? ಅಥವಾ ರಾಜಸವೇ?

ಅಥವಾ ತಾಮಸವೆ ? ಬೋಧಿಸೆಂದು ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನೆಮಾಡಿದನೆಂದು ತಿಳಿಯಬೇಕು. ... ||೧||

(ಶ್ರೀ) ಶ್ರದ್ಧಾಸ್ವರೂಪವು ಸಾತ್ವಿಕವಾಗಿದ್ದರೂ ಅಶಕ್ತ್ಯಾಲಸ್ಯಾದಿಗಳಿಂದ ಶಾಸ್ತ್ರವಿಧಿಯನ್ನು ತಿಳಿದುಕೊಳ್ಳದೆ ಇರುವಿಕೆಯೊಡನೆ ಕೂಡಿದ ಶ್ರದ್ಧೆಯು ರಾಜಸತಾಮಸಗಳಲ್ಲಿ ಸೇರುವುದೊ ಎಂಬ ಸಂದೇಹದಿಂದ ಈ ಮೂರನ್ನು ಸೇರಿ ಪ್ರಶ್ನೆಮಾಡಿದಂತೆ ತಿಳಿಯಬೇಕು. ... ... ||೧||

(ಮ|| ಗೀ|| ವಿ) ಇವರ ತಾತ್ಪರ್ಯವೂ (ಶಂ) ಪ್ರಕಾರವೇ ತಿಳಿಯಲ್ಪಡಬೇಕು.)

ಶ್ರೀಭಗವಾನುವಾಚ || ತ್ರಿವಿಧಾಭವತಿಶ್ರದ್ಧಾದೇಹಿನಾಂ ಸಾಸ್ವಭಾವಜಾ | ಸಾತ್ತ್ವಿಕೀರಾಜಸೀಚೈವ ತಾಮಸೀ ಚೇತಿತಾಂಶೃಣು || ... ||೨||

ಪ|| ಶ್ರೀಭಗವಾನ್-ಉವಾಚ|| ತ್ರಿವಿಧಾ-ಭವತಿ-ಶ್ರದ್ಧಾ-ದೇಹಿನಾಂ-ಸಾ-ಸ್ವಭಾವಜಾ | ಸಾತ್ವಿಕೀ-ರಾಜಸೀ-ಚ-ಏವ-ತಾಮಸೀ-ಚ-ಇತಿ-ತಾಂ-ಶೃಣು ||

(ಅ||) ಶ್ರೀಭಗವಾನುವಾಚ-ಶ್ರೀಕೃಷ್ಣನು ಹೇಳಿದನು.ದೇಹಿನಾಂ-ದೇಹಯುಕ್ತರಾದ ಪ್ರಾಣಿಗಳ, ಸ್ವಭಾವಜಾ-ಪೂರ್ವಕರ್ಮವಾಸನೆಯಿಂದುಂಟಾದ, ಸಾಶ್ರದ್ಧಾ-ಪೂರ್ವೋಕ್ತವಾದ ಆಶ್ರದ್ಧೆಯು, ಸಾತ್ವೀಕೀ-ಸಾತ್ವಿಕವೆಂತಲೂ, ರಾಜಸೀಚೈವ-ರಾಜಸವೆಂತಲೂ, ತಾಮಸೀಚೇತಿ- ತಾಮಸವೆಂತಲೂ, ತ್ರಿವಿಧಾಭವತಿ - ಮೂರುವಿಧವಾಗಿರುವುದು ತಾಂ-ಅದನ್ನು, ಶೃಣು-ಕೇಳು. ... ||೨||

(ಶಂ|| ಭಾ) ಸಾಮಾನ್ಯ ವಿಷಯವಾದ ಪ್ರಶ್ನವಲ್ಲವಾದುದರಿಂದವಿವರಿಸಿಯೇ ಪ್ರತ್ಯುತ್ತರವನ್ನು ಕೊಡಬೇಕೆಂಬದಾಗಿ ನೆನಸಿ ಶ್ರೀಕೃಷ್ಣನು ಹೇಳುತ್ತಾನೆ. ಎಲೈ ಅರ್ಜುನನೆ ? ದೇವಾದಿ ಪೂಜಾ ವಿಷಯವಾದ ಶ್ರದ್ಧೆಯೇ ಸಾತ್ವಿಕರಾಜಸ ತಾಮಸ ಭೇದಗಳುಳ್ಳದ್ದೆಂಬದಾಗಿ ಭ್ರಮೆಪಟ್ಟು ಪ್ರಶ್ನೆಮಾಡುತ್ತೀ, ಅದು ಯುಕ್ತವಲ್ಲವು, ಪೂರ್ವಜನ್ಮದಲ್ಲಿ ಮಾಡಲ್ಪಟ್ಟ ಧರ್ಮಾದಿಗಳ ಸಂಸ್ಕಾರವು ಮರಣಕಾಲದಲ್ಲಿ ಅಭಿವ್ಯಕ್ತವಾಗಿ ಅನುಸರಿಸಿ ಬರುವುದು, ಅದೇ ಎರಡನೇ ಜನ್ಮದಲ್ಲಿ ಸ್ವಭಾ

ವವೆನ್ನಲ್ಪಡುವುದು, ಅಂತಹ ಸ್ವಭಾವವು ಸತ್ವಸಂಬಂಧವಾಗಿದ್ದರೆ ಅಂತವರ ಶ್ರದ್ಧೆಯು ಸಾತ್ವಿಕ ಶ್ರದ್ಧೆಯೆನ್ನಲ್ಪಡುವುದು. ಅದೇ ದೇವ ಪೂಜಾದಿ ವಿಷಯುವಾಗಿರುವುದು. ರಜಸ್ಸಂಬಂಧವಾಗಿದ್ದರೆ ಅಂತವರ ಶ್ರದ್ಧೆಯು ರಾಜಸ ಶ್ರದ್ಧೆಯೆನ್ನಲ್ಪಡುವುದು, ಅದೇ ಯಕ್ಷರಾಕ್ಷಸ ಪೂಜಾದಿ ವಿಷಯುವಾಗಿರುವುದು. ತಮಸ್ಸಂಬಂಧವಾಗಿದ್ದರೆ ಅಂತವರ ಶ್ರದ್ಧೆಯು ತಾಮಸ ಶ್ರದ್ಧೆಯೆನ್ನಲ್ಪಡುವುದು, ಅದೇ ಪ್ರೇತಪಿಶಾಚಾದಿ ಪೂಜಾವಿಷಯುವಾಗಿರುವುದು. ಈ ಸಂದರ್ಭಗಳು ನಾಲ್ಕನೇ ಶ್ಲೋಕ ದಲ್ಲಿ ವಿವರಿಸಲ್ಪಡುವುವು. ಈ ರೀತಿಯಾಗಿ ಮೂರುವಿಧಗಳಾದ ಶ್ರದ್ಧೆ ಗಳನ್ನು ತಿಳಿಸುವೆನು ಕೇಳು. ... ॥೧॥

(ಶ್ರೀ) ಶಾಸ್ತ್ರತತ್ವಜ್ಞಾನಶ್ರದ್ಧೆಯಿಂದ ಪ್ರವರ್ತಿಸುವಂತವರ ಪರಮೇಶ್ವರ ಪೂಜಾವಿಷಯುವಾದ ಸಾತ್ವಿಕವಾಗಿರುವ ಶ್ರದ್ಧೆಯು ಒಂ ದೇವಿಧವಾಗಿರುವುದು, ಇದಕ್ಕೆ ಗುಣತಃತ್ರೈವಿಧ್ಯವಿಲ್ಲವು. ಲೋಕಾ ಚಾರವನ್ನನುಸರಿಸಿದ ಶ್ರದ್ಧೆಯು:(ಸಾತ್ವಿಕೀರಾಜಸೀ-ತಾಮಸೀ ಎಂಬ ದಾಗಿ) ತ್ರಿವಿಧವಾಗಿರುವುದು; ಪ್ರಾಣಿಗಳಪೂರ್ವ್ವಕರ್ಮವಾಸನೆಯಿಂದುಂ ಟಾದದ್ದು. ಅಂತಹ ಸ್ವಭಾವವನ್ನು ಶಾಸ್ತ್ರಜ್ಞಾನವು ಅನ್ಯಥಾ ಮಾ ಡಲು ಸಮರ್ಥವಾಗುವುದು. ... ... ॥೧॥

(ರಾ॥ ಭಾ॥) ಈ ಪ್ರಕಾರವಾಗಿ ಪ್ರಶ್ನೆಮಾಡಲ್ಪಟ್ಟ ಶ್ರೀಕೃ ಷ್ಣನು ಶಾಸ್ತ್ರೋಕ್ತವಲ್ಲದ ಶ್ರದ್ಧೆಯೂ ಅದರೊಡನೆ ಕೂಡಿರುವ ಯಾಗವೂ, ನಿಷ್ಫಲವೆಂಬುವುದನ್ನು ಮನಸ್ಸಿನಲ್ಲಿಟ್ಟುಕೊಂಡು ಶಾಸ್ತ್ರೋಕ್ತವಾದ ಯಾಗಾದಿಕವೆ ತ್ರಿವಿಧವಾಗಿರುವುದೆನ್ನುವುದನ್ನು ತಿಳಿಸುವುದಕ್ಕಾಗಿ ಮೊದಲು ಶಾಸ್ತ್ರೋಕ್ತವಾದ ಶ್ರದ್ಧೆಯೇ ತ್ರಿವಿಧ ವಾಗಿರುವುದೆನ್ನುತ್ತಾನೆ. ದೇಹಿನಾಂ-ಸಮಸ್ತ ಪುರುಷರಿಗೂ,ಶ್ರದ್ಧಾ- ನಮ್ಮ ಇಷ್ಟವನ್ನು ಇದು ಸಾಧಿಸಿಕೊಡುವುದೆಂಬ ವಿಶ್ವಾಸದೊಡನೆ ಕೂಡಿರುವ ಸಾಧನದಲ್ಲಿ ತ್ವರಿಸುವಿಕೆ ಎಂಬ ಶ್ರದ್ಧೆಯು, ಸಾತ್ವಿಕೀ ರಾಜಸೀ ಚೈವತಾಮಸೀಚೇತಿ ತ್ರಿವಿಧಾಭವತಿ-ಸತ್ವಗುಣ ಮೂಲಕ ವೆಂತಲೂ, ರಜೋಗುಣ ಮೂಲಕವೆಂತಲೂ, ತಮೋಗುಣ ಮೂಲಕ ವೆಂತಲೂ, ಮೂರು ವಿಧವಾಗಿರುವುದು. ಸಾಸ್ವಭಾವಜಾ-ಸ್ವಾಸಾ

ಧಾರಣವಾದ ಭಾವವು ಸ್ವಭಾವವು. ಅನಾದಿ ವಾಸನಾ ನಿಮಿತ್ತಕವಾದ ಆಯಾ ರುಚಿ ವಿಶೇಷವೆಂದು ತಾತ್ಪರ್ಯವು. ಆ ರುಚಿ ವಿಶೇಷವೆಂಬ ಸ್ವಭಾವದಿಂದುಂಟಾದದ್ದು ಸ್ವಭಾವಜಾ ಎನ್ನಲ್ಪಡುವುದು. ಆ ಶ್ರದ್ಧೆಯು ವಾಸನಾ ಮೂಲಕವಾದ ರುಚಿ ವಿಶೇಷದಿಂದುಂಟಾಗಿರುವುದು. ವಾಸನೆಯೂ ರುಚಿಯೂ ಶ್ರದ್ಧೆಯೂ (ಗುಣಸಂಬಂಧದಿಂದುಂಟಾಗುವ) ಆತ್ಮಧರ್ಮಗಳು, ಸತ್ವಗುಣಯುಕ್ತವಾದದೇಹೇಂದ್ರಿಯಾಂತಃಕರಣ ವಿಷಯಗಳನ್ನು ಆಗಾಗ್ಯೇ ಅನುಭವಿಸುವುದರಿಂದ ಸಾತ್ವಿಕ ಕರ್ಮದಲ್ಲಿ ವಾಸನೆಯೂ ರುಚಿಯೂ ಅದರಿಂದ ಶ್ರದ್ಧೆಯೂ ಉಂಟಾಗುವುದು. ರಜೋಗುಣ ಯುಕ್ತವಾದ ದೇಹವನ್ನೂ ಇಂದ್ರಿಯಗಳನ್ನೂ ಅಂತಃಕರಣವನ್ನೂ ಶಬ್ದಾದಿ ವಿಷಯಗಳನ್ನೂ ಅನುಭವಿಸುವುದರಿಂದ ರಾಜಸಕರ್ಮದಲ್ಲಿ ವಾಸನೆಯೂ ರುಚಿಯೂ ಅದರಿಂದ ಶ್ರದ್ಧೆಯೂ ಉಂಟಾಗುವುದು. ತಮೋಗುಣಯುಕ್ತವಾದ ದೇಹವನ್ನೂ ಇಂದ್ರಿಯವನ್ನೂ ಅಂತಃಕರಣವನ್ನೂ ಶಬ್ದಾದಿ ವಿಷಯಗಳನ್ನೂ ಪುನಃ ಪುನಃ ಅನುಭವಿಸುವುದರಿಂದ ತಾಮಸ ಕರ್ಮದಲ್ಲಿ ವಾಸನೆಯೂ ರುಚಿಯೂ ಅದರಿಂದ ಶ್ರದ್ಧೆಯೂ ಉಂಟಾಗುವುದೆಂದು ಭಾವವು. ತಾಂ ಶೃಣು-ಆಶ್ರದ್ಧೆಯು ಯಾವ ಸ್ವಭಾವ ಮುಳ್ಳದ್ದೊ ಆಸ್ವಭಾವವನ್ನು ಹೇಳುತ್ತೇನೆ ಕೇಳು. ... ... ... ॥೨॥

ಶ್ಲೋ॥ ಸತ್ವಾನುರೂಪಾಸರ್ವಸ್ಯಶ್ರದ್ಧಾಭವತಿಭಾರ
ತ। ಶ್ರದ್ಧಾಮಯೋಯಂಪುರುಷೋಯೋಯಚ್ಛ್ರದ್ಧ
ಸ್ಸಏವಸಃ॥ ... ... ॥೩॥

ಪ॥ ಸತ್ವಾನುರೂಪಾ-ಸರ್ವಸ್ಯ-ಶ್ರದ್ಧಾ-ಭವತಿ-ಭಾರತ|ಶ್ರದ್ಧಾ-ಮಯಃ-ಅಯಂ-ಪುರುಷಃ-ಯಃ-ಯಚ್ಛ್ರದ್ಧಃ-ಸಃ-ಏವ-ಸಃ ॥

(ಅ॥) ಹೇಭಾರತ-ಎಲೈ ಅರ್ಜುನನೇ, ಸರ್ವಸ್ಯ-ಸಮಸ್ತ ಪ್ರಾಣಿಗಳಿಗೂ, ಸತ್ವಾನುರೂಪಾ-ಅವರವರ ಅಂತಃಕರಣವನ್ನನುಸರಿಸಿದ, ಶ್ರದ್ಧಾ-ಶ್ರದ್ಧೆಯು, ಭವತಿ-ಉಂಟಾಗುವುದು. ಅಯಂ ಪುರುಷಃ- ಈ ಪುರುಷನು, ಶ್ರದ್ಧಾಮಯಃ - ಶ್ರದ್ಧೆಯೊಡನೆ ಕೂಡಿದವನು, ಯಃ-ಯಾವನು, ಯಚ್ಛ್ರದ್ಧಃ-ಎಂತಹ ಶ್ರದ್ಧೆಯೊಡನೆ ಕೂಡಿದವನೊ, ಸಃ-ಅವನು, ಸಏವ-ಅಂತಹ ಶ್ರದ್ಧೆಯುಳ್ಳವನೆ. ... ... ॥೩॥

(ಶಂ॥ ಭಾ) ಪೂರ್ವಜನ್ಮದಲ್ಲಿ ಮಾಡಲ್ಪಟ್ಟ ಧರ್ಮಾಧರ್ಮಗಳ ವಾಸನೆಗಳೊಡನೆ ಕೂಡಿರುವ ಅಂತಃಕರಣಕ್ಕೆ ತಕ್ಕಂತೆಯೆ ಸಮಸ್ತ ಪ್ರಾಣಿಗಳಿಗೂ ಶ್ರದ್ಧೆಯುಂಟಾಗುವುದು. ಆದುದರಿಂದ ಸಂಸಾರಿಯಾದ ಪ್ರತಿಜೀವನೂ ಯಾವದೊ ಒಂದು ಶ್ರದ್ಧೆಯೊಡನೆ ಸೇರಿಯೇ ಇರುವನು. ಎಂದರೆ ಎಂತಹ ಶ್ರದ್ಧೆಗೆ ಅನುಗುಣಗಳಾದ ವ್ಯಾಪಾರವುಳ್ಳವನಂತೆ ಕಾಣಲ್ಪಡುವನೊ ಅವನಂತಹ ಶ್ರದ್ಧೆಯುಳ್ಳವನೆಂಬದಾಗಿ ತಿಳಿಯಬೇಕು. ... ... ... ... ॥೩॥

(ಶ್ರೀ॥) ಶಾಸ್ತ್ರವಿಧಿಯನ್ನನುಸರಿಸದೆ ಪೂರ್ವೀಕರ ಶಿಷ್ಟಾಚಾರವನ್ನು ಅನುಸರಿಸಿ ಶ್ರದ್ಧೆಯಿಂದ ಪೂಜಿಸುವಂತವನ ಶ್ರದ್ಧೆಯು ತ್ರಿಗುಣಗಳೊಡನೆ ಕೂಡಿರುವುದು. ಆ ಗುಣಗಳಲ್ಲಿ ಯಾವ ಗುಣವು ವೃದ್ಧಿಹೊಂದಿರುವುದೊ ಆ ಗುಣವುಳ್ಳ ಶ್ರದ್ಧೆಯುಳ್ಳವನು ಅಂಥಾ ಶ್ರದ್ಧೆಯುಳ್ಳವನೆಂದು ಹೇಳಲ್ಪಡುತ್ತಾನೆ. ಶಾಸ್ತ್ರವಿಧಿಯನ್ನು ತಿಳಿದು ಅದರಂತೆ ಶ್ರದ್ಧೆಯೊಡನೆ ಪೂಜಿಸುವಂತವನ ಶ್ರದ್ಧೆಯು ಸಾತ್ವಿಕವಾದದ್ದು. ರಾಜಸವಾಗಿ ಯಾಗಲಿ ತಾಮಸವಾಯಾಗಲಿ ಇರಲಾರದು; ಏತಕ್ಕೆಂದರೆ? ಅವನು ಶಾಸ್ತ್ರಜ್ಞಾನದಿಂದ ರಾಜಸತಾಮಸಶ್ರದ್ಧೆಗಳಲ್ಲಿ ಪ್ರವೃತ್ತಿಯನ್ನು ಬಿಟ್ಟಿರುವನು. ... ... ॥೩॥

(ರಾ॥ ಭಾ॥) ಎಲೈ ಅರ್ಜುನನೇ! ಸರ್ವಪ್ರಾಣಿಗಳಿಗೂ ಸತ್ವಾನುರೂಪವಾದ ಶ್ರದ್ಧೆಯುಂಟಾಗುವುದು. ಸತ್ವವೆಂದರೆ ಅಂತಃಕರಣವು, ಮನಸ್ಸೆಂದರ್ಥವು. ಅವನವನ ಮನಸ್ಸಿಗೆ ತಕ್ಕಂತೆ ಶ್ರದ್ಧೆಯುಂಟಾಗುವುದು. ಅಂತಃಕರಣವು ಯಾವ ಗುಣದೊಡನೆ ಸೇರಿರುವುದೊ ಆ ಗುಣವಿಷಯವಾಗಿ ಶ್ರದ್ಧೆಯುಂಟಾಗುವುದೆಂದು ಭಾವವು. ಇಲ್ಲಿ ಮೇಲೆ ವಿವರಿಸಿರುವಂತೆ ಸತ್ವಾದಿಗುಣಯುಕ್ತವಾದ ದೇಹಕ್ಕೂ ಸತ್ವಾದಿಗುಣಯುಕ್ತಗಳಾದ ಇಂದ್ರಿಯಗಳಿಗೂ ಸತ್ವಾದಿಗುಣಯುಕ್ತವಾದ ವಿಷಯಾನುಭವಕ್ಕೂ ಅನುಸಾರವಾಗಿಯೆ ಶ್ರದ್ಧೆಯುಂಟಾಗುವುದೆಂದು ತಿಳಿಯಬೇಕು. ಈ ಚೇತನನು ಶ್ರದ್ಧಾಪರಿಣಾಮವಾದವನು, ಯೋ ಯಚ್ಛ್ರದ್ಧಸ್ಸ ಏವ ಸಃ-ಯಾವ

ಪುರುಷನು ಎಂತಹ ಶ್ರದ್ಧೆಯೊಡನೆ ಕೂಡಿರುವನೋ ಆ ಪುರುಷನು ಅಂತಹ ಶ್ರದ್ಧಾ ಪರಿಣಾಮವನ್ನು ಹೊಂದುತ್ತಾನೆಂದರಿತುಕೊಳ್ಳು, ಪುಣ್ಯಕರ್ಮ ಶ್ರದ್ಧೆಯುಳ್ಳವನಿಗೆ ಪುಣ್ಯ ಫಲವು ಪ್ರಾಪ್ತವಾಗುವುದು. ಪಾಪಕರ್ಮಶ್ರದ್ಧೆಯುಳ್ಳವನಿಗೆ ಪಾಪ ಫಲವು ಪ್ರಾಪ್ತವಾಗುವುದೆಂಬದಾಗಿ ಫಲಪ್ರಾಪ್ತಿಯಲ್ಲಿ ಶ್ರದ್ಧೆಯೇ ಪ್ರಧಾನ ಮೂಲವೆಂದರ್ಥವು. ... ॥೩॥

(ಗೀ॥ ವಿ) ಶ್ರದ್ಧೆಯು ತ್ರಿವಿಧವಾದರೆ ಆ ಶ್ರದ್ಧೆಯೊಡನೆ ಯಾಗಾದಿಗಳನ್ನು ಮಾಡುವಂಥಾ ಜೀವರು ಸಾತ್ವಿಕರೊ ? ರಾಜಸರೋ? ತಾಮಸರೊ ? ಎಂಬೀ ಪ್ರಶ್ನಕ್ಕೆ ಉತ್ತರವೇನಾಯಿತೆಂದರೆ ? ಅದನ್ನು ವಿವರಿಸುತ್ತಾನೆ. (ಅರ್ಥವೇನೊ (ರಾ॥ ಭಾ॥) ಪ್ರಕಾರವಾಗಿಯೇ ಇರುವುದು) ಕಿಂಚ- ಶ್ರದ್ಧೆಯು ಮನೋವೃತ್ತಿ ರೂಪವೆಂತಲೂ ಜೀವಸ್ವರೂಪ ಭೂತವೆಂತಲೂ ಎರಡು ವಿಧವಾಗಿರುವುದು. ಅದರಲ್ಲಿ ಸಾತ್ವಿಕಜೀವನಿಗೆ ಮನೋವೃತ್ತಿರೂಪವಾದ ರಾಜಸತಾಮಸ ಶ್ರದ್ಧೆಗಳು ಒಂದಾನೊಂದು ಕಾಲದಲ್ಲುಂಟಾಗುವುವು. ಅದರಂತೆಯೆ ರಾಜಸ ಜೀವನಿಗೆ ಸಾತ್ವಿಕ ತಾಮಸ ಶ್ರದ್ಧೆಗಳು ಒಂದಾನೊಂದು ಕಾಲದಲ್ಲುಂಟಾಗ ಬಹುದು. ಹ್ಯಾಗಾದರೂ ಸಾತ್ವಿಕರ ಅಂತಃಕರಣದಲ್ಲಿ ಬಹಳವಾಗಿ ಸಾತ್ವಿಕ ಶ್ರದ್ಧೆಯೇಅಭಿವ್ಯಕ್ತ ವಾಗುವುದು. ಈಪ್ರಕಾರವಾಗಿ ರಾಜಸ ತಾಮಸರ ಅಂತಃಕರಣದಲ್ಲಿ ರಾಜಸ ತಾಮಸಶ್ರದ್ಧೆಗಳೆ ಅಭಿವ್ಯಕ್ತವಾಗುವುದು. ಅಂಥಾ ಅಧಿಕವಾದ ಸಾತ್ವಿಕಾದಿಶ್ರದ್ಧೆಯಿಂದಜೀವರಿಗೆಸಾತ್ವಿಕತಾದಿಯನ್ನರಿಯಬೇಕು. ಅದಕ್ಕೆ"ಶ್ರದ್ಧಾಸ್ವರೂಪಂಜೀವಸ್ಯತಸ್ಮಾಚ್ಛ್ರದ್ಧಾವಿಭೇದತಃ।ಉತ್ತಮಾಧಮಮಧ್ಯಾಸ್ತುಜೀವಾಜ್ಞೇಯಾಃಪೃಥಕ್ಪೃಥಕ್॥ಸ್ವರೂಪ ಭೂತಾಶ್ರದ್ಧೈವ ತಮೋಗಾನಾಂಚಮೋಕ್ಷಿಣಾಂ । ಶಿಷ್ಯತೇ ಸಂಸ್ಕೃತಿಸ್ಥಾನಾಂ ಶ್ರದ್ಧಾರೂಪಂ ಮನೋಜನಂ॥ ತತ್ರಸ್ವರೂಪಂ ಶ್ರದ್ಧೈವವ್ಯಜ್ಯತೇ ಪ್ರಾಯಶಃಕ್ವಚಿತ್ । ಸಾತ್ವಿಕಸ್ಯ ತಮೋರೂಪಾಶ್ರದ್ಧಾಽನ್ತಃಕರಣಾತ್ಮಿಕಾ ॥ ಸಾತ್ವಿ

ಕೇತ್ರಾಮಸಸ್ಯಾಪಿಭೂಯಸಾತ್ವಿತ್ತದ್ವಿವಿಚ್ಯತೆ ,, ಎಂಬಗೀತಾತಾತ್ಪ ರ್ಯೋಕ್ತ ಪ್ರಮಾಣಗಳನ್ನರಿಯಬೇಕು. ... ||೩||

ಶ್ಲೋ|| ಯಜಂತೇಸಾತ್ತ್ವಿಕಾದೇವಾನ್ಯಕ್ಷರಕ್ಷಾಂಸಿ ರಾಜಸಾಃ|ಪ್ರೇತಾನ್ಭೂತಗಣಾಂಶ್ಚಾನ್ಯೇಯಜಂತೆತಾ ಮಸಾಜನಾಃ || ... ... ||೪||

ಪ|| ಯಜಂತೆ-ಸಾತ್ವಿಕಾಃ-ದೇವಾನ್-ಯಕ್ಷರಕ್ಷಾಂಸಿ-ರಾಜಸಾಃ| ಪ್ರೇತಾನ್-ಭೂತ ಗಣಾನ್-ಚ-ಅನ್ಯೆ-ಯಜಂತೆ ತಾಮಸಾಃ-ಜನಾಃ ||

(ಅ|| ರಾ|| ಭಾ) ಹಿಂದಿನ ಶ್ಲೋಕದಲ್ಲಿ ಹೇಳಿರುವ ಅರ್ಥವನ್ನೆ ವಿವರಿಸುತ್ತಾರೆ. ಸಾತ್ವಿಕಾಃ-ಸತ್ವಗುಣ ಪ್ರಚುರರಾದ ಪುರುಷರು, ದೇವಾನ್ಯಜಂತೆ-(ಸಾತ್ವಿಕಶ್ರದ್ಧಾಯುಕ್ತರಾಗಿ) ಇಂದ್ರಾದಿ ದೇವ ತೆಗಳನ್ನು ಆರಾಧಿಸುತ್ತಾರೆ. (ದುಃಖದೊಡನೆ ಸೇರದ ಉತ್ತಮ ಸುಖ ಕ್ಕೆ ಕಾರಣವಾದ ದೇವಯಾಗದಲ್ಲಿರುವ ಶ್ರದ್ಧೆಯು ಸಾತ್ವಿಕ ಶ್ರದ್ಧೆ ಯೆಂದರ್ಥವು.) ರಾಜಸಾಃ-ರಜೋಗುಣ ಪ್ರಚುರರಾದ ಪುರುಷರು, (ರಾಜಸ ಶ್ರದ್ಧೆಯೊಡನೆ ಕೂಡಿದವರಾಗಿ) ಯಕ್ಷರಕ್ಷಾಂಸಿ - ಯಕ್ಷರ ನ್ನೂ ರಾಕ್ಷಸರನ್ನೂ ಪೂಜಿಸುತ್ತಾರೆ. (ದುಃಖಮಿಶ್ರವಾದ ಅಲ್ಪ ಸುಖಕ್ಕೆ ಕಾರಣವಾಗಿರುವ ಯಕ್ಷಾದಿ ಯಾಗ ವಿಷಯವಾದ ಶ್ರದ್ಧೆ ಯು ರಾಜಸ ಶ್ರದ್ಧೆಯೆಂದರಿಯಬೇಕು. ಅನ್ಯೇ-ಸಾತ್ವಿಕರಾಜಸರಿ ಗಿಂತಲೂ ಅನ್ಯರಾದ, ತಾಮಸಾಜನಾಃ-ತಮೋಗುಣ ಪ್ರಚುರರಾದ ಪುರುಷರು, (ತಾಮಸ ಶ್ರದ್ಧೆಯೊಡನೆ ಕೂಡಿದವರಾಗಿ) ಪ್ರೇತಾನ್- ಪ್ರೇತಗಣಗಳನ್ನೂ,ಭೂತಗಣಾಂಶ್ಚ-ಭೂತಗಳೆನ್ನಲ್ಪಡುವದೇವಯೋ ನಿ ವಿಶೇಷಗಳ ಸಮೂಹಗಳನ್ನೂ, ಯಜಂತೆ-ಆರಾಧಿಸುತ್ತಾರೆ. ದುಃಖಪ್ರಾಯವಾಗಿರುವ ಅತ್ಯಲ್ಪವಾದ ಸುಖವನ್ನುಂಟುಮಾಡುವ ಪ್ರೇತಭೂತಗಣ ಯಾಗದಲ್ಲಿರುವ ಶ್ರದ್ಧೆಯು ತಾಮಸಶ್ರದ್ಧೆಯೆನ್ನ ಲ್ಪಡುವುದು. ... ... ... ||೪||

(ಗೀ|| ವಿ) ಶಾಸ್ತ್ರವಿಧಿ ಪ್ರಕಾರಗಳನ್ನು ತಿಳಿಯದೆ ಸಾತ್ವಿಕ ಶ್ರದ್ಧಾಮಾತ್ರದಿಂದ ಪೂಜಿಸುವಂತವರು ಬ್ರಹ್ಮಾದಿ ದೇವತೆಗಳಿಗೆ

ಅಂತರ್ಯಾಮಿಯಾದ ನಾರಾಯಣನನ್ನು ಪೂಜಿಸುತ್ತಾರೆ. ಅಂತವರು ಮೋಕ್ಷವನ್ನು ಹೊಂದುವರು. ರಾಜಸ ಶ್ರದ್ಧೆಯೊಡನೆ ಪೂಜಿಸುವಂತವರನುಷ್ಠಿಸುವ ಯಜ್ಞಾದಿಗಳಲ್ಲಿ ಆರಾಧಿಸಲ್ಪಟ್ಟವರು ದೇವತೆಗಳೇ ಆದರೂ ಅವರುಗಳು ಅಂತರ್ಯಾಮಿಯಾದ ನಾರಾಯಣನನ್ನು ಆರಾಧಿಸದೆ ಆ ದೇವತೆಗಳನ್ನುದ್ದೇಶಿಸಿಯೆ ಯಾಗಮಾಡಿರುತ್ತಾರಾದ್ದರಿಂದ ಅವರಿಗೆ ಆ ದೇವತೆಗಳ ಹೆಸರಿನಂತೆ ಹೆಸರುಳ್ಳ ಯಕ್ಷರು ಕಲ್ಪಿತವಾದ ಸ್ವರ್ಗಾದಿ ಫಲಗಳನ್ನು ಕೊಡುವರು. ಆದುದರಿಂದ ಈ ಯಾಗವು ರಾಜಸವೆನ್ನಲ್ಪಡುವುದು. ತಾಮಸ ಶ್ರದ್ಧೆಯುಳ್ಳವರು ಶಿವಪರಿಚಾರಕರಾದ ಭೂತಪ್ರೇತಪಿಶಾಚಾದಿಗಳನ್ನು ಪೂಜಿಸುವುರು. ಮತ್ತು ಅವರನ್ನೆ ಹೊಂದುವುರು. ಇಲ್ಲಿ ತಾಮಸ ಶ್ರದ್ಧೆಯುಳ್ಳವರು ಯಾರೆಂದರೆ ದೇವತಾಂತರಗಳನ್ನು ಪರಮಾತ್ಮನೊಡನೆ ಸಮತ್ವೇನ ತಿಳಿಯುವಂತವರೂ ಅಥವಾ ಪರಮಾತ್ಮನಿಗೆನೀಚತ್ವವನ್ನು ತಿಳಿಯುವಂತವರು. ಮತ್ತು ಜೀವಬ್ರಹ್ಮ ಭೇದವನ್ನೂ ಜಗನ್ಮಿಥ್ಯಾತ್ವವನ್ನೂ ತಿಳಿಯುತ್ತಾರೆಂದರಿಯಬೇಕು. ಇವರು ಶಿವಸ್ಕಂದಾದಿ ದೇವತೋದ್ದೇಶ್ಯದಿಂದ ಯಾಗವನ್ನು ಮಾಡಿದರು ಆ ದೇವತೆಗಳ ಹೆಸರನ್ನು ಹೊಂದಿರುವ ಭೂತಪ್ರೇತಗಳು ಆ ಯಜ್ಞಭಾಗವನ್ನು ಸ್ವೀಕರಿಸುತ್ತಾರೆ. ಇವರಿಗೆ ಭೂತಾದಿಯೊನಿಪ್ರಾಪ್ತಿಯೇ ಫಲವು. ಇದಕ್ಕೆ ಗೀತಾತಾತ್ಪರ್ಯದಲ್ಲಿ ಉದಾಹೃತವಚನಗಳನ್ನು ನೋಡಿಕೊಳ್ಳಬಹುದು. ‖೪‖

ಶ್ಲೋ॥ ಅಶಾಸ್ತ್ರವಿಹಿತಂಘೋರಂ ತಪ್ಯಂತೇಯೇತಪೋಜನಾಃ । ದಂಭಾಹಂಕಾರಸಂಯುಕ್ತಾಃಕಾಮರಾಗಬಲಾನ್ವಿತಾಃ ॥೫॥ ಕರ್ಶಯಂತಶ್ಶರೀರಸ್ಥಂಭೂತಗ್ರಾಮಮಚೇತಸಃ । ಮಾಂಚೈವಾಂತಶ್ಶರೀರಸ್ಥಂತಾನ್ವಿದ್ಧ್ಯಾಸುರನಿಶ್ಚಯಾನ್ ॥ ... ... ॥೬॥

ಪ॥ ಅಶಾಸ್ತ್ರವಿಹಿತಂ-ಘೋರಂ-ತಪ್ಯಂತೇ-ಯೇ-ತಪಃ-ಜನಾಃ । ದಂಭಾಹಂಕಾರಸಂಯುಕ್ತಾಃ-ಕಾಮರಾಗಬಲಾನ್ವಿತಾಃ ॥ ಕರ್ಶಯಂತಃ-ಶರೀರಸ್ಥಂ-ಭೂತಗ್ರಾಮಂ-ಅಚೇತಸಃ । ಮಾಂ-ಚ-ಏವ-ಅನ್ತಶ್ಶರೀರಸ್ಥಂ-ತಾನ್-ವಿದ್ಧಿ-ಆಸುರನಿಶ್ಚಯಾನ್॥

(ಅ॥ ರಾ॥ ಭಾ) ಈ ಪ್ರಕಾರವಾಗಿ ಶಾಸ್ತ್ರೀಯಂಗಳಾಗಿಯೂ ಶ್ರದ್ಧೆಯೊಡನೆ ಸೇರಿಯೂ ಇರುವ ಯಾಗಾದಿಗಳಲ್ಲಿಯೇ ಸತ್ವಾದಿ ಗುಣಭೇದದಿಂದ ಫಲವಿಶೇಷವು ಹೇಳಲ್ಪಟ್ಟಿತು. ಇನ್ನು ಮುಂದೆ ಅಶಾಸ್ತ್ರೀಯಂಗಳಾದ ತಪೋಯಾಗಾದಿಗಳು ನನ್ನ ಆಜ್ಞೆಗೆ ವಿಪರೀತಾನುಷ್ಠಾನ ರೂಪಗಳಾಗಿರುವುದರಿಂದ ಅವುಗಳಲ್ಲಿ ಯೆಷ್ಟುಮಟ್ಟಿಗೂ ಸುಖಲೇಶವೂ ಉಂಟಾಗಲಾರದು. ಮುಂದೇ ಒರುವುದೆಲ್ಲವೂ ಅನರ್ಥವೆ ಎಂಬೀ (ಮನಸ್ಸಿನಲ್ಲಿಟ್ಟುಕೊಂಡಿದ್ದ)ಅರ್ಥವನ್ನು ಪ್ರಕಾಶಪಡಿಸುತ್ತಾನೆಂದರಿಯಬೇಕು.

ಯೇಜನಾಃ-ಯಾವಜನರು, ಡಂಭಾಹಂಕಾರಸಂಯುಕ್ತಾಃ-(ಧಾರ್ಮಿಕನೆಂಬ ಖ್ಯಾತಿಗೋಸ್ಕರಧರ್ಮಾನುಷ್ಠಾನವನ್ನು ಮಾಡಬೇಕೆಂಬದಾಗಿ ನೆನೆಯುವಿಕೆಯೆಂಬ) ಡಂಭದೊಡನೆಯೂ, (ಈಶ್ವರಾದೃಷ್ಟಗಳು ಬೇಕೆಂಬುವುದು ಸುಳ್ಳು ನಾನೇ ಸಮಸ್ತ ಕಾರ್ಯವನ್ನೂ ಮಾಡುತ್ತೇನೆಂಬದಾಗಿ ನೆನೆಯುವಿಕೆಎಂಬ) ಅಹಂಕಾರದೊಡನೆಯೂ ಸೇರಿದವರಾಗಿಯೂ, ಕಾಮರಾಗಬಲಾನ್ವಿತಾಃ-(ನನ್ನ ಇಚ್ಛೆಯಿಂದಲೆ ಸಮಸ್ತವೂ ಉಂಟಾಗುವುದೆಂಬ) ಕಾಮದೊಡನೆಯೂ, (ಶಬ್ದಾದಿ ವಿಷಯೇಚ್ಛೆಯೆಂಬ) ರಾಗದೊಡನೆಯೂ, (ಸಮಸ್ತವೂ ಮಾಡಲ್ಪಡುವುದಕ್ಕೆ ನನ್ನ ಬಲವೇ ಸಾಕಾಗಿರುವುದೆಂಬದಾಗಿ ನೆನೆಯುವಿಕೆಯೆಂಬ) ಬಲದೊಡನೆಯೂ ಸೇರಿದವರಾಗಿಯೂ, ಅಚೇತಸಃ-ಶುದ್ಧವಾದ ಮನಸ್ಸಿಲ್ಲದವರಾಗಿಯೂ, ಶರೀರಸ್ಥಂಭೂತಗ್ರಾಮಂ ಕರ್ಶಯಂತಃ-ಶರೀರದಲ್ಲಿರುವ ಪೃಥಿವ್ಯಾದಿ ಭೂತಸಮೂಹವನ್ನು ಶ್ರಮಪಡಿಸುವಂತವರಾಗಿಯೂ, ಅಂತಶ್ಶರೀರಸ್ಥಂಮಾಂಚೈವ ಕರ್ಶಯಂತಃ- ಶರೀರದೊಳಗೆ ಇರುವ ನನಿಗೆ ಅಂಶಭೂತನಾದ ಜೀವಾತ್ಮನನ್ನೂ ಶ್ರಮಪಡಿಸುವಂತವರಾಗಿಯೂ, ಅಶಾಸ್ತ್ರವಿಹಿತಂ ಘೋರಂತಪಃ ತಪ್ಯಂತೆ - ಶಾಸ್ತ್ರವಿಹಿತವಾಗದ ಉಗ್ರವಾದ ಕಾಯಕ್ಲೇಶವೆಂಬ ತಪಸ್ಸನ್ನು ಮಾಡುತ್ತಾರೆಯೊ, ( ಇಲ್ಲಿ ಅಶಾಸ್ತ್ರವಿಹಿತಂ ಬಹ್ವಾಯಾಸಂಯಾಗಾದಿ ಕಂಚಯೇಕುರ್ವತೆ, ಎಂಬೀ ಮೂರು ವಾಕ್ಯಗಳನ್ನು ಸೇರಿಸಿಕೊಳ್ಳಬೇಕು. ಶಾಸ್ತ್ರವಿಹಿತವಲ್ಲದೆಯೂ ಅತ್ಯಂತವಾಗಿ ಶರೀ

ರ ಶ್ರಮವುಳ್ಳದ್ದಾಗಿಯೂ ಇರುವ ಯಾಗಾದಿಗಳನ್ನು ಯಾರಾದರೆ ಮಾಡುತ್ತಾರೆಯೊ.) ತಾನ್-ಅವರನ್ನು, ಆಸುರ ನಿಶ್ಚಯಾನ್ ವಿದ್ಧಿ-ಅಸುರರ ನಿಶ್ಚಯ ವುಳ್ಳವರನ್ನಾಗಿಯೂ ಆದುದರಿಂದಲೇ ನಮ್ಮ ಪೂಜೆಗೆ ವಿಪರೀತವನ್ನು ಮಾಡುವಂತವರನ್ನಾಗಿಯೂ ತಿಳಿದುಕೊಳ್ಳು. ಅವರಿಗೆ ಸುಖಲೇಶವೂ ಇಲ್ಲವು ಅವರು ನರಕದಲ್ಲಿಯೇ ಇರುವರೆಂತಲೂ ನೀನರಿತುಕೊಳ್ಳು. ಆದುದರಿಂದಲೆ " ಯೇಶಾಸ್ತ್ರ ವಿಧಿಮುತ್ಸೃಜ್ಯ " (೧೭॥೧॥) ಎಂಬದಾಗಿ ನೀನು ಕೇಳಿರುವುದಕ್ಕೆ ಇದೇ ಉತ್ತರವು. " ಪತಂತಿನರಕೇಽಶುಚೌ " ಎಂಬದಾಗಿ ಹಿಂದೆಯೇ ಹೇಳಿರುವೆವಷ್ಟೆ ... ... ... ॥೫॥೬॥

(ಶಂ)ಭೂತಗ್ರಾಮಂ-ಇಂದ್ರಿಯಗಳ ಸಮೂಹವನ್ನು, (ಗೀ॥ವಿ) ಇಂದ್ರಿಯಾಭಿಮಾನಿ ದೇವತೆಗಳಾದಲಕ್ಷ್ಮೀಮೊದಲಾದವರನ್ನು, ಅಂತಶ್ಶರೀರಸ್ಥಂಮಾಂಚೈವ - (ಶಂ) ಕರ್ಮವು, ಬುದ್ಧಿ, ಇವುಗಳಿಗೆ ಸಾಕ್ಷಿಭೂತನಾಗಿರುವ ನಾರಾಯಣನಾದ ನನ್ನನ್ನೂ, (ಗೀ॥ವಿ) ಅಂತಾ ಅಭಿಮಾನಿದೇವತೆಗಳನ್ನೂ ಅವರಿಗೆ ನಿಯಾಮಕನಾದ ನನ್ನನ್ನೂ, ಕರ್ಶಯಂತಃ - (ಶಂ) ಈ ಪದವನ್ನು ಇಂದ್ರಿಯ ಭೂತಸಮೂಹಗಳ ಪರವಾಗಿ ಸೇರಿಸುವ ಪಕ್ಷದಲ್ಲಿ ಕೃಶೀಕುರ್ವಂತಃ- ಇಂದ್ರಿಯಾದಿಗಳನ್ನು ಕೃಶಪಡಿಸುವನೆಂತಲೂ, (ಅನುಶಾಸನಾಕರಣಮೇವ,) ಆಜ್ಞಾವಿಘಾತುಕರೆಂತಲೂ, ಅರ್ಥವನ್ನರಿಯಬೇಕು. ಗೀ ॥ ವಿ) ಅಲ್ಪಗುಣವುಳ್ಳವನೆಂದೆನ್ನುತ್ತಾರೆ, ಕಾಮರಾಗಬಲಾನ್ವಿತಾಃ-(ಶಂ) ಕಾಮರಾಗಗಳಿಂದುಂಟಾದ ಬಲದಿಂಡನೆ ಕೂಡಿದವರಾಗಿಯೂ, ಘೋರಂ - (ಶಂ) ತನಗೂ ಅನ್ಯರಿಗೂ ದುಃಖವನ್ನುಂಟುಮಾಡುವ, (ಗೀ ॥ ವಿ) ಅತಿಕಷ್ಟವಾದ, ಆಸುರನಿಶ್ಚಯಾನ್-ಅಸುರಸ್ವಭಾವ ಮುಳ್ಳವರೆಂಬದಾಗಿ, ॥೫-೬॥

ಶ್ಲೋ ॥ ಆಹಾರಸ್ತ್ವಪಿಸರ್ವಸ್ಯತ್ರಿವಿಧೋಭವತಿಪ್ರಿ
ಯಃ । ಯಜ್ಞಸ್ತಪಸ್ತಥಾದಾನಂತೇಷಾಂಭೇದಮಿಮಂ
ಶೃಣು ॥ ... ... ॥೭॥

ಪ || ಆಹಾರಃ-ತು-ಅಪಿ-ಸರ್ವಸ್ಯ-ತ್ರಿವಿಧಃ-ಭವತಿ--ಪ್ರಿಯಃ | ಯಜ್ಞಃ-ತಪಃ-ತಥಾ ದಾನಂ-ತೇಷಾಂ-ಭೇದಂ-ಇಮಂ-ಶೃಣು ||

(ಅ) ಸರ್ವಸ್ಯತು - ಸಮಸ್ತರಿಗೂ, ಪ್ರಿಯಃ - ಪ್ರಿಯವಾದ, ಆಹಾರೋಪಿ - ಆಹಾರವೂ, ತ್ರಿವಿಧಃ - ಮೂರುವಿಧವಾಗಿ, ಭವತಿ - ಇರುವುದು, ಯಜ್ಞಃ-ಯಜ್ಞವೂ, ತಪಃ-ತಪಸ್ಸೂ, ದಾನಂ- ದಾನವೂ, ತಥಾ - ಆಪ್ರಕಾರವಾಗಿಯೆ (ಮೂರುವಿಧವಾಗಿ) ಇರುವದು. ತೇಷಾಂ- ಅವುಗಳ, ಇಮಂಭೇದಂ-ಇಂಥಾ ಭೇದವನ್ನು, ಶೃಣು-ಕೇಳು. ||೭||

(ಶಂ || ಭಾ) ರಸ್ಯಸ್ನಿಗ್ಧಾದಿಭೇದಗಳಿಂದ ಮುಂದೆವಿವರಿಸಲ್ಪಡುವ ಆಹಾರಗಳು ಕ್ರಮವಾಗಿ ಸಾತ್ವಿಕ ರಾಜಸತಾಮಸ ಪುರುಷರಿಗೆ ಪ್ರಿಯಗಳೆಂಬದಾಗಿ ಮುಂದಿನ ಶ್ಲೋಕಗಳಿಂದ ಹೇಳಲ್ಪಡುವುವು. ಏತಕ್ಕೆಂದರೆ ? ರಸ್ಯಸ್ನಿಗ್ಧಾದ್ಯಾಹಾರಗಳಲ್ಲಿ ಪ್ರೀತಿವಿಶೇಷವುಂಟಾಗುವಿಕೆ ಎಂಬ ಗುರುತುಗಳಿಂದ ಸಾತ್ವಿಕತ್ವರಾಜಸತ್ವತಾಮಸತ್ವಗಳನ್ನು ನಿರ್ಣಯಿಸಿಕೊಳ್ಳಬೇಕೆಂಬದಾಗಿ ತಿಳಿದುಕೊಂಡು ರಜಸ್ತಮೋ ಲಿಂಗಗಳುಳ್ಳ ಆಹಾರಗಳನ್ನು ಬಿಟ್ಟು ಸತ್ವಲಿಂಗಗಳುಳ್ಳ ಆಹಾರಗಳನ್ನು ಪರಿಗ್ರಹಿಸಬೇಕೆಂಬದಾಗಿ ಉದ್ದೇಶಿಸಿರುವರು. ಮತ್ತು ಯಜ್ಞತಪೋದಾನಗಳಿಗೂ ಕೂಡ ತ್ರೈವಿಧ್ಯವು ಹೇಳಲ್ಪಡುವುದರಿಂದ ಸಾತ್ವಿಕಯಜ್ಞತಪೋದಾನಗಳು ಸ್ವೀಕಾರ್ಯಗಳೆಂತಲೂ ರಾಜಸತಾಮಸ ಯಜ್ಞಾದಿಗಳು ಪರಿಹಾರ್ಯಗಳೆಂತಲೂ ತಿಳಿದುಕೊಳ್ಳಬೇಕೆಂಬದಾಗಿ ಉದ್ದೇಶಿಸಿರುವರು. ಆಪ್ರಕಾರವಾಗಿ ಉದ್ದೇಶಿಸಿಯೆ ಶ್ರೀಕೃಷ್ಣಸ್ವಾಮಿಯು ಇಲ್ಲಿ ಆಹಾರಯಜ್ಞಾದಿಗಳಿಗುಳ್ಳ ಸಾತ್ವಿಕರಾಜಸತಾಮಸತ್ವಗಳನ್ನ ಉಪದೇಶಿಸಲಾರಂಭಿಸಿರುವನೆಂದರಿಯಬೇಕು. ... ||೭||

( ರಾ||ಭಾ|| ) ಇನ್ನು, ಮುಂದೆಪ್ರಕೃತಗಳಾದ ಶಾಸ್ತ್ರೀಯಯಜ್ಞಾದಿಗಳಲ್ಲಿ ಸತ್ವಾದಿಗುಣಭೇದದಿಂದುಂಟಾದವಿಶೇಷವನ್ನು ಉಪದೇಶಿಸಲಿಚ್ಛೈಸಿಸತ್ವಾದಿವೃದ್ಧಿಯುತಾನುಸ್ವೀಕರಿಸುವ ಆಹಾರದಿಂದುಂಟಾಗಬೇಕಾಗಿರುವುದರಿಂದ ಮೊದಲು ಆಹಾರವುಮೂರುವಿಧವಾಗಿರುವುದೆನ್ನುತ್ತಾನೆ 'ಅನ್ನಮಯಂಹಿಸೋಮ್ಯಂಮನಃ-ಆಹಾರಶುದ್ಧೌಸತ್ವಶುದ್ಧಿಃ'' ಎಂಬದಾಗಿ ಶ್ರುತಿಪ್ರಮಾಣಗಳಿರುವುವು. ಸಕಲ ಪ್ರಾಣಿಗಳಿಗೂ

ಸತ್ವಾದಿಗುಣತ್ರಯಾನುಗುಣವಾಗಿ ಆಹಾರವೂ ಮೂರುವಿಧವಾಗಿ ಪ್ರೀತಿಯನ್ನುಂಟುಮಾಡುವುದು. ಆಪ್ರಕಾರವೆ ಯಜ್ಞಗಳೂ ಮೂರು ವಿಧಗಳೆ. ಅದರಂತೆ ತಪಸ್ಸು, ದಾನವು, ಇವುಗಳ ಭೇದವನ್ನು ಹೇಳುವೆನು. ಕೇಳು. ಆಹಾರವು, ಯಜ್ಞವು, ತಪಸ್ಸು ದಾನವು ಇವುಗಳಿಗೆ ಸತ್ವಾದಿಗುಣಗಳ ಸಂಬಂಧಾನುಗುಣವಾದ ಭೇದವನ್ನು ಹೇಳುವೆನು ಕೇಳೆಂದಭಿಪ್ರಾಯವು. ... ... ||೭||

ಶ್ಲೋ || ಆಯುಸ್ಸತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ | ರಸ್ಯಾಸ್ಸ್ನಿಗ್ಧಾಸ್ಥಿರಾಹೃದ್ಯಾಆಹಾರಾಸ್ಸಾತ್ವಿಕಪ್ರಿಯಾಃ || ... ... ||೮||

ಪ || ಆಯುಸ್ಸತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ | ರಸ್ಯಾಃ - ಸ್ನಿಗ್ಧಾಃ - ಸ್ಥಿರಾಃ - ಹೃದ್ಯಾಃ - ಆಹಾರಾಃ - ಸಾತ್ವಿಕಪ್ರಿಯಾಃ ||

( ಅ || ರಾ || ಭಾ ) ಆಯುಸ್ಸತ್ವ ಬಲಾರೋಗ್ಯ ಸುಖಪ್ರೀತಿ ವಿವರ್ಧನಾಃ - ಆಯುಸ್ಸಿಗೂ ಜ್ಞಾನಕ್ಕೂ ಶರೀರಬಲಕ್ಕೂ ಆರೋಗ್ಯಕ್ಕೂ ಸುಖಕ್ಕೂ ಪ್ರೀತಿಗೂ ವೃದ್ಧಿಹೇತುಗಳಾಗಿಯೂ, (ಪ್ರೀತಿಗೆ ವೃದ್ಧಿಹೇತುವೆಂಬುವುದು ಪ್ರೀತಿಕಾರಣವಾದ ತುಲಸೀವನ ನಿರ್ಮಾಣಾದಿ ಕೈಂಕರ್ಯಗಳಿಂದ ಎಂದರ್ಥವು.) ರಸ್ಯಾಃ-ಮಧುರ ರಸದೊಡನೆ ಕೂಡಿದವುಗಳಾಗಿಯೂ, ಸ್ನಿಗ್ಧಾಃ - ಸಾರವಿಹೀನಗಳಲ್ಲದವುಗಳಾಗಿಯೂ, ಸ್ಥಿರಾಃ - ಭೋಜನೋತ್ತರಕಾಲದಲ್ಲಿಯೆ ಜೀರ್ಣವಾಗದೆ ಪುನಶ್ಚ ಭೋಜನಕಾಲಪರ್ಯಂತವೂ ಹಸಿವನ್ನುಂಟುಮಾಡದವುಗಳಾಗಿಯೂ, ಹೃದ್ಯಾಃ-ಮನಸ್ಸಿಗೆ ರಮಣೀಯವಾಗಿರುವ ವರ್ಣವೇನು ಆಕಾರವೇನು ಇವುಗಳುಳ್ಳವುಗಳಾಗಿಯೂ ಇರುವ, ಆಹಾರಾಃ-ಈ ಪ್ರಕಾರವಾಗಿರುವ ಸತ್ವಗುಣಮಯವಾದ ಭೋಜ್ಯವಸ್ತುಗಳು, ಸಾತ್ವಿಕಪ್ರಿಯಾಃ-ಸತ್ವಗುಣಯುಕ್ತನಾದ ಪುರುಷನಿಗೆ ಇಷ್ಟಗಳಾಗಿರುವುವು. ||೮||

(ಶಂ) ಸತ್ವಂ - ಚಿತ್ತಸ್ಥೈರ್ಯವು. ಅಥವಾ ಉತ್ಸಾಹವು. ( ಗೀ|| ವಿ|| ) ಸಾಧುತ್ವವು ಅಥವಾ ಚಿತ್ತಶುದ್ಧಿಯು, ಸುಖಂ - (ಗೀ||ವಿ) ಒಂದುಕಾಲದಲ್ಲಿ ಸಲ್ಪವಾಗಿ ತಿಂದರೂ ಅದರಲ್ಲುಂಟಾಗುವಂತಹದ್ದಾಗಿ

ರುವ ಸುಖವು. ಪ್ರೀತಿ- (ಗೀ॥ ವಿ॥) ಭೋಜನವಮಾಡುವಕಾಲದಲ್ಲಿಯೆ ಉಂಟಾಗುವ ಸುಖವು. ರಸ್ಯಾಃ-(ಶಂ) ರಸಯುಕ್ತಗಳು, ಸ್ಥಿರಾಃ- ಕೆಲವುಕಾಲಾನಂತರ ಜೀರ್ಣವಾಗುವಂತವುಗಳು. ಹೃದ್ಯಾಃ- (ಗೀ॥ವಿ) ಮನೋಹರವಾಗಿರುವುವು. ಎಂದರೆ ಇನ್ನು ಬೇಕೆಂಬ ಅಪೇಕ್ಷೆಯು ನ್ನುಂಟು ಮಾಡತಕ್ಕವು. ... ... ॥೮॥

ಶ್ಲೋ॥ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ।
ಆಹಾರಾರಾಜಸಸ್ಯೇಷ್ಟಾದುಃಖಶೋಕಾಮಯಪ್ರದಾಃ ॥೯॥

ಪ॥ ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ! ಆಹಾರಾಃ - ರಾಜ ಸಸ್ಯ-ಇಷ್ಟಾಃ-ದುಃಖಶೋಕಾಮಯಪ್ರದಾಃ ॥

(ಅ॥ ರಾ॥ ಭಾ) ಕಟ್ವಮ್ಲ ಲವಣಾತ್ಯುಷ್ಣತೀಕ್ಷ್ಣರೂಕ್ಷ ವಿದಾಹಿನಃ - ಕೈಯಾಗಿರುವಂತವುಗಳಾಗಿಯೂ ಹುಳಿಯಾಗಿರುವಂತ ತವುಗಳಾಗಿಯೂ ಅತಿಲವಣಯುಕ್ತವಾದವುಗಳಾಗಿಯೂ ಅತ್ಯಂತ ಬಿಸಿಯುಳ್ಳವುಗಳಾಗಿಯೂ ಅತಿಶೈತ್ಯದಿಂದ ನಾಲಿಗೆಯಲ್ಲಿಡುವುದಕ್ಕೂ ಕೂಡ ಆಗದೆ ಇರುವಂತವುಗಳಾಗಿಯೂ ಶರೀರವನ್ನು ಹಣಿಗಿಸುವಂತ ವುಗಳಾಗಿಯೂ ತಾಪವನ್ನುಂಟುಮಾಡತಕ್ಕವುಗಳಾಗಿಯೂ. ದುಃಖ ಶೋಕಾಮಯಪ್ರದಾಃ - ಮನಸ್ಸಂತಾಪವನ್ನೂ ಬಾಹ್ಯೇಂದ್ರಿಯಗಳಿ ಗೂ ಶರೀರಕ್ಕೂ ಸಂತಾಪವನ್ನೂ ವ್ಯಾಧಿಗಳನ್ನೂ ವೃದ್ಧಿಮಾಡತಕ್ಕ ವುಗಳೂ ಆದ, ಆಹಾರಾಃ - ಭೋಜ್ಯವಸ್ತುಗಳು, ರಾಜಸಸ್ಯ-ರಜೋಗು ಣವು ಅಭಿವೃದ್ಧಿಹೊಂದಿರುವ ಪುರುಷನಿಗೆ, ಇಷ್ಟಾಃ - ಪ್ರಿಯಗಳಾ ಗಿರುವುವು. ... ... ॥೧೦॥

(ಶ್ರೀ) ದುಃಖವೆಂದರೆ ತಾತ್ಕಾಲಿಕವಾದ ಮನೋವ್ಯಸನವು ಶೋಕವೆಂದರೆ ದೀರ್ಘಕಾಲಿಕವಾದ ಮನೋವ್ಯಸನವು. ಅತಿ ಕೈಯಾ ಗಿಯೂ ಹುಳಿಯಾಗಿಯೂ ಅತಿ ಉಪ್ಪಾಗಿಯೂ ಅತ್ಯುಷ್ಣವಾಗಿಯೂ ಅತಿ ಶೀತವಾಗಿಯೂ, ಕಾರವಾಗಿಯೂ ಸ್ನೇಹ (ಯಣ್ಣೆ) ವಿಹೀನ ಗಳಾಗಿಯೂ ದಾಹವನ್ನುಂಟು ಮಾಡತಕ್ಕವುಗಳಾಗಿಯೂ ಶರೀರ ಶ್ರಮವು ಮನೋವ್ಯಾಕುಲತ್ವವು ರೋಗವು ಇವುಗಳನ್ನುಂಟುಮಾಡತ

ಕ್ಕವುಗಳಾಗಿಯೂ ಇರುವ ಆಹಾರಗಳು ರಜೋಗುಣವುಳ್ಳವನಿಗೆ ಇಷ್ಟ
ಗಳಾಗಿರುವುವು. ... ... ॥೯॥

ಶ್ಲೋ॥ ಯಾತಯಾಮಂಗತರಸಂಪೂತಿಪರ್ಯುಷಿತಂಚ
ಯತ್ । ಉಚ್ಛಿಷ್ಟಮಪಿಚಾಮೇಧ್ಯಂಭೋಜನಂತಾಮ
ಸಪ್ರಿಯಂ ॥ ... ... ॥೧೦॥

ಪ ॥ ಯಾತಯಾಮಂ - ಗತರಸಂ-ಪೂತಿ-ಪರ್ಯುಷಿತಂ-ಚ-ಯತ್।ಉಚ್ಛಿಷ್ಟಂ-
ಅಪಿ-ಚ-ಅಮೇಧ್ಯಂ-ಭೋಜನಂ-ತಾಮಸಪ್ರಿಯಂ ॥

(ಅ ॥ ರಾ ॥ ಭಾ) ಯಾತಯಾಮಂ - ಬಹುಕಾಲವಾದದ್ದಾಗಿ
ಯೂ,(ಶ್ರೀ)ಆರಿಹೋದದ್ದಾಗಿಯೂ,(ಶಂ)ಮಂದಪಕ್ವಂ-ಚನ್ನಾಗಿಪಕ್ವ
ವಾಗದೆಇರುವುದು,ಗತರಸಂ-ತನ್ನ ಸಾರವು ತೆಗೆಯಲ್ಪಟ್ಟದ್ದಾಗಿಯೂ,
(ಸಾರವಿಹೀನಗಳಾಗಿಯೂ ಎಂದರ್ಥವು) ಪೂತಿ-ದುರ್ಗಂಧವುಳ್ಳದ್ದಾಗಿ
ಯೂ,ಪರ್ಯುಷಿತಂ-ಯಾವದಾದರೆ ಕಾಲಾತೀತವಾಗಿರುವುದರಿಂದ ಬೇರೆ
ಸಾರವುಳ್ಳದ್ದಾಗಿರುವುದೊ ಅಂಥಾದ್ದಾಗಿಯೂ, ಉಚ್ಛಿಷ್ಟಮಪಿ-ಸದಾ
ಚಾರ್ಯರೆಮೊದಲಾದವರಿಗಿಂತಲೂ ಅನ್ಯರಿಂದ ಭೋಜನಮಾಡಲ್ಪಟ್ಟು
ಮಿಕ್ಕಿರುವುದಾಗಿಯೂ, ಅಮೇಧ್ಯಂಚ- ವೈಶ್ವದೇವೋಪಯುಕ್ತವಾಗ
ದೆಯೂ ಇರುವ, ಭೋಜನಂ - ತಮೋಮಯವಾದ ಇಂಥಾ ಭೋಜ್ಯವ
ಸ್ತುವು, ತಾಮಸಪ್ರಿಯಂ - ತಮೋಗುಣಾಭಿವೃದ್ಧಿಯುಳ್ಳ ಪುರುಷನಿಗೆ
ಪ್ರಿಯವಾಗಿರುವುದು. ಆದುದರಿಂದ ತನ್ನ ಹಿತವನ್ನು ಹುಡುಕತಕ್ಕವ
ನು ಸತ್ವಗುಣಾಭಿವೃದ್ಧಿಗಾಗಿ ಸಾತ್ವಿಕಾಹಾರವನ್ನೆ ಭುಜಿಸಬೇಕೆಂದು
ತಾತ್ಪರ್ಯವು, ... ... ॥೧೦॥

ಶ್ಲೋ॥ ಅಫಲಾಕಾಂಕ್ಷಿಭಿರ್ಯಜ್ಞೋವಿಧಿದೃಷ್ಟೋಯ
ಇಜ್ಯತೆ।ಯಷ್ಟವ್ಯಮೇವೇತಿಮನಸ್ಸಮಾಧಾಯಸಸಾ
ತ್ವಿಕಃ ॥ ... ... ॥೧೧॥

ಪ॥ ಅಫಲಾಕಾಂಕ್ಷಿಭಿಃ-ಯಜ್ಞಃ-ವಿಧಿದೃಷ್ಟಃ-ಯಃ-ಇಜ್ಯತೆ । ಯಷ್ಟವ್ಯಂ-ಏವ-
ಇತಿ-ಮನಃ-ಸಮಾಧಾಯ-ಸಃ-ಸಾತ್ವಿಕಃ ॥

(ಅ॥ ರಾ॥ ಭಾ) ಅಫಲಾಕಾಂಕ್ಷಿಭಿಃ-ಫಲದಲ್ಲಪೇಕ್ಷಾಶೂನ್ಯ

ರಾಗಿ ಯಾಗ ಮಾಡತಕ್ಕವರಿಂದ, ವಿಧಿದೃಷ್ಟಃ- (ಈ ಯಜ್ಞಕ್ಕೆ ಈ ಶ್ರುತಿಯು ವಿಧಾಯಕವು, ಇದಕ್ಕೆ ಸಾಮಾನ್ಯಾತಿದೇಶದಿಂದಲೂ ವಿಶೇಷಾತಿದೇಶದಿಂದಲೂ ಬಂದ ಅಂಗಗಳಿವು,ಇದರ ಫಲವಿದು ಈ ಫಲವು ನಶ್ವರ (ಅಸ್ಥಿರ)ವಾದ್ದರಿಂದಲೂ ಸ್ವರೂಪ ಪ್ರಾಪ್ತವಾದಭಗವತ್ಪ್ರಾಪ್ತಿಗೆ ವಿರೋಧಿಯಾಗಿರುವುದರಿಂದಲೂಮುಮುಕ್ಷುವಾದ ನನಗೆ ತ್ಯಾಜ್ಯವೆಂದೀರೀತಿಯಾಗಿ) ವೇದವೆಂಬ ಶಾಸ್ತ್ರದಿಂದಲೂ ಅದರ ಅಂಗಗಳಾದ ಕಲ್ಪಸೂತ್ರದಿಂದಲೂ ತಿಳಿಯಲ್ಪಡತಕ್ಕದ್ದಾಗಿಯೂ, ಯುಕ್ತಃ-ಮಂತ್ರಗಳಿಂದಲೂ ದಕ್ಷಿಣಾದ್ರವ್ಯಗಳಿಂದಲೂ ದೃಷ್ಟಾದೃಷ್ಟ ಫಲಪ್ರದಗಳಾದ ಕ್ರಿಯಾ ಕಲಾಪಗಳಿಂದಲೂ ಹಿಂದು ಮುಂದೆಂಬ ಕ್ರಮಗಳಿಂದಲೂ ಸ್ವಲ್ಪವೂ ವ್ಯತ್ಯಾಸವಿಲ್ಲದೇ ಸೇರಿರುವುದಾಗಿಯೂ, ಯಷ್ಟವ್ಯಮೇವೇತಿಮನಸ್ಸಮಾಧಾಯ-ಕೇವಲಭಗವದಾರಾಧನ ರೂಪದಿಂದ ಸ್ವಯಂಪ್ರಯೋಜನವಾಗಿ ನನ್ನಿಂದಯಾಗಮಾಡತಕ್ಕದ್ದೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡು, ಇಜ್ಯತೆ-ಯಾವ ಯಾಗವು ನುಷ್ಠಿಸಲ್ಪಡುವುದೊ, ಸಃ -ಆ ಯಾಗವು, ಸಾತ್ವಿಕಃ-ಸತ್ವಗುಣ ಮೂಲಕವು. ಸಾತ್ವಿಕವಾದ ಜ್ಞಾನವೃದ್ಧ್ಯಾದಿ ಫಲಪರಂಪರೆಯನ್ನುಂಟುಮಾಡುವುದೆಂದು ತಾತ್ಪರ್ಯವು. ... ॥೧೧॥

(ಶಂ॥ ಭಾ) ಮುಂದೇ ಮೂರು ವಿಧಗಳಾದ ಯಜ್ಞಗಳನ್ನು ಕ್ರಮವಾಗಿ ಮೂರು ಶ್ಲೋಕಗಳಿಂದ ಹೇಳುತ್ತಾರೆ. ಅವುಗಳಲ್ಲೀ ಶ್ಲೋಕದಲ್ಲಿ ಸಾತ್ವಿಕಯಜ್ಞವು ಪ್ರತಿಪಾದಿಸಲ್ಪಡುವುದು. ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿರುವುದರಿಂದ ಇವುಗಳನ್ನನುಷ್ಠಿಸುವುದುನನಗೆಆ ವಿಧಿಯಾಗಿರುವುದು, ಅಷ್ಟಲ್ಲದೆ ಇದರಿಂದಲೆ ನಾನು ಪುರುಷಾರ್ಥಗಳನ್ನಪೇಕ್ಷಿಸಲಾರೆನು ಎಂಬೀ ನಿಶ್ಚಯದಿಂದ ಆಚರಿಸಲ್ಪಡುವ ಯಜ್ಞವು ಸಾತ್ವಿಕಯಜ್ಞವೆಂದು ಹಿರಿಯರಿಂದ ಹೇಳಲ್ಪಡುವುದು. ॥೧೧॥

ಶ್ಲೋ॥ ಅಭಿಸಂಧಾಯತುಫಲಂ ದಂಭಾರ್ಥಮಪಿಚೈವಯತ್ | ಇಜ್ಯತೇಭರತಶ್ರೇಷ್ಠ ತಂಯಜ್ಞಂವಿದ್ಧಿರಾಜಸಂ ॥ ... ... ॥೧೨॥

ಪ॥ ಅಭಿಸಂಧಾಯ-ತು-ಫಲಂ-ದಂಭಾರ್ಥಂ-ಅಪಿ-ಚ-ಏವ-ಯತ್ । ಇಜ್ಯತೇ-ಭರತಶ್ರೇಷ್ಠ-ತಂ-ಯಜ್ಞಂ-ವಿದ್ಧಿ-ರಾಜಸಂ ॥

(ಅ॥ರಾ॥ಭಾ॥) ಭರತಶ್ರೇಷ್ಠ-ಭರತ ವಂಶ್ಯರಲ್ಲಿ ಶ್ರೇಷ್ಠನಾದ ಎಲೈ ಅರ್ಜುನನೆ! ಫಲಮಭಿಸಂಧಾಯ - ಫಲವನ್ನುದ್ದೇಶಿಸಿ, ಡಂಭಾರ್ಥಮಪಿಚೈವ-ಧಾರ್ಮಿಕನೆಂಬ ಖ್ಯಾತಿಗಾಗಿಯೂ, ಯತ್ - ಯಾವಯಜ್ಞವು, ಇಜ್ಯತೆ-ಅನುಷ್ಠಿಸಲ್ಪಡುವುದೊ, ತಂಯಜ್ಞಂ-ಆ ಯಜ್ಞವನ್ನು, ರಾಜಸಂವಿದ್ಧಿ-ರಜೋಗುಣಮೂಲಕವೆಂದರಿತುಕೊಳ್ಳು. ಲೋಭಪ್ರವೃತ್ತ್ಯಾದಿ ರಾಜಸ ಫಲಪರಂಪರೆಯನ್ನು ತರುವುದೆಂದು ತಾತ್ಪರ್ಯವು. ... ... ॥೧೨॥

(ಶಂ॥ ಭಾ) ರಾಜಸ ಯಜ್ಞವು ಪರಿತ್ಯಾಜ್ಯವೆಂಬದಾಗಿ ಇಲ್ಲಿ ಹೇಳುತ್ತಾರೆ. ಸ್ವರ್ಗಾದಿ ಫಲಗಳನ್ನುದ್ದೇಶಿಸಿಯೂ ಇಹಲೋಕದಲ್ಲಿ ಧಾರ್ಮಿಕನೆಂಬ ಖ್ಯಾತಿಲಾಭವನ್ನುದ್ದೇಶಿಸಿ ದಂಭಕ್ಕಾಗಿಯೂ, ಮಾಡಲ್ಪಡುವ ಯಜ್ಞವುರಜೋಗುಣ ಪ್ರಾಧಾನ್ಯದಿಂದಆಚರಿಸಲ್ಪಡುವುದಾಗಿರುವುದರಿಂದ ಅಂಥಾ ರಾಜಸ ಯಜ್ಞಗಳನ್ನು ಅನುಷ್ಠಿಸಕೂಡದೆಂದು ಭಾವವು. ... ... ॥೧೨॥

ಶ್ಲೋ॥ ವಿಧಿಹೀನಮಸೃಷ್ಟಾನ್ನಂಮಂತ್ರಹೀನಮದಕ್ಷಿ
ಣಂ।ಶ್ರದ್ಧಾವಿರಹಿತಂಯಜ್ಞಂತಾಮಸಂಪರಿಚಕ್ಷತೇ॥೧೩॥

ಪ॥ ವಿಧಿಹೀನಂ-ಅಸೃಷ್ಟಾನ್ನಂ-ಮಂತ್ರಹೀನಂ-ಅದಕ್ಷಿಣಂ । ಶ್ರದ್ಧಾವಿರಹಿತಂ-ಯಜ್ಞಂ-ತಾಮಸಂ-ಪರಿಚಕ್ಷತೆ ॥

( ಅ॥ ರಾ॥ಭಾ॥ ) ವಿಧಿಹೀನಂ-ಬ್ರಾಹ್ಮಣೋಕ್ತಿವಿಹೀನವಾಗಿಯೂ,(ಪಂಡಿತೋತ್ತಮರಾಗಿರುವ ಬ್ರಾಹ್ಮಣೋತ್ತಮರಿಂದ ನೀನು ಯಜ್ಞವನ್ನು ಮಾಡೆಂಬ ಅನುಜ್ಞಾ ವಚನವನ್ನುಹೊಂದದೆಅನುಷ್ಠಿಸಲ್ಪಟ್ಟು,) ಅಸೃಷ್ಟಾನ್ನಂ-ಶಾಸ್ತ್ರವು ವಿಧಿಸದಮಾರ್ಗದಲ್ಲಿ ಸೇರಿದ ದ್ರವ್ಯದಿಂದ ಮಾಡಲ್ಪಡುವುದಾಗಿಯೂ, ಮಂತ್ರಹೀನಂ-ಭೃತಕಾಧ್ಯಯನಾದಿಗಳಿಂದ ಶಾಸ್ತ್ರನಿಷಿದ್ಧಗಳಾಗಿರುವ ಮಾರ್ಗಗಳಿಂದ ವೇದವನ್ನು ಅಧಿಕರಿಸಿದವರಾಗಿಯೂ ವೇದವ್ರತಾನುಷ್ಠಾನ ವಿಲ್ಲದವರಾಗಿಯೂ ಉಪಾಕರಣೋತ್ಸರ್ಜನಾದಿತ್ಯಾಗಿಗಳಾಗಿಯೂ ಷಡ್ವಿಧವೇದ

ವಿಕ್ರಯಿಗಳಾಗಿಯೂ ಆಚಾರ ಶೂನ್ಯರಾಗಿಯೂ ಅವೇದ ಸಂತತಿಗೆ ಳಾಗಿಯೂ ಸ್ವರವರ್ಣಭ್ರಂಶಾದಿ ದುಷ್ಟಪಾಠಗಳುಳ್ಳವರಾಗಿಯೂ ಇರುವ ಋತ್ವಿಕ್ಕುಗಳೊಡನೆ ಕೂಡಿರುವುದಾಗಿಯೂ, (ಮಂತ್ರ ಶುದ್ಧಿರಹಿತವಾಗಿಯೂ ಎಂದರ್ಥವು) ಅ ದಕ್ಷಿಣಂ-ದಕ್ಷಿಣಾವಿಧಿ ಪ್ರಕಾ ರವಾಗಿ ದಕ್ಷಿಣೆಗಳನ್ನು ಕೊಡದೆ ಇರುವಂತಾದ್ದಾಗಿಯೂ, ಶ್ರದ್ಧಾವಿ ರಹಿತಂ-ಶ್ರದ್ಧೆಯಿಂದ ಬಿಡಲ್ಪಟ್ಟದ್ದಾಗಿಯೂ ಇರುವ, ಯಜ್ಞಂ-ಇಂ ಥಾಯಜ್ಞವನ್ನು, ತಾಮಸಂ-ತಮೋಗುಣ ಮೂಲಕವೆಂಬದಾಗಿ, ಪರಿ ಚಕ್ಷತೆ-ಹೇಳುತ್ತಾರೆ. ಮೇಲುಮೇಲೆ ತಾಮಸ ಫಲಪರಂಪರೆಯನ್ನು ಕೊಡುವುದೆಂದರ್ಥವು. ... ... ||೧೩||

(ಶಂ|| ಭಾ) ಶ್ರುತಿಸ್ಮೃತಿಗಳಲ್ಲಿ ವಿಧಿಸಲ್ಪಟ್ಟಿರುವ ಕ್ರಮಕ್ಕೆ ವ್ಯತಿರಿಕ್ತವಾಗಿ ಮಾಡಲ್ಪಟ್ಟದಾಗಿಯೂ ಬ್ರಾಹ್ಮಣರನ್ನು ಅನ್ನದಾನ ದಿಂದ ತೃಪ್ತಿಹೊಂದಿಸದೆ ಮಾಡಲ್ಪಡುವುದಾಗಿಯೂ ಮಂತ್ರದಿಂದಲೂ ಸ್ವರದಿಂದಲೂ ವರ್ಣದಿಂದಲೂ ವಿಯುಕ್ತವಾದ ವೇದಮಂತ್ರಗಳನ್ನು ಚ್ಚರಿಸುವ ಅಸಂಸ್ಕೃತ ಋತ್ವಿಕ್ಕುಗಳೊಡನೆ ಕೂಡಿರುವುದಾಗಿಯೂ ವೇದೋಕ್ತ ದಕ್ಷಿಣಾ ರಹಿತವಾಗಿಯೂ ಶ್ರದ್ಧಾವಿರಹಿತವಾಗಿಯೂ, ಇರುವ ಯಜ್ಞವನ್ನು ತಾಮಸವೆಂದು ಹೇಳುವರು. ... ||೧೩||

ಶ್ಲೋ|| ದೇವದ್ವಿಜಗುರುಪ್ರಾಜ್ಞಪೂಜನಂಶೌಚಮಾ
ರ್ಜವಂ | ಬ್ರಹ್ಮಚರ್ಯಮಹಿಂಸಾಚಶಾರೀರಂತಪಉ
ಚ್ಯತೇ || ... ... ... ||೧೪||

ಪ|| ದೇವದ್ವಿಜಗುರುಪ್ರಾಜ್ಞಪೂಜನಂ-ಶೌಚಂ-ಆರ್ಜವಂ | ಬ್ರಹ್ಮಚರ್ಯಂ-ಅಹಿಂಸಾ-ಚ-ಶಾರೀರಂ-ತಪಃ-ಉಚ್ಯತೇ ||

(ಅ|| ರಾ|| ಭಾ) ಇನ್ನು ಮುಂದೆ ತಪಸ್ಸನ್ನು ಮೂರುವಿಧಗ ಳಾಗಿ ಹೇಳಲುದ್ದೇಶಿಸಿ ಮೊದಲು ಆತಪಸ್ಸು ಶರೀರ ನಿಷ್ಪಾದ್ಯವೆಂ ತಲೂ ವಾಕ್ ನಿಷ್ಪಾದ್ಯವೆಂತಲೂಮನೋನಿಷ್ಪಾದ್ಯವೆಂತಲೂ ಮೂರು ವಿಧವಾಗಿರುವುದೆಂದು ಹೇಳುತ್ತಾರೆ. ದೇವದ್ವಿಜಗುರು ಪ್ರಾಜ್ಞಪೂ ಜನಂ-ಸರ್ವಪೂಜ್ಯನಾದ ಶ್ರೀಮನ್ನಾರಾಯಣನೇನು, ಬ್ರಾಹ್ಮಣರೇನು

ತಾಯಿತಂದೆ ಮಾತುಲ (ತಾಯಿಯ ಒಡಹುಟ್ಟಿದವನು) ಮಾತಾಮ ಹಾ (ತಾಯಿಯ ತಂದೆ) ಇಗಳಾದ ಗುರುಗಳೇನು. ಜ್ಞಾನಿಗಳೇನು, ಇವರುಗಳ ವಿಷಯವಾಗಿಮಾಡತಕ್ಕಆರಾಧನವೂ, ಶೌಚಂ- (ಪುಷ್ಕರಗಂಗಾಕಾವೇ ರೀಚಂದ್ರಪುಷ್ಕರಿಣೀಸ್ವಾಮಿಪುಷ್ಕರಿಣೀಧನುಷ್ಕೋಟೀತಾಮ್ರಪರ್ಣೀ ಪ್ರಭೃತಿಗಳಾದ) ಪುಣ್ಯತೀರ್ಥಗಳಸ್ನಾನವೇ ಮೊದಲಾದ ಶುದ್ಧಿಹೇತುಗ ಳಾದ ಕ್ರಿಯೆಗಳೂ, ಆರ್ಜವಂ- ವಾಕ್ಕಿನಲ್ಲಿಯೂ ಮನಸ್ಸಿನಲ್ಲಿಯೂ ಶರೀರದಲ್ಲಿಯೂ ಏಕರೂಪವಾದ ನಡತೆಯೂ, ಬ್ರಹ್ಮಚರ್ಯಂ-ಸ್ತ್ರೀಜ ನನಲ್ಲಿ ಭೋಗ್ಯತೆಯೊಡನೆ ಸೇರಿದ ವಿಟನಿರೀಕ್ಷಣಾದಿಗಳನ್ನು ಬಿಟ್ಟಿರು ವಿಕೆಯೂ, ಅಹಿಂಸಾಚ-ಪ್ರಾಣಿಗಳನ್ನು ಪೀಡಿಸದೆ ಇರುವಿಕೆಯೂ, ಏತ ತ್-ಮೇಲೆಹೇಳಿರುವ ಇದು,(ಶಾರೀರಂ ತಪ ಉಚ್ಯತೆ-ಶರೀರದಿಂದ ಮಾ ಡತಕ್ಕ) ತಪಸ್ಸೆಂಬದಾಗಿ ಹೇಳಲ್ಪಡುವುದು. ... ‖೧೪‖

(ಅ ‖ ಗ‖) ದೇವತೆಗಳು ಬ್ರಹ್ಮ ವಿಷ್ಣು ಶಿವಾಗಳು, ದ್ವಿಜರೆಂ ದರೆ ಪೂಜ್ಯರಿಗೂ ಪೂಜ್ಯರಾದ ಬ್ರಾಹ್ಮಣೋತ್ತಮರು, ಗುರುಗಳು ತಾಯಿ ತಂದೇ ಮೊದಲಾದವರು, ಪ್ರಾಜ್ಞರೆಂದರೆ ಪಂಡಿ ತರು, ಶೌಚವೆಂದರೆ ಮಣ್ಣಿನಿಂದಲೂ ನೀರಿನಿಂದಲೂ ಮಾಡತಕ್ಕ ಶರೀರ ಶೋಧನವು, ಆರ್ಜವಂ - ಋಜುತ್ವವು, ಕುಟಿಲತ್ವವಿಲ್ಲದೆ ಇರುವಿಕೆಯು,(ವಿಹಿತಪ್ರತಿಷಿದ್ಧಯೊರೇಕ ರೂಪಪ್ರವೃತ್ತಿನಿವೃತ್ತಿಮ ತ್ತ್ವಂ ) ಬ್ರಹ್ಮಚರ್ಯಂ-ಸ್ತ್ರೀಸಂಗದಲ್ಲಿಪ್ರವೃತ್ತಿಶೂನ್ಯನಾಗಿರುವಿಕೆ ಯು, ಅಹಿಂಸಾ-ಪ್ರಾಣಿಗಳನ್ನು ಪೀಡಿಸದೆ ಇರುವಿಕೆಯು. ‖೧೪‖

ಶ್ಲೋ ‖ ಅನುದ್ವೇಗಕರಂವಾಕ್ಯಂಸತ್ಯಂಪ್ರಿಯಹಿತಂಚ
ಯತ್ | ಸ್ವಾಧ್ಯಾಯಾಭ್ಯಸನಂಚೈವವಾಙ್ಮಯಂತ
ಪಉಚ್ಯತೆ ‖ ... ... ‖೧೫‖

ಪ ‖ ಅನುದ್ವೇಗಕರಂ - ವಾಕ್ಯಂ - ಸತ್ಯಂ - ಪ್ರಿಯಹಿತಂ-ಚ - ಯತ್ - ಸ್ವಾ ಧ್ಯಾಯಾಭ್ಯಸನಂ - ಚ ಏವ - ವಾಙ್ಮಯಂ - ತಪಃ - ಉಚ್ಯತೆ ‖

(ಅ ‖ ರಾ ‖ ಭಾ ) ಅನುದ್ವೇಗಕರಂ-ಅನ್ಯರಿಗೆ ಕಿವಿಸುಡುವಂತೆ ಇರದೆ ಯೂ, ಸತ್ಯಂ - ನೊಡಿರುವಂತಾದ್ದಾಗಿಯೂ, ಪ್ರಿಯಹಿತಂಚ-

ಪ್ರಿಯವಾಗಿಯೂ ಹಿತವಾಗಿಯೂ, (ಆವಾಗಕೇಳುವುದಕ್ಕೆ ಪ್ರಿಯವಾಗಿಯೂ ಮುಂದೆ ಬರುವ ಕಾಲಕ್ಕೆ ಹಿತವಾಗಿಯೂ ಇರುವ) ಯದ್ವಾಕ್ಯಂ - ಯಾವವಾಕ್ಯವುಂಟೋ, ತತ್-ಅದೂ, ಸ್ವಾಧ್ಯಾಯಾಭ್ಯಸನಂ ಚೈವ-ವೇದಾಭ್ಯಾಸವೂ, ವಾಙ್ಮಯಂತಪಉಚ್ಯತೆ-ವಾಕ್ಕಿನಿಂದ ಮಾಡತಕ್ಕತಪಸ್ಸೆಂಬದಾಗಿ ಹೇಳಲ್ಪಡುವುದು. ||೧೫||

(ಶಂ || ಭಾ ) ವಾಚಿಕವಾದ ತಪಸ್ಸಿನ್ನಿ ವಿವರಿಸಲ್ಪಡುವುದು. ಇತರರ ನನ್ಮ್ಕವಿಷಯವಾಗಿ ಪ್ರಯೋಗಿಸಲ್ಪಡುವ ವಾಕ್ಯಕ್ಕೆ ಸತ್ಯಪ್ರಿಯಹಿತಾನುದ್ವೇಗಕರತ್ವಾದಿಗಳಲ್ಲಿ ಯಾವದಾದರೊಂದು, ಅಥವಾ ಎರಡಾದರೂ ಮೂರಾದರೂ ಇಲ್ಲದೆ ಹೋದರೆ ಅದುವಾಙ್ಮಯ ತಪಸ್ಸೆನ್ನಲ್ಪಡಲಾರದು. ಆ ಪ್ರಕಾರವೆ ಸತ್ಯವಾಕ್ಯಕ್ಕೆ ಪ್ರಿಯತ್ವಾದಿಗಳಲ್ಲಿ ಯಾವದು ಇಲ್ಲದಿದ್ದರೂ, ಪ್ರಿಯವಾಕ್ಯಕ್ಕೂ ಸತ್ಯತ್ವಾದಿಗಳಲ್ಲಿಯಾವದಿಲ್ಲದೇ ಇದ್ದರೂ, ಹಾಗೆಯೆ ಹಿತವಾಕ್ಯಕ್ಕೆ ಸತ್ಯತ್ವಪ್ರಿಯತ್ವಾದಿಗಳಲ್ಲಿಯಾವದಿಲ್ಲದೇ ಇದ್ದರೂ ಅದುವಾಙ್ಮಯತಪಸ್ಸಾಗಲಾರದೆಂದರಿಯಬೇಕು.ಮುಂದಕ್ಕೆ ಶ್ರೇಯಸ್ಸಾಧಕವಲ್ಲದೆ ಇದ್ದರೂ ತತ್ಕಾಲದಲ್ಲಿಸುಖಕರವಾಗಿರುವ ವಾಕ್ಯವಾದರೂ ಕಾರ್ಯವಾದರೂ ಪ್ರಿಯವೇನ್ನಲ್ಪಡಲಾರದು. ತತ್ಕಾಲದಲ್ಲಿ ಆಯಾಸಕರವಾಗಿದ್ದರು ಅನಂತರದಲ್ಲಿ ಶ್ರೇಯಸ್ಸನ್ನುಂಟುಮಾಡುವವಾಕ್ಯವಾದರೂಕಾರ್ಯವಾದರೂಹಿತವೆನ್ನಲ್ಪಡುವುದು ಹೀಗಿರುವಲ್ಲಿ ಯಾವ ವಾಕ್ಯವು ಸತ್ಯವಾಗಿಯೂ ಅನುದ್ವೇಗಕರವಾಗಿಯೂ ಪ್ರಿಯಹಿತವಾಗಿಯೂ ಇರುವುದೊ ಅದುಮಹಾಶ್ರೇಷ್ಠವಾದ ವಾಙ್ಮಯತಪಸ್ಸೆನ್ನಲು ಸಂಶಯವೇನು ? (ಅದಕ್ಕೆ ದೃಷ್ಟಾಂತವು. ಎಲೈ ಮಗುವೆ! ಶಾಂತನಾಗಿರು. ಸ್ವಾಧ್ಯಾಯವನ್ನೂಯೋಗವನ್ನೂ ಅನುಷ್ಠಿಸು.ನಿನಿಗೆಅಂಥಾಶ್ರೇಯಸ್ಸುಂಟಾಗುವುದು.)ಆದ್ದರಿಂದಹಿತವನ್ನು ಹೇಳುವುದಕ್ಕೆ ಮಾಡತಕ್ಕ ಅಭ್ಯಾಸವನ್ನು ತಪಸ್ಸೆಂಬದಾಗಿ ಹೇಳಬಹುದು.ಯಥಾವಿಧಿಯಾಗಿ ಮಾಡತಕ್ಕ ಸ್ವಶಾಖಾವಿಹಿತವೇದಾಧ್ಯಯನವು ವಾಙ್ಮಯತಪಸ್ಸೆಂತಲೇ ಹೇಳಲ್ಪಡುವುದು. ... ||೧೫||

ಶ್ಲೋ|| ಮನಃಪ್ರಸಾದಸ್ಸೌಮ್ಯತ್ವಂಮೌನಮಾತ್ಮವಿನಿ

ಗ್ರಹಃ । ಭಾವಸಂಶುದ್ಧಿರಿತ್ಯೇತತ್ತಪೋಮಾನಸಮು
ಚ್ಯತೇ ॥ ... ... ॥೧೬॥

ಪ ॥ ಮನಃಪ್ರಸಾದಃ - ಸೌಮ್ಯತ್ವಂ - ಮೌನಂ - ಆತ್ಮವಿನಿಗ್ರಹಃ ।ಭಾವಸಂಶುದ್ಧಿಃ-ಇತಿ-ಏತತ್ - ತಪಃ-ಮಾನಸಂ - ಉಚ್ಯತೇ ॥

(ಅ । ರಾ । ಭಾ) ಮನಃಪ್ರಸಾದಃ-ಮನಸ್ಸಿನಲ್ಲಿ ಕೋಪವಿಲ್ಲದೆ ಇರುವಿಕೆಯು, ಸೌಮ್ಯತ್ವಂ-ಮನಸ್ಸಿನಲ್ಲಿ ಯಾವಾಗಲೂ ಅನ್ಯರಿಗೆ ಒಳ್ಳೇದನ್ನೆ ಚಿಂತಿಸುವಿಕೆಯು, ಮೌನಂ-ಮನಸ್ಸಿನಿಂದ ವಾಕ್ಪ್ರವೃತ್ತಿಯನ್ನು ತಡೆಯುವಿಕೆಯು, ಆತ್ಮವಿನಿಗ್ರಹಃ-ಮನಸ್ಸನ್ನು ಯಾವಾಗಲೂ ನೆನೆಸತಕ್ಕ ಭಗವದ್ದಿವ್ಯ ಮಂಗಳವಿಗ್ರಹದಲ್ಲಿ ನಿಲ್ಲಿಸಿಕೊಂಡಿರುವಿಕೆಯು, ಭಾವಸಂಶುದ್ಧಿಃ - ಆತ್ಮಚಿಂತೆಯನ್ನು ಬಿಟ್ಟು ಬೇರೆ ವಿಷಯದಲ್ಲಿ ಚಿಂತೆಯಿಲ್ಲದೆ ಇರುವಿಕೆಯು, ಏತತ್-ಇದು, ಮಾನಸಂತಪ ಉಚ್ಯತೆ - ಮನಸ್ಸಿನಿಂದ ಮಾಡಲ್ಪಡತಕ್ಕ ತಪಸ್ಸಾಗಿ ಹೇಳಲ್ಪಡುವುದು. ... ... ॥೧೬॥

(ಶಂ) ಮನಃಪ್ರಸಾದಃ-ಮನಸ್ಸನ್ನು ಶುದ್ಧವಾಗಿಟ್ಟುಕೊಂಡಿರುವಿಕೆಯು, ಸೌಮ್ಯತ್ವಂ - ಮುಖಸೌಮ್ಯತೆಯಿಂದ ತಿಳಿದುಕೊಳ್ಳತಕ್ಕ ಅಂತಃಕರಣವೃತ್ತಿಯು,ಅಥವಾ ಶಾನ್ತನಾಗಿರುವಿಕೆಯು,ಮೌನಂ-ಮಾತನಾಡದೆ ಇರುವಿಕೆಯು, ಮಾತನಾಡುವುದಕ್ಕೆ ಮನಃಪ್ರವೃತ್ತಿಯು ಕಾರಣವಾಗಿರುವುದರಿಂದ ಮೌನವನ್ನು ಮನಃಕಾರ್ಯವಾಗಿ ಇಲ್ಲಿ ಹೇಳಿತು. ಆತ್ಮವಿನಿಗ್ರಹಃ - ವಿಷಯಾನ್ತರಗಳಿಂದ ಮನಸ್ಸನ್ನು ನಿವೃತ್ತಿಸುವಿಕೆಯು, ಸಾಮಾನ್ಯವಾಗಿ ಮನಸ್ಸನ್ನು ನಿರೋಧಿಸುವಿಕೆಯು ಆತ್ಮನಿಗ್ರಹವೆಂತಲೂ, ವಾಗ್ವಿಷಯಮಾತ್ರವಾದ ಮನೋನಿಗ್ರಹವು ಮೌನವೆಂತಲೂ ವಿಶೇಷವನ್ನು ತಿಳಿಯಬೇಕು. (ಗೀ ॥ ವಿ) ಪರಮಾತ್ಮನಲ್ಲಿ ಮನಸ್ಸನ್ನಿಡುವಿಕೆಯು. ಭಾವಸಂಶುದ್ಧಿಃ - ಶ್ರೀ) ॥ ಶಂ) ಅನ್ಯರಲ್ಲಿ ವ್ಯವಹಾರಗಳನ್ನು ನಡಿಸುವಕಾಲದಲ್ಲಿ ಮೋಸಚಿಂತೆಯನ್ನು ಬಿಟ್ಟಿರುವಿಕೆಯು. (ಗೀ । ವಿ) ಮನಶ್ಶುದ್ಧಿಯುನ್ನುಂಟು ಮಾಡಿಕೊಳ್ಳುವಿಕೆಯು. ಇಚ್ಛಾಶೂನ್ಯನಾಗಿರುವಿಕೆ ಎಂದರ್ಥವು. ॥೧೬॥

ಶ್ಲೋ ॥ ಶ್ರದ್ಧಯಾಪರಯಾತಪ್ತಂತಪಸ್ತತ್ತ್ರಿವಿ

ಧಂನರೈಃ। ಅಫಲಾಕಾಂಕ್ಷಿಭಿರ್ಯುಕ್ತೈಃಸ್ಸಾತ್ವಿಕಂಪರಿಚ
ಕ್ಷತೆ॥ ... ... ॥೧೭॥

ಪ ॥ ಶ್ರದ್ಧಯಾ - ಪರಯಾ - ತಪ್ತಂ - ತಪಃ - ತತ್ - ತ್ರಿವಿಧಂ - ನರೈಃ। ಅಫಲಾಕಾಂಕ್ಷಿಭಿಃ - ಯುಕ್ತೈಃ - ಸಾತ್ವಿಕಂಪರಿಚಕ್ಷತೆ॥

(ಅ॥ರಾ॥ಭಾ) ಅಫಲಾಕಾಂಕ್ಷಿಭಿಃ-ಫಲೇಚ್ಛಾಶೂನ್ಯರಾಗಿಯೂ, ಯುಕ್ತೈಃ- (ಇದು ಸರ್ವಕರ್ಮಸಮಾರಾಧ್ಯನಾದ ಪರಮಪುರುಷನಿಗೆ ಆರಾಧನವೆಂಬ) ಚಿಂತೆಯೊಡನೆ ಕೂಡಿದವರಾಗಿಯೂ ಇರುವ,ನರೈಃ-ಪುರುಷದಿಂದ, ಪರಯಾ - ಶ್ರೇಷ್ಠವಾದ, ಶ್ರದ್ಧಯಾ - ವಿಶ್ವಾಸಪೂರ್ವಕವಾದ ತ್ವರೆಯೊಡನೆ, ಯತ್ - ಯಾವ, ತ್ರಿವಿದಂತಪಃ - ಮನೋವಾಕ್ಕಾಯನಿಷ್ಪಾದ್ಯವಾಗಿರುವುದರಿಂದ ಮೂರುಬಗೆಯಾದ ತಪಸ್ಸು, (ಮೇಲೆನಿವರಿಸಿರುವಂತೆ ವಾಙ್ಮನಶ್ಶರೀರಗಳಿಂದ ಮಾಡತಕ್ಕ ತಪಸ್ಸು ತ್ರಿವಿಧತಪಸ್ಸೆಂಬದಾಗಿ ಇಲ್ಲಿ ತಿಳಿಯಬೇಕು) ತಪ್ತಂ- ಆಚರಿಸಲ್ಪಟ್ಟಿತೋ, ತತ್-ಅದನ್ನು, ಸಾತ್ವಿಕಂಪರಿಚಕ್ಷತೆ-ಸತ್ವ ಗುಣಮೂಲಕವೆಂಬದಾಗಿ (ತತ್ವವನ್ನು ತಿಳಿದವರು) ಹೇಳುತ್ತಾರೆ. ॥೧೭॥

ಶ್ಲೋ ॥ ಸತ್ಕಾರಮಾನಪೂಜಾರ್ಥಂತಪೋದಂಭೇನಚೈ
ವಯತ್। ಕ್ರಿಯತೆತದಿಹಪ್ರೋಕ್ತಂರಾಜಸಂಚಲಮಧ್ರು
ವಂ॥ ... ... ॥೧೮॥

ಪ ॥ ಸತ್ಕಾರಮಾನಪೂಜಾರ್ಥಂ - ತಪಃ - ದಂಭೇನ - ಚ - ಏವ - ಯತ್। ಕ್ರಿಯತೆ - ತತ್ - ಇಹ - ಪ್ರೋಕ್ತಂ - ರಾಜಸಂ - ಚಲಂ - ಅಧ್ರುವಂ॥

( ಅ ॥ ರಾ ॥ ಭಾ) ಸತ್ಕಾರಮಾನಪೂಜಾರ್ಥಂ- ಅನ್ಯರಮನಸ್ಸಿನಿಂದ ಆದರಣಕ್ಕಾಗಿಯೂ ಅನ್ಯರವಾಕ್ಕಿನಿಂದ ಪ್ರಶಂಸೆಯನ್ನು ಹೊಂದುವುದಕ್ಕಾಗಿಯೂ ಶರೀರದಿಂದ ಪ್ರಣಾಮಾದಿಗಳನ್ನು ಮಾಡಿಸಿಕೊಳ್ಳುವುದಕ್ಕಾಗಿಯೂ, ( ಶ್ರೀ ॥ ಶಂ ) ಇವನು ತಪಸ್ವಿ ಎಂಬಿದೆ ಮೊದಲಾದ ವಾಕ್ಕಿನಿಂದಸ್ತುತಿಸುವಿಕೆಯು ಸತ್ಕಾರವು, ಕಂಡಪೊಡನೆ ಎದ್ದುನಮಸ್ಕಾರಾದಿ ಮಾಡದೇಹದಿಂದ ಮಾಡತಕ್ಕ ಪೂಜೆಯು ಮಾನವು, ( ಶ್ರೀ ) ಬಹುಮಾನವನ್ನು ಹೊಂದುವುದು ಪೂಜೆಯು,

(ಶಂ) ಪಾದಪ್ರಕ್ಷಾಳನಾದಿಗಳೆಲ್ಲವು ಪೂಜೆಯೆನ್ನಲ್ಪಡುವದು. (ಗೀ ॥ ವಿ) ರಾ ॥ ಏಕಾರ್ಥಕವೇ. ದಂಭೇನಚೈವ - ಫಲಾಭಿಸಂಧಿ ಯೊಡನೆ ಯೂ, ಧಾರ್ಮಿಕನೆಂಬಯಶಸ್ಸು ಬೇಕೆಂಬ ಅಭಿಪ್ರಾಯದಿಂದಲೂ, ಯತ್ತಪಃಕ್ರಿಯತೆ - ಯಾವ ತಪಸ್ಸುಮಾಡಲ್ಪಡುವುದೊ, ತತ್- ಆತಪಸ್ಸು, ಇಹ - ಈಪ್ರಕರಣದಲ್ಲಿ, (ಶಂ ॥ ಆಗಿ) ಈ ಲೋಕದಲ್ಲಿ, ರಾಜಸಂ - ರಜೋಗುಣ ಮೂಲಕವಾಗಿಯೂ, ಚಲಂ - " ಸ್ವರ್ಗೇಪಿ ಪಾತಭೀತಸ್ಯಕ್ಷಯಿಷ್ಣೋರ್ನಾಸ್ತಿನಿರ್ವೃತಿಃ " ಎಂಬಂತೆ ಪತನಭಯ ಮುಳ್ಳಸ್ವರ್ಗಪ್ರಾಪ್ತಿಸಾಧನವಾಗಿರುವುದರಿಂದ ಚಲನಹೇತುವೆಂತಲೂ, ಅಧ್ರುವಂ-ಕ್ಷಯಿಷ್ಣುವೆಂತಲೂ, ಪ್ರೋಕ್ತಂ-ಹೇಳಲ್ಪಟ್ಟಿತು. ॥೧೮॥

(ಆ ॥ ಗಿ) ದಂಭೇನಚೈವ - ಒಳ್ಳೆಯೋಗ್ಯನಾದವನು ತಾನುಮಾಡುವುದು ಭಗವತ್ಪ್ರೀತಿಯಾಗಬೇಕೆಂಬ ಮನಸ್ಸಿನಿಂದ ಹೇಗಾದರೆ ಭಯಭಕ್ತಿವಿಶ್ವಾಸದೊಡನೆ ನಡಿಯುತ್ತಾನೆಯೊ ಅದರಂತೆ ನಟನವನ್ನು ಮಾತ್ರ ಮಾಡುವಂತವನು ದಾಂಭಿಕನು, ಅಂಥಾದಂಭದಿಂದಲೆ. ಚಲಂ- (ಶ್ರೀ) ನಿಯಮವಿಲ್ಲದ್ದು, ಅಧ್ರುವಂ - (ಶಂ) ಯಾವದೋ ಒಂದುಕಾಲದಲ್ಲಿ ಫಲಪ್ರದವಾಗತಕ್ಕದ್ದು. ॥೧೮॥

ಶ್ಲೋ॥ ಮೂಢಗ್ರಾಹೇಣಾತ್ಮನೋಯತ್ಪೀಡಯಾಕ್ರಿಯ
ತೇತಪಃ। ಪರಸ್ಯೋತ್ಸಾದನಾರ್ಥಂವಾತತ್ತಾಮಸಮುದಾ
ಹೃತಂ ॥ ... ... ॥೧೯॥

ಪ ॥ ಮೂಢಗ್ರಾಹೇಣ - ಆತ್ಮನಃ - ಯತ್ - ಪೀಡಯಾ - ಕ್ರಿಯತೆ - ಪರಸ್ಯ - ಉತ್ಸಾದನಾರ್ಥಂ - ವಾ - ತತ್ - ತಾಮಸಂ - ಉದಾಹೃತಂ ॥

(ಆ ॥ ರಾ ॥ ಭಾ ) ಮೂಢಗ್ರಾಹೇಣ - ಮೂಢಜನಗಳಿಂದುಂಟುಮಾಡಿದ ಅಭಿನಿವೇಶದಿಂದ, ಆತ್ಮನಃಪೀಡಯಾ-ತನ್ನ ಶಕ್ತಿಯನ್ನಾಲೋಚಿಸದೆ ತನ್ನನ್ನು ಪ್ರಯಾಸಪಡಿಸಿಕೊಂಡು, ಯತ್ತಪಃಕ್ರಿಯತೆ - ಯಾವತಪಸ್ಸುಮಾಡಲ್ಪಡುವುದೊ, ಪರಸ್ಯ - ಅನ್ಯಪುರುಷನ, ಉತ್ಸಾದನಾರ್ಥಂವಾ - ಕೇಡನ್ನು ನೆನೆಸಿಯಾದರೂ, ಯತ್ತಪಃಕ್ರಿ

ಯತ್-ಯಾವ ತಪಸ್ಸುಮಾಡಲ್ಪಡುವುದೋ, ತತ್-ಅದು, ತಾಮಸಂ-ತಮೋಗುಣಮೂಲಕವೆಂಬದಾಗಿ,ಉದಾಹೃತಂ-ಹೇಳಲ್ಪಟ್ಟಿತು. ॥೧೯॥

(ಶಂ) ಮೂಢಗ್ರಾಹೇಣ - ಅವಿವೇಕನಿಶ್ಚಯದಿಂದ, (ಗೀ॥ವಿ) ಅವಿವೇಕಯುಕ್ತವಾದ ದುರಾಗ್ರಹದಿಂದ, ಆತ್ಮನಃಪೀಡಯಾ - (ಗೀ ॥ ವಿ) ತನ್ನ ಪೋಷಣಾರ್ಥವಾಗಿ. ॥೧೯॥

ಶ್ಲೋ ॥ ದಾತವ್ಯಮಿತಿಯದ್ದಾನಂದೀಯತೇನುಪಕಾರಿಣೆ ।ದೇಶೇಕಾಲೇಚಪಾತ್ರೇಚತದ್ದಾನಂಸಾತ್ವಿಕಂಸ್ಮೃತಂ ॥ ... ... ॥೨೦॥

ಪ ॥ ದಾತವ್ಯಂ -ಇತಿ - ಯತ್ - ದಾನಂ - ದೀಯತೆ -ಅನುಪಕಾರಿಣೆ। ದೇಶೇ-ಕಾಲೇ - ಚ - ಪಾತ್ರೆ - ಚ - ತತ್-ದಾನಂ - ಸಾತ್ವಿಕಂ - ಸ್ಮೃತಂ ॥

(ಅ ॥ ರಾ) ದಾತವ್ಯಮಿತಿ - ಯಾವಫಲವನ್ನೂ ಉದ್ದೇಶಿಸದೆ ಸ್ವಯಂಫಲವಾಗಿ ಕೊಡಬೇಕೆಂಬದಾಗಿ, ದೇಶೆ-ಕಾಶೀಕಾಂಚೀ ಮೊದಲಾದ ಕ್ಷೇತ್ರದಲ್ಲಿಯೂ, ಕಾಲೇ - ಉಪರಾಗವೇ ಮೊದಲಾದ ಪುಣ್ಯಕಾಲದಲ್ಲಿಯೂ, ( ಉಪರಾಗವೆಂದರೆ ಸೂರ್ಯ ಚಂದ್ರಾದಿ ಗ್ರಹಣವು) ಪಾತ್ರೇಚ- ಬ್ರಹ್ಮವಿತ್ತಾಗಿಯೂ ದರಿದ್ರನಾಗಿಯೂ ಕುಟುಂಬಿಯಾಗಿಯೂ ಇರುವ ಪ್ರತಿಗೃಹೀತಾವಿನಲ್ಲಿ, ಅನುಪಕಾರಿಣೇ - ಪ್ರತ್ಯುಪಕಾರವನ್ನು ಮಾಡಲಸಮರ್ಥನಿಗೋಸ್ಕರ, ಯದ್ದಾನಂದೀಯತೆ - ಯಾವದಾನವು ಮಾಡಲ್ಪಡುವುದೋ, ತದ್ದಾನಂ ಸಾತ್ವಿಕಂಸ್ಮೃತಂ - ಆದಾನವು ಸತ್ವಗುಣ ಮೂಲಕವಾಗಿ ಸ್ಮೃತಿಪ್ರವೀಣರಿಂದ ಹೇಳಲ್ಪಟ್ಟಿತು. ... ... ॥೨೦॥

(ಶಂ॥) ದಾತವ್ಯಮಿತಿ - ಕೊಡಬೇಕೆಂಬದಾಗಿ ಮನಸ್ಸುಮಾಡಿಕೊಂಡು, ದೇಶೇ-(ಶ್ರೀ॥ಶಂ) ಕುರುಕ್ಷೇತ್ರವೇ ಮೊದಲಾದ ಪುಣ್ಯದೇಶದಲ್ಲಿ, ಕಾಲೇಚ- (ಶಂ) ಸಂಕ್ರಾಂತಿಯೆ ಮೊದಲಾದ ಪುಣ್ಯಕಾಲದಲ್ಲಿಯೂ, ಅನುಪಕಾರಿಣೆ-ಪ್ರತ್ಯುಪಕಾರ ಮಾಡಲಸಮರ್ಥನು.ಅಥವಾ ಪ್ರತ್ಯುಪಕಾರಮಾಡತಕ್ಕವನಾದರೂ ಪ್ರತ್ಯುಪಕಾರಕ್ಕಾಗಿ ತನ್ನಿಂದ

ನೋಡಲ್ಪಡದವನು. ಇಂತವನಿಗೋಸ್ಕರ, ಪಾತ್ರೇಚ - ವೇದಾರ್ಥಗ ಳನ್ನು ತಿಳಿದ ಬ್ರಹ್ಮಜ್ಞಾನಿಗಳೇ ಮೊದಲಾದವರಲ್ಲಿ, (ಗೀ ॥ ವಿ) ಸತ್ಪಾತ್ರದಲ್ಲಿ, (ಶ್ರೀ) ರಕ್ಷಿಸುವಂತವನಲ್ಲಿ, ಎಂದರೆ ದಾನಮಾಡುವಂತವನನ್ನು ಆಪತ್ತುಗಳ ದಶೆಯಿಂದ ನಿವೃತ್ತಿಸುವಂತವನಲ್ಲೆಂದು ತಾತ್ಪರ್ಯವು. ... ... ॥೨೦॥

ಶ್ಲೋ ॥ ಯತ್ತುಪ್ರತ್ಯುಪಕಾರಾರ್ಥಂಫಲಮುದ್ದಿಶ್ಯವಾ ಪುನಃ । ದೀಯತೇಚಪರಿಕ್ಲಿಷ್ಟಂ ತದ್ದಾನಂರಾಜಸಂ ಸ್ಮೃತಂ ॥ ... ... ॥೨೧॥

ಪ ॥ ಯತ್ - ತು - ಪ್ರತ್ಯುಪಕಾರಾರ್ಥಂ - ಫಲಂ - ಉದ್ದಿಶ್ಯ - ವಾ - ಪುನಃ ದೀಯತೇ - ಚ - ಪರಿಕ್ಲಿಷ್ಟಂ - ತತ್-ದಾನಂ-ರಾಜಸಂ-ಸ್ಮೃತಂ ॥

(ಅ॥ರಾ)ಯತ್ತುಪುನಃ-ಯಾವದಾನವಾದರೆ, ಪ್ರತ್ಯುಪಕಾರಾರ್ಥಂ-ಪ್ರತ್ಯುಪಕಾರವನ್ನುದ್ದೇಶಿಸಿ,(ಪೂರ್ವದಲ್ಲಿ ತನಗೆಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರ ರೂಪವಾಗಿ ಎಂದರ್ಥವು.)ಫಲಮುದ್ದಿಶ್ಯವಾ-ಫಲವನ್ನುದ್ದೇಶಿಸಿಯೂ, ಪರಿಕ್ಲಿಷ್ಟಂಚ- ದುಷ್ಟದ್ರವ್ಯವನ್ನುಳ್ಳದ್ದಾಗಿಯೂ, (ಶಂ) ಖೇದ(ಮನಃಪ್ರಯಾಸ) ಯುಕ್ತವಾಗಿಯೂ, (ಗೀ ॥ ವಿ) ಅನ್ಯಾಯಾರ್ಜನನಮುಳ್ಳದ್ದಾಗಿಯೂ, ದೀಯತೇ - ಕೊಡಲ್ಪಡುವುದೋ, ತತ್ - ಆ ದಾನವು, ರಾಜಸಮುದಾಹೃತಂ -ರಜೋಗುಣ ಮೂಲಕವೆಂಬದಾಗಿ ಹೇಳಲ್ಪಟ್ಟಿತು. ... ... ॥೨೧॥

ಶ್ಲೋ ॥ ಅದೇಶಕಾಲೇಯದ್ದಾನಮಪಾತ್ರೇಭ್ಯಶ್ಚದೀಯತೇ । ಅಸತ್ಕೃತಮವಜ್ಞಾತಂತತ್ತಾಮಸಮುದಾಹೃತಂ ॥ ... ... ॥೨೨॥

ಪ ॥ ಅದೇಶಕಾಲೇ - ಯತ್ - ದಾನಂ - ಅಪಾತ್ರೇಭ್ಯಃ - ಚ - ದೀಯತೇ - ಅಸತ್ಕೃತಂ - ಅವಜ್ಞಾತಂ - ತತ್-ತಾಮಸಂ - ಉದಾಹೃತಂ ॥

(ಅ ॥ ರಾ) ಅದೇಶಕಾಲೇ-ಅಪುಣ್ಯವಾದ ದೇಶದಲ್ಲಿಯೂ ಕಾಲದಲ್ಲಿಯೂ, (ಶಂ) ಮ್ಲೇಚ್ಛಾಶುಚ್ಯಾದಿಸಂಕೀರ್ಣವಾದ ಪುಣ್ಯಹೇತುವೆಂಬದಾಗಿ ಪ್ರಖ್ಯಾತನಲ್ಲದೆ ಇರುವದೇಶಕಾಲಗಳಲ್ಲಿ, ಅ ಪಾತ್ರೇಭ್ಯಶ್ಚ-

ಕೂದ್ರಾನ್ನಗಳನ್ನು ಭುಜಿಸುವಂತವರೆ ಮೊದಲಾದ ದುಷ್ಟಪ್ರತಿಗ್ರಹೀತೃಗಳಿಗೋಸ್ಕರ, (ಶಂ) ಮೂರ್ಖರು ಕಳ್ಳರು ಮೊದಲಾದವರುಗಳಿಗೋಸ್ಕರ, (ಶ್ರೀ) ನಟವಿಟಗಾಯಕರೆ ಮೊದಲಾದವರಿಗೋಸ್ಕರ, ಯತ್‌ದೀಯತೆ - ಯಾವದು ಕೊಡಲ್ಪಡುವುದೊ, ಅಸತ್ಕೃತಂ - ಪಾದಪ್ರಕ್ಷಾಳನಾದಿಯಾದ ಗೌರವ ವಿಲ್ಲದೆಯೂ, ಅವಜ್ಞಾತಂ- ಹೇಳನಯುಕ್ತವಾಗಿಯೂ, (ಅಸ್ಯಾಂದೆ ಕೊಡಿಸುವುದು, ಬೀಸಾಡುವುದು, ತೊಲಗಿ ಹೋಗೆಂದು ಹೇಳಿ ಕೊಡುವುದೆಂಬಿದೆ ಮೊದಲಾದ ಅನಾದರಣವುಳ್ಳದ್ದೆಂದರ್ಥವು) ಯದ್ದೀಯತೆ - ಯಾವದಾನವುಕೊಡಲ್ಪಡುವುದೋ, ತತ್-ಆದಾನವು, ತಾಮಸಮುದಾಹೃತಂ-ತಮೋಗುಣ ಮೂಲಕವೆಂಬದಾಗಿ ಹೇಳಲ್ಪಟ್ಟಿತು. ... ... ॥೨೨॥

(ಶಂ ॥ ಶ್ರೀ)ಪುಣ್ಯಕ್ಷೇತ್ರವಲ್ಲದ ಪ್ರದೇಶದಲ್ಲಿಯೂ ಪುಣ್ಯಕಾಲವಲ್ಲದ ಸಮಯದಲ್ಲಿಯೂ ಅಯೋಗ್ಯನನ್ನು ಕುರಿತುಬಂದುವೇಳೆಪುಣ್ಯಕ್ಷೇತ್ರಕಾಲಗಳು ದೊರಕಿದರೂ ವಿನಯಸಂಪತ್ತಿ ಯೊಡನೆ ಒಳ್ಳೆಮಾತುಗಳನ್ನಾಡುತ ಶಾಸ್ತ್ರೀಯವಿಧಿಪ್ರಕಾರವಾಗಿ ಪಾದಪ್ರಕ್ಷಾಳನಾದಿಸತ್ಕಾರಗಳನ್ನಾಚರಿಸದೆ ಪ್ರತಿಗ್ರಹ ಮಾಡತಕ್ಕವನಿಗೆ ಅವಮಾನಕರವಾಗಿ ಮಾಡತಕ್ಕ ದಾನವು ತಾಮಸದಾನವೆನ್ನಲ್ಪಡುವುದು. ॥೨೨॥

ಶ್ಲೋ ॥ ಓಂತತ್ಸದಿತಿನಿರ್ದೇಶೋ ಬ್ರಹ್ಮಣಸ್ತ್ರಿವಿಧ
ಸ್ಸ್ಮೃತಃ । ಬ್ರಾಹ್ಮಣಾಸ್ತೇನವೇದಾಶ್ಚಯಜ್ಞಾಶ್ಚವಿ
ಹಿತಾಃಪುರಾ ॥ ... ... ॥೨೩॥

ಪ ॥ ಓಂ - ತತ್ - ಸತ್ - ಇತಿ-ನಿರ್ದೇಶಃ-ಬ್ರಹ್ಮಣಃ - ತ್ರಿವಿಧಃ-ಸ್ಮೃತಃ । ಬ್ರಾಹ್ಮಣಾಃ - ತೇನ - ವೇದಾಃ - ಚ - ಯಜ್ಞಾಃ - ಚ - ವಿಹಿತಾಃ - ಪುರಾ ॥

(ಅ ॥ ರಾ ॥ ಭಾ) ಈ ಪ್ರಕಾರವಾಗಿ ವೈದಿಕಗಳಾದ ತಪೋಯಜ್ಞಾದಿಗಳಿಗೆ ಸತ್ವಾದಿಗುಣಭೇದದಿಂದ ಭೇದವನ್ನು ಸಾಧಿಸಿ ಇನ್ನುಮುಂದೆ ವೈದಿಕವಾದ ಯಜ್ಞಾದಿಕರ್ಮಕ್ಕೆ ಪ್ರಣವಸಂಯೋಗದಿಂದಲೂ ತತ್‌ಸತ್ ಶಬ್ದಗಳಿಂದ ವ್ಯಪದೇಶದಿಂದಲೂ ಲಕ್ಷಣವನ್ನು ಸಾಧಿಸುತ್ತಾರೆಂದರಿಯಬೇಕು. ಓಂತತ್ಸದಿತಿ ತ್ರಿವಿಧೋನಿರ್ದೇಶಃ - ಓಂ

ಎಂತಲೂ ತತ್ ಎಂತಲೂ ಸತ್ ಎಂತಲೂ ಮೂರುವಿಧವಾಧ ಶಬ್ದವು, ಬ್ರಹ್ಮಣಸ್ಸ್ಮೃತಃ - ವೇದಸಂಬಂಧಿಯಾದ ಯಜ್ಞದಾನಾದಿ ಕರ್ಮ ಸಂಬಂಧವುಳ್ಳದ್ದಾಗಿ ಹೇಳಲ್ಪಟ್ಟಿರುವುದು. ವೈದಿಕ ಕರ್ಮವು ಓಂತತ್ಸತ್ ಎಂಬ ಮೂರುಶಬ್ದಗಳೊಡನೆ ಅನ್ವಯವುಳ್ಳದ್ದೆಂದರ್ಥವು. ಅವುಗಳಲ್ಲಿ ಓಂ ಎಂಬಶಬ್ದಕ್ಕೆ ವೈದಿಕಕರ್ಮಾಂಗವಾಗಿ ಸಂಕಲ್ಪದಲ್ಲಿ ಮೊದಲು ಹೇಳತಕ್ಕದೆಂಬದಾಗಿ ಅನ್ವಯವು. ತತ್ಸತ್ ಎಂಬ ಯರಡು ಶಬ್ದಗಳಿಗೂ ವಾಡಲ್ಪಡುವ ಕರ್ಮವು ಪೂಜ್ಯವಾದದ್ದೆಂಬುವುದನ್ನು ತಿಳಿಸುವದಕ್ಕಾಗಿ ಆಕರ್ಮಕ್ಕೆವಾಚಕವಾಗಿಯೆ ಅನ್ವಯವುಳ್ಳದ್ದಾಗಿರುವುದು. ತೇನ-ಓಂತತ್ಸತ್ ಎಂಬಶಬ್ದದೊಡನೆ, (ಅನ್ವಿತಾಃ-ಸೇರಿದವುಗಳಾಗಿಯೆ,) ಬ್ರಾಹ್ಮಣಾಃ- ವೇದಾಧಿಕಾರಿಗಳಾದ ಬ್ರಾಹ್ಮಣಕ್ಷತ್ರಿಯ ವೈಶ್ಯರೂ, ಯಜ್ಞಾಶ್ಚ - ಯಜ್ಞಗಳೂ, ಪುರಾ-ಸೃಷ್ಟಿಕಾಲದಲ್ಲಿ, ವಿಹಿತಾಃ-ಸೃಷ್ಟಿಸಲ್ಪಟ್ಟವು. ನನ್ನಿಂದಲೇ ಸೃಷ್ಟಿಸಲ್ಪಟ್ಟವೆಂದು ಭಾವವು. ... ||೭೩||

(ಶಂ || ಭಾ) ಯಜ್ಞದಾನತಪಃಪ್ರಭೃತಿಗಳಾದ ವಿಹಿತಕರ್ಮಗಳಿಗೆ ಪ್ರಮಾದವಶದಿಂದ ವೈಗುಣ್ಯವು ಪ್ರಾಪ್ತವಾದರೆ ಅವು ರಾಜಸಗಳಾದರೂ, ತಾಮಸಗಳಾದರೂ ಆಗುವುವು. ಆರೀತಿಯಾಗಿ ಆಗುವಪಕ್ಷದಲ್ಲಿ ಅಂತಹ ಕರ್ಮಗಳನ್ನು ಅನುಷ್ಠಿಸುವುದುವ್ಯರ್ಥವಲ್ಲದೆ ಕಾರ್ಯಕರವಾಗಲಾರದೆಂಬ ಶಂಕೆಯನ್ನು ಪರಿಹರಿಸುತ ಅಂತಹರಾಜಸ ತಾಮಸ ಕರ್ಮಗಳು ಹೇಗಾದರೆ ಸಾದ್ಗುಣ್ಯವನ್ನು ಹೊಂದುವುವೊ ಆಸಂದರ್ಭವನ್ನಿಲ್ಲಿ ವಿವರಿಸುತ್ತಾರೆಂದರಿಯಬೇಕು- ಓಂಮಿತಿಬ್ರಹ " ಇತ್ಯಾದಿ ಶ್ರುತಿಗಳದೆಶೆಯಿಂದ ಓಂ ಎಂಬದಾಗಿ ಬ್ರಹಕ್ಕೆ ನಾಮನಿರ್ದೇಶವು ಪಡಪಟ್ಟಿರುವುದು. " ತತ್ವಮಸಿ " ಎಂಬ ಶ್ರುತಿಯಿಂದಬ್ರಹ್ಮಕ್ಕೆ ತತ್ - ಎಂಬದಾಗಿ ನಾಮನಿರ್ದೇಶವೂ " ಸದೇವ ಸೋಮ್ಯೇದಮಗ್ರಆಸೀತ್ " ಎಂಬ ಶ್ರುತಿ ಪ್ರಮಾಣದ್ದೆಶೆಯಿಂದ ತತ್-ಎಂಬ ನಾಮನಿರ್ದೇಶವೂಪಡಪಟ್ಟಿರುವುದು. ಈ ಪ್ರಕಾರಗಳಾದ ಪರಬ್ರಹ್ಮನಾಮಗಳಲ್ಲಿ, ಓಂ-ಎಂಬ ನಾಮದಿಂದ ವಿಧಿಪೂರ್ವ ಪ್ರವರ್ತಕಗಳಾದ

ವೇದಗಳು ಹುಟ್ಟಿರುವುವು. ತತ್-ಎಂಬ ನಾಮದಿಂದ ಯಜ್ಞಾಧಿಕಾರಿಗಳಾದ ಬ್ರಾಹ್ಮಣರು ಹುಟ್ಟಿದರು, ಸತ್ ಎಂಬುವುದರಿಂದ ಕರ್ಮಸ್ವರೂಪಗಳಾದ ಯಜ್ಞಗಳು ಹುಟ್ಟಿರುವುವು. ಆದುದರಿಂದ ಯಜ್ಞಾದಿಗಳಿಗೆ ವೈಗುಣ್ಯಗಳುಂಟಾಗಿರುವಂತೆ ತೋರಿದಕಾಲದಲ್ಲಿಮೇಲೆವಿವರಿಸಿರುವ ಬ್ರಹ್ಮನಾಮಗಳಲ್ಲಿ ಯಾವದಾದರೊಂದನ್ನುಚ್ಚರಿಸಿದರೆ ಸಾದ್ಗುಣ್ಯಸಿದ್ಧಿಯಾಗುವುದೆಂದರಿಯಬೇಕು. ಈ ಪ್ರಕಾರವಾಗಿ ಕರ್ಮಸಾದ್ಗುಣ್ಯಕಾರಕ ವಾದ ನಾಮತ್ರಯವು ಸ್ತುತಿಸಲ್ಪಟ್ಟತೆಂದು ತಿಳಿಯಬರುವುದು. ... ... ॥೨೩॥

(ಶ್ರೀ) ಓಮ್- ಎಂಬುವುದು ಬ್ರಹ್ಮನಾಮವೆಂಬದಾಗಿ ಉಪನಿಷತ್ತುಗಳಲ್ಲಿ ಅನೇಕ ಪ್ರಕರಣದಲ್ಲಿ ಹೇಳಲ್ಪಟ್ಟಿರುವುದು, ಜಗತ್ಕಾರಣವಾಗಿಯೂ ಅವಿದ್ವಾಂಸರಿಗೆ ಪರೋಕ್ಷವಾಗಿ ನೋಡಲ್ಪಡದೆಯೂ ಇರುವುದರಿಂದ ಪರಬ್ರಂಹವು ತತ್ ಎಂಬದಾಗಿ ಹೇಳಲ್ಪಟ್ಟಿರುವುದು. ನಾಶರಹಿತವಾಗಿಯೂ, ಪರಮಾರ್ಥವಾಗಿಯೂ ಶ್ರೇಷ್ಠವಾಗಿಯೂ ಇರುವ ಬ್ರಂಹವಸ್ತುವುಯಾವುದೋ ಅದು ಸತ್ ಎಂಬದಾಗಿಹೇಳಲ್ಪಡುವುದು. ಈ ನಾಮಗಳಿಂದ ಬ್ರಂಹದೇವರು ಬ್ರಾಹ್ಮಣರು ವೇದವು ಯಜ್ಞವೆಂಬಿವುಗಳನ್ನು ಸೃಷ್ಟಿಸಿರುವುರು. ಅಥವಾ ಮೇಲ್ಕಂಡ ಮೂರುನಾಮವುಳ್ಳ ಬ್ರಹ್ಮದಿಂದ ಬ್ರಾಹ್ಮಣಾದಿಗಳು ಸೃಷ್ಟಿಸಲ್ಪಟ್ಟರು. ಆದುದರಿಂದ ನಾಮಗಳೆಂಬದಾಗಿ ಹೇಳಲ್ಪಟ್ಟಿರುವುವು. ... ... ॥೨೩॥

(ಗೀ ॥ ವಿ) ಓಮ್ ತತ್ಸತ್ ಎಂಬೀ ಮೂರುಶಬ್ದಗಳೂ ಬ್ರಂಹದ ನಾಮಗಳಾಗಿರುವುವು. ಆನಾಮಗಳನ್ನು ಬ್ರಂಹ್ಮಕ್ಕೆ ಯೇತಕ್ಕೆ ಹೇಳಬೇಕೆಂದರೆ ? ಸಮಸ್ತ ಜಗತ್ತನ್ನುಧರಿಸುವುದರಿಂದ ಓಮ್ ಎಂತಲೂ,ಗುಣಗಳಿಂದವ್ಯಾಪಿಸಲ್ಪಟ್ಟಿರುವಜ್ಞಾನಿಗಳಿಂದ ನೋಡಲ್ಪಟ್ಟಿರುವುದರಿಂದ ತತ್ ಎಂತಲೂ,ನಿರ್ದೋಷವಾಗಿಯೂ ಶುಭಗುಣಪೂರ್ಣವಾಗಿಯೂ, ಇರುವುದರಿಂದ ಸತ್ ಎಂತಲೂ ಶ್ರುತಿಗಳಿಂದ ಹೇಳಿರುವುದರಿಂದಲೇ ಎಂದರಿಯಬೇಕು. ತೇನ-ಆಬ್ರಹ್ಮದಿಂದ, ಬ್ರಾಹ್ಮಣರು ವೇದಗಳು ಯಜ್ಞಗಳೆಂಬಿವುಗಳು ಏರ್ಪಡಿಸಲ್ಪಟ್ಟಿರುವುವು. ॥೨೩॥

ಶ್ಲೋ॥ ತಸ್ಮಾದೋಮಿತ್ಯುದಾಹೃತ್ಯಯಜ್ಞದಾನತಪಃ ಕ್ರಿಯಾಃ । ಪ್ರವರ್ತಂತೇ ವಿಧಾನೋಕ್ತಾಸ್ಸತತಂಬ್ರಹ್ಮ ವಾದಿನಾಂ ॥ ... ... ॥೨೪॥

ಪ॥ ತಸ್ಮಾತ್-ಓಂ-ಇತಿ-ಉದಾಹೃತ್ಯ-ಯಜ್ಞದಾನತಪಃಕ್ರಿಯಾಃ । ಪ್ರವರ್ತಂತೇ-ವಿಧಾನೋಕ್ತಾಃ-ಸತತಂ-ಬ್ರಹ್ಮವಾದಿನಾಂ ॥

(ಅ॥ ರಾ॥ ಭಾ) ಇನ್ನುಮುಂದೆ ‘ ಓಂ ತತ್ಸತ್ , ಎಂಬೀಮೂರು ಶಬ್ದಗಳಿಗೂ ವೈದಿಕ ಕರ್ಮಗಳಲ್ಲಿ ಅನ್ವಯ ಪ್ರಕಾರವನ್ನು ಹೇಳಲುದ್ದೇಶಿಸಿ ಮೊದಲು ಓಂ ಎಂಬ ಶಬ್ದಕ್ಕೆ ಅನ್ವಯ ಪ್ರಕಾರವನ್ನು ಹೇಳುತ್ತಾರೆಂದರಿಯಬೇಕು. ತಸ್ಮಾತ್-ಸೃಷ್ಟಿಕಾಲದಲ್ಲಿಯೇ ತ್ರೈವರ್ಣಿಕರನ್ನೂ ವೇದಗಳನ್ನೂ ವೇದಿಕ ಕರ್ಮಗಳನ್ನೂ ಓಂ ತತ್ಸತ್ ಎಂಬ ಶಬ್ದಗಳೊಡನೆ ಅನ್ವಿತಗಳಾಗಿಯೇ ಸೃಷ್ಟಿಸಿರುವುದರಿಂದ, ಬ್ರಹ್ಮವಾದಿನಾಂ-ವೇದಪಾಠಕರಾದ ಬ್ರಹ್ಮಕ್ಷತ್ರಿಯ ವೈಶ್ಯರಿಗೆ, ವಿಧಾನೋಕ್ತಾಃ-ವೇದವಿಧಿಗಳಲ್ಲಿ ಹೇಳಲ್ಪಟ್ಟಿರುವ, ಯಜ್ಞದಾನತಪಃಕ್ರಿಯಾಃ-ಯಜ್ಞದಾನ ತಪಸ್ಸುಗಳೆ ಮೊದಲಾದ ಕರ್ಮಗಳು, ಓಮಿತ್ಯುದಾಹೃತ್ಯ-ಕರ್ಮಾರಂಭದಲ್ಲಿ ಮೊದಲು ಓಂ ಎಂಬದಾಗಿ ಉಚ್ಚಾರಣಮಾಡಿಯೇ, ಸತತಂ ಪ್ರವರ್ತಂತೆ-ಯಾವಾಗಲೂ ಉಂಟಾಗಿರುವುವು. ಓಂ ಎಂಬದಾಗಿ ಮೊದಲು ಉಚ್ಚರಿಸಲ್ಪಟ್ಟೇ ವೇದಗಳು ಓದಲ್ಪಡುವುವು. ಈ ಪ್ರಕಾರವಾಗಿ ವೇದಗಳಿಗೂ ವೈದಿಕಗಳಾದ ಯಜ್ಞಾದಿ ಕ್ರಿಯೆಗಳಿಗೂ ಓಂ ಎಂಬೀ ಶಬ್ದದ ಅನ್ವಯ ಪ್ರಕಾರವು ಹೇಳಲ್ಪಟ್ಟಿತು. ಈ ಪ್ರಕಾರವಾಗಿ ಓಂ ಎಂಬ ಶಬ್ದದೊಡನೆ ಸೇರಿದ ವೇದವನ್ನು ಓದುವುದರಿಂದಲೂ ಆ ಶಬ್ದದೊಡನೆ ಸೇರಿದ ಯಜ್ಞಾದಿ ಕರ್ಮಗಳನ್ನು ಮಾಡುವುದರಿಂದಲೂ ಬ್ರಾಹ್ಮಣರೆನ್ನಲ್ಪಡುವ ತ್ರೈವರ್ಣಿಕ (ಬ್ರಹ್ಮಕ್ಷತ್ರಿಯವೈಶ್ಯ) ರಿಗೂ ಓಂ ಎಂಬ ಶಬ್ದಾನ್ವಯವು ಇದು ತಾನೆ ಎಂಬದಾಗಿ ಹೇಳಿದಂತೇ ಆಯಿತು. ... ॥೨೪॥

(ಶ್ರೀ॥ ಗೀ॥ ವಿ) ಯಜ್ಞಾದಿ ಕ್ರಿಯೆಗಳನ್ನು ಆರಂಭಿಸುವಾಗ ಓಂ ಎಂಬೀ ಶಬ್ದವನ್ನುಚ್ಚರಿಸುವುದರಿಂದ ಆ ಕ್ರಿಯೆಗಳಲ್ಲಿ ಮಂತ್ರ

ತಂತ್ರಾದಿಗಳ ಲೋಪಾದಿಗಳಿಂದುಂಟಾಗುವ ದೋಷಗಳು ನಿವೃತ್ತ ವಾಗಿ ಆ ಕ್ರಿಯೆಗಳು ಸಾದ್ಗುಣ್ಯವನ್ನು ಹೊಂದುವುವು. ॥೨೪॥

ಶ್ಲೋ॥ ತದಿತ್ಯನಭಿಸಂಧಾಯಫಲಂಯಜ್ಞತಪಃಕ್ರಿ ಯಾಃ । ದಾನಕ್ರಿಯಾಶ್ಚವಿವಿಧಾಃ ಕ್ರಿಯಂತೇಮೋಕ್ಷ ಕಾಂಕ್ಷಿಭಿಃ ॥ ... ... ॥೨೫॥

ಪ॥ ತತ್-ಇತಿ-ಅನಭಿಸಂಧಾಯ-ಫಲಂ-ಯಜ್ಞತಪಃಕ್ರಿಯಾಃ। ದಾನಕ್ರಿಯಾಃ-ಚ-ವಿವಿಧಾಃ-ಕ್ರಿಯಂತೆ-ಮೋಕ್ಷಕಾಂಕ್ಷಿಭಿಃ ॥

(ಅ॥ ರಾ॥ ಭಾ) ಇನ್ನು ಮುಂದೇ ಇವುಗಳಿಗೆ ತತ್ ಎಂಬ ಶಬ್ದ ದೊಡನೆ ಅನ್ವಯವಿರುವ ಪ್ರಕಾರವು ಪ್ರತಿಪಾದಿಸಲ್ಪಡುವುದು. ಫಲ ಮನಭಿಸಂಧಾಯ - ಫಲವನ್ನುದ್ದೇಶಿಸದೆ, ಯಜ್ಞತಪಃ ಕ್ರಿಯಾಃ- ಯಜ್ಞಗಳು ತಪಸ್ಸುಗಳು ಎಂಬೀ ಕ್ರಿಯೆಗಳೂ, ವಿವಿಧಾಃ-ನಾ ನಾವಿಧಗಳಾದ, ದಾನಕ್ರಿಯಾಶ್ಚ-ದಾನಗಳೆಂಬ ಕ್ರಿಯೆಗಳೂ, ಮೋ ಕ್ಷಕಾಂಕ್ಷಿಭಿಃ-ಮುಮುಕ್ಷುಗಳಾದ ತ್ರೈವರ್ಣಿಕರಿಂದ, (ಯಾಃ ಎಂ ತಲೂ ತಾಃ ಎಂತಲೂ ನಿರ್ದೇಶ್ಯಾಃ ಎಂತಲೂ ಮೂರುಪದಗಳು ಅಧ್ಯಾಹಾರ್ಯಗಳಾಗಿರುವುವು) ಯಾಃ ಕ್ರಿಯಂತೆ-ಯಾವಕಾರ್ಯಗಳು, ಮಾಡಲ್ಪಡುವುವೊ, ತಾಃ-ಅವುಗಳು, ತದಿತಿ-ಬ್ರಹ್ಮಪ್ರಾಪ್ತ್ಯುಪಾ ಯಗಳಾದುದರಿಂದಬ್ರಹ್ಮವಾಚಿಯಾದ ತತ್ ಎಂಬ ಶಬ್ದದಿಂದ,ನಿರ್ದೇ ಶ್ಯಾಃ-ಹೇಳತಕ್ಕವುಗಳಾಗಿರುವುವು. ಪ್ರಣವೋಚ್ಚಾರಣವನ್ನು ಮಾಡಿ ದನಂತರ ಫಲಾಭಿ ಸಂಧಿರಹಿತನಾಗಿ ಮುಮುಕ್ಷುವಾದ ತ್ರೈವರ್ಣಿಕ ನು ಬ್ರಹ್ಮಪ್ರಾಪ್ತಿ ಸಾಧನತ್ವೇನ ತಾನು ಮಾಡುವ ಕರ್ಮವನ್ನು ಬ್ರ ಹ್ಮವಾಚಕವಾದ ತತ್ ಎಂಬ ಶಬ್ದದಿಂದ ನಿರ್ದೇಶಿಸಬೇಕೆಂದು ತಾತ್ಪ ರ್ಯವು. ಇದರಿಂದ ಮೋಕ್ಷಾಪೇಕ್ಷೆಯುಳ್ಳವನು ತಾನು ಮಾಡುತಲಿರುವ ಕರ್ಮದ ಆರಂಭದಲ್ಲಿ ಓಂ ತತ್ ಎಂಬದಾಗಿ ಹೇಳಬೇಕೆಂದು ಸಿದ್ಧವಾ ಯಿತು.ಈ ಪ್ರಕಾರವಾಗಿ ವೇದಾಧ್ಯಯನ ಯಜ್ಞಾದಿಗಳನ್ನು ಮೋಕ್ಷ ಸಾಧನತ್ವೇನ ಅನುಷ್ಠಿಸುವ ಕಾಲದಲ್ಲಿ ತಚ್ಛಬ್ದದಿಂದ ನಿರ್ದೇಶವಿರ ಬೇಕೆಂಬದಾಗಿ ವಿಧಿಸಲ್ಪಟ್ಟಿರುವುದರಿಂದ ಅಂತಹಕ್ರಿಯೆಗಳಿಗೂ ತ

ಚ್ಛಬ್ದಾನ್ವಯ ಪ್ರಕಾರವು ಹೇಳಲ್ಪಟ್ಟಿತು. ಆ ಮಾರ್ಗದಿಂದಲೆ ತ್ರೈವರ್ಣಿಕರಿಗೂ ತಚ್ಛಬ್ದಾನ್ವಯವು ಉಪಪನ್ನವಾಯಿತೆಂದರಿಯಬೇಕು. ... ... ... ||೨೫||

(ಗೀ || ವಿ) ಯಜ್ಞಾಃ-ಅಗ್ನಿಹೋತ್ರಾದಿಗಳು, ತಪಃ-ಶರೀರವಾಙ್ಮನಸ್ಸುಗಳಿಂದ ಮಾಡತಕ್ಕ ತಪಸ್ಸು. ... ||೨೫||

ಶ್ಲೋ|| ಸದ್ಭಾವೇಸಾಧುಭಾವೇಚಸದಿತ್ಯೇತತ್ಪ್ರಯುಜ್ಯ
ತೇ|ಪ್ರಶಸ್ತೇಕರ್ಮಣಿತಥಾಸಚ್ಛಬ್ದಃಪಾರ್ಥಯುಜ್ಯತೇ||೨೬||

ಪ|| ಸದ್ಭಾವೇ-ಸಾಧುಭಾವೇ-ಚ-ಸತ್-ಇತಿ-ಏತತ್-ಪ್ರಯುಜ್ಯತೇ | ಪ್ರಶಸ್ತೇ-ಕರ್ಮಣಿ-ತಥಾ-ಸಚ್ಛಬ್ದಃ-ಪಾರ್ಥ-ಯುಜ್ಯತೆ ||

(ಅ|| ರಾ|| ಭಾ) ಇನ್ನು ಮುಂದೆ ಇವುಗಳಿಗೆ ಸತ್ ಎಂಬ ಶಬ್ದದ ಅನ್ವಯ ಪ್ರಕಾರವನ್ನು ಹೇಳಲುದ್ದೇಶಿಸಿ ಲೋಕದಲ್ಲಿ ಸತ್ ಎಂಬ ಶಬ್ದಕ್ಕೆ ವ್ಯುತ್ಪತ್ತಿ ಇರುವ ಪ್ರಕಾರವನ್ನು ಹೇಳುತ್ತಾರೆ.

ಹೇಪಾರ್ಥ - ಪೃಥಾ ಎಂಬ ಕುಂತೀಕುಮಾರನಾದಎಲೈ ಅರ್ಜುನನೆ ? ಸದ್ಭಾವೇ - ಉಂಟೆಂಬೀ ಅರ್ಥದಲ್ಲಿಯೂ, ಸಾಧುಭಾವೇ - ಒಳ್ಳೇದೆಂಬೀ ಅರ್ಥದಲ್ಲಿಯೂ, ಸದಿತ್ಯೇತತ್ಪ್ರಯುಜ್ಯತೆ-ಸರ್ವವಸ್ತುಗಳಲ್ಲಿಯೂ ಸತ್ ಎಂಬೀಪದವು ಪ್ರಯೋಗಿಸಲ್ಪಡುವುದು. ಈ ವಸ್ತುವು ಈಗ ಸತ್ತೆಂತಲೂ ಆ ರತ್ನವು ಸತ್ತೆಂತಲೂ ವ್ಯವಹಾರವು ಕಾಣುವುದಷ್ಟೆ. ತಥಾ-ಹಾಗೆಯೆ, ಪ್ರಶಸ್ತೆಕರ್ಮಣಿ-ಒಬ್ಬಾನೊಬ್ಬ ಪುರುಷನಿಂದಮಾಡಲ್ಪಡುವ ಒಳ್ಳೇದಾದ ಲೌಕಿಕ ಕಾರ್ಯದಲ್ಲಿಯೂ, ಸಚ್ಛಬ್ದಃ-ಸತ್ ಎಂಬ ಶಬ್ದವು, ಯುಜ್ಯತೆ-ಪ್ರಯೋಗಿಸಲ್ಪಡುವುದು. ಇದುಸತ್ಕರ್ಮವೆಂಬದಾಗಿವ್ಯವಹರಿಸುತ್ತಾರಲ್ಲವೆ. ||೨೬||

(ಶ್ರೀ|| ಶಂ|| ಮ|| ಗೀ|| ವಿ) ಸದ್ಭಾವೇ-ಒಬ್ಬನಿಗಿಲ್ಲದ ವಸ್ತುವು ಉಂಟಾದರೂ ಅಥವಾ ದೊರಕಿದರೂ ಆ ಪ್ರಕಾರವಾಗಿ ಉಂಟಾದ ಅಥವಾ ದೊರಕಿದ ವಸ್ತುವು ಸತ್ ಎಂಬದಾಗಿ ಹೇಳಲ್ಪಡುವುದು. ಅದು ಹೇಗೆಂದರೆ ? ಲೋಕದಲ್ಲಿ ಪುತ್ರಾದಿಗಳಿಲ್ಲದವನಿಗೆ ಪುತ್ರಾದಿಗಳುಂಟಾದರೆ ಪುತ್ರಾದಿಗಳುಂಟೆಂಬ ಅರ್ಥದಲ್ಲಿ ಸಚ್ಛಬ್ದ ಪ್ರಯೋಗವುಂಟು. ಸಾಧುಭಾವೇಚ-(ಶಂ) ಅಯೋಗ್ಯನು ಯೋಗ್ಯನಾದರೆ ಅವನನ್ನು ಸ

ತ್ ಎಂಬದಾಗಿ ಹೇಳಬಹುದು. (ಮ) ಉತ್ತಮವಾದ ವಸ್ತುವಿನಲ್ಲಿ ಯೂ, ಪ್ರಶಸ್ತೇ ಕರ್ಮಣಿ-(ಶಂ) ಮಂಗಳಕರವಾದ ವಿವಾಹಾದಿ ಶುಭ ಕಾರ್ಯಗಳಲ್ಲಿಯೂ. ... ... ||೨೬||

ಶ್ಲೋ|| ಯಜ್ಞೇತಪಸಿದಾನೇಚಸ್ಥಿತಿಸ್ಸದಿತಿಚೋಚ್ಯತೇ|
ಕರ್ಮಚೈವತದರ್ಥೀಯಂಸದಿತ್ಯೇವಾಭಿಧೀಯತೇ ||೨೭||

ಪ|| ಯಜ್ಞೇ-ತಪಸಿ-ದಾನೇ-ಚ-ಸ್ಥಿತಿಃ-ಸತ್-ಇತಿ-ಚ-ಉಚ್ಯತೇ | ಕರ್ಮ-ಚ-ಏವ-ತದರ್ಥೀಯಂ-ಸತ್-ಇತಿ-ಏವ-ಅಭಿಧೀಯತೇ ||

(ಅ|| ರಾ|| ಭಾ) ಯಜ್ಞೇತಪಸಿದಾನೇಚ ಸ್ಥಿತಿಸ್ಸದಿತಿಚೋಚ್ಯತೇ-ಆದುದರಿಂದ ವೈದಿಕರಾದ ತ್ರೈವರ್ಣಿಕರು ಯಜ್ಞದಲ್ಲಿಯೂ ತಪಸ್ಸಿನಲ್ಲಿಯೂ ದಾನದಲ್ಲಿಯೂ ಇರುವಂತವರೇ ಆದರೆ ಆ ಸ್ಥಿತಿಯು ಒಳ್ಳೇದಾದ್ದರಿಂದ ಅದು ಸತ್ ಎನ್ನಲ್ಪಡುವುದು. ತದರ್ಥೀಯಂಕರ್ಮಚೈವ-ತ್ರೈವರ್ಣಿಕರಿಗೆ ಅನುಷ್ಠೇಯವೆಂಬದಾಗಿ ಯೇರ್ಪಟ್ಟ ಆ ಯಜ್ಞದಾನಾದಿ ಕರ್ಮವೂ, ಸದಿತ್ಯೇವಾಭಿಧೀಯತೇ-ಸತ್ ಎಂತಲೇ ನಿರ್ದೇಶಿಸಲ್ಪಡುವುದು. ಇದರಿಂದ ತ್ರೈವರ್ಣಿಕರಾದ ವೈದಿಕರನುಷ್ಠಿಸುವ ಕರ್ಮವನ್ನು ಸತ್ ಎಂಬದಾಗಿ ನಿರ್ದೇಶಿಸಬೇಕೆಂದು ಹೇಳಿದಂತೇ ಆಯಿತು. ಓಮ್ ತತ್-ಸತ್ ಎಂಬದಾಗಿ ಮೂರು ಶಬ್ದಗಳನ್ನೂ ವೈದಿಕರು ಕರ್ಮಾರಂಭದಲ್ಲಿ ಹೇಳಬೇಕೆಂದು ವ್ಯವಸ್ಥಿತವಾಗಿರುವುದರಿಂದ ವೈದಿಕಕರ್ಮಗಳೂ ವೈದಿಕರೂ ಈ ಮೂರುಶಬ್ದಗಳ ಅನ್ವಯವೆಂಬ ಲಕ್ಷಣದಿಂದ ವೇದಾಧಿಕಾರವಿಲ್ಲದವರಿಗಿಂತಲೂ ವೇದೋಕ್ತವಾಗದ ಧರ್ಮಕ್ಕಿಂತಲೂ ಭಿನ್ನಪಟ್ಟವರೆಂದು ತಿಳಿಯತಕ್ಕವರಾಗಿರುತ್ತಾರೆ. || ೨೭ ||

(ಗೀ|| ವಿ) ಸ್ಥಿತಿಃ-ನಿಷ್ಠೆಯು, ಎಂದರೆ ಮಾಡಲ್ಪಡುವ ಯಜ್ಞಾದಿಗಳು ಭಗವದರ್ಪಣವಾಗಬೇಕೆಂಬ ಚಿಂತೆಯು, ಉಚ್ಯತೇ - (ಶಂ) ಜ್ಞಾನಿಗಳಿಂದ ಹೇಳಲ್ಪಡುವುದು. ತದರ್ಥೀಯಂಕರ್ಮಚೈವ- (ಶಂ||ಮ) ಯಜ್ಞದಾನ ತಪಸ್ಸಿಗಳಿಗನುಕೂಲವಾದ ಕರ್ಮಗಳುಅಥವಾ ಪರಮಾತ್ಮನಆರಾಧನಕ್ಕನುಕೂಲವಾದ ಕರ್ಮಗಳು. (ಶ್ರೀ) ಮನಸ್ಸಿನಿಂದಲೂ ಮಾಡತಕ್ಕ ಪೂಜಾದಿಗಳಲ್ಲದೆ ದೇಹದಿಂದ ಮಾಡತಕ್ಕ ನಮಸ್ಕಾರಾದಿಗಳೂ ದೇವಾಲಯನಿರ್ಮಾಣವೇನು ಅದನ್ನು ಸಾರಿಸುವುದೇನು ರಂಗ

ಬೆಲ್ಲಿ ಇಡುವುದೇನು ಇವೇ ಮೊದಲಾದ ಕರ್ಮಗಳೂ ಭಗವದಾಲಯ ನಿರ್ಮಾಣಕ್ಕೆ ಬೇಕಾದ ದ್ರವ್ಯಸಂಪಾದನ ಕರ್ಮವೂ ಪೂಜೆಗೆ ಬೇಕಾದ ಪುಷ್ಪಾದಿಗಳ ಸಂಪಾದನಕ್ಕಾಗಿ ನಂದನವನ ನಿರ್ಮಾಣಾದಿ ಕರ್ಮಗಳೂ. ... ... ... ||೨೭||

ಶ್ಲೋ|| ಅಶ್ರದ್ಧಯಾಹುತಂದತ್ತಂತಪಸ್ತಪ್ತಂಕೃತಂಚಯತ್| ಅಸದಿತ್ಯುಚ್ಯತೇಪಾರ್ಥನಚತತ್ಪ್ರೇತ್ಯನೋಇಹ||೨೮||

ಇತಿ ಶ್ರೀಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಶ್ರದ್ಧಾತ್ರಯವಿಭಾಗಯೋಗೋನಾಮ ಸಪ್ತದಶೋಽಧ್ಯಾಯಃ.

ಪ|| ಅಶ್ರದ್ಧಯಾ-ಹುತಂ-ದತ್ತಂ-ತಪಃ-ತಪ್ತಂ-ಕೃತಂ-ಚ-ಯತ್| ಅಸತ್-ಇತಿ-ಉಚ್ಯತೇ-ಪಾರ್ಥ-ನ-ಚ-ತತ್-ಪ್ರೇತ್ಯ-ನ-ಇಹ ||

(ಅ||) ಪಾರ್ಥ-ಎಲೈ ಅರ್ಜುನನೇ,ಅಶ್ರದ್ಧಯಾ- ಶ್ರದ್ಧೆಯಿಲ್ಲದೇ, ಯತ್‌ಹುತಂ-ಯಾವ-ಹೋಮವು ಮಾಡಲ್ಪಟ್ಟಿತೋ, ಯದ್ದತ್ತಂ-ಯಾವದಾನವು ಮಾಡಲ್ಪಟ್ಟಿತೋ, ಯತ್ತಪಸ್ತಪ್ತಂ-ಯಾವತಪಸ್ಸು ಮಾಡಲ್ಪಟ್ಟಿತೋ, ಯತ್‌ಚಕೃತಂ-ಇನ್ನೂ ಯಾವ ಯಾವ ಸತ್ಕರ್ಮವು ಮಾಡಲ್ಪಟ್ಟಿತೋ, ತತ್-ಅದೆಲ್ಲವೂ, ಪ್ರೇತ್ಯನಚ-ಮೋಕ್ಷಸಾಧನವೂ ಅಲ್ಲವು, ಇಹಚನೊ-ಬಂಧದಶೆಯಲ್ಲಿರುವ ಸಾಂಸಾರಿಕ ಫಲಕ್ಕೂ ಸಾಧನವಲ್ಲವು. ಇಲ್ಲಿ ಅತಃ ಎಂಬೀಪದವು ಸಿದ್ಧವು. ತತ್ ಎಂಬಪದವನ್ನು ಆವರ್ತಿಸಿಕೊಳ್ಳಬೇಕು. ಅತಃ-ಆದುದರಿಂದ, ತತ್-ಶ್ರದ್ಧಾರಹಿತವಾಗಿ ಮಾಡಲ್ಪಟ್ಟ ಆಕರ್ಮವು. ಅಸದಿತ್ಯುಚ್ಯತೇ-ಅಸತ್ ಎಂಬದಾಗಿ ಎಲ್ಲರಿಂದಲೂ ಹೇಳಲ್ಪಡುವುದು.(ಹದಿನೇಳನೆ ಅಧ್ಯಾಯದ ಅವತಾರಿಕೆಯಲ್ಲಿ " ವೈದಿಕಸ್ಯ ಕರ್ಮಣಸ್ಸಾಮಾನ್ಯ ಲಕ್ಷಣಂ ಪ್ರಮಾಣವಾನ್ವಯಃ-ತತ್ರಮೋಕ್ಷಾಭ್ಯುದಯ ಸಾಧನಯೋರ್ಭೇದ ಸ್ತತ್ಸಚ್ಛಬ್ದನಿರ್ದೇಶ್ಯತ್ವೇನ,, ಎಂಬದಾಗಿ ಶ್ರೀಭಾಷ್ಯಕಾರರು ಹೇಳಿರುವುದರಿಂದ ಭಕ್ತನು ಫಲಾಭಿಸಂಧಿರಹಿತನಾಗಿ ಮೋಕ್ಷಸಾಧನತ್ವೇನ ಅನುಷ್ಠಿಸುವ ಕರ್ಮಗಳಿಗೂ ಕೇವಲ ಕೈಂಕರ್ಯ ರೂಪವಾಗಿ ಪ್ರಪನ್ನನು ಅನುಷ್ಠಿಸುವ ನಿತ್ಯನೈಮಿತ್ತಿಕ ಕರ್ಮಗಳಿಗೂ ಓಂತತ್ ಎಂಬದಾಗಿ ನಿರ್ದೇಶವಿ

ರಬೇಕೆಂತಲೂ, ಮೋಕ್ಷಕ್ಕಿಂತಲೂ ಇತರವಾದ ಫಲಕ್ಕಾಗಿ ಅನುಷ್ಠಿಸಲ್ಪಡುವ ವೈದಿಕ ಕರ್ಮಗಳಿಗೆ ಓಮ್‌ಸತ್ ಎಂಬದಾಗಿ ನಿರ್ದೇಶವಿರಬೇಕೆಂತಲೂ ನಿಷ್ಕರ್ಷೆ ಯುಂಟಾಯಿತು. ಆ ಪ್ರಕರಣದಲ್ಲಿ "ಅತ್ರ ತತ್ ಸತ್ ಇತಿ ಶಬ್ದಾಭ್ಯಾಂ ಮೋಕ್ಷಾಭ್ಯುದಯ ಸಾಧನ ಕರ್ಮದ್ವಯ ವ್ಯವಹಾರಸ್ತಯೋಃ ಕರ್ಮಣೋಃ ಪ್ರಶಸ್ತತ್ವ ಜ್ಞಾಪನಾರ್ಥಃ - ನತುಪ್ರಣವೋಚ್ಚಾರಣ ವತ್ತತ್ಸದಿತಿ ಪದಯೋಃಕರ್ಮಾಂಗತ್ವಮಿತಿನಿಷ್ಕರ್ಷಃ" ಎಂಬದಾಗಿ ಶ್ರೀಮನ್ನಾರಾಯಣ ಮಹಾ ದೇಶಿಕರು ಅನುಗ್ರಹಿಸಿದ ಗೀತಾರ್ಥ ಸಂಗ್ರಹ ವಿಭಾಗ ಪಙ್ಕ್ತಿಯಲ್ಲಿರುವುದರಿಂದ ಪ್ರಣವೋಚ್ಚಾರಣಮಾತ್ರವೆ ವೈದಿಕ ಕರ್ಮಕ್ಕಂಗವೆಂತಲೂ, ಇತರ ತತ್ಸತ್ ಶಬ್ದನಿರ್ದೇಶವು ಆ ಕರ್ಮಗಳ ಪ್ರಶಸ್ತತಾಜ್ಞಾಪಕ ಮಾತ್ರವೆಂತಲೂ ವಿಭಾಗ ಮಸ್ಸರಿಯಬೇಕು. ... ... ||೨೮||

(ತಾ|| ಚಂ) ಶ್ರದ್ಧಾಯುಕ್ತವಾಗಿದ್ದರೂ ಅವೈದಿಕವಾದ ಕರ್ಮವು, ವೈದಿಕ ಕರ್ಮವಾಗಿದ್ದರೂ ಶ್ರದ್ಧಾರಹಿತವಾದದ್ದೂ ದೃಷ್ಟಾದೃಷ್ಟಪ್ರಯೋಜನಶೂನ್ಯವಾಗಿರುವುದರಿಂದ ಅನನುಷ್ಠೇಯವೆಂತಲೇ ತಿಳಿಯತಕ್ಕದ್ದಾಗಿರುವುದು. ಇಹಲೋಕ ಪರಲೋಕ ಪುರುಷಾರ್ಥ ಸಾಧನವೆಂಬ ಎರಡು ಪ್ರಯೋಜನಗಳಿಗೂ ಸಾಧಕವಾಗಿರುವುದರಿಂದ ವೇದಿಕ ಕರ್ಮವನ್ನೇ ಶ್ರದ್ಧಾಪೂತವನ್ನಾಗಿ ಅನುಷ್ಠಿಸಬೇಕೆಂಬುವುದೆ ಈ ಅಧ್ಯಾಯ ಸಾರಾಂಶವೆಂದರಿಯಬೇಕು. ... ||೨೮||

(ಶಂ|| ಭಾ) ಶ್ರದ್ಧಾರಹಿತವಾಗಿ ಮಾಡಲ್ಪಟ್ಟರೂ ಪ್ರತಿಕರ್ಮಗಳಲ್ಲಿಯೂ ಪುರ್ವೋಕ್ತ ನಾಮತ್ರಯೋಚ್ಚಾರಣದಿಂದಲೇ ಸಾದ್ಗುಣ್ಯ ಮುಂಟಾಗುವುದಾದರೆ ಶ್ರದ್ಧಾಪ್ರಾಧಾನ್ಯವು ಅನಪೇಕ್ಷಿತವೋ ? ಎಂಬ ಶಂಕೆಗೆ ಶ್ರದ್ಧಾವಿಹೀನವಾಗಿ ಮಾಡಲ್ಪಡುವ ಯಾವ ಕರ್ಮವೂ ವ್ಯರ್ಥವೇ ಎಂಬೀ ಸಂದರ್ಭವನ್ನು ವಿಶದ ಪಡಿಸುತ್ತಾರೆ. ಅದು ಹೇಗೆಂದರೆ? ಶ್ರದ್ಧಾವಿಹೀನವಾಗಿ ಮಾಡಲ್ಪಡುವ ಹೋಮವಾದರೂ ದಾನವಾದರೂ ತಪಸ್ಸಾದರೂ (ಅದು ಇದು ಎಂಬದಾಗಿ ಯೇತಕ್ಕೆ ಹೇಳಬೇಕು) ಯಾವ ಕರ್ಮವಾದರೂ ಸರಿಯೇ, ಭಗವತ್ಪ್ರಾಪ್ತಿ ಸಾಧನವಾದ ಸನ್ಮಾರ್ಗದಲ್ಲಿ ಸೇರಲಿಲ್ಲವಾದ್ದರಿಂದ ಅವೆಲ್ಲವೂ ಅಸತ್ತೆಂತಲೇ ಹೇಳ

ಲ್ಪಡುವುವು. ಅಶ್ರದ್ಧೆಯೊಡನೆ ಮಾಡಲ್ಪಡುವ ಕರ್ಮಗಳನ್ನು ಹಿರಿಯರು ನಿಂದಿಸುತ್ತಾರಾದ್ದರಿಂದ ಅವುಗಳ ದೆಸೆಯಿಂದ ಐಹಿಕ ಫಲಗಳೂ ಲಭಿಸಲಾರವು. ಪಾರಲೌಕಿಕ ಪುರುಷಾರ್ಥವೂ ಸಿದ್ಧಿಸುವುದಿಲ್ಲವು. ॥೨೮॥

(ಅ॥ ಗಿ) ಆದುದರಿಂದ ಶಾಸ್ತ್ರಗಳಲ್ಲಿ ಯಾವದನ್ನೂ ತಿಳಿಯದಿದ್ದರೂ ಹಿರಿಯರಿಂದ ತಿಳಿದುಕೊಂಡು ರಾಜಸ ತಾಮಸಾಹಾರಗಳನ್ನು ಬಿಟ್ಟು ಸಾತ್ವಿಕಾಹಾರಸೇವನೆಯನ್ನು ಮಾಡುತ ರಾಜಸ ತಾಮಸ ಶ್ರದ್ಧೆಗಳನ್ನು ಬಿಟ್ಟು ಸಾತ್ವಿಕ ಶ್ರದ್ಧೆಯಿಂದ ಮಾಡತಕ್ಕವರ ಯಜ್ಞಾದಿ ಕರ್ಮಗಳು ಒಂದು ಕಾಲದಲ್ಲಿ ಸ್ವಲ್ಪಲೋಪದಿಂದ ವೈಗುಣ್ಯವನ್ನು ಹೊಂದಿದರೂ ಬ್ರಹ್ಮನಾಮತ್ರಯೋಚ್ಚಾರಣದಿಂದ ಸಾಫಲ್ಯವನ್ನು ಹೊಂದುವುವು. ಆದ್ದರಿಂದ ಅಂತಹ ಶ್ರದ್ಧಾಭಕ್ತಿಸಂಪನ್ನರಾದ ಪರಿಶುದ್ಧ ಬುದ್ಧಿಯುಳ್ಳವರಿಗೆ ಶ್ರವಣಾದಿ ಪೂರ್ವಕವಾಗಿ ತತ್ತ್ವಸಾಕ್ಷಾತ್ಕಾರವೂ ಕ್ರಮವಾಗಿ ಮೋಕ್ಷವೂ ಸಿದ್ಧಿಸುವುದೆಂದರಿಯಬೇಕು. ... ... ... ॥೨೮॥

(ಶ್ರೀ) ರಜಸ್ತಮೋಮಯೀಂತ್ಯಕ್ತ್ವಾ ಶ್ರದ್ಧಾಂಸತ್ವಮಯೀಂಶ್ರಿತಃ । ತತ್ತ್ವಜ್ಞಾನೇಽಧಿಕಾರೀಸ್ಯಾದಿತಿ ಸಪ್ತದಶೇಸ್ಥಿತಂ ॥ ರಜಸ್ತಮಃ ಪ್ರಚುರವಾದ ಶ್ರದ್ಧೆಯನ್ನು ಬಿಟ್ಟು ಸತ್ವಮಯವಾದ ಶ್ರದ್ಧೆಯನ್ನಾಶ್ರಯಿಸಿದವನು ತತ್ವಜ್ಞಾನಾಧಿಕಾರಿಯಾಗುವನೆಂಬದಾಗಿ ಹದಿನೇಳನೇ ಅಧ್ಯಾಯದಲ್ಲಿ ಹೇಳಿತು.

## ಅದ್ವೈತ ಸಿದ್ಧಾಂತಿಗಳ ಅಧ್ಯಾಯಾರ್ಥ ಸಂಗ್ರಾಹಕಶ್ಲೋಕವು.

ಮೂ॥ ಪ್ರಾಕ್ಸಂಸ್ಕಾರಾನುರೂಪಂ ವಿಧಿವಿಧುರಧಿಯಃ ಶ್ರದ್ಧಯಾಸಂಯಜಂತೆ ದಾನಾಹಾರಕ್ರಿಯಾದ್ಯೈಸ್ತ್ರಿಧಗುಣವಶಾತ್ತತ್ಫಲಂತೇಲಭಂತೇ । ತದ್ವೈಗುಣ್ಯಂನಿಹನ್ತುಂಪ್ರಭವತಿಹಿತದೋಂತತ್ಸದೇಷಾತ್ರಿವರ್ಣೀತೇನ ಬ್ರಹ್ಮಾರ್ಪಣಂಸ್ಯಾದಿದಮಿತಿದಶಮೇ ಸಪ್ತಯುಕ್ತೇನಿರುಕ್ತಂ ॥ ॥೧೭॥

(ತಾ॥) ಶಾಸ್ತ್ರಾಭ್ಯಾಸವಿಲ್ಲದವರು ತಮ್ಮಗಳೊಡನೆ ಅನುಸರಿಸಿ

ಬರುವ ಪೂರ್ವಜನ್ಮವಾಸನಾನುಗುಣವಾಗಿ ಪ್ರಾಪ್ತವಾಗುವ ಸತ್ವರಜಸ್ತಮೋಗುಣಗಳನ್ನನುಸರಿಸಿ ಹುಟ್ಟುವಂಥಾ ಸಾತ್ವಿಕರಾಜಸ ತಾಮಸ ಶ್ರದ್ಧೆಗಳಲ್ಲಿ ಒಂದರೊಡನೆ ಕೂಡಿದವರಾಗಿ ಸಾತ್ವಿಕರಾಜಸ ತಾಮಸಗಳೆಂಬೀ ಪ್ರಭೇದಗಳುಳ್ಳ ಆಹಾರ ಯಜ್ಞದಾನ ತಪಸ್ಸುಗಳನ್ನು ಮಾಡುತ, ಅವುಗಳಿಗನುರೂಪಗಳಾದ ಸಾತ್ತ್ವಿಕ ರಾಜಸ ತಾಮಸ ಫಲಗಳನ್ನು ಹೊಂದುವರು. ಸಾತ್ವಿಕಾಹಾರಗಳನ್ನು ಭುಜಿಸುತ ಸಾತ್ವಿಕ ಯಜ್ಞದಾನತಪಃ ಕರ್ಮಗಳನ್ನಾಚರಿಸುತ ಸಾತ್ವಿಕ ಶ್ರದ್ಧಾಯುಕ್ತವಾದ ಕರ್ಮದಲ್ಲಿ ಒಂದಾನೊಂದು ಲೋಪವು ಪ್ರಾಪ್ತವಾದರೂ (ಓಮ್-ತತ್-ಸತ್) ಎಂಬೀ ಪರಬ್ರಹ್ಮವಾಚಕಗಳಾದ ಶಬ್ದಗಳನ್ನುಚ್ಚರಿಸಿದರೆ ಅಂಥಾ ವೈಗುಣ್ಯವೆಲ್ಲವೂ ಪರಿಹಾರವಾಗಿ ಕರ್ಮವು ಸಾದ್ಗುಣ್ಯವನ್ನು ಹೊಂದುವುದು. ಅಂಥಾ ಕರ್ಮವು ಬ್ರಹ್ಮಾರ್ಪಣವಾಗುವುದರಿಂದ ನಶ್ವರಗಳಾದ ಇತರ ಫಲಗಳು ತಟಸ್ಥಪಡದೆ ಪರಮ ಪುರುಷಾರ್ಥವಾದ ಮೋಕ್ಷವೇ ಅಂತವನಿಗೆ ಸಿದ್ಧಿಸುವುದೆಂದು ಶ್ರೀಕೃಷ್ಣನು ಅರ್ಜುನನನ್ನು ಕುರಿತು ಉಪದೇಶಿಸಿದನು. ... ॥೧೭॥

ಶ್ರೀಮದ್ಯಾಮುನಾಚಾರ್ಯರವರ ಶ್ರೀಮ
ದ್ಗೀತಾರ್ಥಸಂಗ್ರಹ ಶ್ಲೋಕವು.

ಮೂ॥ ಅಶಾಸ್ತ್ರಮಾಸುರಂ ಕೃತ್ಸ್ನಂಶಾಸ್ತ್ರೀಯಂಗುಣತಃಪೃಥಕ್ | ಲಕ್ಷಣಂಶಾಸ್ತ್ರಸಿದ್ಧಸ್ಯತ್ರಿಧಾಸಪ್ತದಶೋದಿತಂ ॥ ... ... *

(ತಾ॥ ) ಈ (೧೭) ನೇ ಅಧ್ಯಾಯದಲ್ಲಿ, ಶಾಸ್ತ್ರವಿಹಿತವಾಗದೆ ಶಾಸ್ತ್ರನಿಷಿದ್ಧವಾದ ಯಜ್ಞತಪೋದಾನಾದಿ ಸಕಲ ಕರ್ಮವೂ ಆಸುರವಾಗಿರುವುದರಿಂದ ತ್ಯಾಜ್ಯವೆಂತಲೂ, ಶಾಸ್ತ್ರವಿಹಿತವಾದ ಆಹಾರಯಜ್ಞತಪೋದಾನಾದಿ ಸಕಲ ಕರ್ಮಗಳೂ ಸತ್ವರಜಸ್ತಮೋಗುಣಭೇದದಿಂದ ಮೂರುವಿಧಗಳಾಗಿರುವುವೆಂತಲೂ, ಶಾಸ್ತ್ರವಿಹಿತವಾದ ಯಜ್ಞಾದಿ ಕ್ರಿಯಾಸಮೂಹಕ್ಕೆ “ ಓಮ್- ತತ್-ಸತ್ “ ಎಂಬ ಪದತ್ರಯಗಳೊಡನೆ ಅನ್ವಯವು ಆವಶ್ಯಕವೆಂತಲೂ, ಅಲ್ಲಿ ವೈದಿಕವಾದ ಕರ್ಮಸಾ

ಮಾನ್ಯವನ್ನು ಅನುಷ್ಠಿಸುವಾಗ ಅಂಗತ್ವೇನ ಪ್ರಣವೋಚ್ಚಾರಣವು ಮಾಡತಕ್ಕದ್ದೆಂತಲೂ, ಫಲಾಭಿಸಂಧಿರಹಿತ ಮೋಕ್ಷೋಪಾಯ ಭೂತಗಳಾದ ಕರ್ಮಗಳಿಗೆ ತತ್ ಎಂಬ ಪದಾನ್ವಯವು ವಿಶೇಷವೆಂತಲೂ, ಫಲಸಾಧನತ್ವೇನ ಅನುಷ್ಠಿಸಲ್ಪಡುವ ಕರ್ಮಕ್ಕೆ ಸಚ್ಛಬ್ದಾನ್ವಯವು ವಿಶೇಷವೆಂತಲೂ, ನಿದರ್ಶಿತವಾಯಿತೆಂದು ತಾತ್ಪರ್ಯವು. ||೨೮||

ಶ್ರೀಮದ್ವ್ಯಾಮುನಮುನಯೇನಮಃ.

ಶ್ರೀಮದ್ವೇದಾನ್ತಮಹಾದೇಶಿಕರ ಶ್ರೀಮ
ದ್ಗೀತಾರ್ಥಸಂಗ್ರಹ ಗಾಥೆಯು.

ಮೂ || ಮರೈಪೊರುನ್ದವ್ವೈ ವಲ್ಲಶ ರಕ್ಕುವಹುತ್ತವೈ ಯುಂ,ಮರೈಪ್ಪೊರುನ್ದಂ ನಿಲೈಯುಂ ಮನ್ನುಂಪ್ಪಡಿಮೂವಕೈಯುಂ, ಮರೈನಿಲೈತನ್ನೈವಹುಕ್ಕುಂ ಕುರಿಮೊನ್ನಿಮೇನ್ಮೈಯುಂ,ಮರೈಯುಮಿಳ್ನ್ದಾನು ರೈತ್ತಾನ್ವಾಶರ್ವ ತ್ತಿಶಿರುವನುಕ್ಕೆ || ... ... ||೧೮||

(ಶ್ರೀ) " ಅಶಾಸ್ತ್ರಮಾಸುರಂಕೃತ್ಸ್ನಂ " ಎಂಬೀ ಸಂಗ್ರಹ ಶ್ಲೋಕದಂತೆ(೧೭) ನೇ ಅಧ್ಯಾಯಾರ್ಥವನ್ನು ಒಂದು ಗಾಥೆಯಿಂದ ಸಂಗ್ರಹಿಸುತ್ತಾರೆ. ಮರೈ-ವೇದವನ್ನು, ಉಮಿಳ್ನ್ದಾನ್- ಉದ್ಗಿರಣವನ್ನು ಮಾಡಿದವನು, ಸೃಷ್ಟಿಸಿದವನೆಂದರ್ಥವು. ಇದುವೈದಿಕಕರ್ಮವೇನು ಅದನ್ನನುಷ್ಠಿಸತಕ್ಕವರೇನು,ಇವರಿಗೂಉಪಾದಾನೋಪಲಕ್ಷಣವಾಗಿರುವುದು"ಬ್ರಾಹ್ಮಣಾಸ್ತೇನವೇದಾಶ್ಚಯಜ್ಞಾಶ್ಚವಿಹಿತಾಃಪುರಾ,, ||೧೭||೨೩||

ಎಂಬ ಪ್ರಕಾರವಾಗಿ ವೇದವೇನು, ತದ್ವಿಹಿತಕರ್ಮವೇನು, ತದಧಿಕಾರಿಗಳಾದತ್ರೈವರ್ಣಿಕರೇನು, ಇವೆಲ್ಲವನ್ನು ನಿರ್ಮಿಸಿದಪರಮಪುರುಷನೆಂದು ತಾತ್ಪರ್ಯವು. ಮರೈ-ವೇದದೊಡನೆ, ಪೊರುನ್ದವ್ವೈ-ಸಂಬಂಧಿಸದೆ ಇರುವ, ವಲ್-ಬಲವಂತರಾದ, ಅಶುರರ್ಕ್ಕು- ಅಸುರರಿಗೆ, ವಹುತ್ತವೈಯುಂ-ವಿಭಕ್ತಗಳಾದ ಪ್ರಕಾರವನ್ನೂ, ಶ್ರುತ್ಯನುಮತಕರ್ಮಗಳು ಬಲವಂತರಾದ ಅಸುರಪ್ರಕೃತಿಗಳಿಂದ ಪರಿಗ್ರಹಿಸಲ್ಪಟ್ಟು ನಿಷ್ಫಲಗ

ಳಾಗುವ ಪ್ರಕಾರವನ್ನೂ, ಇಲ್ಲಿ ಆಸುರಪ್ರಕೃತಿಗಳನ್ನು ಬಲವತ್ತ್ವೇನನಿರ್ದೇಶಿಸಿರುವುದಕ್ಕೆ ಬಹುವಿತ್ತವ್ಯಯಾಯಾಸಸಾಧ್ಯಗಳಾದ ನಿಷ್ಫಲಕರ್ಮಗಳಲ್ಲಿ ಪುನಃಪುನಃಪ್ರವೃತ್ತಿ ಜನಕವಾದ ದುರ್ವಾರಶ್ರದ್ಧಾಧಿಕ್ಯವನ್ನುಂಟುಮಾಡುವವಾಸನಾದಾರ್ಢ್ಯವೇಅಭಿಪ್ರೇತವಾಗಿರುವುದು. ಮಣ್ಣೇವೇದದೊಡನೆ, ಪ್ರೊಸನ್ನಂ-ಸಂಬಂಧಿಸುವುದಾದ, ನಿಲ್ಕೈಯುಂ-ಶ್ರುತಿಚೊದಿತನಾದ ಕರ್ಮನಿಷ್ಠೆಯನ್ನೂ, ವರ್ಣ-ದೃಢಗಳಾದ, ಕುಣ-ಗುಣಗಳ, ಪಡಿ - ಪ್ರಕಾರದಲ್ಲಿ, ಮೂವಕ್ಕೈ - ತ್ರೈವಿಧ್ಯವನ್ನೂ, ಕರ್ಮಗಳಿಗೆ ಮೂಲಭೂತವಾದ ಸತ್ವರಜಸ್ತಮೋರೂಪಗಳಾಗಿರುವ ಬಿಡಲಶಕ್ಯವಾದ ಗುಣತ್ರೈವಿಧ್ಯಪ್ರಯುಕ್ತವಾಗಿರುವ ಸಾತ್ವಿಕರಾಜಸತಾಮಸರೂಪತ್ರೈವಿಧ್ಯವನ್ನೂ ಎಂದರ್ಥವು. ಮಣ್ಣೈಪ್ರೊರುನ್ದು-ವೇದಸಂಬಂಧಿಯಾದ, ನಿಲ್ಕೈ-ನಿಷ್ಠೆಯನ್ನು, ವಕುಕ್ಕುಮ್-ವಿಭಜಿಸುವುದಾದ, ಕುರಿಮೂನ್ರಿನ್-ಲಕ್ಷಣತ್ರಯದ, ಮೇನ್ಮೈ-ಉತ್ಕರ್ಷವನ್ನೂ, ಇಲ್ಲಿ ಕುರಿಶಬ್ದದಿಂದ “ಓಮ್ತತ್ಸದಿತಿನಿರ್ದೇಶೋಬ್ರಹ್ಮಣಸ್ತ್ರಿವಿಧಸ್ಸ್ಮೃತಃ” ಎಂಬ ಪ್ರಕಾರವಾಗಿ ವೈದಿಕ ಕರ್ಮಲಕ್ಷಣಗಳಾದ ಪ್ರಣವತತ್ಸತ್ ಶಬ್ದಗಳ ಅನ್ವಯದಿಂದುಂಟಾದ ಅತಿಶಯವನ್ನೂ ಎಂದರ್ಥವು. ವಾಶವರ್ಶಿರುವನುಕ್ಕು - ಇಂದ್ರಪುತ್ರನಾದ ಅರ್ಜುನನಿಗೆ, ಉರೈತ್ತಾನ್ - ಉಪದೇಶಿಸಿದನು. ... ... ॥೧೮॥

ಇತಿ ಶ್ರೀಮದ್ಗೀತಾರ್ಥಸಾರೇ ಸಪ್ತದಶಾಧ್ಯಾಯಃ.

ಶ್ರೀರುಕ್ಮಿಣೀಸತ್ಯಭಾಮಾ ಸಮೇತಾಯ

ಶ್ರೀಕೃಷ್ಣಾಯ ನಮೋನಮಃ.






ಶ್ರೀಕೃಷ್ಣಾಯ ಪರಮಾತ್ಮನೇನಮೋನಮಃ.

## ಶ್ರೀಮದ್ಗೀತಾರ್ಥಸಾರೇ ಶಾಸ್ತ್ರಸಾರಾರ್ಥರೂಪ ಅಷ್ಟಾದಶಾಧ್ಯಾಯ ಆರಭ್ಯತೇ.

(ಶಂ|| ಭಾ||) ಹಿಂದಿನ ಹದಿನೇಳಧ್ಯಾಯಗಳಲ್ಲಿ ಅಲ್ಲಲ್ಲಿ ಹೇಳಲ್ಪಟ್ಟಿರುವ ಮುಖ್ಯಾಂಶಗಳೆಲ್ಲವನ್ನೂ ಸುಲಭವಾಗಿ ತಿಳಿಸುವುದಕ್ಕಾಗಿ ಈ ಅಧ್ಯಾಯದಲ್ಲಿ ಪುನಃ ವಿಶದೀಕರಿಸುತ ವೇದಾಂತ ಭಾಗಗಳಲ್ಲಿ ವಿವರಿಸಲ್ಪಡುವ ತತ್ವಾರ್ಥಗಳೆಲ್ಲವನ್ನೂ ಇಲ್ಲಿ ವಿಸ್ತಾರವಾಗಿ ಉಪದೇಶಿಸಲಿಚ್ಛೈಸಿ ಈ ಅಧ್ಯಾಯವನ್ನು ಶ್ರೀಕೃಷ್ಣನಾರಂಭಿಸಿದನು. ಆದುದರಿಂದಲೇ ಈ ಅಧ್ಯಾಯದಲ್ಲಿ ಪೂರ್ವೋಕ್ತ ಸಕಲಾಂಶಗಳೂ ವ್ಯಕ್ತವಾಗಿ ಕಾಣಲ್ಪಡುವುವು. ಇಲ್ಲಿ ಅರ್ಜುನನಾದರೊ ಸನ್ಯಾಸ ತ್ಯಾಗ ಶಬ್ದಾರ್ಥಗಳಿಗಿರುವ ಭೇದವನ್ನು ಮಾತ್ರ ತಿಳದುಕೊಳ್ಳಬೇಕೆಂಬದಾಗಿ ಪ್ರಶ್ನೆಮಾಡುತ್ತಾನೆ.

(ಶ್ರೀ) ನ್ಯಾಸತ್ಯಾಗ ವಿಭಾಗೇನ ಸರ್ವಗೀತಾರ್ಥ ಸಂಗ್ರಹಂ| ಸ್ಪಷ್ಟಮಷ್ಟಾದಶೇಪ್ರಾಹ ಪರಮಾರ್ಥವಿನಿರ್ಣಯೇ|| "ಸರ್ವಕರ್ಮಾಣಿಮನಸಾಸನ್ಯಸ್ಯಾಸ್ತೇಸುಖಂವಶೀ ,, (೫|| ೧೩||) ಎಂಬುವುದರಿಂದ ಸಕಲ ಕರ್ಮಗಳನ್ನು ಮನಸ್ಸಿನಿಂದ ಬಿಟ್ಟವನು ಸುಖವಾಗಿರುವನೆಂತಲೂ, "ಸನ್ಯಾಸಯೋಗಯುಕ್ತಾತ್ಮಾ ವಿಮುಕ್ತೋಮಾಮುಪೇಷ್ಯಸಿ ,, (೯|| ೨೮||) ಎಂಬುವುದರಿಂದ ಸಕಲ ಕರ್ಮಗಳನ್ನೂ ಬಿಟ್ಟವನು ಮೋಕ್ಷವನ್ನು ಹೊಂದುವನೆಂತಲೂ, "ತ್ಯಕ್ತ್ವಾಕರ್ಮ ಫಲಾಸಂಗಂನಿತ್ಯತೃಪ್ತೋನಿರಾಶ್ರಯಃ ,, (೪|| ೨೦) "ಸರ್ವಕರ್ಮಫ

ಲತ್ಯಾಗಂತತಃ ಕುರುಯತಾತ್ಮವಾ್ ,, (೧೨॥ ೧೧) ಇವುಗಳಿಂದೆ ಸಕಲ ಕರ್ಮಫಲಗಳನ್ನು ತ್ಯಾಗವಾಡಬೇಕೆಂತಲೂ ಹೇಳಲ್ಪಟ್ಟಿರು ವುದು. ಇದು ಒಂದಕ್ಕೊಂದು ವಿರೋಧವಾಗಿ ಕಾಣಲ್ಪಡುವುದರಿಂ ದ ಅರ್ಜುನನು ಸಂದೇಹಪಟ್ಟು ಪರಮಾರ್ಥನಿರ್ಣಯಕ್ಕಾಗಿ ಸಮಸ್ತ ವಾದ ಗೀತಾಶಾಸ್ತ್ರಾರ್ಥವನ್ನು ಸಂಗ್ರಹಿಸಿ ನ್ಯಾಸತ್ಯಾಗ ಶಬ್ದಾರ್ಥವಿ ಭಾಗಮುಖೇನ ಸ್ಪಷ್ಟವಾಗಿ ಈ ಹದಿನೆಂಟನೇ ಅಧ್ಯಾಯದಲ್ಲಿ ಹೇ ಳುತ್ತಾರೆಂಬದಾಗಿ ಶ್ಲೋಕತಾತ್ಪರ್ಯವು.

(ರಾ॥ ಭಾ) ಕೆಳಗಿನ ಯರಡಧ್ಯಾಯಗಳಿಂದಲೂ ಅಭ್ಯುದಯ ವನ್ನೂ (ಮೋಕ್ಷೇತರವಾದ ಪುರುಷಾರ್ಥವನ್ನೂ) ಮೋಕ್ಷವನ್ನೂ ಕೊಡುವಂತಾದ್ದು ವೈದಿಕವಾದ ಯಜ್ಞದಾನತಪಃ ಪ್ರಭೃತಿಗಳೇ ಯಲ್ಲದೆ ಇತರಗಳಲ್ಲವೆಂತಲೂ ವೈದಿಕಕರ್ಮಕ್ಕೆ ಸಾಮಾನ್ಯಲಕ್ಷಣವು ಪ್ರಣವಾನ್ವಯವೆಂತಲೂ (ಪ್ರಣವದೊಡನೆ ಸಂಬಂಧವೆಂತಲೂ) ಅದ ರಲ್ಲಿ ಮೋಕ್ಷಸಾಧನಕ್ಕೆ ಸಾಂಸಾರಿಕ ಕ್ಷೇಮಸಾಧನಕ್ಕಿಂತಲೂ ಭೇದ ವು ತತ್ಸತ್ ಎಂಬೀ ಶಬ್ದಗಳಿಂದ ವ್ಯಪದೇಶವೆಂತಲೂ, ಮೋಕ್ಷ ಸಾಧನವಾದ ಕರ್ಮವು ಫಲಾಪೇಕ್ಷಾರಹಿತವಾದ ಯಜ್ಞಾದಿಕವೆಂತಲೂ, ಅವುಗಳ ಆರಂಭವೂ ಸತ್ವಗುಣಾಧಿಕ್ಯದಿಂ ದುಂಟಾಗುವುದೆಂತಲೂ, ಸತ್ವಗುಣಾಭಿವೃದ್ಧಿಯೂ ಸಾತ್ವಿಕಾಹಾರ ಸೇವನದಿಂದುಂಟಾಗಬೇಕೆಂ ತಲೂ ಹೇಳಲ್ಪಟ್ಟಿತು. ಈಗ ಮೋಕ್ಷಸಾಧನವೆಂಬದಾಗಿ ಹೇಳಲ್ಪ ಟ್ಟತ್ಯಾಗಕ್ಕೂ ಸನ್ಯಾಸಕ್ಕೂ ಐಕ್ಯವೂ, ತ್ಯಾಗದ ಸ್ವರೂಪವೂ ಸರ್ವಕರ್ಮವೂ ಪರಮಾತ್ಮನಿಂದ ಮಾಡಿಸಲ್ಪಡುವುದೆಂಬದಾಗಿ ಕರ್ತೃ ತ್ವವನ್ನು ಸರ್ವೇಶ್ವರನಲ್ಲಿ ಅನುಸಂಧಿಸುವಿಕೆಯೂ, ಸತ್ವರಜಸ್ತಮಸ್ಸು ಗಳ ಕಾರ್ಯವನ್ನು ವರ್ಣಿಸಿ ಅದರಿಂದ ಸತ್ವಗುಣವನ್ನು ಅವಶ್ಯವಾಗಿ ಸಂಪಾದಿಸಬೇಕೆಂಬ ವಿಷಯವೂ, ಭಗವದಾರಾಧನ ರೂಪವಾಗಿ ಮಾ ಡಲ್ಪಡುವ ತನ್ನ ವರ್ಣಾಶ್ರಮಗಳಿಗನುರೂಪಗಳಾದ ಕರ್ಮಗಳು ಪರ ಮ ಪುರುಷ ಪ್ರಾಪಕವಾಗಿರುವುದೆಂಬ ವಿಷಯವೂ, ಸರ್ವಗೀತಾಶಾಸ್ತ್ರ ಸಾರಭೂತವಾದ ಅರ್ಥವು ಭಕ್ತಿಯೋಗವೆಂಬ ವಿಷಯವೂ, (ಅವೆಲ್ಲವೂ)

ಈ ಅಧ್ಯಾಯದಲ್ಲಿ ಹೇಳಲ್ಪಡುವುವು. ಅಲ್ಲಿ ತ್ಯಾಗವೆಂಬುವುದೂ ಸನ್ನ್ಯಾಸವೆಂಬುವುದೂ ಒಂದೇ ? ಅಥವಾ ಬೇರೆಯೋ ? ಎಂಬನಿಶ್ಚಯ ಪರಿಜ್ಞಾನಾರ್ಥವಾಗಿಯೂ, ಅದರ ಸ್ವರೂಪವನ್ನು ನಿಶ್ಚಯಿಸುವುದಕ್ಕಾಗಿಯೂ ಅರ್ಜುನನು ಪ್ರಶ್ನೆಮಾಡುತ್ತಾನೆ.

(ಗೀ॥ ವಿ) ಹಿಂದಿನ ಅಧ್ಯಾಯಗಳಲ್ಲಿ ಅಲ್ಲಲ್ಲಿ ವಿಪ್ರಕೀರ್ಣವಾಗಿ ಹೇಳಿರುವ ಜ್ಞಾನಸಾಧನವನ್ನು ಮಂದಪ್ರಜ್ಞರ ಬುದ್ಧ್ಯಾರೋಹಾರ್ಥವಾಗಿ ಈ ಅಧ್ಯಾಯದಲ್ಲಿ ಹೇಳುತ್ತಾನೆ.

ಅರ್ಜುನ ಉವಾಚ ॥ ಸನ್ನ್ಯಾಸಸ್ಯಮಹಾಬಾಹೋತ
ತ್ತ್ವಮಿಚ್ಛಾಮಿವೇದಿತುಂ। ತ್ಯಾಗಸ್ಯಚಹೃಷೀಕೇಶಪೃ
ಥಕ್ಕೇಶಿನಿಷೂದನ॥ ... ॥ ೧ ॥

ಪ॥ ಅರ್ಜುನಃ-ಉವಾಚ॥ ಸನ್ನ್ಯಾಸಸ್ಯ-ಮಹಾಬಾಹೋ-ತತ್ತ್ವಂ-ಇಚ್ಛಾಮಿ-ವೇದಿತುಂ । ತ್ಯಾಗಸ್ಯ-ಚ-ಹೃಷೀಕೇಶ-ಪೃಥಕ್-ಕೇಶಿನಿಷೂದನ ॥

(ಅ॥ ರಾ॥) ಮಹಾಬಾಹೋ-(ಚತುರ್ವಿಧ ಪುರುಷಾರ್ಥಗಳನ್ನು ಕೊಡುವುದರಲ್ಲಿ ಸಮರ್ಥಗಳಾಗಿಯೂ, ಜಾನು (ಮೊಣಕಾಲು) ಪರ್ಯಂತಗಳಾಗಿಯೂ ಅಂಗದಕೇಯೂರ ರತ್ನೋರ್ಮಿಕಾದ್ಯ ಲಂಕೃತಗಳಾಗಿಯೂ) ಇರುವ ಕೈಗಳುಳ್ಳವನೇ ? ಹೃಷೀಕೇಶ-ಆಶ್ರಿತರಚಕ್ಷುರಾದೀಂದ್ರಿಯಗಳನ್ನು ತನ್ನ ಲಾವಣ್ಯಾದಿಗಳಿಂದ ಪರವಶಪಡಿಸುವಂತವನೇ ? ಕೇಶಿನಿಷೂದನ- (ನನ್ನ ಅಜ್ಞಾನವನ್ನು ನಾಶಪಡಿಸಿದಂತೆ) ಕೇಶಿ ಎಂಬ ಅಸುರನನ್ನು ಸಂಹರಿಸಿದವನೇ, ಸನ್ನ್ಯಾಸಸ್ಯ-ವೇದಾಂತಗಳಲ್ಲಿ ಮೋಕ್ಷಸಾಧನತ್ವೇನ ನಿರ್ದಿಷ್ಟಗಳಾದ ಸನ್ನ್ಯಾಸದ ವಿಷಯವಾಗಿಯೂ, ತ್ಯಾಗಸ್ಯಚ- ಅದರಂತೆಯೇ ವೇದಾಂತಗಳಲ್ಲಿ ಪ್ರಸಿದ್ಧವಾದ ತ್ಯಾಗದ ವಿಷಯವಾಗಿಯೂ ಇರುವ, ತತ್ತ್ವಂ- ಯಥಾರ್ಥಸ್ಥಿತಿಯನ್ನು, ಪೃಥಕ್-ಚನ್ನಾಗಿ ವಿವೇಕಿಸಿ, ವೇದಿತುಮಿಚ್ಛಾಮಿ - ತಿಳಿಯಲಪೇಕ್ಷಿಸುವೆನು. ಈ ಪ್ರಶ್ನಾರ್ಥವೇನೆಂದರೇ ? ಸನ್ನ್ಯಾಸತ್ಯಾಗಶಬ್ದಗಳಿಗೆ ಬೇರೆಬೇರೆ ಅರ್ಥವುಂಟೇ ? ಅಥವಾ ಎರಡು ಶಬ್ದಗಳಿಗೂ ಘಟಕುಂಭಶಬ್ದಗಳಿಗಂತೆ ಅರ್ಥವು ಒಂದೆ ? ಬೇರೆಬೇರೆ ಅರ್ಥವುಂಟಾ

ಗಿದ್ದ ಪಕ್ಷದಲ್ಲಿ ಆ ಎರಡು ಅರ್ಥಗಳ ಸ್ವರೂಪವನ್ನು ತಿಳಿಸಬೇಕು. ಆ ಪ್ರಕಾರವಿಲ್ಲದೇ ಅರ್ಥವು ಒಂದಾಗಿರುವ ಪಕ್ಷದಲ್ಲಿ ಅದರ ಸ್ವರೂಪ ವನ್ನು ಬೋಧಿಸಬೇಕೆಂಬದಾಗಿ ಅರ್ಜುನನ ಪ್ರಶ್ನಾರ್ಥವು. ‖೧‖

(ಶ್ರೀ) ಕುದರೆಯ ರೂಪವನ್ನು ಧರಿಸಿ ಬಾಯಿಯನ್ನು ತೆರದು ಕೊಂಡು ಯುದ್ಧಕ್ಕೆ ಬಂದಕೇಶಿ ಎಂಬರಾಕ್ಷಸನನ್ನು ಶ್ರೀಕೃಷ್ಣ ನು ಅವನಬಾಯಿಯಲ್ಲಿ ತನ್ನ ಕೈಯನ್ನು ಕೊಟ್ಟು ಆಕೈಯನ್ನು ದೊಡ್ಡದಾಗಿ ಅಭಿವೃದ್ಧವಾಗುವಂತೆ ಮಾಡಲು ಅದರಿಂದ ಅವನ ಬಾಯಿ ಯು ಶೀಳಿಹೋಗಿ ಮೃತನಾದನು. ಆದುದರಿಂದ ಕೇಶಿನಿಷೂದನನೆಂಬ ನಾಮವು ಶ್ರೀಕೃಷ್ಣನಿಗೆ ಬಂತು. (ಶಂ) ಸನ್ಯಾಸಶಬ್ದಕ್ಕೂ ತ್ಯಾಗಶಬ್ದಕ್ಕೂ ಸ್ವಾಭಾವಿಕವಾದ ಅರ್ಥವನ್ನು ಹೇಳಬೇಕು. ‖೧‖

ಶ್ರೀಭಗವಾನುವಾಚ ‖ ಕಾಮ್ಯಾನಾಂಕರ್ಮಣಾಂನ್ಯಾಸಂ
ಸನ್ಯಾಸಂಕವಯೋವಿದುಃ| ಸರ್ವಕರ್ಮಫಲತ್ಯಾಗಂಪ್ರಾ
ಹುಸ್ತ್ಯಾಗಂವಿಚಕ್ಷಣಾಃ ‖ ... ‖೨‖

ಪ‖ ಶ್ರೀಭಗವಾನ್-ಉವಾಚ‖ ಕಾಮ್ಯಾನಾಂ-ಕರ್ಮಣಾಂ-ನ್ಯಾಸಂ-ಸನ್ಯಾಸಂ-ಕವಯಃ-ವಿದುಃ | ಸರ್ವಕರ್ಮಫಲತ್ಯಾಗಂ-ಪ್ರಾಹುಃ-ತ್ಯಾಗಂ-ವಿಚಕ್ಷಣಾಃ ‖

(ಅ‖ ರಾ‖ ಭಾ) ಕವಯಃ-ಕೆಲವು ವಿದ್ವಾಂಸರು, ಕಾಮ್ಯಾನಾಂ ಕರ್ಮಣಾಂ-ನಿತ್ಯನೈಮಿತ್ತಿಕ ಕರ್ಮಗಳಿಗಿಂತಲೂ ಭಿನ್ನಪಟ್ಟ ಫಲಾರ್ಥ ಕರ್ಮಗಳ, ನ್ಯಾಸಂ-ಸ್ವರೂಪತ್ಯಾಗವನ್ನು, ಸನ್ಯಾಸಂ-ಸನ್ಯಾಸಶಬ್ದ ದ ಅರ್ಥವೆಂಬದಾಗಿ, ವಿದುಃ- ನಿಶ್ಚಯಿಸಿರುವರು. ವಿಚಕ್ಷಣಾಃ-ಕೆ ಲವು ಪಂಡಿತರು, ಸರ್ವಕರ್ಮ ಫಲತ್ಯಾಗಂ-ನಿತ್ಯವು ನೈಮಿತ್ತಿಕವು ಕಾ ಮ್ಯವೆಂಬೀಸರ್ವಕರ್ಮಗಳ ಫಲತ್ಯಾಗವನ್ನು, ತ್ಯಾಗಂ-ಮೋಕ್ಷಶಾಸ್ತ್ರಗ ಳಲ್ಲಿ ಹೇಳಿರುವ ತ್ಯಾಗಶಬ್ದಾರ್ಥವೆಂಬದಾಗಿ ಹೇಳುವರು.ಇಲ್ಲಿ ವೇದಾಂ ತಪ್ರಸಿದ್ಧವಾದ ತ್ಯಾಗವು ಕಾಮ್ಯಕರ್ಮಸ್ವರೂಪ ವಿಷಯವೆಂತಲೂ ಸರ್ವಕರ್ಮ ಫಲವಿಷಯವೆಂತಲೂ ಇರುವ ವಿವಾದವನ್ನು ತೋರಿಸುವ ಈ ಶ್ಲೋಕದಲ್ಲಿ ಒಂದು ಸ್ಥಲದಲ್ಲಿ ಸನ್ಯಾಸ ಶಬ್ದವನ್ನೂ ಮತ್ತೊಂ ದು ಸ್ಥಲದಲ್ಲಿ ತ್ಯಾಗ ಶಬ್ದವನ್ನೂ ಪ್ರಯೋಗಿಸಿರುವುದರಿಂದಲೂ

" ನಿಶ್ಚಯಂಶೃಣುಮೇತತ್ರ ,, (೧೮॥ ೪) ಎಂಬೀಶ್ಲೋಕದಲ್ಲಿ " ತ್ಯಾಗೇಭರತಸತ್ತಮ ,, ಎಂಬದಾಗಿ ತ್ಯಾಗ ಶಬ್ದದಿಂದಲೆ ನಿರ್ಣಯಿಸುವ ಪ್ರಕಾರವನ್ನು ಹೇಳಿರುವುದರಿಂದಲೂ, " ನಿಯತಸ್ಯತುಸನ್ಯಾಸಃ ,, (೧೮॥೭) ಎಂಬೀ ಶ್ಲೋಕದಲ್ಲಿ "ಮೋಹಾತ್ತಸ್ಯ ಪರಿತ್ಯಾಗಃ,, ಎಂತಲೂ "ಅನಿಷ್ಟಮಿಷ್ಟಂ ಮಿಶ್ರಂಚ,, ೧೮॥೧೨॥) ಎಂಬ ಶ್ಲೋಕದಲ್ಲಿ " ಭವತ್ಯತ್ಯಾಗಿನಾಂ ಪ್ರೇತ್ಯನತು ಸನ್ಯಾಸಿನಾಂಕ್ವಚಿತ್ ,, ಎಂಬದಾಗಿ ಸನ್ಯಾಸಶಬ್ದಕ್ಕೂ ತ್ಯಾಗಶಬ್ದಕ್ಕೂ ಪರ್ಯಾಯ ಪ್ರಯೋಗವು ಕಾಣಿಸಲ್ಪಟ್ಟಿರುವುದರಿಂದಲೂ ಆ ಎರಡು ಶಬ್ದಗಳಿಗೂ ಏಕಾರ್ಥವು ತೋರುವುದರಿಂದ ಹಿಂದೇ ಅರ್ಜುನನು ಮಾಡಿದ ಪ್ರಶ್ನದಲ್ಲಿ ಸನ್ಯಾಸತ್ಯಾಗ ಶಬ್ದಾರ್ಥಗಳೆರಡೂ ಒಂದೋ ? ಅಥವಾ ಎರಡೋ ? ಎಂಬದಾಗಿ ಪ್ರಶ್ನಮಾಡಿದ್ದಕ್ಕೆ ಈ ಯರಡೂ ಒಂದೆ ಎಂಬದಾಗಿ ಪ್ರತ್ಯುತ್ತರವಂ ಕೊಟ್ಟಿರುವಂತೆ ತಿಳಿಯಬರುತ್ತದೆ. ... ॥೨॥

( ಶ್ರೀ ) " ಜ್ಯೋತಿಷ್ಟೋಮೇನಸ್ವರ್ಗಕಾಮೋಯಜೇತ,,ಸರ್ಗಾಪೇಕ್ಷೆಯುಳ್ಳವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕು. " ಪುತ್ರಕಾಮಃಪುತ್ರೇಷ್ಟ್ಯಾಯಜೇತ್ " ಪುತ್ರಾಪೇಕ್ಷೆಯುಳ್ಳವನು ಪುತ್ರಕಾಮೆಷ್ಟಿ ಎಂಬಯಾಗವನ್ನ ಮಾಡಬೇಕು. ಎಂಬದಾಗಿ ವೇದಗಳಲ್ಲಿ ಹೇಳಲ್ಪಟ್ಟಿರುತ್ತದೆಯಲ್ಲವೆ ? ಅಂತಹ ಫಲಯುಕ್ತವಾದ ಕರ್ಮವು ಕಾಮ್ಯಕರ್ಮವೆನ್ನಲ್ಪಡುವುದು. ಈ ಕಾಮ್ಯಕರ್ಮವನ್ನುಮಾಡದೆ ಇರುವುದು ಸನ್ಯಾಸವೆಂಬದಾಗಿ ಕೆಲವರೂ, ವೇದೋಕ್ತವಾದ ನಿತ್ಯನೈಮಿತ್ತಿಕ ಕಾಮ್ಯಗಳಾದ ಸಕಲಕರ್ಮಗಳನ್ನೂ ಅನುಷ್ಠಿಸಿ ಫಲವನ್ನು ಭಗವದರ್ಪಣ ಮಾಡುವುದೆ ತ್ಯಾಗಶಬ್ದಾರ್ಥ ವೆಂಬದಾಗಿಕೆಲವರೂ ಹೇಳುತ್ತಾರೆ. ನಿತ್ಯಕರ್ಮಗಳಿಗೂ ಕೆಲವು ನೈಮಿತ್ತಿಕ ಕರ್ಮಗಳಿಗೂ, ಜ್ಯೋತಿಷ್ಟೋಮಾದಿಗಳಿಗೆಫಲವು ಹೇಳಿರುವಂತೆಫಲವೆ ವೇದಗಳಲ್ಲಿಹೇಳಲ್ಪಡಲಿಲ್ಲವಾದುದರಿಂದಆರೀತಿಯಾಗಿಫಲವೇ ಇಲ್ಲದ ಕರ್ಮವನ್ನನುಷ್ಠಿಸಿ ಫಲವನ್ನು ತ್ಯಾಗಮಾಡೆಂದು ಹೇಗೆ ಹೇಳಬಹುದೆಂದರೆ ಆನಿತ್ಯನೈಮಿತ್ತಿಕ ಕರ್ಮಗಳು ವಿಧಿಸಲ್ಪಟ್ಟಿರುವ ವೇದಭಾಗದಲ್ಲಿ ಫಲವು ಹೇಳಲ್ಪಡ

ದೆ ಇದ್ದರೂ “ ಸರ್ವಏತೇ ಪುಣ್ಯಲೋಕಾ ಭವಂತಿ ಕರ್ಮಣಾಪಿತ್ರ್ಯ ಲೋಕಃ “ ಇತ್ಯಾದಿ ವೇದವಾಕ್ಯಗಳಿಂದ ವಿಶೇಷವಾದ ಪುಣ್ಯಫಲಗಳು ಹೇಳಲ್ಪಟ್ಟಿರುವುದರಿಂದ ಫಲಗಳುಂಟೆಂಬದಾಗಿ ತಿಳಿಯಬೇಕು. ಈ ಪ್ರಕಾರವಾಗಿ ಹೇಳುವದರಿಂದ ಕರ್ಮಾನುಷ್ಠಾನವು ಅವಶ್ಯಕವೆಂಬದಾಗಿ ಸಿದ್ಧವಾಯಿತು. “ ಯಸ್ತ್ವಾತ್ಮರತಿರೇವಸ್ಯಾದಾತ್ಮತೃಪ್ತಶ್ಚ ಮಾನವಃ “ ( ೩॥ ೧೭॥ ) ಎಂಬದಾಗಿ ಹೇಳಿರುವುದರಿಂದ ಪರಮಾತ್ಮನಲ್ಲಿ ಮನಸ್ಸನ್ನಿಟ್ಟು ಆ ಆತ್ಮನಲ್ಲಿಯೇ ತೃಪ್ತಿಹೊಂದಿರುವಂತವನು ಕರ್ಮಾನುಷ್ಠಾನ ಮಾಡಬೇಕಾದ ಅವಶ್ಯಕ ವಿಲ್ಲವೆಂಬುವುದಾಗಿ ಏರ್ಪಡುವುದರಿಂದ ಒಂದಕ್ಕೊಂದು ವಿರೋಧವಲ್ಲವೇ? ಎಂದರೆ ಆತ್ಮನಲ್ಲಿಯೆ ತೃಪ್ತಿಹೊಂದಿ ಆತ್ಮಧ್ಯಾನ ಸಮಾಧಿಯಲ್ಲಿರುವಂತವನಿಗೆ ಕರ್ಮವು ತಾನಾಗಿಯೆ ಬಿಟ್ಟು ಹೋಗುವುದು. ಅಂತವನು ಕರ್ಮಾಚರಣವನ್ನು ಮಾಡಬೇಕಾಗಿಲ್ಲವು. ... ... ॥೧॥

(ಶಂ॥ ಭಾ) ಪೂರ್ವಾಧ್ಯಾಯಗಳಲ್ಲಿ ಅಲ್ಲಲ್ಲಿ ಸನ್ಯಾಸತ್ಯಾಗಗಳನ್ನು ಕುರಿತು ಹೇಳಿರುವಲ್ಲಿ ಪುನಶ್ಚ ಅರ್ಜುನನಿಲ್ಲಿ ಯೆತಕ್ಕೆ ಪ್ರಶ್ನೆ ಮಾಡಬೇಕೆಂದರೆ ಇದುವರೆಗೂತಿಳಿಸಲ್ಪಟ್ಟ ಅರ್ಥಗಳಿಂದ ಸನ್ಯಾಸತ್ಯಾಗಶಬ್ದಾರ್ಥಗಳ ವಿವೇಚನವು ಸ್ಪಷ್ಟವಾಗಿ ತಿಳಿಯದೆಇದ್ದ ಪ್ರಯುಕ್ತ ಇಲ್ಲಿ ಪುನಶ್ಚ ಪ್ರಶ್ನೆಮಾಡಿದನು. ಆದುದರಿಂದಲೆ ಅರ್ಜುನನಿಗೆ ಈ ಅರ್ಥವು ತಿಳಿಯಲಿಲ್ಲ ವೆಂಬದಾಗಿ ಶ್ರೀಕೃಷ್ಣನುತಾನೆ ಚಿಂತಿಸಿ ಅರ್ಜುನನ ಸಂದೇಹ ಪರಿಹಾರಾರ್ಥವಾಗಿಪ್ರತ್ಯುತ್ತರವನ್ನು ಹೇಳುತ್ತಾನೆಂದರಿಯಬೇಕು. ಕೆಲವರು ಅನುಷ್ಠೇಯಗಳೆಂಬದಾಗಿ ಏರ್ಪಟ್ಟ ಅಶ್ವಮೇಧಾದಿ ಕಾಮ್ಯಕರ್ಮಗಳನ್ನುಆಚರಿಸದೇ ಇರುವಿಕೆಯೆ ಸನ್ಯಾಸಶಬ್ದಾರ್ಥವೆಂತಲೂ ನಿತ್ಯನೈಮಿತ್ತಿಕ ಕರ್ಮಗಳನ್ನು ತಾನನುಷ್ಠಿಸುವುದರಿಂದ ತನಗೆ ಸಂಬಂಧಿಸಿ ಪ್ರಾಪ್ತವಾಗುವ ಫಲಗಳಲ್ಲಿ ಅಪೇಕ್ಷಾರಾಹಿತ್ಯವೇ ತ್ಯಾಗ ಶಬ್ದಾರ್ಥವೆಂತಲೂ ತತ್ತ್ವವೇದಿಗಳಾದ ಪಂಡಿತರು ಹೇಳುವರು. ಕಾಮ್ಯಕರ್ಮವನ್ನುಬಿಡುವುದೆಂದು ಹೇಳಿದರೂ ಕರ್ಮಫಲವನ್ನು ಬಿಡುವುದೆಂದುಹೇಳಿದರೂ ಈ ಎರಡೂ ತ್ಯಾಗವೆಂಬ ಏಕಾರ್ಥವೇಆಗು

ವುದು. ಘಟಪಟಶಬ್ದಗಳಂತೆ ವಿಜಾತೀಯವಾದ ಅರ್ಥವುಳ್ಳದ್ದಲ್ಲವು. ಆದರೆ ನಿತ್ಯನೈಮಿತ್ತಿಕ ಕರ್ಮಗಳಿಗೆ ಫಲವೇ ಇಲ್ಲವಾದುದರಿಂದ ಅವುಗಳ ಫಲತ್ಯಾಗವೆಂಬುವುದು ಹೇಗೆ? ಹೇಗಾದರೆ ವಂಧ್ಯಾಸ್ತ್ರೀಗೆ ಪುತ್ರತ್ಯಾಗೋಕ್ತಿಯು ಅಸಂದರ್ಭವೋ ಅದರಂತೆ ಫಲಶೂನ್ಯವಾದ ಕರ್ಮಕ್ಕೆ ಫಲತ್ಯಾಗವುಯುಕ್ತವೆ? ಎಂದರೆ ಅವುಗಳಿಗೂ ಫಲಗಳುಂಟೆಂತಲೆ ಭಗವದಭಿಪ್ರಾಯವು. "ಅನಿಷ್ಟಮಿಷ್ಟಂಮಿಶ್ರಂಚ-ನತುಸನ್ಯಾಸಿನಾಂಕ್ವಚಿತ್" (೧೮॥ ೧೨) ಎಂಬುವುದರಿಂದ ಪರಮಾರ್ಥಸನ್ಯಾಸಿಯಾದವನಿಗೆ ಕರ್ಮಫಲವು ಅಂಟುವದಿಲ್ಲವೆಂಬದಾಗಿ ತೋರಿಸುತ ಅಸನ್ಯಾಸಿಯಾದವನಿಗೆ ಫಲಪ್ರಾಪ್ತಿಯುಂಟೆಂದು ತೋರಿಸಿರುತ್ತಾರೆ. ... ... ॥೨॥

(ಮ॥ಗೀ॥ವಿ)ಕಾಮ್ಯಾನಾಂಕರ್ಮಣಾಂನ್ಯಾಸಂಸನ್ಯಾಸಂ-ಫಲದಲ್ಲಿರುವಇಚ್ಛಾತ್ಯಾಗದಿಂದಲಾದರೂಮಾಡದೇಇರುವುದರಿಂದಲಾದರೂಕಾಮ್ಯಕರ್ಮವನ್ನು ಬಿಡುವುದೆಸನ್ಯಾಸವು.(ಮ)ತ್ಯಾಗಸ್ತುಫಲತ್ಯಾಗಏವ-ತ್ಯಾಗವೆಂಬುವುದುಫಲತ್ಯಾಗವೆ.(ಗೀ॥ವಿ)ಸರ್ವಕಾಮ್ಯಕರ್ಮಣಾಂಭಗವತ್ಪ್ರೀತ್ಯರ್ಥಫಲತ್ಯಾಗಃ-ಭಗವತ್ಪ್ರೀತ್ಯರ್ಥವಲ್ಲದೆ ಸರ್ವಕಾಮ್ಯಗಳಿಗೆ ಅನ್ಯವಾದ ಫಲತ್ಯಾಗವೇ ತ್ಯಾಗಶಬ್ದಾರ್ಥವು. ಕಾಮ್ಯಕರ್ಮಗಳು ನಿತ್ಯಕಾಮ್ಯ ಅನಿತ್ಯಕಾಮ್ಯವೆಂಬದಾಗಿ ದ್ವಿವಿಧಗಳಾಗಿರುವುವು. ಅದರಲ್ಲಿ ನಿತ್ಯಕಾಮ್ಯಕರ್ಮಗಳ ಸ್ವರೂಪತ್ಯಾಗವು ಸನ್ಯಾಸವೆಂತಲೂಅನಿತ್ಯಕಾಮ್ಯಕರ್ಮಗಳ ಸ್ವರ್ಗಾದಿ ಫಲಮಾತ್ರ ತ್ಯಾಗವು ತ್ಯಾಗವೆಂತಲೂ ಹೇಳಲ್ಪಡುವುದು. ಸಮಸ್ತಕಾಮ್ಯಕರ್ಮಗಳನ್ನು ಮಾಡಲಿ ಅಥವಾ ಅನುಷ್ಠಿಸದೇ ಇರಲಿ. ಅವುಗಳ ಫಲೇಚ್ಛಾತ್ಯಾಗವು ತ್ಯಾಗಶಬ್ದಾರ್ಥವಾಗುವುದು. ಇದಕ್ಕೆ "ಅನಿಚ್ಛಯಾಕರ್ಮಣಾಮಪಿಕಾಮ್ಯಾನಾಂನ್ಯಾಸೋನ್ಯಾಸಃ - ಫಲತ್ಯಾಗಸ್ತು ತ್ಯಾಗಃ" ಎಂಬದಾಗಿ ಪ್ರಾಚೀನಶಾಲಾಶ್ರುತಿಸಮ್ಮತಿ ಇರುವುದು.॥೨॥

ಶ್ಲೋ ॥ ತ್ಯಾಜ್ಯಂದೋಷವದಿತ್ಯೇಕೇಕರ್ಮಪ್ರಾಹುರ್ಮನೀಷಿಣಃ । ಯಜ್ಞದಾನತಪಃಕರ್ಮನತ್ಯಾಜ್ಯಮಿತಿಚಾಪರೆ॥ ... ... ।೩।

ಪ॥ ತ್ಯಾಜ್ಯಂ-ದೋಷವತ್- ಇತಿ-ಏಕೇ-ಕರ್ಮ-ಪ್ರಾಹುಃ-ಮನೀಷಿಣಃ। ಯಜ್ಞದಾನತ ಕರ್ಮ-ನ-ತ್ಯಾಜ್ಯಂ-ಇತಿ-ಚ-ಅಪರೇ ॥

(ಅ ॥ ರಾ ॥ ಭಾ) ಏಕೇಮನೀಷಿಣಃ - ಕಪಿಲಸಿದ್ಧಾಂತಿಗಳೂ ಆಸಿದ್ಧಾಂತದಲ್ಲಿಯೇ ಆದರವುಳ್ಳ ಕೆಲವುವೈದಿಕರೂ, (ಶಂ॥ ಶ್ರೀ) ಸಾಂಖ್ಯಮತಸ್ಥರು, ದೋಷವತ್-ರಾಗವೆಂಬದೋಷವುಳ್ಳದ್ದಾಗಿ ಬಂಧಕವಾಗಿರುವುದರಿಂದ, (ಶಂ) ದೋಷಯುಕ್ತವಾದವಸ್ತುಗಳಲ್ಲಿ ಅಪೇಕ್ಷಾದಿಗಳನ್ನು ಬಿಡುವಂತೆ, ಕರ್ಮಯಜ್ಞಾದಿ ಸಮಸ್ತ ಕರ್ಮವೂ, ತ್ಯಾಜ್ಯಮಿತಿ- ಮುಮುಕ್ಷುವಾದ ಅಧಿಕಾರಿಗೆ ಬಿಡತಕ್ಕದೆಂಬದಾಗಿ, ಪ್ರಾಹುಃ ಹೇಳುವರು ॥೨೪॥ ಅಪರೇ-ಕೆಲವು ಪಂಡಿತರು, (ಶಂ) ಕರ್ಮಯೋಗಿಗಳು, (ಶ್ರೀ) ಮೀಮಾಂಸಕಮತಸ್ಥರು, ಯಜ್ಞದಾನತಪಃಕರ್ಮ-ಯಜ್ಞದಾನತಪ್ರೋರೂಪವಾದಕರ್ಮವು,ನತ್ಯಾಜ್ಯಮಿತಿಚ-ಬಿಡತಕ್ಕದ್ದಲ್ಲವೆಂತಲೂ, ಪ್ರಾಹುಃ- ಎಂಬದಾಗಿಅನುಷಂಗವು ) ಪ್ರಾಹುಃ-ಹೇಳುವರು. ॥೩॥

(ಶಂ ॥ ಭಾ) ಸನ್ಯಾಸವೆಂದರೆಕಾಮ್ಯಕರ್ಮಪರಿತ್ಯಾಗವೆಂತಲೂ ತ್ಯಾಗವೆಂದರೆ ನಿತ್ಯನೈಮಿತ್ತಿಕಾದಿ ಫಲಪರಿತ್ಯಾಗವೆಂತಲೂ ಅರ್ಥವು ಹೇಳಬೇಕಾಗಿರುವುದರಿಂದ ಸನ್ಯಾಸತ್ಯಾಗ ಶಬ್ದಗಳೆರಡಕ್ಕೂ ಪರಿತ್ಯಾಗ ರೂಪವಾದ ಒಂದೇ ಅರ್ಥವಿರುವುದಾಗಿ ನಿಶ್ಚಿತವಾಯಿತು. ಆದುದರಿಂದ ಘಟಪಟಶಬ್ದಗಳೆರಡೂ ಬೇರೆಯಾದ ಪದಾರ್ಥಗಳಂ ಬೋಧಿಸುವುದೆಂಬ ಕಾರಣದಿಂದ ಅವಾಂತರಭೇದವುಳ್ಳದ್ದಾಗಿದ್ದರೂ ಘಟಶಬ್ದವೂ ಜಾತಿವಾಚಕಶಬ್ದವೆ, ಪಟಶಬ್ದವೂ ಜಾತಿವಾಚಕಶಬ್ದವೇ ಆಗಿರುವುದರಿಂದಘಟಪಟಶಬ್ದಗಳೆರಡೂ ಜಾತಿಗೆ ಅನ್ತರ್ಭಾವವನ್ನು ಹೊಂದಿರುವಂತೆ ಸನ್ಯಾಸತ್ಯಾಗಶಬ್ದಗಳಿಗೆ ಅವಾಂತರಾರ್ಥಭೇದವಿಲ್ಲವೆಂತಲೂ, ಅದರಿಂದ ಸನ್ಯಾಸತ್ಯಾಗ ಶಬ್ದಗಳಿಗೆ ಏಕಾರ್ಥತ್ವರೂಪ ಪ್ರಸಿದ್ಧಿಗೆ ವಿರೋಧವಿಲ್ಲವೆಂತಲೂ ತಿಳಿಯಬರುತ್ತದೆ.

ಆದರೆ ನಿತ್ಯನೈಮಿತ್ತಿಕಕರ್ಮಗಳಿಗೆ ಫಲವೆ ಇಲ್ಲವೆಂಬದಾಗಿ ಹಿರಿಯರುಹೇಳುತ್ತಾರಲ್ಲವೇ? ನಿತ್ಯನೈಮಿತ್ತಿಕ ಕರ್ಮಫಲತ್ಯಾಗ ವೆಂಬದಾಗಿ ಹೇಗೆ ಅರ್ಥವನ್ನುಹೇಳಬಹುದು? ಲೋಕದಲ್ಲಿ ವಂಧ್ಯಾಸ್ತ್ರೀಯು ತನ್ನ ಮಗನನ್ನು ಬಿಟ್ಟಿರುವಳೆಂದು ಹೇಳುವುದು ಉಚಿತವೆ? ಎಂದರೆ ಅದ

ಕ್ಕುತ್ತರವು, ನಿತ್ಯನೈಮಿತ್ತಿಕ ಕರ್ಮಫಲತ್ಯಾಗ ವೆಂಬದಾಗಿ ಹೇಳುವುದು ತಪ್ಪಲ್ಲವು, ಏತಕ್ಕೆಂದರೆ? ನಿತ್ಯಕರ್ಮಗಳಿಗೂ ಕೂಡ ಫಲವು ಉಂಟೆಂಬದಾಗಿ ಶ್ರೀಕೃಷ್ಣನೂ ಹೇಳಿರುವನು. ಆದುದರಿಂದಲೆ ಈಅಧ್ಯಾಯದ ಹನ್ನೆರಡನೆ ಶ್ಲೋಕದಲ್ಲಿ “ ಅನಿಷ್ಟಮಿಷ್ಟಂ ಮಿಶ್ರಂಚ,, ಎಂಬದಾಗಿ ಫಲವುಹೇಳಲ್ಪಟ್ಟಿರುವುದು. ಆ ಶ್ಲೋಕದಲ್ಲಿಯೆ ಅಂತಹ ಕರ್ಮಫಲಗಳು ಸನ್ಯಾಸಿಗೆ ಲೇಪಿಸಲಾರದೆಂಬ ಅರ್ಥವನ್ನುಕೂಡ“ ನತುಸನ್ಯಾಸಿನಾಂಕ್ವಚಿತ್” ಎಂಬದಾಗಿ ಹೇಳಿರುವನು. ಯೇತಕ್ಕೆಂದರೆ ? ಸನ್ಯಾಸಿಗಳಿಗೆ ಕರ್ಮಫಲ ಸಂಬಂಧವೇ ಇಲ್ಲವೆಂತಲೂ ಅಸನ್ಯಾಸಿಗಳಿಗೆ ನಿತ್ಯಕರ್ಮಫಲಪ್ರಾಪ್ತಿಯುಂಟೆಂತಲೂ ಆ ಶ್ಲೋಕದಲ್ಲಿ “ ಭವತ್ಯತ್ಯಾಗಿನಾಂಪ್ರೇತ್ಯ,, ಎಂಬದಾಗಿ ಹೇಳಲ್ಪಟ್ಟಿರುವುದು.

ಪಶುಹಿಂಸಾದಿ ರೂಪವಾದ ದೋಷವು ಈ ಕರ್ಮಗಳಲ್ಲಿರುವುದರಿಂದ “ ದೋಷವತ್ ,, ಎಂಬದಾಗಿ ಹೇಳಿರುವನು. ಬಂಧ ಹೇತುವಾಗಿರುವುದರಿಂದ ಸರ್ವಕರ್ಮಗಳೂ ಬಿಡತಕ್ಕದ್ದಾಗಿಯೇ ಇರುವುದೆಂದರ್ಥವು. ರಾಗದ್ವೇಷಾದಿಗಳೇ ದೋಷಗಳು, ಅಂತಹರಾಗದ್ವೇಷಾದಿಗಳೆಂಬ ದೋಷಗಳು ಹೇಗಾದರೆ ಬಿಡತಕ್ಕವುಗಳೊ ಕರ್ಮಗಳೂ ಆಪ್ರಕಾರವಾಗಿ ಬಿಡತಕ್ಕವುಗಳೇಯೆಂಬದಾಗಿ ಮತ್ತೊಂದರ್ಥವೂ ಈ ಪದಕ್ಕೆ ತಿಳಿಯಲ್ಪಡುವುದು. ಕರ್ಮಾಧಿಕಾರವುಳ್ಳ ಕರ್ಮನಿಷ್ಠರ ವಿಷಯದಲ್ಲಿಯೂ ಕೂಡಬಂಧ ಹೇತುವಾಗುವುದೆಂಬ ಉದ್ದೇಶ್ಯದೊಡನೆ ಕರ್ಮತ್ಯಾಗೋಕ್ತಿಯು ಸಂಗತವಾಗಿರುವುದೆಂತಲೆ ಸಾಂಖ್ಯರು ಹೇಳುತ್ತಾರೆ. ಹಿಂಸಾವಿಯುಕ್ತವಾದ ಕರ್ಮವನ್ನು ತ್ಯಾಗಮಾಡುವುದರಿಂದ ಪ್ರತ್ಯವಾಯುವಿಲ್ಲವೆಂತಲೂ ಹಿಂಸಾವಿಯುಕ್ತವಾದ ಕರ್ಮವನ್ನು ಅನುಷ್ಠಿಸುವುದರಿಂದ ಪ್ರತ್ಯವಾಯ ಉಂಟೆಂತಲೂ ಅವರ ತಾತ್ಪರ್ಯವು. ಕರ್ಮಾಧಿಕಾರವನ್ನೂ ಕರ್ಮವನ್ನೂ ಬಿಡೆಂದು ಹೇಳುವುದು ದೋಷವಲ್ಲವೆ ? ಎಂದರೆ ; ಪಶುಹಿಂಸಾರೂಪವಾದ ದೋಷಕ್ಕಿಂತಲೂ ತ್ಯಾಗವು ಪ್ರಬಲದೋಷವಾಗಲಾರದು. ಕರ್ಮಶ್ರದ್ಧೆಯುಳ್ಳ ಮೀಮಾಂಸಕರು ಯಜ್ಞ ದಾನ ತಪೋರೂಪಗಳಾದ ಕರ್ಮಗಳನ್ನು ಆಚರಿಸದೆ ಇರಬಾರದೆಂಬದಾಗಿ ಹೇಳುತ್ತಾರೆ. ಈ ರೀತಿಯಾದ ಎರಡು ಉದ್ದೇಶಗಳೂ

ಕರ್ಮಾಧಿಕಾರವುಳ್ಳ ಕರ್ಮಯೋಗಿಗಳನ್ನು ಕುರಿತು ಪ್ರಾಪ್ತವಾಗಿರುವು ವಲ್ಲದೆ ಕೇವಲ ಜ್ಞಾನನಿಷ್ಠರಾದ ಸನ್ನ್ಯಾಸಿಗಳನ್ನು ಕುರಿತು ಹೇಳಿದ್ದಲ್ಲವು. ಏತಕ್ಕೆಂದರೆ ? ಹಿಂದೆ "ಜ್ಞಾನಯೋಗೇನ ಸಾಂಖ್ಯಾನಾಂ,, (೩|೩) ಎಂಬದಾಗಿ ಅವರ ವಿಷಯದಲ್ಲಿ ಇದುವರೆಗೂ ಸ್ಪಷ್ಟವಾಗಿ ಹೇಳಿರುವೆವು,ಆದುದರಿಂದ ಅವರ ವಿಷಯವಾದ ಯೋಚನೆಯೇ ಇಲ್ಲವು.

ಆದರೆ "ಕರ್ಮಯೋಗೇನ ಯೋಗಿನಾಂ ,, (೩|೩) ಎಂಬದಾಗಿ ಕರ್ಮನಿಷ್ಠರ ವಿಷಯದಲ್ಲಿಯೂ ಕೂಡ ಇದುವರೆಗೂ ಹೇಳಿದ್ದರೂ ಈ ಅಧ್ಯಾಯವುಸರ್ವಗೀತಾಶಾಸ್ತ್ರೋಪಸಂಹಾರರೂಪವಾಗಿರುವುದರಿಂದ ಕರ್ಮಯೋಗಿಗಳ ವಿಷಯವಾಗಿ ಪುನಃ ಹೇಗಾದರೆಪ್ರಸ್ತಾಪ ವುಂಟಾಗಿರುವುದೊ ಅದರಂತೆಯೆ ಜ್ಞಾನನಿಷ್ಠರನ್ನುಕುರಿತು ಕೂಡಪುನಃ ಇಲ್ಲಿ ವಿಚಾರಿಸಬಹುದೆಂಬದಾಗಿ ಏತಕ್ಕೆ ಹೇಳಕೂಡದೆಂದರೆ ? ಈ ಶಂಕೆಗೆ ಸಮಾಧಾನವನ್ನು ಹೇಳುತ್ತಾರೆ. ಆ ಪ್ರಕಾರವಾಗಿ ಹೇಳುವುದು ಯುಕ್ತವಲ್ಲವು, ಏತಕ್ಕೆಂದರೆ ? ಸಾಂಖ್ಯರಿಗೆ ಮೋಹಕ್ಲೇಶ ದುಃಖನಿಮಿತ್ತವಾಗಿ ಕರ್ಮತ್ಯಾಗವೆ ಸಂಭವಿಸಲಾರದು. ಅದೇನೆಂದರೆ ? ಕಾಯಕ್ಲೇಶ ನಿಮಿತ್ತಗಳಾದ ದುಃಖಗಳು ತಮ್ಮಗಳಿಗುಂಟಾಗುವಂತೆಯೇ ಸಾಂಖ್ಯರೆಣಿಸಲಾರರಷ್ಟೆ ? ಇಚ್ಛಾದಿಗಳೆಲ್ಲವು ಕ್ಷೇತ್ರಧರ್ಮಗಳೆಂತಲೆ ಯೆಲ್ಲವೆ ಹದಿಮೂರನೆ ಅಧ್ಯಾಯದ ಆರನೇ ಶ್ಲೋಕದ ಮೊದಲು ಹೇಳಿರುವೆವು. ಆದುದರಿಂದ ಅವರು ಕಾಯಕ್ಲೇಶದುಃಖ ಭಯದಿಂದ ಕರ್ಮಗಳನ್ನು ತ್ಯಾಗಮಾಡಲಾರರು. ಅವರು ಕರ್ಮಗಳೊಡನೆ ತಮಗಳಿಗೆ ಸಂಬಂಧವಿರುವುದೆಂದು ತಿಳಿದಿದ್ದರೆ ಯೆಲ್ಲವೆ ಅಜ್ಞರಂತೆ ನಿಯತವಾದ ಕರ್ಮಗಳನ್ನು ಮೋಹದಿಂದ ಬಿಡಬಹುದು. ಆದರೆ ಅಂತವರಿಗೆ ಸನ್ನ್ಯಾಸವೆಂಬುವುದು ಹೇಗೆತಾನೆ ಸಂದರ್ಭಿಸುವುದು ? ಎಂದರೆ ? ಸತ್ವಾದಿ ಗುಣಸಂಬಂಧಗಳಾದ ಕರ್ಮಗಳನ್ನು ಮೋಹದಿಂದ ತನ್ನದನ್ನಾಗಿ ತಿಳಿದುಕೊಂಡು ಸಂಸಾರಾಬ್ಧಿಯಲ್ಲಿ ಅವಿವೇಕಿಗಳು ತಿರುಗುತಲಿರುವುರು. ಜ್ಞಾನಿಗಳೊ ಎಂದರೆ ? ಕರ್ಮಗಳು ಗುಣಸಂಬಂಧಿಗಳು, ಅವುಗಳನ್ನು ನಾವು ಇನ್ನು ಮುಂದೆ ಆಚರಿಸಲಾರೆವು ಎಂದ

ಲ್ಲವೆ ಸನ್ನ್ಯಾಸವಾಗುವುದು. "ಸರ್ವಕರ್ಮಾಣಿ ಮನಸಾ,, (೫॥೧೩) ಎಂಬಿದೆ ಮೊದಲಾದ ಶ್ಲೋಕಗಳಿಂದ ವಿವೇಕಿಯಾದವನು ಸನ್ನ್ಯಾಸವಮಾಡುವ ಪ್ರಕಾರವು ಹೇಳಲ್ಪಟ್ಟಿರುವುದಷ್ಟೆ. ಆದುದರಿಂದ ಜ್ಞಾನಿಗಳಿಗಿಂತಲೂ ಅನ್ಯರಾದ ಯಾರುತಾನೆ ಕರ್ಮಗಳಿಗಧಿಕಾರಿಗಳೋ? ಯಾರಿಗಾದರೆ ಮೋಹದಿಂದಲೂ ಕಾಯಕ್ಲೇಶಭಯದಿಂದಲೂ ಕರ್ಮತ್ಯಾಗವು ಪ್ರಾಪ್ತವಾಗುವುದೊ ಅವರೆ ರಾಜಸರೆಂತಲೂ ತಾಮಸರೆಂತಲೂ ಕರ್ಮತ್ಯಾಗಿಗಳೆಂತಲೂ (ಆತ್ಮಜ್ಞಾನ ಶೂನ್ಯರಾದ ಕರ್ಮನಿಷ್ಠರು ಕರ್ಮಫಲತ್ಯಾಗ ಮಾಡಿದರೂ ಉತ್ತಮವೆ ಯೆಂಬದಾಗಿ ಸ್ತುತ್ಯರ್ಥವಾಗಿ) ನಿಂದಿಸಲ್ಪಡುವರು. ಪರಮಾರ್ಥಸನ್ನ್ಯಾಸಿಯುಗುಣಾತೀತ ಲಕ್ಷಣಗಳನ್ನು ಹೇಳುವ ಪ್ರಕರಣದಲ್ಲಿ ಇವನು ಸರ್ವಾರಂಭ ಪರಿತ್ಯಾಗಿಯೆಂತಲೂ ನಿತ್ಯಸಂತುಷ್ಟನೆಂತಲೂ ಯಾವದರಿಂದಲೂ ಚಲಿಸಲ್ಪಡದವನೆಂತಲೂ ಸ್ಥಿರಚಿತ್ತಮುಳ್ಳವನೆಂತಲೂ (೧೨ನೇ ಅ॥ ೧೯ನೇಶ್ಲೋ॥ ೧೪ನೇ ಅ॥ ೨೫ನೇ ಶ್ಲೋ) ಹೇಳಲ್ಪಟ್ಟಿರುವನು. ಮತ್ತು ಈ ಅಧ್ಯಾಯದಲ್ಲಿ ಮುಂದೆಯೂ, "ನಿಷ್ಠಾಜ್ಞಾನಸ್ಯಯಾಪರಾ,, (೧೮॥ ೫೦) ಎಂಬದಾಗಿ ಜ್ಞಾನವಿಷಯವಾಗಿ ಹೇಳುತ್ತಾನೆ. ಆದುದರಿಂದ ಜ್ಞಾನನಿಷ್ಠರಾದ ಸನ್ನ್ಯಾಸಿಗಳು ಈ ಭಾಗದಲ್ಲಿ ಹೇಳಲ್ಪಡಲಾರರು. ಕರ್ಮಫಲತ್ಯಾಗವು ಸತ್ವಗುಣಾನುಬಂಧಿಯಾಗಿರುವುದರಿಂದ ಅದುರಾಜಸ ತಾಮಸ ಗುಣಗಳಿಗಿಂತಲೂ ಶ್ರೇಷ್ಠವಾದ ಕಾರಣ ಸನ್ನ್ಯಾಸವೆಂಬದಾಗಿ ಹೇಳಲ್ಪಟ್ಟಿರುವುದಲ್ಲದೆ ಮುಖ್ಯವಾದ ಸರ್ವಕರ್ಮಸನ್ನ್ಯಾಸವು ಇಲ್ಲಿ ಹೇಳಲ್ಪಡಲಿಲ್ಲವು. ಆದರೆ ಇಲ್ಲಿ ಸನ್ನ್ಯಾಸಶಬ್ದದಿಂದ ಉತ್ತಮವಾದ ಸರ್ವಕರ್ಮಸನ್ನ್ಯಾಸವೆ ಹೇಳಲ್ಪಡಲಿ ಹೋದರೆ ಈ ಅಧ್ಯಾಯದ ಹನ್ನೊಂದನೆ ಶ್ಲೋಕದಲ್ಲಿ "ನಹಿದೇಹಭೃತಾಶಕ್ಯಂ,, ಎಂಬದಾಗಿ ಅಜ್ಞಾನಿಗಳಿಗೆಇಂತಹ ಸನ್ನ್ಯಾಸವು ದುರ್ಲಭವೆಂಬದಾಗಿ ಹೇಳಲು ಯತ್ನವಿರಲಾರದು. ಆದುದರಿಂದ ಇಲ್ಲಿ ಹೇಳಲ್ಪಟ್ಟ ಸನ್ನ್ಯಾಸವು ಮುಖ್ಯವಾದದ್ದೆಸರಿ. ಆದರೆ ಇದು ಸರ್ವಜನ ಸುಲಭವಾದದ್ದಲ್ಲವೆಂಬದಾಗಿ ಹಿಂದೆ ಹೇಳಲ್ಪಟ್ಟಿರುವುದೆಂಬೀ ಅಂಶವು ಯುಕ್ತವೆಂದರೆ

ಅದು ಯುಕ್ತವಲ್ಲವು. ೧೧ನೇ ಶ್ಲೋಕದಲ್ಲಿ ಹೇಳಿರುವುದು ಸ್ತುತಿ ಎಂಬವಾಗಿ ತಿಳಿಯಬೇಕು. ಅದು ಹೇಗೆಂದರೆ ? “ ತ್ಯಾಗಾಚ್ಛಾಂತಿರನಂತರಂ ,, (೧೨||೧೨||) ಎಂಬದಾಗಿ ಸರ್ವಕರ್ಮಸನ್ಯಾಸಸಾಧಕವಾದ ಕರ್ಮಫಲತ್ಯಾಗದ ಸ್ತುತಿಯೇ ಹೇಳಲ್ಪಟ್ಟಿರುವುದು. ಅನೇಕ ವಿಧಗಳಾದ ಮಾರ್ಗಗಳನ್ನು ಉಪದೇಶಿಸಿ ಅವುಗಳೆಲ್ಲವನ್ನು ಅರ್ಜುನನು ಅನುಷ್ಠಿಸಲು ಶಕ್ತನಾಗದೇ ಹೋಗಿರುವುದರಿಂದಲ್ಲವೆ ಅಲ್ಲಿ ಕರ್ಮಫಲತ್ಯಾಗವು ಹೇಗಾದರೆ ಉಪದೇಶಿಸಲ್ಪಟ್ಟಿತೊ ಅದರಂತೆಯೇ “ ನಹಿ ದೇಹಭೃತಾಶಕ್ಯಂ ,, ಎಂಬ ಸ್ಥಲದಲ್ಲಿಯೂ ಕರ್ಮಫಲತ್ಯಾಗ ಸ್ತುತಿಯೇ ಹೇಳಲ್ಪಟ್ಟಿರುವುದೆಂದರಿಯಬೇಕು. ಸ್ತುತಿಯಲ್ಲವಾದರೆ ತ್ಯಾಗವಮಾಡಿದ ಮಾತ್ರದಿಂದಲೆ ಜ್ಞಾನವಿಲ್ಲದವನಿಗೆ ಮೋಕ್ಷವುಂಟಾಗಲಾರದಷ್ಟೆ. ಕಿಂಚ “ ಸರ್ವಕರ್ಮಾಣಿ ಮನಸಾಸನ್ನ್ಯಸ್ಯ-ನೈವಕುರ್ವನ್ನಕಾರಯನ್-ಆಸ್ತೇಸುಖಂವಶೀ ,, ಇತ್ಯಾದಿಯಿಂದ ಸರ್ವಕರ್ಮಸನ್ನ್ಯಾಸವಿಷಯವಾಗಿ ಹೇಳಿರುವ ಅಂಶಗಳನ್ನು ಖಂಡಿಸುವ ವಾಕ್ಯಗಳನ್ನು ತೋರಿಸುವುದಕ್ಕೆ ಯಾರಿಂದಲೂ ಆಗಲಾರದಷ್ಟೆ. ಆದುದರಿಂದ ಕರ್ಮಾಧಿಕಾರಿಗಳನ್ನು ಕುರಿತೆ ಇಲ್ಲಿ ಈ ಸನ್ನ್ಯಾಸತ್ಯಾಗ ರೂಪವಾದ ಯರಡು ಪಕ್ಷಗಳು ಹೇಳಲ್ಪಟ್ಟಿರುವುವು. ಪರಮಾರ್ಥವಂ ತಿಳಿದ ಸಾಂಖ್ಯರು ಯಾರಿರುವರೊ ಅವರಿಗೆ ಸರ್ವಕರ್ಮಸನ್ನ್ಯಾಸ ರೂಪವಾದ ಜ್ಞಾನನಿಷ್ಠೆಯಲ್ಲಿಯೆ ಅಧಿಕಾರವು. ಇತರತ್ರ ಅಧಿಕಾರವಿಲ್ಲವು. ಅಂತವರಿಗೆ ಪಕ್ಷವಿಕಲ್ಪಗಳಿಂದ ಕಾರ್ಯವಿಲ್ಲವು. ಈ ಅಂಶವೆ “ ವೇದಾವಿನಾಶಿನಂ ,, (೨|| ೨೧) ಎಂಬೀ ಪ್ರದೇಶದಲ್ಲಿಯೂ ಮೂರನೆ ಅಧ್ಯಾಯದಲ್ಲಿಯೂ ವಿಸ್ತರಿಸಲ್ಪಟ್ಟಿರುವುದು. ... ||೩||

(ಗೀ|| ವಿ) “ ಸರ್ವಫಲತ್ಯಾಗಂ ,, ಎಂಬದಾಗಿ ಹೇಳಿರುವ ತ್ಯಾಗಸ್ವರೂಪ ನಿರ್ಧಾರಣಕ್ಕೋಸ್ಕರವಾಗಿ ಆಪಾತತಃಪ್ರತೀಯಮಾನವಾದ ವಿದ್ವನ್ಮತವನ್ನು ಅನುವಾದ ಮಾಡುತ್ತಾನೆ-ಕೆಲವು ಜ್ಞಾನಿಗಳು ಬಂಧಕತ್ವರೂಪವಾದ ದೋಷದೊಡನೆ ಸೇರಿರುವುದರಿಂದ ಕಾಮ್ಯಗಳನ್ನು ಬಿಡಬೇಕೆಂದು ಹೇಳುವರು. ಅನ್ಯರಾದಕೆಲವು ಜ್ಞಾನಿಗಳು ಯು

ಜ್ಞಾದಿಕರ್ಮಗಳು ಬಿಡತಕ್ಕದ್ದಲ್ಲವೆಂಬದಾಗಿ ಹೇಳುವರು. ತಪಃ-ಕೃಛ್ರ ಚಾಂದ್ರಾಯಣಾದಿಗಳು. ಕರ್ಮ-ಯಜ್ಞಾಂಗವಾದ ಕರ್ಮಗಳು ಅಥವಾ ನಿತ್ಯನೈಮಿತ್ತಿಕ ಕರ್ಮಗಳು, ಮನೀಷಿಣಃ ಎಂಬ ವಿಶೇಷಣ ವಿರುವುದರಿಂದ ಈ ಶ್ಲೋಕದ ಮೊದಲನೇ ಪಕ್ಷದಲ್ಲಿಯೂ ಕೂಡ ಫಲತ್ಯಾಗವೆ ಹೇಳಲ್ಪಟ್ಟಿರುವಂತೆ ತಿಳಿಯಬರುವುದರಿಂದ ಇಲ್ಲಿ ಅಭಿಪ್ರಾಯಭೇದ ವಿರುವುದಿಲ್ಲವು.ಆದುದರಿಂದ ಕರ್ಮಸ್ವರೂಪ ತ್ಯಾಗಪಕ್ಷವು ಇಲ್ಲಿಹೇಳಲ್ಪಡಲಿಲ್ಲವೆಂಬದಾಗಿ ತಿಳಿಯಬೇಕು. ... ॥೩॥

ಶ್ಲೋ॥ನಿಶ್ಚಯಂಶೃಣುಮೇತತ್ರತ್ಯಾಗೇಭರತಸತ್ತಮ |
ತ್ಯಾಗೋಹಿಪುರುಷ ವ್ಯಾಘ್ರತ್ರಿವಿಧಸ್ಸಂ ಪ್ರಕೀರ್ತಿ
ತಃ ॥ ... ... ॥೪॥

ಪ॥ ನಿಶ್ಚಯಂ-ಶೃಣು-ಮೇ-ತತ್ರ-ತ್ಯಾಗೇ-ಭರತಸತ್ತಮ | ತ್ಯಾಗಃ-ಹಿ-ಪುರುಷವ್ಯಾಘ್ರ-ತ್ರಿವಿಧಃ-ಸಂಪ್ರಕೀರ್ತಿತಃ ॥

(ಅ॥ ರಾ॥ ಭಾ) ಭರತಸತ್ತಮ-ಭರತವಂಶ್ಯರಲ್ಲಿ ಶ್ರೇಷ್ಠನಾದ ಎಲೈ ಅರ್ಜುನನೇ ! ತತ್ರತ್ಯಾಗೇ- ಈ ಪ್ರಕಾರವಾಗಿ ವಾದ ವಿಪ್ರತಿಪನ್ನಗಳಾದ ತ್ಯಾಗಪದಾರ್ಥಗಳ ವಿಷಯದಲ್ಲಿ,ನಿಶ್ಚಯಂ-ಇದೇ ನಿಶ್ಚಯವೆಂಬ ತ್ಯಾಗಶಬ್ದಾರ್ಥವನ್ನು, ಮೇ-ನನ್ನಾದೆಶಯಿಂದ, ಶೃಣು-ಕೇಳು. ... ... ... ॥೫॥

ಪುರುಷವ್ಯಾಘ್ರ-ಪುರುಷಶ್ರೇಷ್ಠನಾದ ಎಲೈ ಅರ್ಜುನನೇ! ತ್ಯಾಗಃ-ಈ ತ್ಯಾಗ ಪದಾರ್ಥವು, ತ್ರಿವಿಧಃ-ಅನುಷ್ಠಿಸಲ್ಪಡುವ ವೈದಿಕ ಕರ್ಮಗಳಲ್ಲಿಯು ಫಲತ್ಯಾಗವೆಂತಲೂ ಮಮತಾತ್ಯಾಗವೆಂತಲೂ ಕರ್ತೃತ್ವತ್ಯಾಗವೆಂತಲೂ ಮೂರುವಿಧವಾಗಿ, (ಶ್ರೀ) ಸತ್ವರಜಸ್ತಮೊ ಗುಣಭೇದದಿಂದ ಮೂರು ವಿಧವಾಗಿ, (ಗೀ॥ ವಿ) ತ್ಯಾಗವೆಂದರೆ ಫಲತ್ಯಾಗವು, ಕರ್ಮಗಳಲ್ಲಿ ಮಮತಾತ್ಯಾಗವು, ಪರಮಾತ್ಮನಲ್ಲಿ ಕರ್ತೃತ್ವಾನುಸಂಧಾನ ಪೂರ್ವಕವಾಗಿ ತನ್ನಲ್ಲಿ ಕರ್ತೃತ್ವತ್ಯಾಗವೆಂಬ ತ್ರಿವಿಧ ತ್ಯಾಗವೆಂಬದಾಗಿ ಕೆಲವರು, ಅಥವಾ ಸತ್ವಾದಿಗುಣಭೇದದಿಂದ ತ್ರಿವಿಧವೆಂಬದಾಗಿ,ಸಂಪ್ರಕೀರ್ತಿತಃ-ನನ್ನಿಂದ ನಿನಗೆಹೇಳಲ್ಪಟ್ಟಿತಪಟ್ಟ ಕರ್ಮಾ

ನ್ಯವಾದ ಸ್ವರ್ಗಾದಿ ಫಲವು ನನಿಗೆ ಬೇಡವೆಂಬ ಬುದ್ಧಿಯು ಫಲತ್ಯಾಗವು, ನನ್ನ ಫಲಕ್ಕೆ ಸಾಧನವಾಗಿರುವುದರಿಂದ ಈ ಕರ್ಮವು ನನ್ನದೆಂಬದಾಗಿ ಕರ್ಮದಿಂದುಂಟಾದ ಮಮತೆಯನ್ನು ಬಿಡುವಿಕೆಯು ಮಮತಾತ್ಯಾಗವು, ಸರ್ವೇಶ್ವರನೆ ಕರ್ತಾ ಎಂಬ ಅನುಸಂಧಾನದಿಂದ ತನ್ನ ಕರ್ತೃತ್ವವನ್ನು ಬಿಡುವಿಕೆಯು ಕರ್ತೃತ್ವ ತ್ಯಾಗವೆಂಬೀಮೂರುವಿಧವಾಗಿ ಹಿಂದೆ ಹೇಳಿರುವೆವು. ... ... ‖೪‖

(ಶಂ‖ ಭಾ‖) ಎಲೈ ಅರ್ಜುನನೆ ? ಅಂತಹ ವಿಕಲ್ಪಭೇದಗಳಲ್ಲಿ ವಾಸ್ತವಾಂಶವನ್ನು ಹೇಳುವೆನು ಕೇಳು. ತ್ಯಾಗವೆಂಬುವುದು ತಾಮಸಾದಿಭೇದಗಳಿಂದ ಮೂರುವಿಧಗಳಾಗಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದು. ತ್ಯಾಗಶಬ್ದಕ್ಕೇನೆ ತ್ಯಾಗ ಸನ್ಯಾಸವೆಂಬೀ ಅರ್ಥದ್ವಯ ವುಂಟೆಂಬ ಅಭಿಪ್ರಾಯದಿಂದಲೂ ಯೆರಡಕ್ಕೂ ಮಧ್ಯಸ್ಥವಾದ ತ್ಯಾಗಶಬ್ದವನ್ನು ಪ್ರಯೋಗಿಸಿರುವಂತೆ ತಿಳಿಯಬರುತ್ತದೆ. ಕರ್ಮದಲ್ಲಧಿಕಾರವುಳ್ಳ ಅನಾತ್ಮಜ್ಞನಾದ ಪುರುಷನಿಗೆ ತ್ಯಾಗಸನ್ಯಾಸ ಶಬ್ದಗಳಿಂದ ಹೇಳಲ್ಪಡುವ ಅರ್ಥವು ತಾಮಸಾದಿ ಭೇದದಿಂದ ಮೂರುವಿಧವಾಗಿರುವುದು. ಪರಮಾರ್ಥ ಸನ್ಯಾಸಿಗೆ ಅದು ಇಲ್ಲವು. ಎಂಬೀರಹಸ್ಯವನ್ನು ತಿಳಿಯುವುದಕ್ಕೆ ಅನ್ಯರು ಶಕ್ತರಲ್ಲವಾದುದರಿಂದ ಈತತ್ವಾರ್ಥವು ಅನ್ಯರಿಂದ ತಿಳಿಯಲ್ಪಡಲಾರದು. ಆದುದರಿಂದ ಈಶ್ವರನಾದ ನಾನು ಪರಮಾರ್ಥ ವಿಷಯವಾದ ನಿಜಾಂಶವನ್ನು ನಿನಿಗುಪದೇಶಿಸಲಾರಂಭಿಸಿರುವೆನು ಕೇಳು. ... ... ‖೪‖

ಶ್ಲೋ ‖ ಯಜ್ಞದಾನತಪಃಕರ್ಮನತ್ಯಾಜ್ಯಂಕಾರ್ಯಮೇವ
ತತ್ | ಯಜ್ಞೋದಾನಂತಪಶ್ಚೈವಪಾವನಾನಿಮನೀ
ಷಿಣಾಂ ‖ ... ... ‖೫‖

ಪ‖ ಯಜ್ಞದಾನತಪಃಕರ್ಮ-ನ-ತ್ಯಾಜ್ಯ-ಕಾರ್ಯಂ-ಏವ-ತತ್ | ಯಜ್ಞಃ-ದಾನಂ-ತಪಃ-ಚ-ಏವ-ಪಾವನಾನಿ-ಮನೀಷಿಣಾಂ ‖

(ಅ‖ ರಾ‖ ಭಾ) ಯಜ್ಞದಾನತಪಃಕರ್ಮ-ಯಜ್ಞದಾನತಪಸ್ಸೇ ಮೊದಲಾದ ವೈದಿಕ ಕರ್ಮವು, ತ್ಯಾಜ್ಯಂನ-ಮುಮುಕ್ಷುವಾದ ಅಧಿಕಾ

ಶಿಯಿಂದ ಯಾವ ಕಾಲದಲ್ಲಿಯೂ ಬಿಡತಕ್ಕದ್ದಲ್ಲವು. ಹೇಗೆಂದ ರೆ ? ಪ್ರಯಾಣ ಪರ್ಯಂತವಾಗಿ ಪ್ರತಿದಿನಗಳಲ್ಲಿಯೂ ಕರ್ಮಗಳನ್ನು ಅನುಷ್ಠಿಸಿಯೇ ತೀರಬೇಕು: ಅದು ಏತಕ್ಕೆಂದರೆ ? ಯಜ್ಞೋದಾನಂತಪಶ್ಚೈವ-ಯಜ್ಞಾನುಷ್ಠಾನವೂ ದಾನವೂ ತಪಸ್ಸೂ, ಮನೀಷಿಣಾಂ-ಮನನಶೀಲರಾಗಿಯೂ ಮುಮುಕ್ಷುಗಳಾಗಿಯೂ ಇರುವ ಯಾವಜ್ಜೀವವು ಉಪಾಸನವನ್ನು ಅನುಷ್ಠಿಸುವ ಅಧಿಕಾರಿಗಳಿಗೆ, ಪಾವನಾನಿಹಿ-ಉಪಾಸನನಿಷ್ಪತ್ತಿಗೆ ವಿರೋಧಿಯಾದ ಪ್ರಾಚೀನಕರ್ಮಸಮೂಹವನ್ನು ನಾಶಪಡಿಸುವುದಲ್ಲವೊ ? ಆದುದರಿಂದ ಅವುಗಳನ್ನು ಯಾವ ಕಾಲದಲ್ಲಿಯೂ ಬಿಡಬಾರದೆಂದರ್ಥವು. ... .. ॥೫॥

(ಗೀ॥ವಿ) ಯಜ್ಞದಾನ ತಪಸ್ಸುಗಳು ಸರ್ವರಿಂದಲೂ ಅನುಷ್ಠಿಸತಕ್ಕವುಗಳೆ. ಯತಿಗಳಿಗೆ ಜ್ಞಾನವೇ ಯಜ್ಞವು, ವಿದ್ಯಾದಾನ ಅಭಯಪ್ರದಾನಾದಿಗಳೆ ದಾನವು, ಬ್ರಹ್ಮಚರ್ಯಾದಿಗಳೆ ತಪಸ್ಸುಗಳು, ಸ್ತ್ರೀಶೂದ್ರಾದಿಗಳಿಗೆ ವಿಷ್ಣುನಾಮಾದಿ ಕೀರ್ತನವೆ ಯಜ್ಞವು, ಸತ್ಯವಚನವೆ ದಾನವು, ಉಪವಾಸಾದಿಗಳೆ ತಪಸ್ಸು. ... ॥೫॥

ಶ್ಲೋ॥ ಏತಾನ್ಯಪಿಚಕರ್ಮಾಣಿಸಂಗಂತ್ಯಕ್ತ್ವಾಫಲಾನಿ
ಚ । ಕರ್ತವ್ಯಾನೀತಿಮೇಪಾರ್ಥನಿಶ್ಚಿತಂಮತಮುತ್ತ
ಮಂ ॥ ... ... ॥೬॥

ಪ॥ ಏತಾನಿ-ಅಪಿ-ಚ-ಕರ್ಮಾಣಿ-ಸಂಗಂ-ತ್ಯಕ್ತ್ವಾ-ಫಲಾನಿ-ಚ । ಕರ್ತವ್ಯಾನಿ-ಇತಿ-ಮೇ-ಪಾರ್ಥ-ನಿಶ್ಚಿತಂ-ಮತಂ-ಉತ್ತಮಂ ॥

(ಅ॥ ರಾ॥ ಭಾ) ಪಾರ್ಥ-ಕುಂತೀಪುತ್ರನಾದ ಎಲೈ ಅರ್ಜುನನೆ? ಏತಾನ ಪಿಚ ಕರ್ಮಾಣಿ-ನಮ್ಮ ಆರಾಧನ ರೂಪಗಳಾಗಿ ಈ ಯಜ್ಞಾದಿ ಕರ್ಮಗಳನ್ನು, ಸಂಗಂ-ಕರ್ಮದಲ್ಲಿ ಮಮತೆಯನ್ನೂ, ಫಲಾನಿಚ-ಫಲಗಳನ್ನೂ, ತ್ಯಕ್ತ್ವಾ-ಬಿಟ್ಟುಬಿಟ್ಟು, ಕರ್ತವ್ಯಾನೀತಿ - ಪ್ರತಿದಿನದಲ್ಲಿಯೂ ಮರಣ ಪರ್ಯಂತವಾಗಿ ಉಪಾಸನ ವಿರೋಧಿ ನಿವೃತ್ತಿಗೋಸ್ಕರ ಮುಮುಕ್ಷುಗಳಾದ ಅಧಿಕಾರಿಯಿಂದಅನುಷ್ಠಿಸಲ್ಪಡತಕ್ಕದ್ದೆಂಬದಾಗಿ, ಮೇ-ನನ್ನ, ನಿಶ್ಚಿತಂ-ಪ್ರಮಾಣೋಪಪತ್ತಿಗಳಿಂದ ನಿಶ್ಚಯಿಸಲ್ಪ

ಟ್ಟೊ, ಉತ್ತಮಂ-ಶ್ರೇಷ್ಠವಾಗಿಯೂ ಇರುವ, ಮತಂ-ಸಿದ್ಧಾಂತವು ||೬||

(ಶಂ|| ಭಾ) ಸಂಗವನ್ನೂ ಫಲವನ್ನೂ ಅಪೇಕ್ಷಿಸಿ ಮಾಡಲ್ಪಡುವ ಯಜ್ಞದಾನ ತಪಸ್ಸುಗಳೆಂಬ ಕರ್ಮಗಳು ಬಂಧಕಗಳಾಗಿದ್ದರೂ ಸಂಗ ಫಲಗಳನ್ನಪೇಕ್ಷಿಸದೆ ಅನುಷ್ಠಿಸಕ್ಕವುಗಳೆ ಎಂಬೀ ತಾತ್ಪರ್ಯದಿಂದ (ಅಪಿತು) ಎಂಬ ಶಬ್ದವು ಸೇರಿಸಲ್ಪಟ್ಟಿರುವುದಲ್ಲದೆ ಯಜ್ಞದಾನ ತಪಸ್ಸುಗಳಿಗಿಂತಲೂ ಅನ್ಯಗಳಾದ ಕರ್ಮಗಳನ್ನು ಕೂಡ ಸೇರಿಸಿಕೊಂಡು ಮಾಡಬೇಕೆಂಬದಾಗಿ ಉಪದೇಶಿಸುವ ತಾತ್ಪರ್ಯವಲ್ಲವು.

ಆದರೆ ಇಲ್ಲಿ ಕೆಲವರು ನಿತ್ಯಕರ್ಮಗಳಿಗೆ ಫಲವಿಲ್ಲವೆಂತಲೂ ಫಲವಿಹೀನಗಳಾದ ನಿತ್ಯಕರ್ಮಗಳನ್ನು ಫಲಸಂಗತ್ಯಾಗ ಪೂರ್ವಕವಾಗ ಅನುಷ್ಠಿಸುವುದೆ ಅಸಂದರ್ಭವೆಂತಲೂ, ಆದುದರಿಂದಲೆ ಅಪೀಬ್ದದಿಂದ ಯಜ್ಞದಾನ ತಪಸ್ಸುಗಳೆಂಬ ನಿತ್ಯಕರ್ಮಗಳನ್ನೂ ಕೂಡ ಸಂಗಫಲಗಳನ್ನು ಬಿಟ್ಟು ಮಾಡಬೇಕೆಂಬದಾಗಿ ಅರ್ಥವನ್ನು ಮಾಡುತ್ತಾರೆ. ಅದುಯುಕ್ತವಲ್ಲವು, ಹಿಂದಿನ ಶ್ಲೋಕದಲ್ಲಿ ಯಜ್ಞದಾನ ತಪಸ್ಸುಗಳೆಂಬ ನಿತ್ಯಕರ್ಮಗಳಿಗೆ ಮನುಷ್ಯರನ್ನು ಶುದ್ಧಿಪಡಿಸುವ ಫಲವು ವುಂಟೆಂತಲೆ ಹೇಳಲ್ಪಟ್ಟಿರುವುದು. ಮತ್ತು ಬಂಧಹೇತುಗಳಾಗಿರುವುವೆಂಬ ಅಭಿಪ್ರಾಯದಿಂದ ನಿತ್ಯಕರ್ಮಗಳನ್ನೇ ಬಿಟ್ಟಿರುವ ಮುಮುಕ್ಷುವಾದವನು ಕಾಮ್ಯಕರ್ಮಾಚರಣಕ್ಕೆ ಇಷ್ಟಪಡುವನೆಂಬೀ ಅಂಶವು ಯೆಷ್ಟುಮಟ್ಟಿಗೂ ಯುಕ್ತವಾದದ್ದಲ್ಲವು. "ದೂರೇಣಹ್ಯವರಂಕರ್ಮ,, (೨||೪೯) ಎಂಬದಾಗಿ ಕಾಮ್ಯಕರ್ಮವು ನಿಂದಿಸಲ್ಪಟ್ಟಿರುವುದರಿಂದಲೂ, "ಯಜ್ಞಾರ್ಥಾತ್ಕರ್ಮಣೋನ್ಯತ್ರ ,, ( ೩||೯|| ) "ತ್ರೈಗುಣ್ಯವಿಷಯಾವೇದಾಃ,, ( ೨ || ೪೫ ) " ತ್ರೈವಿದ್ಯಾಮಾಂಸೋಮಪಾಃ ಪೂತಪಾಪಾಃ ,, (೯|| ೨೦) " ಕ್ಷೀಣೇಪುಣ್ಯೇ ಮರ್ತ್ಯಲೋಕಂವಿಶಂತಿ ,, (೯|| ೨೧||) ಎಂಬೀ ಶ್ಲೋಕಗಳಿಂದ ಕಾಮ್ಯಕರ್ಮವು ಬಂಧ ಹೇತುವೆಂಬದಾಗಿ ಹೇಳಿರುವುದರಿಂದಲೂ ಅಪಿಶಬ್ದದಿಂದ ಕಾಮ್ಯಕರ್ಮವನ್ನು ಹೇಳುವುದು ಯುಕ್ತವಲ್ಲವು. ಎಲೈ ಅರ್ಜುನನೆ ? ನಿನ್ನಂತೆ ಅಭ್ಯಾಸದಶೆಯಲ್ಲಿ

ರುವಂತವರು ಈ ಯಜ್ಞದಾನ ತಪಸ್ಸುಗಳೆಂಬ ಕರ್ಮಗಳನ್ನು ಫಲಸಂಗಾದಿಗಳನ್ನು ಬಿಟ್ಟು ಮಾಡಬೇಕೆಂಬುವುದೇ ಶ್ರೇಷ್ಠವಾದ ನನ್ನ ಅಭಿಪ್ರಾಯವು. ... ... ॥೬॥

(ಗೀ ॥ ವಿ)ಯಜ್ಞಾದಿಗಳು ಬಿಡತಕ್ಕವುಗಳಲ್ಲವು, ಮಾಡತಕ್ಕವುಗಳೆಂಬೀ ಅಂಶವು ಯುಕ್ತವಲ್ಲವು, ಕರ್ಮಗಳನ್ನು ಬಿಡಬೇಕಲ್ಲದೆ ಮಾತಕೂಡದೆಂದು ಹೇಳುವ ಪಂಡಿತ ಮತವಿರೋಧವಿರುವುದರಿಂದ ? ಎಂದರೆ ಈ ಪ್ರಕಾರವಾಗಿ ಹೇಳುವಂತವರಿಗೆ ಫಲಸಂಗಾದಿತ್ಯಾಗದಲ್ಲಿ ತಾತ್ಪರ್ಯವಲ್ಲವೆ ಕರ್ಮಗಳಸ್ವರೂಪ ತ್ಯಾಗದಲ್ಲಿ ಅವರ ಅಭಿಪ್ರಾಯವಿರಲಾರದೆಂದು ನಿಶ್ಚಯಿಸಿ ಯಜ್ಞಾದಿಕರಣ ಪ್ರಕಾರವನ್ನು ಹೇಳುತ್ತಾರೆ. ಮಮತಾಭಿ ಮಾನರೂಪವಾದ ಸ್ನೇಹವೆಂಬ ಸಂಗವನ್ನೂ ಸ್ವರ್ಗಾದಿ ಫಲವನ್ನೂ ಬಿಟ್ಟು ಅವಶ್ಯವಾಗಿ ಅನುಷ್ಠಿಸಬೇಕೆಂಬುವುದೆ ನನ್ನ ಉತ್ತಮವಾದ ಸಿದ್ಧಾಂತವು. ... ॥೬॥

ಶ್ಲೋ ॥ ನಿಯತಸ್ಯತುಸನ್ನ್ಯಾಸಃಕರ್ಮಣೋನೋಪಪದ್ಯತೇ । ಮೋಹಾತ್ತಸ್ಯಪರಿತ್ಯಾಗಸ್ತಾಮಸಃಪರಿಕೀರ್ತಿತಃ ॥ ... ... ॥೭॥

ಪ ॥ ನಿಯತಸ್ಯ-ತು-ಸನ್ನ್ಯಾಸಃ-ಕರ್ಮಣಃ-ನ-ಉಪಪದ್ಯತೆ । ಮೋಹಾತ್-ತಸ್ಯ-ಪರಿತ್ಯಾಗಃ-ತಾಮಸಃ-ಪರಿಕೀರ್ತಿತಃ ॥

(ಅ ॥ ರಾ ॥ ಭಾ)ನಿಯತಸ್ಯ-ನಿತ್ಯನೈಮಿತ್ತಿಕರೂಪವಾಗಿರುವ, ಕರ್ಮಣಃ-ಮಹಾಯಜ್ಞಾದಿ ಕರ್ಮಕ್ಕೆ, ಸನ್ನ್ಯಾಸಃ-ತ್ಯಾಗವು, ನೋಪಪದ್ಯತೆ-ಜ್ಞಾನವೃದ್ಧಿಯೊಡನೆ ಸೇರಿದ ಶರೀರ ಯಾತ್ರೆಯು ಸಿದ್ಧಿಯಾಗಿ ಅದುವುದರಿಂದ ಯೋಗ್ಯವಾದದ್ದಲ್ಲವು. ಅದು ಏತಕ್ಕೆಂದರೆ ? " ಆಹಾರ ಶುದ್ಧೌ ಸತ್ವಶುದ್ಧಿಃ " ಎಂಬೀ ಪ್ರಕಾರವಾಗಿ ಶುದ್ಧಾಹಾರದಿಂದ ಮನಶ್ಶುದ್ಧಿಯುಂಟಾಗಬೇಕು. ಪಂಚಮಹಾಯಜ್ಞ ಶೇಷವೇ ಶುದ್ಧಾಹಾರವು. ಆ ಪ್ರಕಾರವಾಗಿ ಯಜ್ಞಶೇಷ ವಾಗದೇ ಇರುವುದು ವಿಪರೀತಜ್ಞಾನ ಹೇತುವೆಂಬ ಅಂಶವು " ತೇತ್ವಘಂಭುಂಜತೇಪಾಪಾ ಯೇ ಪಚಂತ್ಯಾತ್ಮ ಕಾರಣಾತ್ " ( ೩ ॥ ೧೩ ) ಎಂಬೀ ಪ್ರಮಾಣದಿಂದ

ಸಿದ್ಧವಾಗಿರುವುದು. "ಸತ್ವಶುದ್ಧೌ ಧ್ರುವಾಸ್ಮೃತಿಃ "ಎಂಬಶ್ರುತಿಯಿಂದ ಬ್ರಂಹಸಾಕ್ಷಾತ್ಕಾರವೆಂಬ ಮೋಕ್ಷಕ್ಕೆಹೇತುವಾದ ಜ್ಞಾನವು ಶುದ್ಧವಾದ ಮನಸ್ಸಿನಿಂದ ಉಂಟಾಗಬೇಕಾಗಿರುವುದರಿಂದಲೂ, ಯಜ್ಞಾದ್ಯನುಷ್ಠಾನವು ಮುಮುಕ್ಷುವಾದ ಅಧಿಕಾರಿಗೆ ಪ್ರಯಾಣಪರ್ಯಂತವಾಗಿ ಬ್ರಂಹಜ್ಞಾನವೃದ್ಧಿಗಾಗಿಯೂಉಪಾದೆಯವಾಗಿರುವುದರಿಂದಲೂ, ಅವುಗಳನ್ನು ಬಿಟ್ಟರೆ ಜ್ಞಾನವೃದ್ಧಿಯೊಡನೆ ಕೂಡಿರುವ ಶರೀರಯಾತ್ರೆಯು ಘಟಿಸುವುದಿಲ್ಲವೆಂದು ತಾತ್ಪರ್ಯವು. ತಸ್ಯ-ಆರೀತಿಯಿಂದ ಜ್ಞಾನೋತ್ಪತ್ತಿ ಹೇತುವಾದ ಕರ್ಮಗಳ, ಮೋಹಾತ್ಪರಿತ್ಯಾಗಃ-ಬಂಧಕವೆಂಬ ಅಜ್ಞಾನದಿಂದ ಬಿಡುವಿಕೆಯು, ತಾಮಸಃಪರಿಕೀರ್ತಿತಃ-ತಮೋಗುಣ ಮೂಲಕವೆಂಬದಾಗಿ ಪಂಡಿತರಿಂದ ಹೇಳಲ್ಪಟ್ಟಿರುವುದು. ತಮೋಗುಣಕಾರ್ಯವಾದ ವಿಪರೀತಜ್ಞಾನವೆಂಬ ಅಜ್ಞಾನದಿಂದುಂಟಾದದ್ದಾಗಿ ಹೇಳಲ್ಪಟ್ಟಿರುವುದೆಂದಭಿಪ್ರಾಯವು. ... ||೭||

(ಗೀ || ವಿ) ತ್ಯಾಗವೆಂಬುವುದು ಫಲತ್ಯಾಗವಲ್ಲದೆ ಕರ್ಮತ್ಯಾಗವಲ್ಲವೆಂಬೀಅಂಶವು ಮೂರುಶ್ಲೋಕಗಳಿಂದಹೇಳಲ್ಪಡುವುದು.ನಿಯತಸ್ಯತು-ವರ್ಣಾಶ್ರಮಗಳಿಗೆ ಯೋಗ್ಯವಾದ, ಕರ್ಮಗಳುಬಿಡಕ್ಕವುಗಳಲ್ಲವು. ಸ್ವಕರ್ಮಗಳಾದ ಯಜ್ಞಾದಿಗಳನ್ನು ಬಿಟ್ಟರೆ ನರಕಪಾತವುಂಟಾಗುವುದು. ತ್ಯಾಗವೆಂಬುವುದು ಫಲತ್ಯಾಗವಲ್ಲವೆಂತಲೂ ಕರ್ಮಸ್ವರೂಪತ್ಯಾಗವೆಂತಲೂ ಅಜ್ಞಾನದಿಂದ ನೆನಸಿ ಯಾರಾದರೆ ತ್ಯಾಗ ಮಾಡುತ್ತಾರೆಯೊ ಅದು ತಾಮಸತ್ಯಾಗವೆಂದು ಭಾವವು. ... ||೭||

ಶ್ಲೋ|| ದುಃಖಮಿತ್ಯೇವಯತ್ ಕರ್ಮಕಾಯಕ್ಲೇಶಭಯಾತ್ತ್ಯಜೇತ್ | ಸಕೃತ್ವಾರಾಜಸಂತ್ಯಾಗಂ ನೈವತ್ಯಾಗಫಲಂಲಭೇತ್ || ... ... ||೮||

ಪ || ದುಃಖಂ-ಇತಿ-ಏವ- ಯತ್-ಕರ್ಮ - ಕಾಯಕ್ಲೇಶಭಯಾತ್-ತ್ಯಜೇತ್ | ಸಃ-ಕೃತ್ವಾ-ರಾಜಸಂ-ತ್ಯಾಗಂ-ನ-ಏವ-ತ್ಯಾಗಫಲಂ-ಲಭೇತ್ ||

(ಅ|| ರಾ||ಭಾ) ಯಃ-ಯಾವ ಅಧಿಕಾರಿಯು, ದುಃಖಮಿತ್ಯೇವ-ಕರ್ಮವು ಪರಂಪರೆಯಾಗಿ ಮೋಕ್ಷಸಾಧನವಾಗಿದ್ದರೂ ದುಃಖಕರವಾದ

ದ್ರವ್ಯಾರ್ಜನಾದಿ ಸಾಧ್ಯವಾಗಿರುವುದರಿಂದ ದುಃಖಾತ್ಮಕವೆಂಬದಾಗಿ, ಕಾಯಕ್ಲೇಶಭಯಾತ್-ಶರೀರಶ್ರಮಭಯದಿಂದ, ಕರ್ಮ-ನಿತ್ಯನೈಮಿತ್ತಿಕರೂಪವಾದ ಆಶ್ರಮಕರ್ಮವನ್ನು, ತ್ಯಜೇತ್ - ಯೋಗನಿಷ್ಪತ್ತಿಗಾಗಿ ಜ್ಞಾನಾಭ್ಯಾಸವೆ ಮಾಡತಕ್ಕದ್ದಲ್ಲವೆ ಇದು ಮಾಡತಕ್ಕದ್ದಲ್ಲವೆಂಬ ಅಜ್ಞಾನದಿಂದ ಬಿಡುತ್ತಾನೆಯೋ, ಸಃ - ಅವನು, ರಾಜಸಂ - ರಜೋಗುಣಮೂಲಕವಾದ, ತ್ಯಾಗಂ-ತ್ಯಾಗವನ್ನು, ಕೃತ್ವಾ-ಮಾಡಿ, ಮಾಡಿರುವುದರಿಂದ ಎಂದರ್ಥವು. ತ್ಯಾಗಫಲಂನೈವಲಭೇತ್ - ಜ್ಞಾನೋತ್ಪತ್ತಿ ಎಂಬ ತ್ಯಾಗಫಲವನ್ನು ಹೊಂದುವುದಿಲ್ಲವು. “ ಅಯಥಾವತ್ಪ್ರಜಾನಾತಿ ಬುದ್ಧಿಸ್ಸಾಪಾರ್ಥರಾಜಸೀ,, ಎಂಬದಾಗಿ ಮುಂದೆ ಹೇಳುತ್ತಾರೆ. ಕರ್ಮವು ದೃಷ್ಟದ್ವಾರಾ ಮನಃಪ್ರಸಾದ ಹೇತುವಾಗಲಾರದೆಂತಲೂ ಭಗವತ್ಪ್ರಸಾದದ್ವಾರಾ ಚಿತ್ತಶುದ್ಧಿಗೆ ಕಾರಣವಾಗುವದೆಂತಲೂ ಅರಿಯಬೇಕು. ॥೮॥

(ಶಂ ॥ ಭಾ) ಜ್ಞಾನನಿಷ್ಠಾಪರನಾಗಿರುವುದರಿಂದ ಸಕಲ ಕರ್ಮಗಳನ್ನು ಬಿಟ್ಟಿರುವ ಜ್ಞಾನಿಯಂತೆ ಶರೀರಾಧ್ಯಾಯಾಸಕರವೆಂಬ ಚಿಂತೆಯಿಂದ ನಿತ್ಯನೈಮಿತ್ತಿಕ ಕರ್ಮಗಳನ್ನು ಬಿಡುವಂತವನು ಮೋಕ್ಷವನ್ನು ಯಾವಾಗಲೂ ಹೊಂದಲಾರನು. ಇದೇ ರಾಜಸತ್ಯಾಗವೆನ್ನಲ್ಪಡುವುದು. ... ... ॥೮॥

(ಗೀ ॥ ವಿ) ತ್ಯಾಗಫಲಂ - ಭಗವತ್ಪ್ರೀತಿ ರೂಪವಾದ ಫಲವನ್ನು. ... ... ॥೮॥

ಶ್ಲೋ॥ ಕಾರ್ಯಮಿತ್ಯೇವಯತ್ಕರ್ಮನಿಯತಂಕ್ರಿಯತೇಽರ್ಜುನ । ಸಂಗಂತ್ಯಕ್ತ್ವಾಫಲಂಚೈವ ಸತ್ಯಾಗಸ್ಸಾತ್ತ್ವಿಕೋಮತಃ ॥ ... ... ॥೯॥

ಪ ॥ ಕಾರ್ಯಂ- ಇತಿ-ಏವ-ಯತ್-ಕರ್ಮ-ನಿಯತಂ-ಕ್ರಿಯತೇ-ಅರ್ಜುನ ! ಸಂಗಂ-ತ್ಯಕ್ತ್ವಾ-ಫಲಂ-ಚ-ಏವ-ಸಃ-ತ್ಯಾಗಃ-ಸಾತ್ತ್ವಿಕಃ-ಮತಃ ॥

(ಅ ರಾ ॥ ಭಾ) ಅರ್ಜುನ-ಎಲೈ ಅರ್ಜುನನೆ, ಕಾರ್ಯಮಿತ್ಯೇವ-ನನಗಾರಾಧನರೂಪದಿಂದ ಸ್ವಯಂ ಪ್ರಯೋಜನವಾಗಿ ಅನುಷ್ಠಿಸತಕ್ಕದ್ದೆಂದೇ ತಿಳಿಕೊಂಡು, ಸಂಗಂ-ಕರ್ಮದಲ್ಲಿ ಮಮತೆಯನ್ನೂ, ಫಲಂಚೈವ-

ಫಲವನ್ನೂ, ತ್ಯಕ್ತ್ವಾ-ಬಿಟ್ಟು, ಯತ್ಕರ್ಮಕ್ರಿಯತೇ-ಯಾವ ಕರ್ಮವೆ ನುಷ್ಠಿಸಲ್ಪಡುವುದೊ, ಸಃ-ಅದು, ಸಾತ್ವಿಕಸ್ತ್ಯಾಗಃ- ಸತ್ವಗುಣ ಮೂಲಕವಾದ ತ್ಯಾಗವೆಂಬದಾಗಿ, ಮತಃ-ನಿಶ್ಚಯಿಸಲ್ಪಟ್ಟಿರುವುದು. ಸತ್ವಗುಣಕಾರ್ಯವಾದ ಯಥಾವಸ್ಥಿತಜ್ಞಾನದಿಂದುಂಟಾದದ್ದೆಂದರ್ಥವು. "ಸತ್ವಾತ್ಸಂಜಾಯತೆಜ್ಞಾನಂ" ಎಂಬಂತೆಸತ್ವಗುಣವು ಯಥಾವಸ್ಥಿತ ಜ್ಞಾನಕ್ಕೆಕಾರಣವಾಗಿರುವುದಷ್ಟೆ. "ಪ್ರವೃತ್ತಿಂಚನಿವೃತ್ತಿಂಚಕಾರ್ಯಾ ಕಾರ್ಯೆಭಯಾಭಯೆ। ಬಂಧಂಮೋಕ್ಷಂಚಯಾವೇತ್ತಿಬುದ್ಧಿಸ್ಸಾಪಾರ್ಥ ಸಾತ್ವಿಕೀ (೧೮॥೩೦) ಎಂಬದಾಗಿ ಮುಂದೆಯೂ ಹೇಳುತ್ತಾರೆ. ॥೯॥

(ಶಂ॥ ಭಾ) ಭಗವದ್ವಾಕ್ಯದಿಂದಲೆ ನಿತ್ಯಕರ್ಮಕ್ಕೆ ಫಲವುಂಟೆಂ ಬದಾಗಿ ಏರ್ಪಟ್ಟಿರುವುದು. ಆ ಪ್ರಕಾರವಾಗಿ ಫಲವಿಲ್ಲದಿದ್ದರೆ ಫಲತ್ಯಾಗ ಮಾಡುವುದು ತಾನೆ ಹೇಗೆ ? ವಿವೇಕವಿಲ್ಲದವರು ನಿತ್ಯಕರ್ಮಕ್ಕೆ ಫಲವು ಚಿತ್ತಶುದ್ಧಿಯು ಅಥವಾ ದೋಷನಿವೃತ್ತಿ ಎಂಬದಾಗಿ ಕಲ್ಪಿಸುವರು. ಆರೀತಿಯಾಗಿ ಕಲ್ಪನವನ್ನು ಮಾಡಕೂಡದೆಂಬದಾಗಿ ಪರಮಾತ್ಮನು ಈ ಶ್ಲೋಕದಿಂದ ಹೇಳುತ್ತಾನೆ. ಕರ್ಮತ್ಯಾಗವು ಮೂರುವಿಧವೆಂಬದಾಗಿ (ಈ ಅಧ್ಯಾಯದ ನಾಲ್ಕನೆ. ಶ್ಲೋಕದಲ್ಲಿ ) ಹೇಳಲ್ಪಟ್ಟಿರುವುದು. ತಾಮಸತ್ಯಾಗವೂ ರಾಜಸತ್ಯಾಗವೂ ( ೭-೮ ನೆ ಶ್ಲೋಕಗಳಲ್ಲಿ ) ಹೇಳ ಲ್ಪಟ್ಟಿತು. ಆದ್ವಿವಿಧವಾದತ್ಯಾಗವೂಕರ್ಮಸ್ವರೂಪತ್ಯಾಗವಾಗಿರುವುದು. ಈ ಸಾತ್ವಿಕತ್ಯಾಗವೆಂಬುವುದು ಕರ್ಮತ್ಯಾಗವಲ್ಲವು, ಸಂಗವನ್ನೂಫಲ ನ್ನೂ ಬಿಡುವುದಾಗಿರುವುದು. ಆದುದರಿಂದ ಕರ್ಮತ್ಯಾಗವುಮೂರುವಿಧ ವೆಂಬದಾಗಿ ಹೇಳಲುಪಕ್ರಮಿಸಿ ಮೂರನೇದಾಗಿಫಲತ್ಯಾಗವನ್ನು ಹೇಳ ದ್ದು ಹೇಗೆಯುಕ್ತವಾಗುವುದೆಂದರೆ ? ಕರ್ಮತ್ಯಾಗವೂ ಕರ್ಮಗಳನ್ನ ನುಷ್ಠಿಸಿ ಅದರಫಲತ್ಯಾಗವೂ ತ್ಯಾಗವೆಂಬ ಸಂಬಂಧದಿಂದ ಯೆರಡೂ ಬಂದೇ ಆಗಿರುವುದು. ಆದುದರಿಂದ ಎಲೈ ಅರ್ಜುನನೇ!ನಿತ್ಯವೂ ಮಾಡ ತಕ್ಕದ್ದೆಂಬದಾಗಿ ಶಾಸ್ತ್ರದಲ್ಲಿ ಯಾವ ಕರ್ಮವು ವಿಧಿಸಲ್ಪಟ್ಟಿರುವುದೊ ಅಂತಹ ಕರ್ಮವು ಅನುಷ್ಠೇಯಗಳೆಂಬದಾಗಿ ತಿಳಿದು ಅಭಿಮಾನವನ್ನೂ ಫಲವನ್ನೂ ಬಿಟ್ಟು ಮಾಡಲ್ಪಡುವ ಅಂತಹತ್ಯಾಗವು ಸಾತ್ವಿಕತ್ಯಾಗ ವೆಂಬದಾಗಿ ನನ್ನ ಅಭಿಪ್ರಾಯವು. ॥೯॥

(ಗೀ॥ ವಿ) ಅವಶ್ಯಾನುಷ್ಠೇಯಂಗಳಾಗಿಯೂ ತಮ್ಮ ಗಳ ವರ್ಣಾಶ್ರಮೋಚಿತಗಳಾಗಿಯೂ ಇರುವ ಕರ್ಮಗಳನ್ನು ಅನುಷ್ಠಿಸದೆ ತ್ಯಾಗ ಮಾಡಿದರೆ ದೋಷವುಂಟಾಗುವುದೆಂದುತಿಳಿದು ಸಂಗವನ್ನೂ ಸ್ವರ್ಗಾದಿಫಲವನ್ನೂ ಬಿಟ್ಟು ಆಯಾವರ್ಣಾಶ್ರಮಂಗಳಿಗುಚಿತಗಳಾದ ಕರ್ಮಗಳನ್ನು ಮಾಡುವುದು ಸಾತ್ವಿಕತ್ಯಾಗವೆಂದರ್ಥವು. ... ॥೯॥

ಶ್ಲೋ॥ ನದ್ವೇಷ್ಟ್ಯಕುಶಲಂಕರ್ಮಕುಶಲೇನಾನುಷಜ್ಜತೇ।
ತ್ಯಾಗೀಸತ್ತ್ವಸಮಾವಿಷ್ಟೋ ಮೇಧಾವೀಛಿನ್ನಸಂಶಯಃ ॥ ... ... ... ॥೧೦॥

ಪ॥ ನ-ದ್ವೇಷ್ಟಿ-ಅಕುಶಲಂ-ಕರ್ಮ-ಕುಶಲೇ-ನ-ಅನುಷಜ್ಜತೇ । ತ್ಯಾಗೀ-ಸತ್ವಸಮಾವಿಷ್ಟಃ-ಮೇಧಾವೀ-ಛಿನ್ನಸಂಶಯಃ ॥

(ಅ॥ ರಾ॥ ಭಾ) ಸತ್ವಸಮಾವಿಷ್ಟಃ-ಈ ಪ್ರಕಾರವಾಗಿ ಸತ್ವಗುಣದಿಂದ ಆವೇಶಿಸಲ್ಪಟ್ಟವನಾಗಿಯೂ, ಮೇಧಾವೀ - ಯಥಾವಸ್ಥಿತವಾದ ತತ್ವಜ್ಞಾನಮುಳ್ಳವನಾಗಿಯೂ, ಛಿನ್ನಸಂಶಯಃ- ಸರ್ವಸಂಶಯಗಳನ್ನೂ ಹೋಗಲಾಡಿಸಿ ಬಿಟ್ಟವನಾಗಿಯೂ, ತ್ಯಾಗೀ-ಕರ್ಮದಲ್ಲಿ ಮಮತೆಯನ್ನೂ ಫಲವನ್ನೂ ಕರ್ತೃತ್ವವನ್ನೂ ಬಿಟ್ಟವನಾಗಿರುವ ಅಧಿಕಾರಿಯು, ಅಕುಶಲಂ ಕರ್ಮ-ಅನಿಷ್ಟಫಲಕವಾದ ಪಾಪಕರ್ಮವನ್ನು, ನದ್ವೇಷ್ಟಿ-ದ್ವೇಷಿಸುವುದಿಲ್ಲವು. ಕುಶಲೇ ನಾನುಷಜ್ಜತೆ-ಇಷ್ಟವಾದ ಸ್ವರ್ಗಪುತ್ರಪಶ್ವನ್ನಾದಿ ಫಲಮುಳ್ಳ ಪುಣ್ಯಕರ್ಮದಲ್ಲಿಯೂ ಆಸಕ್ತಿಯನ್ನು ಹೊಂದುವುದಿಲ್ಲವು. ಸರ್ವಕರ್ಮಗಳಲ್ಲಿಯೂ ಮಮತಾಶೂನ್ಯನಾಗಿರುವುದರಿಂದಲೂ ಬ್ರಹ್ಮವ್ಯತಿರಿಕ್ತಫಲವನ್ನೂ ಬಿಟ್ಟವನಾಗಿರುವುದರಿಂದಲೂ ಆ ಎರಡು ಕರ್ಮಗಳನ್ನು ಮಾಡುತಿದ್ದರೂ ಅವುಗಳಲ್ಲಿ ಪ್ರೀತಿಯನ್ನು ದ್ವೇಷವನ್ನೂ ಮಾಡಲಾರನೆಂದು ತಾತ್ಪರ್ಯವು. ಇಲ್ಲಿ ಪ್ರಕೃತವಾದ ಅನಿಷ್ಟಫಲವುಳ್ಳ ಪಾಪಕರ್ಮವು ಅಬುದ್ಧಿಪೂರ್ವಕವಾಗಿ ಮಾಡಲ್ಪಟ್ಟದ್ದೆಂಬದಾಗಿ ತಿಳಿಯಬೇಕು. ಕೆಲವು ಅಧಿಕಾರಿವಿಶೇಷದಲ್ಲಿ ಬುದ್ಧಿಪೂರ್ವಕವಾದ ಪಾಪಕರ್ಮಕ್ಕೂ ಅಲೇಪವನ್ನು ಹೇಳುವುದರಿಂದ ಆ ಪ್ರಕಾರವಾಗಿ ಯೇತಕ್ಕೆ ಆಗಬಾರದೆಂದರೆ ? " ನಾ

ವಿರತೋದುಶ್ಚರಿತಾನ್ನಾಶಾಂತೋನಾಸಮಾಹಿತಃ । ನಾಶಾಂತಮಾನಸೋವಾಪಿ ಪ್ರಜ್ಞಾನೇನೈನಮಾಪ್ನುಯಾತ್ ,, ಎಂಬ ಶ್ರುತಿಯಲ್ಲಿ ನಿಷಿದ್ಧ ಕರ್ಮವನ್ನು ಮಾಡುವಂತವನಿಗೆ ಜ್ಞಾನವೂ ಅದರ ಫಲವಾದ ಬ್ರಹ್ಮಪ್ರಾಪ್ತಿಯೂ ಇಲ್ಲವೆಂಬದಾಗಿ ಹೇಳಿರುವುದರಿಂದ ಆರೀತಿಯಾಗಿ ಹೇಳುವುದು ಉಚಿತವಲ್ಲವು. ಆದುದರಿಂದ ಕರ್ಮದಲ್ಲಿ ಕರ್ತೃತ್ವವನ್ನೂ ಮಮತೆಯನ್ನೂ ಫಲವನ್ನೂ ಬಿಡುವಿಕೆಯೆ ಶಾಸ್ತ್ರೀಯತ್ಯಾಗವು. ಕರ್ಮಸ್ವರೂಪ ತ್ಯಾಗವಲ್ಲವೆಂಬುವುದು ಸಿದ್ಧವು. ... ॥೧೦॥

(ಶಂ॥ ಭಾ) ಯಾವ ಅಧಿಕಾರಿಯು ಸಂಗವನ್ನೂ ಫಲಾಭಿಸಂಧಿಯನ್ನೂ ಬಿಟ್ಟು ನಿತ್ಯಕರ್ಮವನ್ನು ಮಾಡುತ್ತಾನೆಯೊ ಅಂತವನಿಗೆ ಫಲಾಪೇಕ್ಷಾದಿ (ಆದಿಶಬ್ದದಿಂದ ಕರ್ಮಸ್ವರೂಪ ಸಂಗವು ಹೇಳಲ್ಪಡುವುದು.) ಗಳಿಂದ ಶುದ್ಧಮಾಡಲ್ಪಟ್ಟ ಅಂತಃಕರಣವು ನಿತ್ಯಕರ್ಮಗಳಿಂದಲೂ ಸಂಸ್ಕಾರ ಯುಕ್ತವಾಗುತ ಶುದ್ಧವಾಗುವುದು. ಇಂತಹ ಅಂತಃಕರಣವುಮಲ ರಹಿತವಾಗಿಯೂ ಪ್ರಸನ್ನವಾಗಿಯೂ ಇರುವುದರಿಂದ ಆತ್ಮದರ್ಶನ ಯೋಗ್ಯವಾಗುವುದು. ನಿತ್ಯಕರ್ಮಾನುಷ್ಠಾನದಿಂದ ವಿಶುದ್ಧಾಂತಃಕರಣನಾದ ಆತ್ಮಜ್ಞಾನಾಭಿಮುಖನಾಗಿರುವ ಅಂಥಾ ಅಧಿಕಾರಿಗೇನೇ ಶ್ರವಣಾದ್ಯಾವೃತ್ತಿದ್ವಾರಾ ಆತ್ಮಜ್ಞಾನನಿಷ್ಠೆಯು ಹೇಗಾದರೆ ಉಂಟಾಗುವುದೋ ಅದನ್ನು ಹೇಳಲುದ್ದೇಶಿಸಿ ಈ ಶ್ಲೋಕವು ಪ್ರವೃತ್ತವಾಯಿತೆಂದು ತಿಳಿಯಬೇಕು.

ಸತ್ವಸಮಾವಿಷ್ಟಃ-ಆತ್ಮಾನಾತ್ಮವಿವೇಕ ಜ್ಞಾನಕ್ಕೆ ಕಾರಣವಾದ ಸತ್ವಗುಣದಿಂದ ವ್ಯಾಪಿಸಲ್ಪಟ್ಟವನಾಗಿಯೂ, ಮೇಧಾವೀ-ಆತ್ಮಜ್ಞಾನ ಲಕ್ಷಣವಾದ ಪ್ರಜ್ಞೆಯಿಂದ ಕೂಡಿದವನಾಗಿಯೂ, ಛಿನ್ನಸಂಶಯಃ-ಆತ್ಮಜ್ಞಾನವೆ ಮೋಕ್ಷಕಾರಣವೊ ಎಂಬ ( ಅವಿದ್ಯಾಜನ್ಯವಾದ ) ಸಂಶಯವನ್ನು ಹೋಗಲಾಡಿಸಿಕೊಂಡವನಾಗಿಯೂ ಇದ್ದುಕೊಂಡು, ತ್ಯಾಗೀ-ಸಂಗವನ್ನೂ ಫಲವನ್ನೂ ಬಿಟ್ಟು ನಿತ್ಯ ಕರ್ಮವನ್ನು ಮಾಡುವಂತವನು, ಅಕುಶಲಂಕರ್ಮ-ದುಃಖಕರವಾಗಿರುವ ಸಂಸಾರ ಬಂಧಹೇತು

ಪಾದ ಕಾಮ್ಯಕರ್ಮವನ್ನು, ನದ್ವೇಷ್ಟಿ-ದ್ವೇಷಿಸಲಾರನು. ಕುಶಲೆ ನಾನುಷಜ್ಜತೇ- ಈ ನಿತ್ಯಕರ್ಮವು ಚಿತ್ತಶುದ್ಧಿಮೂಲಕವಾಗಿ ಮೋಕ್ಷ ಹೇತುವಾಗಿರುವುದೆಂದು ಅದರಲ್ಲಿ ಪ್ರೀತಿಯನ್ನೂ ಇಡಲಾರನು. ನಿಷ್ಕಾಮವಾಗಿ ಕರ್ಮವನ್ನು ಮಾಡತಕ್ಕವನು ಚಿತ್ತಶುದ್ಧಿಯನ್ನೂ ಚಿತ್ತಶುದ್ಧಿಯಿಂದ ಜ್ಞಾನವನ್ನೂ ಜ್ಞಾನದಿಂದ ಮೋಕ್ಷವನ್ನೂ ಹೊಂದುವನೆಂದು ತಾತ್ಪರ್ಯವು. ... ... ॥೧೦॥

(ಗೀ॥ ವಿ) ಅಕುಶಲಂ-ತತ್ಕಾಲದಲ್ಲಿ ಸುಖವನ್ನು ಕೊಡುವಂತಾದ್ದಲ್ಲವಾಗಿಯೂ ದೇಹಪ್ರಯಾಸಾದಿ ದುಃಖವನ್ನು ಕೊಡುವಂತಾದ್ದಾಗಿಯೂ ಇರುವ, ಕರ್ಮ-ಕರ್ಮವನ್ನು ದ್ವೇಷಮಾಡುವುದೂ ಇಲ್ಲವು, ಕುಶಲೇ-ಪೂರ್ವಾರ್ಜಿತ ಪುಣ್ಯಕರ್ಮಫಲದಲ್ಲಿ ಇಚ್ಛೆಪಡುವುದೂ ಇಲ್ಲವು. ಸತ್ವಸಮಾವಿಷ್ಟಃ-ಶುದ್ಧಸತ್ವಗುಣವುಳ್ಳವನು, ಮೇಧಾವೀ-ಭಗವತ್ತತ್ವಜ್ಞಾನಿಯು, ಛಿನ್ನಸಂಶಯಃ-ಪರಾವರ ತತ್ವವಿಷಯದಲ್ಲಾಗಲಿ ಭಗವದ್ಧರ್ಮಗಳನ್ನು ಅನುಷ್ಠಿಸುವ ವಿಷಯದಲ್ಲಾಗಲಿ ಸಂದೇಹವನ್ನು ಬಿಟ್ಟವನು, ತ್ಯಾಗೀ-ಸಕಲ ಕರ್ಮಗಳನ್ನೂ ಭಗವತ್ಸಮರ್ಪಣ ಮಾಡಿದನು. ಇಂತಹನೆ ಸಾತ್ವಿಕ ತ್ಯಾಗಿ ಎಂದರ್ಥವು. ॥೧೦॥

ಶ್ಲೋ॥ ನಹಿದೇಹಭೃತಾಶಕ್ಯಂತ್ಯಕ್ತುಂಕರ್ಮಾಣ್ಯಶೇಷ
ತಃ । ಯಸ್ತುಕರ್ಮಫಲತ್ಯಾಗೀಸತ್ಯಾಗೀತ್ಯಭಿಧೀಯತೇ॥
॥೧೧॥

ಪ॥ ನ-ಹಿ-ದೇಹಭೃತಾ-ಶಕ್ಯಂ-ತ್ಯಕ್ತುಂ-ಕರ್ಮಾಣಿ-ಅಶೇಷತಃ । ಯಃ-ತು-ಕರ್ಮಫಲತ್ಯಾಗೀ-ಸಃ-ತ್ಯಾಗೀ-ಇತಿ-ಅಭಿಧೀಯತೇ ॥

(ಅ॥ ರಾ॥ ಭಾ) "ನಿಯತಸ್ಯತು ಸನ್ನ್ಯಾಸಃ" (೧೮॥ ೭॥) ಇತ್ಯಾದಿ ಶ್ಲೋಕಗಳಿಂದ ಪ್ರತಿಪಾದಿಸಲ್ಪಟ್ಟ ಯುಕ್ತಿವಿವರಣ ಪೂರ್ವಕವಾಗಿ ಫಲತ್ಯಾಗ ರೂಪವಾದ ಉಪಲಕ್ಷಣದಿಂದ ಹಿಂದೇ ಹೇಳಲ್ಪಟ್ಟ ಮೂರುವಿಧವಾದ ಸಾತ್ವಿಕ ತ್ಯಾಗವೂ ಈ ಶ್ಲೋಕದಲ್ಲಿ ಉಪಸಂಹಾರ ಮಾಡುತ್ತಾರೆಂದರಿಯಬೇಕು.

ದೇಹಭೃತಾ-ದೇಹವೊಡನೆ ಇರುವ ಚೇತನನಿಂದ, ಕರ್ಮಾಣಿ-

ನಿತ್ಯನೈಮಿತ್ತಿಕಾದಿ ಕರ್ಮಗಳು,ಅಶೇಷತಃ-ಸಂಪೂರ್ಣವಾಗಿ,ತ್ಯಕ್ತುಂ-ಬಿಡುವುದಕ್ಕೆ ,, ಶಕ್ಯಂನಹಿ-ಸಾಧ್ಯವಿಲ್ಲವಷ್ಟೆ. ದೇಹಧಾರಣಕ್ಕಾಗಿ ಅಶನಪಾನಾದಿಗಳೂ ಅದಕ್ಕೆ ಸೇರಿದ ದ್ರವ್ಯಸಂಪಾದನಾದಿಗಳೂ ಆ ಅಶನಾದಿ ಸಂಸ್ಕಾರಗಳಾದ ಮಹಾಯಜ್ಞಾದಿಗಳೂ ಬಿಡುವುದಕ್ಕೆ ಅಶಕ್ಯಗಳಾಗಿರುವುದರಿಂದ ಸಾಧ್ಯವಲ್ಲವೆಂದರ್ಥವು. ಯಸ್ತು-ಯಾವ ಪುರುಷನಾದರೆ, ಕರ್ಮಫಲತ್ಯಾಗೀ-ಆ ಮಹಾಯಜ್ಞಾದಿ ಕರ್ಮಗಳ ಫಲಗಳನ್ನು ಬಿಡುತ್ತಾನೆಯೊ, ಸಃ-ಅವನೆ, ತ್ಯಾಗೀತ್ಯಭಿಧೀಯತೆ- " ತ್ಯಾಗೇನೈಕೆ ಅಮೃತತ್ವಮಾನಶುಃ ,, (ಇತ್ಯಾದಿ ಶ್ರುತಿಗಳಲ್ಲಿ) ತ್ಯಾಗಮಾಡಿದವನೆಂಬದಾಗಿ ಹೇಳಲ್ಪಡುತ್ತಾನೆ. ತ್ಯಾಗವು ಫಲಕರ್ತೃತ್ವಸಂಗವೆಂಬೀತ್ರಿವಿಧವಾಗಿರುವುದರಿಂದ ಇಲ್ಲಿನ ಫಲತ್ಯಾಗಶಬ್ದವು ಈ ತ್ರಿವಿಧತ್ಯಾಗಕಣ್ಕೂ ಪ್ರದರ್ಶನಾರ್ಥವೆಂದರಿಯಬೇಕು. "ತ್ರಿವಿಧಸ್ಸಂಪ್ರಕೀರ್ತಿತಃ,, ಎಂಬದಾಗಿ ಉಪಕ್ರಮವೂ ಇರುವುದು. ... ॥೧೧॥

(ಶಂ॥ ಭಾ) ಆತ್ಮಜ್ಞಾನವುಳ್ಳವನಿಗೆ ಸರ್ವಕರ್ಮ ಸನ್ನ್ಯಾಸವಿರುವಿಕೆಯನ್ನು ಹೇಳಿ ಆತ್ಮಜ್ಞಾನರಹಿತನಾದವನಿಗೆ ಸರ್ವಕರ್ಮಸನ್ನ್ಯಾಸವಿಲ್ಲವೆಂಬುವುದಕ್ಕೆ ಕಾರಣವನ್ನು ಹೇಳುದಕ್ಕಾಗಿ ಅನಂತರ ಶ್ಲೋಕವು ಪ್ರಕೃತವಾಗಿರುವುದೆಂದರಿಯಬೇಕು. ಯಾವ ಪುರುಷನಾದರೆ ಸಂದೇಹಯುಕ್ತವಾದ ಆತ್ಮಾಭಿಮಾನದೊಡನೆದೇಹವನ್ನು ಧರಿಸಿರುವ ಅಜ್ಞಾನಿಯೊ ಅವನು ಅಬಾಧಿತವಾದ ಆತ್ಮಕರ್ತೃತ್ವ ಜ್ಞಾನವುಳ್ಳವನಾಗಿರುವುದರಿಂದ ನಾನು ಕರ್ತಾಎಂಬದಾಗಿ ನಿಶ್ಚಿತಬುದ್ಧಿಯುಳ್ಳವನಾಗಿರುವನು.ಅಂತವನಿಗೆ ಸರ್ವಕರ್ಮಸನ್ನ್ಯಾಸವು ಅಶಕ್ಯವಾಗಿರುವುದರಿಂದಕರ್ಮಫಲತ್ಯಾಗದೊಡನೆ ಶಾಸ್ತ್ರಚೋದಿತವಾದ ಕರ್ಮಾನುಷ್ಠಾನದಲ್ಲಿಯೇ ಅಧಿಕಾರವು.ಸರ್ವಕರ್ಮಸನ್ನ್ಯಾಸದಲ್ಲಿ ಅಧಿಕಾರವಿಲ್ಲವೆಂಬೀ ಅರ್ಥವನ್ನುತೋರಿಸುವುದಕ್ಕಾಗಿ ಅಜ್ಞಾನಾದವನಿಗೆಸರ್ವಕರ್ಮಸನ್ನ್ಯಾಸವಿಲ್ಲವೆಂಬುವುದರಲ್ಲಿ ಕಾರಣವನ್ನು ಹೇಳುತ್ತಾನೆ. ಕರ್ಮಗಳನ್ನು ಸಂಪೂರ್ಣವಾಗಿ ಬಿಡುವುದಕ್ಕೆ ದೇಹಾಭಿಮಾನಿಯಾದ ಜೀವನಿಗೆ (ಅಜ್ಞಾನಿಗೆ) ಸಾಧ್ಯವಿಲ್ಲವಷ್ಟೆ, ಯಾವನಾದರೆ ಕರ್ಮಫಲವನ್ನಾದರೂ ಬಿಡುತ್ತಾನೆಯೊ ಅವನು ತ್ಯಾಗಿ ಯೆನ್ನಲ್ಪಡುವನು, ಎಂದರೆ ಬಿಟ್ಟವನೆಂದು ಸ್ತೋತ್ರ

ಮಾಡಲ್ಪಡುವನು. *******************************||೧೧||

(ಶ್ರೀ)ಸಕಲ ಕರ್ಮಗಳ ಫಲವನ್ನು ಬಿಟ್ಟವನೆ ಮುಖ್ಯತ್ಯಾಗಿಯು. ಕರ್ಮತ್ಯಾಗಿಯುತ್ಯಾಗಿಯುನ್ನಲ್ಪಡಲಾರನು. ... ||೧೧||

(ಗೀ|| ವಿ) ಕೆಳಗೆ " ಕರ್ತವ್ಯಾನೀತಿಮೇಪಾರ್ಥ ,, (೧೮|| ೬) ಎಂಬ ಶ್ಲೋಕದಲ್ಲಿ ಸಂಗಫಲತ್ಯಾಗವೆ ತ್ಯಾಗ ಶಬ್ದಾರ್ಥವೆಂಬ ಸ್ವಸಿದ್ಧಾಂತವು ನಿರ್ಣಯಿಸಲ್ಪಟ್ಟಿತು. ಈಗ ಬಂಧಕವಾಗಿರುವುದರಿಂದ ಕರ್ಮಸ್ವರೂಪತ್ಯಾಗೋಕ್ತಿಗೆ ಮೂಲೋಚ್ಛೇದನಾರ್ಥವಾಗಿ ಸರ್ವಕರ್ಮಪರಿತ್ಯಾಗವಾದರೂ ವಿಹಿತ ಕರ್ಮಪರಿತ್ಯಾಗವಾದರೂ ತ್ಯಾಗಶಬಾರ್ಥವಾಗಲಾರದು. ಆ ಪ್ರಕಾರವಾಗುವುದಾದರೆ " ತ್ಯಾಜ್ಯಂದೋಷವತ್ ,, (೧೮|| ೪) ಎಂಬುವುದಕ್ಕೆ ಸರ್ವಕರ್ಮತ್ಯಾಗವು ಅರ್ಥವಾಗುವುದೆಂಬೀತಾತ್ಪರ್ಯದಿಂದ ಈ ಶ್ಲೋಕವನ್ನು ಹೇಳುತ್ತಾನೆ. ||೧೧||

ಶ್ಲೋ|| ಅನಿಷ್ಟಮಿಷ್ಟಂಮಿಶ್ರಂಚತ್ರಿವಿಧಂಕರ್ಮಣಃಫಲಂ | ಭವತ್ಯತ್ಯಾಗಿನಾಂಪ್ರೇತ್ಯನತುಸನ್ನ್ಯಾಸಿನಾಂಕ್ವಚಿತ್ || ... ... ... ||೧೨||

ಪ|| ಅನಿಷ್ಟಂ-ಇಷ್ಟಂ-ಮಿಶ್ರಂ-ಚ-ತ್ರಿವಿಧಂ-ಕರ್ಮಣಃ-ಫಲಂ | ಭವತಿ-ಅತ್ಯಾಗಿನಾಂ-ಪ್ರೇತ್ಯ-ನ-ತು-ಸನ್ನ್ಯಾಸಿನಾಂ-ಕ್ವಚಿತ್ ||

(ಅ|| ರಾ|| ಭಾ) ಆದರೆ ಅಗ್ನಿಹೋತ್ರದರ್ಶ ಪೂರ್ಣಮಾಸಜ್ಯೋತಿಷ್ಟೋಮಾದಿ ಕರ್ಮಗಳೂ ಮಹಾ ಯಜ್ಞಾದಿ ಕರ್ಮಗಳೂ ಸ್ವರ್ಗಾದಿಫಲಯುಕ್ತಗಳಾಗಿಯೇ ವಿಧಿಸಲ್ಪಟ್ಟಿರುವುವು. ನಿತ್ಯನೈಮಿತ್ತಿಕಾದಿ ಕರ್ಮಗಳು " ಪ್ರಾಜಾಪತ್ಯಂಗೃಹಸ್ಥಾನಾಂ ,, ಇತ್ಯಾದಿ ಶಾಸ್ತ್ರದಿಂದ ಫಲಯುಕ್ತಗಳಾಗಿಯೇ ಅಲ್ಲವೇ ವಿಧಿಸಲ್ಪಟ್ಟಿರುವುವು. ಆದುದರಿಂದ ಆಫಲಗಳಿಗೆ ಸಾಧನಗಳಾದ ಕರ್ಮಗಳನ್ನ ಅನುಷ್ಠಿಸುವಾಗ ಫಲಾಭಿಸಂಧಿಯನ್ನು ಬಿಟ್ಟರೂ ಆಯಾಫಲಗಳು ಅವನನ್ನು ಬಿಟ್ಟು ಹೋಗುವುದೆಂಬುವುದುಯುಕ್ತವೋ? ಅದು ಕಾಯಿಬಿಡದೆ ಹೋಗಲೆಂದುದ್ದೇಶಿಸಿಬೀಜವನ್ನು ಭೂಮಿಯಲ್ಲಿ ನಾಟಿದರೂ ಅದು ಗಿಡವಾಗಿ ಕಾಯಿ ಬಿಡದೇ ಹೋದೀತೋ? ಆದ್ದರಿಂದ ಮೋಕ್ಷವಿರೋಧಿಗಳಾದ ಫಲಗಳನ್ನು

ಹೊಂದದೇಇರುವುದಕ್ಕೆ ಸರ್ವಕರ್ಮಗಳನ್ನೂ ಮುಮುಕ್ಷುವಾದಅಧಿಕಾರಿಯುಸ್ವರೂಪದಿಂದ ತ್ಯಾಗಮಾಡುವುದಲ್ಲವೇಉಚಿತವೆಂದರೆ ಅದಕ್ಕುತ್ತರವನ್ನು ಹೇಳುತ್ತಾರೆ.

ಅನಿಷ್ಟಂ - ನರಕರೂಪವಾಗಿಯೂ, ಇಷ್ಟಂ- ಸ್ವರ್ಗಾದಿರೂಪವಾಗಿಯೂ, ಮಿಶ್ರಂಚ - ಅನಿಷ್ಟದೊಡನೆ ಸೇರಿದ ಪುತ್ರಪಶ್ವನ್ನಾದಿರೂಪವಾಗಿಯೂ, ತ್ರಿವಿಧಂ-ಮೂರು ವಿಧವಾಗಿರುವ, ಕರ್ಮಣಃ ಫಲಂ-ಕರ್ಮದಫಲವು,ಅತ್ಯಾಗಿನಾಂ-ಕರ್ತೃತ್ವವೇನು,ಮಮತೇಯೇನು, ಫಲವೇನು, ಇವುಗಳನ್ನು ಬಿಡದವರಿಗೆ, ಪ್ರೇತ್ಯಭವತಿ-ಈಶರೀರವನ್ನು ಬಿಟ್ಟು ಜನ್ಮಾಂತರವನ್ನು ಹೊಂದಿದಮೇಲೆ ಬರುವುದು, ಕರ್ಮವನ್ನು ಅನುಷ್ಠಿಸಿದ ಉತ್ತರ ಕಾಲದಲ್ಲಿಯೆ ಬರುವುದೆಂಬನಿಯಮವಿಲ್ಲವು. ಸನ್ಯಾಸಿನಾಂತು-ಕರ್ತೃತ್ವಾದಿ ತ್ಯಾಗಿಗಳಿಗೊ ಎಂದರೆ, ಕ್ವಚಿತ್-ಯಾವಕಾಲದಲ್ಲಿಯೂ, ನ-ಮೋಕ್ಷವಿರೋಧಿಯಾದ ಫಲವುಂಟಾಗುವುದಿಲ್ಲವು. ಇದರಿಂದ ಅನುಷ್ಠಿಸಲ್ಪಡುವ ಕರ್ಮಗಳಲ್ಲಿ ಕರ್ತೃತ್ವಾದಿಪರಿತ್ಯಾಗವೆ ಶಾಸ್ತ್ರಸಿದ್ಧವಾದ ಸನ್ಯಾಸವು. ಅದೇ ತ್ಯಾಗವೆಂಬದಾಗಿ ಹೇಳಲ್ಪಟ್ಟಿತೆಂದರಿಯಬೇಕು. ... ... ||೧೨||

(ಶಂ|| ಭಾ) ಅತ್ಯಾಗಿನಾಂ-ಅಪರಮಾರ್ಥಸನ್ಯಾಸಿಗಳಾದ ಅಜ್ಞಾನಿಗಳಿಗೆ, ಸನ್ಯಾಸಿನಾಂ-ಬ್ರಹ್ಮನಿಷ್ಠೆಯಲ್ಲಿಯೇ ಸ್ಥಿರಪ್ರತಿಷ್ಠಿತರಾದ ಪರಮಾರ್ಥಸನ್ಯಾಸಿಗಳಿಗೆ, ಪರಮಾರ್ಥಸನ್ಯಾಸಿಗಳಿಗೆಯೇತಕ್ಕೆ ಫಲವುಂಟಾಗುವುದಿಲ್ಲವೆಂದರೆ ? ಬ್ರಹ್ಮಜ್ಞಾನದಿಂದ ಅವನು, ಸರ್ವಕರ್ಮಗಳಿಂದಲೂ ಬಿಡಲ್ಪಟ್ಟವನಾಗಿರುವನೆಂಬಕಾರಣದಿಂದಲೆ||೧೨||

(ಗೀ|| ವಿ) ಅತ್ಯಾಗಿಗಳ ನಿಂದಾಪೂರ್ವಕವಾಗಿ ತ್ಯಾಗಿಗಳನ್ನು ಸ್ತುತಿಸುತ್ತಾರೆ. ನಿಯತಕಾಮ್ಯವೆಂತಲೂ ಅನಿಯತಕಾಮ್ಯವೆಂತಲೂ ಕರ್ಮವು ದ್ವಿವಿಧವಾಗಿರುವುದು. ನಿಯತ ಕಾಮ್ಯವೆಂಬುವುದು ಫಲೋದ್ದೇಶ್ಯದಿಂದಲೆ ವಿಧಿಸಲ್ಪಟ್ಟಿರುವುದು. ಅನಿಯತ ಕಾಮ್ಯವೆಂಬುವುದು ಫಲಾಪೇಕ್ಷೆಯೊಡನೆ ಮಾಡಲ್ಪಟ್ಟರೆ ಕಾಮ್ಯತ್ವೇನ ಪರಿಣಮಿಸುವ ನಿತ್ಯಕರ್ಮವು, ಅನಿಯತ ಕಾಮ್ಯಕರ್ಮದ ಫಲತ್ಯಾಗವನ್ನೂ ನಿಯತಕಾಮ್ಯಕರ್ಮದ ಸ್ವರೂಪತ್ಯಾಗವನ್ನೂ ಮಾಡಿದವರಾದ ಸನ್ಯಾಸಿಗಳಿಗೆ

ಅಷ್ಟಾ ನಿಷ್ಟ ಮಿಶ್ರ ಫಲಗಳುಂಟಾಗುವುದಿಲ್ಲವು. ಕಿಂಚಮೋಕ್ಷದಲ್ಲಿಜ್ಞಾನಚಕ್ಷುರ್ಸ್ಯಾದಿದ್ವಾರಾ ಆನಂದಾತಿಶಯವುಂಟೆಂಬಅರ್ಥವು ತು, ಎಂಬೀ ಪದದಿಂದ ಸೂಚಿತವಾಗುವುದು. ... ... ‖೧೨‖

ಶ್ಲೋ ‖ ಪಂಚೈತಾನಿ ಮಹಾಬಾಹೋ ಕಾರಣಾನಿನಿ
ಬೋಧಮೇ । ಸಾಂಖ್ಯೇಕೃತಾಂತೇ ಪ್ರೋಕ್ತಾನಿಸಿದ್ಧ
ಯೇಸರ್ವಕರ್ಮಣಾಂ ‖ ... ... ‖೧೩‖

ಪ‖ ಪಂಚ-ಏತಾನಿ-ಮಹಾಬಾಹೋ-ಕಾರಣಾನಿ-ನಿಬೋಧ-ಮೇ । ಸಾಂಖ್ಯೇ-ಕೃತಾಂತೇ-ಪ್ರೋಕ್ತಾನಿ-ಸಿದ್ಧಯೇ-ಸರ್ವಕರ್ಮಣಾಂ ‖

(ಅ) ಹೇಮಹಾಬಾಹೋ-ದೊಡ್ಡದಾದ ಕೈಗಳುಳ್ಳವನೆ, ಸರ್ವಕರ್ಮಣಾಂ-ಸಕಲ ಕರ್ಮಗಳ, ಸಿದ್ಧಯೇ-ಸಿದ್ಧಿಗೋಸ್ಕರವಾಗಿ, (ರಾ) ಉತ್ಪತ್ತಿಗೋಸ್ಕರವಾಗಿ, ಕೃತಾಂತೇ (ಶಂ) ಕರ್ಮವನ್ನು ನಾಶಪಡಿಸುವುದಾದ (ಶ್ರೀ‖ ರಾ‖) ಶಾಸ್ತ್ರದಲ್ಲಿ, ಸಾಂಖ್ಯೇ- (ಶಂ) ಆತ್ಮಸ್ವರೂಪವನ್ನು ಬೋಧಿಸುವುದಾದ ವೇದಾಂತ ಶಾಸ್ತ್ರದಲ್ಲಿ, (ಶ್ರೀ) ತತ್ವಗಳನ್ನು ವಿವರಿಸುವ ಸಾಂಖ್ಯಶಾಸ್ತ್ರದಲ್ಲಿ, (ಗೀ ವಿ) ವಿಷ್ಣ್ವವತಾರವಾದ ಕಪಿಲರಿಂದ ಪ್ರಣೀತವಾದ ಸಾಂಖ್ಯಶಾಸ್ತ್ರದಲ್ಲಿ, ಪ್ರೋಕ್ತಾನಿ- ಹೇಳಲ್ಪಟ್ಟವುಗಳಾಗಿಯೂ, ಏತಾನಿ-ನನ್ನಿಂದ ಮುಂದೇ ಹೇಳಲ್ಪಡಬಹುದಾಗಿಯೂ ಇರುವ,ಪಂಚಕಾರಣಾನಿ-ಐದುಕಾರಣಗಳನ್ನು, ಮೇನಿಬೋಧ-ನನ್ನಿಂದ ತಿಳಿದುಕೊಳ್ಳು. ... ... ... ‖೧೩‖

(ಶಂ‖ ಭಾ) ಪರಮಾರ್ಥದರ್ಶಿಯಾದ ಆತ್ಮಜ್ಞಾನಿಗೊಬ್ಬನಿಗೇನೆ ಸರ್ವಕರ್ಮಸನ್ಯಾಸಿತ್ವವು ಕೂಡುವುದಲ್ಲದೆ ದೇಹಾತ್ಮಬುದ್ಧಿಯುಳ್ಳವನಿಗೆ ಕರ್ಮತ್ಯಾಗವು ಕೂಡದೆಂಬುವುದಕ್ಕೆ ಈ ಶ್ಲೋಕದ ಮೊದಲು ಕಾರಣವನ್ನು ಹೇಳುತ್ತಾನೆ. "ಯಾವಾನರ್ಥ-ಉದಪಾನೆ,, (೨‖ ೪೬) "ಸರ್ವಂ ಕರ್ಮಾಖಿಲಂ ಪಾರ್ಥಜ್ಞಾನೇ ಪರಿಸಮಾಪ್ಯತೆ ,, (೪‖೩೪‖) "ಸರ್ವಂ ಜ್ಞಾನಪ್ಲವೇನೈವ,, (೪‖ ೩೬) ಇತ್ಯಾದಿ ಶ್ಲೋಕಗಳಲ್ಲಿ ಹೇಳಿರುವಂತೆ ಜ್ಞಾನನಿಷ್ಠಾದಶೆಯಲ್ಲಿ ಸರ್ವಫಲಗಳೂ ಅಡಗಿರುವುದರಿಂದ ಆತ್ಮಜ್ಞಾನಿಯೊಬ್ಬನೆ ಸರ್ವಕರ್ಮ ಸನ್ಯಾಸಕ್ಕೆ ಶಕ್ತನಲ್ಲದೆ ದೇಹಾತ್ಮಬುದ್ಧಿಯುಳ್ಳವರಿಗೆ ಕರ್ಮತ್ಯಾಗವು ಅಸಾಧ್ಯವೆಂಬದಾಗಿ (ಎಂದರೆ ಅಂ

ತ್ರವನು ಬಿಡದೆ ಕರ್ಮಗಳನ್ನು ಅವಶ್ಯಕವಾಗಿ ಅನುಷ್ಠಿಸಬೇಕು. ತಪ್ಪಿದರೆ ಭ್ರಷ್ಟನಾಗುವನು.) ಈ ಶ್ಲೋಕದ ಮೊದಲು ಹೇಳಲ್ಪಡುವುದು.॥೧೩॥

(ರಾ॥ ಭಾ) ಈಗ ಭಗವಚ್ಛಬ್ದವಾಚ್ಯನಾದ ಪುರುಷೋತ್ತಮನಾಗಿರುವ ಅಂತರ್ಯಾಮಿಯಲ್ಲಿ ಕರ್ತೃತ್ವಾನುಸಂಧಾನದಿಂದ ತನ್ನಲ್ಲಿ ಅಕರ್ತೃತ್ವಾನುಸಂಧಾನಪ್ರಕಾರವನ್ನು ಹೇಳುತ್ತಾರೆ. ಆ ಅನುಸಂಧಾನದಿಂದಲೆ ಫಲದಲ್ಲಿಯೂ ಕರ್ಮದಲ್ಲಿಯೂ ಮಮತಾತ್ಯಾಗವು ಸಿದ್ಧಿಸುವುದು ಅದುಹೇಗೆಂದರೆ ? ಪರಮ ಪುರುಷನು ಸ್ವಕೀಯನಾದ ಜೀವಾತ್ಮನಿಂದಲೂ ಸ್ವಕೀಯಗಳಾದ ಕರಣಕಳೇಬರಗಳಿಂದಲೂ, ತನ್ನಲೀಲಾದಿಪ್ರಯೋಜನಕ್ಕಾಗಿಯೆ ಸರ್ವಕಾರ್ಯಗಳನ್ನು ಮಾಡುತ್ತಾನೆ. ಆದುದರಿಂದ ಜೀವಾತ್ಮನ ಕ್ಷುನ್ನಿವೃತ್ತ್ಯಾದಿ (ಹಶಿವು ಅಡಗಿ ಹೋಗುವುದೇ ಮೊದಲಾದ) ಫಲವೂ ಅದಕ್ಕೆ ಸಾಧನವಾದ ಕರ್ಮವೂ ಪರಮಪುರುಷನದೆ, ಈ ಪ್ರಕಾರವಾಗಿ ಅನುಸಂಧಾನ ಮಾಡುವುದರಲ್ಲಿ ಸರ್ವಕರ್ಮಗಳಲ್ಲಿಯೂ ಅಕರ್ತೃತ್ವವು ತನಿಗೆ ಸಿದ್ಧಿಸುವಂತೆ ಕರ್ಮಗಳಲ್ಲಿ ಮಮತಾತ್ಯಾಗವೂ ಫಲಗಳಲ್ಲಿ ಮಮತಾ ತ್ಯಾಗವೂ ಸುಲಭವಾಗಿ ಸಿದ್ಧಿಸುವುದಷ್ಟೆ. ಮಹಾಬಾಹೋ- ಎಲೈ ಅರ್ಜುನನೆ, ಸಾಂಖ್ಯೇಕೃತಾಂತೆ-ವೈದಿಕವಾದ ತತ್ವಬುದ್ಧಿಯಿಂದಯೇರ್ಪಟ್ಟ ನಿರ್ಣಯದಲ್ಲಿ,ಸರ್ವಕರ್ಮಣಾಂ ಸಿದ್ಧಯೆ_ಸರ್ವಕಾರ್ಯಗಳ ಉತ್ಪತ್ತಿಗಾಗಿ, ಪ್ರೋಕ್ತಾನಿ-ಹೇಳಲ್ಪಟ್ಟಿರುವ, ಪಂಚೈತಾನಿ ಕಾರಣಾನಿ- ಈ ಐದು ಕಾರಣಗಳನ್ನು, ಮೆ-ನನ್ನ ದೆಶೆಯಿಂದ, ನಿಬೋಧ-ಅನುಸಂಧಾನ ಮಾಡು.(ತಿಳಿದುಕೊಳ್ಳು) "ಯಆತ್ಮನಿತಿಷ್ಠನ್ನಾತ್ಮನೊನ್ತರೊಯಮಾತ್ಮಾನವೇದಯಸ್ಯಾತ್ಮಾ ಶರೀರಂ ಯಆತ್ಮಾನ ಮಂತರೋಯಿ ಮಯತಿ ಸತಆತ್ಮಾನ್ತರ್ಯಾಮ್ಯಮೃತಃ_ಅನ್ತಃಪ್ರವಿಷ್ಟಶ್ಶಾಸ್ತಾಜನಾನಾಂಸರ್ವಾತ್ಮಾ" ಇತ್ಯಾದಿವಾಕ್ಯಗಳಿಂದ ಹುಟ್ಟುವ ವೈದಿಕ ಬುದ್ಧಿಯು ಶರೀರೇಂದ್ರಿಯ ಪ್ರಾಣಜೀವಾತ್ಮಾ ಎಂಬಿವುಗಳನ್ನು ಉಪಕರಣವಾಗಿ ಸ್ವೀಕರಿಸಿರುವ ಪರಮಾತ್ಮನೇಕರ್ತಾ ಎಂಬದಾಗಿ ನಿರ್ಣಯಿಸುವುದು. ... ॥೧೩॥

ಶ್ಲೋ॥ ಅಧಿಷ್ಠಾನಂತಥಾಕರ್ತಾಕರಣಂಚಪೃಥಗ್ವಿಧಂ।

ವಿವಿಧಾಶ್ಚಪೃಥಕ್ಚೇಷ್ಟಾದೈವಂಚೈವಾತ್ರಪಂಚಮಂ॥೧೪॥
ಶ್ಲೋ ॥ ಶರೀರವಾಙ್ಮನೋಭಿರ್ಯತ್ಕರ್ಮಪ್ರಾರಭತೇನರಃ |
ನ್ಯಾಯ್ಯಂವಾವಿಪರೀತಂವಾ ಪಂಚೈತೇತಸ್ಯಹೇತವಃ॥೧೫॥

ಪ॥ ಅಧಿಷ್ಠಾನಂ-ತಥಾ-ಕರ್ತಾ-ಕರಣಂ-ಚಪೃಥಗ್ವಿಧಂ | ವಿವಿಧಾ-ಚ-ಪೃಥಕ್-ಚೇಷ್ಟಾ-ದೈವಂ-ಚ-ಏವ-ಅತ್ರ-ಪಂಚಮಂ ॥ ಶರೀರವಾಙ್ಮನೋಭಿಃ-ಯತ್-ಕರ್ಮ-ಪ್ರಾರಭತೇ-ನರಃ | ನ್ಯಾಯ್ಯಂ-ವಾ-ವಿಪರೀತಂ-ವಾ-ಪಂಚ-ಏತೇ-ತಸ್ಯ-ಹೇತವಃ ॥

(ಅ ॥ ರಾ ॥ ಭಾ) ನ್ಯಾಯ್ಯಂವಾ-ಶಾಸ್ತ್ರಸಿದ್ಧವಾಗಿಯಾದರೂ, ವಿಪರೀತಂವಾ-ಶಾಸ್ತ್ರನಿಷಿದ್ಧವಾಗಿಯಾದರೂ, ಯತ್ಕರ್ಮ-ಯಾವಕರ್ಮವನ್ನು, ನರಃ-ಮನುಷ್ಯನು, ಶರೀರ ವಾಙ್ಮನೋಭಿಃ -ಶರೀರದಿಂದಲೂ, ವಾಕ್ಕಿನಿಂದಲೂ ಮನಸ್ಸಿನಿಂದಲೂ, ಪ್ರಾರಭತೇ - ಮಾಡಲುಪಕ್ರಮಿಸುವನೊ, ತಸ್ಯ - ಆ ಕಾರ್ಯಕ್ಕೆ, ಏತೇಪಂಚ - ಮುಂದೆಹೇಳಲ್ಪಡುವ ಈ ಐದೂ, ಹೇತವಃ - ಕಾರಣಗಳು. ಅಧಿಷ್ಠಾನಂ_ಶರೀರವು, ತಥಾ-ಹಾಗೆಯೆ, ಕರ್ತಾ - ಜೀವಾತ್ಮನು, ಪೃಥಗ್ವಿಧಂ-ಕರ್ಮನಿಷ್ಪತ್ತಿಯಲ್ಲಿ ಬೇರೆಬೇರೆ ವ್ಯಾಪಾರಗಳುಳ್ಳದ್ದಾದ, ಕರಣಂಚ-ವಾಕ್‌ಪಾಣಿಪಾದಪಾಯೂಪಸ್ಥಗಳೆಂಬ ಕರ್ಮೇಂದ್ರಿಯ ಪಂಚಕವೂ ಮನಸ್ಸೂ, ವಿವಿಧಾಶ್ಚಪೃಥಕ್ಚೇಷ್ಟಾ- ಪ್ರಾಣನು ಅಪಾನನು ವ್ಯಾನನು ಉದಾನನು ಸಮಾನನು ಎಂಬದಾಗಿ ಪಂಚ ವಿಧಭೇದವುಳ್ಳ ಪ್ರಾಣವಾಯುವಿನ ನಾನಾ ವಿಧವಾದ ವ್ಯಾಪಾರವೂ, ಅತ್ರ - ಈ ಕರ್ಮಹೇತು ಸಮುದಾಯದಲ್ಲಿ, ದೈವ ಮೇವಚ-ಈಶ್ವರನೆ,ಪಂಚಮಂ-ಐದನೇದು. ಸರ್ವಾಂತರ್ಯಾಮಿ ಯಾದಪರಮಾತ್ಮನು ಕರ್ಮನಿಷ್ಪತ್ತಿಯಲ್ಲಿ ಪ್ರಧಾನಹೇತು ವೆಂದರ್ಥವು. ಈ ಅರ್ಥವು " ಸರ್ವಸ್ಯಚಾಹಂ ಹೃದಿ ಸನ್ನಿವಿಷ್ಟೋಮತ್ತಸ್ಸ್ಮೃತಿ ರ್ಜ್ಞಾನ ಮಪೋಹನಂಚ ,, ಎಂಬದಾಗಿ ಹಿಂದೇ ಹೇಳಿದವಚನದಿಂದಲೂ " ಈಶ್ವರಸ್ಸರ್ವಭೂತಾನಾಂ ಹೃದ್ದೇಶೇ ರ್ಜುನತಿಷ್ಠತಿ " ಎಂಬದಾಗಿಈಅಧ್ಯಾಯದಲ್ಲಿಯೇ ಮುಂದೇ ಹೇಳುವ ಶ್ಲೋಕದಿಂದಲೂ ಸಿದ್ಧವಾಯಿತು. ಜೀವಾತ್ಮನ ಕರ್ತೃತ್ವವು ಪರಮಾತ್ಮನಿಂದ ಕೊಡಲ್ಪಟ್ಟಿರುವುದೆಂಬ ಅಂಶವು

“ಪರಾತ್ತು ತಚ್ಛ್ರುತೇಃ,, ಎಂಬ ಸೂತ್ರದಲ್ಲಿ ನಿರ್ಣಯಿಸಲ್ಪಟ್ಟಿರುವುದು. ಈ ಪ್ರಕಾರವಾಗಿ ಜೀವಾತ್ಮನ ಕರ್ತೃತ್ವವು ಪರಮಾತ್ಮಾಧೀನವಾಗಿದ್ದರೆ ಆ ಪ್ರಕಾರವಾಗಿ ಅತ್ಯಂತ ಪರತಂತ್ರನಾದ ಇವನನ್ನು ಕುರಿತು ಒಂದನ್ನು ಮಾಡೆಂದು ವಿಧಿಸುವಿಕೆಯೂ ಒಂದನ್ನು ಮಾಡಬೇಡವೆಂದು ನಿಷೇಧಿಸುವಿಕೆಯೂ ಆ ಪ್ರಕಾರವಾದ ನಿಷೇಧಾತಿ ಕ್ರಮದಿಂದ ಜೀವಾತ್ಮನನ್ನು ಶಿಕ್ಷಿಸುವಿಕೆಯೂ ಅಸಂಗತವಾಗಿರುವವುದರಿಂದ ವಿಧಿನಿಷೇಧ ಶಾಸ್ತ್ರಗಳು ಅನರ್ಥಕಗಳಾಗಲಾರವೋ ? ಎಂದರೆ ಈ ಚೋದ್ಯವನ್ನು ಸೂತ್ರಕಾರರೆ “ ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾ ವೈಯರ್ಥ್ಯಾದಿಭ್ಯಃ “ ಎಂಬೀ ಸೂತ್ರದಿಂದ ಪರಿಹಾರಮಾಡಿರುವರು. ಪರಮಾತ್ಮನಿಂದ ಕೊಡಲ್ಪಟ್ಟವುಗಳಾಗಿಯೂ ಆ ಪರಮಾತ್ಮನನ್ನೆ ಆಧಾರವಾಗಿ ವುಳ್ಳದ್ದಾಗಿಯೂ ಇರುವ ಕರಣಕಳೇಬರಾದಿಗಳಿಂದ ಜೀವಾತ್ಮನು ತಾನೆ ಆ ಪರಮಾತ್ಮನನ್ನೆ ಆಧಾರವಾಗಿ ವುಳ್ಳವನಾಗಿಯೂ ಅವನಿಂದಲೆ ಕೊಡಲ್ಪಟ್ಟ ಶಕ್ತಿಯುಳ್ಳವನಾಗಿಯೂ, ಇರುತ ಕಾರ್ಯನಿಷ್ಪತ್ತಿಗಾಗಿ ತನ್ನ ಇಚ್ಛೆಯಿಂದಲೆ ಇಂದ್ರಿಯ ಶರೀರಗಳನ್ನು ಪ್ರೇರಿಸುವುದೆಂಬ ಪ್ರಯತ್ನವನ್ನು ಆರಂಭಿಸುವನು. ಆವಾಗ ಅವನಿಗೆ ಅಂತರಾತ್ಮನಾದ ಪರಮಾತ್ಮನು ಆ ವಿಷಯದಲ್ಲಿ ಅನುಮತಿಯನ್ನು ಮಾಡಿ ಅವನನ್ನೂ ಪ್ರವರ್ತಿಸುವಂತೆ ಮಾಡುತ್ತಾನೆ. ಆದ್ದರಿಂದ ಪ್ರಥಮ ಪ್ರವೃತ್ತಿಯಲ್ಲಿ ಜೀವಾತ್ಮನು ಸ್ವೇಚ್ಛೆಯಿಂದ ಪ್ರವರ್ತಿಸುವುದರಿಂದ ವಿಧಿನಿಷೇಧಾನು ವೃತ್ತ್ಯ ತಿವೃತ್ತಿಗಳಲ್ಲಿ ಫಲದಾನಮಾಡುವಿಕೆಯೂ ಶಿಕ್ಷಿಸುವಿಕೆಯೂ ಯುಕ್ತವೆ ಎಂದರಿಯಬೇಕು. ಈ ಚೋದ್ಯಕ್ಕೆ ಸೂತ್ರಕಾರರ ನಿರ್ವಾಹವಿದೆಂದರಿಯಬೇಕು. ॥೧೪॥೧೫॥

(ಶಂ॥ ಭಾ) ಹಿಂದಿನ ಶ್ಲೋಕದಲ್ಲಿ ಹೇಳಿರುವ ಕಾರಣಗಳ್ಯಾವವೆಂದರೆ ಅದನ್ನು ವಿವರಿಸುತ್ತಾನೆ. ಅಧಿಷ್ಠಾನಂ-ಇಚ್ಛಾದ್ವೇಷ ಸುಖದುಃಖಜ್ಞಾನಾದಿಗಳು ಪ್ರಕಾಶಿಸುವುದಕ್ಕಾಶ್ರಯವಾದ ದೇಹವು, ಕರ್ತಾ ಉಪಾಧಿ ಸ್ವರೂಪನಾದ ಭೋಕ್ತನು, ಕರಣಂಚ- ( ಚರ್ಮವು ಕಣ್ಣು ಕಿವಿ ನಾಲಿಗೆ ಮೂಗು ಎಂಬೀ ಜ್ಞಾನೇಂದ್ರಿಯಗಳೈದು ವಾಕ್ಕು ಹಸ್ತ

ವು ಪಾದವು ಗುದಸ್ಥಾನವು ಉಪಸ್ಥವು ಎಂಬೀ ಕರ್ಮೇಂದ್ರಿಯಗಳೈದೂ, ಮನಸ್ಸು ಬುದ್ಧಿ ಎಂಬೀ) ಹನ್ನೆರಡು ಇಂದ್ರಿಯಗಳೂ, ದೈವಂ ಚೈವ - ಇಂದ್ರಿಯಾದಿ ನಿಯಾಮಕರಾದ ಸೂರ್ಯಾದಿಗಳೂ.॥೧೪॥ಶರೀರವು ವಾಕ್ಕು ಮನಸ್ಸು ಎಂಬೀ ಮೂರು ಕರಣಗಳು.( ಇಂದ್ರಿಯಗಳು ಮಾತ್ರವೆ ಈ ಶ್ಲೋಕದಲ್ಲಿ ಹೇಳಲ್ಪಟ್ಟು ಅನ್ಯಗಳಾದ ಕಿವಿ ಮೊದಲಾದವುಗಳು ಯಿತಕ್ಕೆ ಹೇಳಲ್ಪಡಲಿಲ್ಲವು. ದರ್ಶನ ಶ್ರವಣಾದಿಗಳು ಕಣ್ಣು ಕಿವಿಮೊದಲಾದ ಇಂದ್ರಿಯಗಳ ಕಾರ್ಯವಾಗಿರಲು ಅವುಗಳನ್ನಿಲ್ಲಿ ಹೇಳದೆ ಇರುವದಕ್ಕೆ ಕಾರಣವೇನೆಂದರೆಕಣ್ಣು ಮೊದಲಾದವುಗಳು ಶರೀರಾದಿಗಳಿಗೆ ಅಂಗಭೂತಗಳಾಗಿರುವುವು. ಪ್ರಾಧಾನ್ಯವಿವಕ್ಷೆಯಿಂದ ಶರೀರ ವಾಙ್ಮನಸ್ಸುಗಳನ್ನು ಮಾತ್ರವೆ ಇಲ್ಲಿ ಹೇಳಿರುವೆವು. ಅದು ಹೇಗೆಂದರೆ ರೂಪರಸಗಂಧಾದಿಗಳು ಕಣ್ಣು ಮೊದಲಾದವುಗಳಿಗೆ ವಿಷಯವಾಗಿದ್ದರೂ ಅವುಗಳನ್ನು ಗ್ರಹಿಸಿ ಅನುಭವಿಸುವಕಾರ್ಯವು ಮನಸ್ಸಿನ ದಾಗಿರುವುದು. ಮನಸ್ಸು, ಕಣ್ಣುಮೊದಲಾದವುಗಳಿಂದ ಪ್ರವೃತ್ತಿಸದೆ ಹೋದರೆ ಕಣ್ಣು ಕಿವಿ ಮೊದಲಾದವುಗಳು, ತ ಮ್ಮ ತಮ್ಮ ಕಾರ್ಯಗಳಲ್ಲಿ ಯೋಗ್ಯವಾಗಲಾರವು. ಆದುದರಿಂದ ಮುಖ್ಯಗಳಾದ ಶರೀರವಾಙ್ಮನಸ್ಸುಗಳು ಇಲ್ಲಿ ಹೇಳಲ್ಪಟ್ಟಿರುವುವು.ಉಳಿದವುಗಳೆಲ್ಲವೂ ಇವುಗಳಲ್ಲಡಗಿರುವುವು. ಆದುದರಿಂದಲೆ ಅವು ಹೇಳಲ್ಪಡಲಿಲ್ಲವು.)ಮನುಷ್ಯನು ಶರೀರ ವಾಙ್ಮನಸ್ಸುಗಳಿಂದ ಶಾಸ್ತ್ರೋಕ್ತವಾದರೂ ಅಶಾಸ್ತ್ರೀಯವಾದರೂ ಯಾವಕಾರ್ಯವನ್ನಾರಂಭಿಸುವನೊ ಆಕರ್ಮಕ್ಕೆಹಿಂದೆಹೇಳಿರುವ ಅಧಿಷ್ಠಾನಾದಿಗಳಾದ ಐದೂ ಕಾರಣಗಳಾಗಿರುವು ವೆಂದೀ ಶ್ಲೋಕತಾತ್ಪರ್ಯವು. ... ... ॥೧೫॥

(ಗೀ॥ ವಿ) ಅಧಿಷ್ಠಾನಂ-ದೇಹವು ಭೂಮಿ ಮೊದಲಾದವುಗಳು, ಕರ್ತಾ-(ಮು) ಜೀವನಿಗೆ ಕರ್ತೃತ್ವವಿಲ್ಲವೆಂಬದಾಗಿ ಪೂರ್ವವೇ ಹೇಳಲ್ಪಟ್ಟಿರುವುದರಿಂದ ಕರ್ತಾ ಆದವನು ವಿಷ್ಣುವು, ಕರಣಂಚ- (ಮು) ಇಂದ್ರಿಯಗಳು, (ಗೀ॥ ವಿ) ಜ್ಞಾನೇಂದ್ರಿಯಗಳು ಅಥವಾ ಸ್ರುಕ್ ಸ್ರುವಾದಿಗಳು, ಚೇಷ್ಟಾಃ-ಹಸ್ತವ್ಯಾಪಾರವು ಅಥವಾ ಮಾನಸಕ್ರಿಯೆಯಾದ ಧ್ಯಾನವೂ ತದ್ವ್ಯತಿರಿಕ್ತವಾದ ಅವಾಂತರ ಕ್ರಿಯೆಗಳೂ, ದೈವಂ

ಚೈವ-(ವು) ಅದೃಷ್ಟವೆಂಬ ಪುಣ್ಯಪಾಪವು, (ಗೀ॥ ವಿ) ಆದೃಷ್ಟವು ಅಥವಾ ವಿಷ್ಣುವು. ... ... ॥೧೪॥

ಶ್ಲೋ॥ ತತ್ರೈವಂಸತಿಕರ್ತಾರಮಾತ್ಮಾನಂಕೇವಲಂತು
ಯಃ। ಪಶ್ಯತ್ಯಕೃತಬುದ್ಧಿತ್ವಾನ್ನಸಪಶ್ಯತಿದುರ್ಮತಿಃ ॥
॥೧೬॥

ಪ॥ ತತ್ರ-ಏವಂ-ಸತಿ-ಕರ್ತಾರಂ-ಆತ್ಮಾನಂ-ಕೇವಲಂ-ತು-ಯಃ । ಪಶ್ಯತಿ-ಅಕೃತಬುದ್ಧಿತ್ವಾತ್-ನ-ಸಃ-ಪಶ್ಯತಿ-ದುರ್ಮತಿಃ ॥

(ಅ॥ ರಾ॥ ಭಾ) ಏವಂಸತಿ-ವಸ್ತುತಃ ಜೀವಾತ್ಮನಕರ್ತೃತ್ವವು ಪರಮಾತ್ಮನ ಅನುಮತಿ ಪೂರ್ವಕವಾಗಿರಲಾಗಿ, ತತ್ರ-ಅಕರ್ಮ ವಿಷಯದಲ್ಲಿ, ಅತ್ಮಾನಂತು ಕೇವಲಂ-ತನ್ನನ್ನೇ, ಕರ್ತಾರಂ-ಕರ್ತಾವಾಗಿ,ಯಃ ಯಾವನಾದರೆ, ಪಶ್ಯತಿ-ಆಲೋಚಿಸುತ್ತಾನೆಯೊ, ಸದುರ್ಮತಿಃ- ವಿಪರೀತಬುದ್ಧಿಯುಳ್ಳವನಾದ ಅವನು, ಅಕೃತಬುದ್ಧಿತ್ವಾತ್ - ಯಥಾವಸ್ಥಿತ ಬುದ್ಧಿಯುಂಟಾಗದವನಾದುದರಿಂದ, ನಪಶ್ಯತಿ - ಕರ್ತಾ ಆದವನನ್ನು ಯಥಾರ್ಥವಾಗಿ ತಿಳಿದವನಲ್ಲವು. ... ॥೧೬॥

(ರಾ॥ ಭಾ॥ ಗೀ॥ ವಿ॥ ಈ ಎರಡೂ ಏಕಾರ್ಥಕವೆ)

(ಶಂ॥ ಭಾ) ತತ್ರ-ಆ ಕರ್ಮ ವಿಷಯದಲ್ಲಿ, ಏವಂಸತಿ-ಹಿಂದೇ ಹೇಳಿರುವ ಐದೂ ಕಾರಣವಾಗಿರಲಾಗಿ, ಕೇವಲ ಮಾತ್ಮಾನಂತು-ನಿರುಪಾಧಿಕನಾಗಿಯೂ ಸಂಗರಹಿತನಾಗಿಯೂ ಇರುವ ಆತ್ಮನನ್ನು, ಕರ್ತಾರಂ - ಕರ್ಮಗಳನ್ನು ಮಾಡುವಂತವನೆಂಬದಾಗಿ, ಯಃ ಪಶ್ಯತಿ-ಯಾವನು ನೋಡುತ್ತಾನೆಯೊ, ದುರ್ಮತಿಃ-(ದೇಹಾತ್ಮಭೇದಜ್ಞಾನವಿಲ್ಲದೆ ದೇಹವೇ ಆತ್ಮವೆಂಬ ಜ್ಞಾನವುಳ್ಳವನಾಗಿರುವುದರಿಂದಲೂ ಒಂದು ಕಾಲದಲ್ಲಿ ದೇಹಾತ್ಮಭೇದ ಜ್ಞಾನವುಳ್ಳವನಾಗಿದ್ದರೂ ತಾನೇ ಕರ್ತಾ ಎಂಬದಾಗಿ ಭ್ರಮಿಸುವುದರಿಂದಲೂ ಸಿಂದಾಯೋಗ್ಯವಾಗಿಯೂ ವಿಪರೀತವಾದದ್ದಾಗಿಯೂ ಜನನ ಮರಣಗಳಿಗೆಕಾರಣವಾಗಿಯೂ ಇರುವ ಬುದ್ಧಿಯುಳ್ಳವನಾಗಿರುವುದರಿಂದ) ದುರ್ಬುದ್ಧಿಯುಳ್ಳ, ಸಃ-ಅವನು, ಅಕೃತ ಬುದ್ಧಿತ್ವಾತ್-ಆಚಾರ್ಯೋಪದಿಷ್ಟವಾದ ಶ್ರವಣಾದಿಗಳಿಂದ ಸಂಸ್ಕರಿಸಲ್ಪಡದ

ಬುದ್ಧಿಯುಳ್ಳವನಾಗಿರುವುದರಿಂದ, ನಪಶ್ಯತಿ- ಕರ್ಮಸ್ವರೂಪವನ್ನಾದರೂ ಆತ್ಮಸ್ವರೂಪವನ್ನಾದರೂ ತಿಳಿಯಲಾರನು. ಹಿಂದಿನ ಶ್ಲೋಕಗಳಿಂದ ಹೇಳಲ್ಪಟ್ಟಿರುವಂತೆ ಅಧಿಷ್ಠಾನಾದಿಯಾದ ಐದೂ ಸಮಸ್ತಕರ್ಮಕ್ಕೂ ಕಾರಣವಾಗಿರುವಲ್ಲಿ ಗುರೂಪದಿಷ್ಟಶ್ರವಣಮನನಾದಿಗಳಿಂದ ಸಂಸ್ಕರಿಸಲ್ಪಡದ ಬುದ್ಧಿಯುಳ್ಳ ಅಜ್ಞಾನು ನಿರುಪಾಧಿಕನಾಗಿಯೂ ಸಂಗರಹಿತನಾಗಿಯೂ ಇರುವ ಆತ್ಮನನ್ನು ಕರ್ತಾ ಎಂಬದಾಗಿ ತಿಳಿಯುವನು. ಹೇಗೆಂದರೆ, "ದೃಶ್ಯತೇ ಭ್ರೇಷುಧಾವತ್ಸುಧಾವನ್ನಿವಯಥಾಶಶೀ" (ಮೇಘಗಳು ಓಡುತಲಿರುವಲ್ಲಿ ಚಂದ್ರನನ್ನು ಓಡುವಂತವನನ್ನಾಗಿ ತಿಳಿಯುವುದು ಹೇಗಾದರೆ ಅವಿವೇಕ ಬುದ್ಧಿಕೃತವೋ) ಇತ್ಯಾದಿ ದೃಷ್ಟಾಂತವನ್ನಿಲ್ಲಿಯೂ ತಿಳಿಯಬೇಕು. ... ||೧೬||

ಶ್ಲೋ || ಯಸ್ಯನಾಹಂಕೃತೋಭಾವೋಬುದ್ಧಿರ್ಯಸ್ಯನಲಿ
ಪ್ಯತೇ | ಹತ್ವಾಪಿಸಇಮಾಁಲ್ಲೋಕಾನ್ನಹಂತಿನನಿಬಧ್ಯ
ತೇ || ... ... ... ||೧೭||

ಪ|| ಯಸ್ಯ-ನ-ಅಹಂಕೃತಃ-ಭಾವಃ-ಬುದ್ಧಿಃ-ಯಸ್ಯ-ನ-ಲಿಪ್ಯತೇ| ಹತ್ವಾ-ಅಪಿ-ಸಃ-ಇಮಾನ್-ಲೋಕಾನ್-ನ-ಹಂತಿ-ನ-ನಿಬಧ್ಯತೇ ||

(ಅ|| ರಾ|| ಭಾ||) ಯಸ್ಯ-ಯಾವಪುರುಷನ, ಭಾವಃ- ಕರ್ತೃತ್ವವಿಷಯವಾದ ಮನೋವೃತ್ತಿವಿಶೇಷವು, ನಾಹಂಕೃತಃ- ಅಹಂಕಾರದೊಡನೆ ಸೇರಲಿಲ್ಲವೋ, ಪರಮಪುರುಷ ಕರ್ತೃತ್ವಾನುಸಂಧಾನದಿಂದ ನಾನು ಮಾಡುತ್ತೇನೆಂಬ ಬುದ್ಧಿಯು ಯಾವನಿಗಾದರೆ ಇಲ್ಲವೋ ಎಂದರ್ಥವು. ಯಸ್ಯಬುದ್ಧಿರ್ನಲಿಪ್ಯತೇ-ಯಾವನ ಬುದ್ಧಿಯಾದರೆಲೇಪಿಸುವುದಿಲ್ಲವೋ, ಈ ಕರ್ಮದಲ್ಲಿ ನಾನು ಕರ್ತಾ ಅಲ್ಲವಾದುದರಿಂದ ಇದರ ಫಲವು ನನ್ನೊಡನೆ ಸೇರಲಾರದು, ಈ ಕರ್ಮವು ನನ್ನದಲ್ಲವು ಎಂಬದಾಗಿ ಯಾವನಿಗಾದರೆ ಬುದ್ಧಿಯುಂಟಾಗುವುದೋ ಎಂದರ್ಥವು. ಸಃ-ಅವನು, ಇಮಾನ್ ಲೋಕಾನ್- ಈ ಮೂರುಲೋಕಗಳನ್ನೂ, ಹತ್ವಾಪಿ- ಸಂಹರಿಸಿದವನೇ ಆದರೂ, ಈಗ ಎದುರಾಗಿ ನಿಂತಿರುವ ಭೀಷ್ಮದ್ರೋಣಾದಿಗಳನ್ನು ಮಾತ್ರವೇ ಅಲ್ಲವು, ಸಮಸ್ತಲೋಕಗಳನ್ನು ಸಂಹರಿಸಿದರೂ ಎಂದರ್ಥವು. ನಹಂತಿ- ಅವುಗಳನ್ನು ಕೊಂದವನಲ್ಲವು, ನನಿಬಧ್ಯತೇ- ಇದರ ಫಲವಾದಬಂಧನನ್ನು ಅನುಭವಿಸುವುದಿಲ್ಲವು. || ೧೭ ||

(ಶಂ॥ ಭಾ) ಸಂಹರಿಸಿದವನನ್ನು ಸಂಹರಿಸಿದವನಲ್ಲವೆಂಬುದಾಗಿ ಹೇಗೆ ಹೇಳಬಹುದೆಂದರೆ ದೇಹವೇ ಆತ್ಮವೆಂತಲೂ ನಾನೇ ಸಕಲವನ್ನು ಮಾಡುತ್ತೇನೆಂತಲೂ ತಿಳಿಯುವಂತವನು ಯಾವನೋ ಅಂತವನ ವಿಷಯದಲ್ಲಿ ಸಂಹರಿಸುವಂತವನು ಅವನೇ ಎಂಬದಾಗಿ ಹೇಳುವಿಕೆಯು ಸಾಧಾರಣವಾಗಿದ್ದರೂ ಆತ್ಮನು ಶುದ್ಧನು ಕೇವಲ ಸಾಕ್ಷಿಮಾತ್ರನು ಕರ್ತೃತ್ವವು ಅವನಿಗಿಲ್ಲವು, ಕರ್ತೃತ್ವಾದಿಗಳು ದೇಹಾದಿಗಳಿಗೆ ಸೇರಿದವು ಎಂಬ ಆತ್ಮದೃಷ್ಟಿಯುಳ್ಳವನು ಸಂಹಾರ ಮಾಡುವಂತವನೆಂಬದಾಗಿ ಆತ್ಮದೃಷ್ಟಿರಹಿತನಿಗೆ ಕಾಣಲ್ಪಟ್ಟರೂ ಸಂಹಾರಾದಿ ರೂಪವಾದ ಕ್ರಿಯೆಯು ದೇಹಾದಿಗಳಿಗೆ ಸೇರಿರುವುದರಿಂದ ಆತ್ಮಜ್ಞಾನಿಗೆ ಅಂತಹ ಕರ್ಮಗಳ ದೋಷಗಳಂಟಲಾರವು. ಕೇವಲಾತ್ಮನಿಗೆ ಕರ್ತೃತ್ವವಿಲ್ಲವೆಂಬುದರಿಂದ ದೇಹಾದಿ ಯುಕ್ತನಾದ ಆತ್ಮನಿಗೆ ಕರ್ತೃತ್ವವುಂಟೆಂದು ತೋರುತ್ತದೆ ಯಲ್ಲವೆ ? ಆ ಪ್ರಕಾರ ತೋರುವುದರಿಂದ ಕರ್ತೃತ್ವವಿಲ್ಲವೆಂಬದಾಗಿ ಹೇಗೆ ಹೇಳಬಹುದು ? ಎಂದರೆ, ಆತ್ಮನು ಅಸಂಗ ಸ್ವಭಾವವುಳ್ಳವನಾಗಿರುವುದರಿಂದಲೂ ಸಂಗವೆಂಬುವುದು ಅವನಲ್ಲಾ ರೋಪಿತವಾಗಿರುವುದರಿಂದಲೂ ಕರ್ತೃತ್ವವುಂಟೆಂದು ಹೇಳಲು ಸಾಧ್ಯವಿಲ್ಲವು. ಅವಿದ್ಯಾ ಸಂಬಂಧದಿಂದ ಕರ್ತಾ ಎಂಬದಾಗಿ ತೋರುವನು. ಶುದ್ಧಾತ್ಮನಿಗೆ ಕರ್ತೃತ್ವವನ್ನು ಹೇಳುವುದಕ್ಕೆ ಅವಕಾಶವೆ ಇಲ್ಲವು. ಯಾತಕ್ಕೆಂದರೆ? ಹಿಂದೆ ಹೇಳಿರುವ ಅಧಿಷ್ಠಾನಾದಿಯಾದ ಐದರಲ್ಲಿಯೂ ಅವನೊಬ್ಬನಲ್ಲವು. ಅವನನ್ನು ಕರ್ಮಗಳನು ಸರಿಸುವುದೂ ಇಲ್ಲವು. "ಅವ್ಯಕ್ತೋಯಮಚಿಂತ್ಯೋಯಮವಿಕಾರ್ಯೋಯಮುಚ್ಯತೆ ,, (೨॥ ೨೫) "ಶರೀರಸ್ಥೋಪಿಕೌಂತೇಯನ ಕರೋತಿನಲಿಪ್ಯತೆ,, (೧೩॥ ೩೨) ಎಂಬೀಶ್ಲೋಕಗಳಲ್ಲಿ ಈ ಅರ್ಥವು ಹಿಂದೆಯೇ ವಿವರಿಸಲ್ಪಟ್ಟಿರುವುದು. ಅವಿದ್ಯಾ ಸಂಬಂಧದಿಂದ ಆತ್ಮನಿಗೆ ಕರ್ತೃತ್ವವು ಹೇಗೆ ಆರೋಪಿಸಲ್ಪಡುವುದೆಂದರೆ ಮುತ್ತಿನ ಚಿಪ್ಪಿಯಲ್ಲಿ ಬೆಳ್ಳಿ ಎಂಬ ಭ್ರಮೆಯಂತೆಯೆ ಆ ರೋಪಿಸಲ್ಪಡುವುದೆಂದರಿಯಬೇಕು. ಕೇವಲನೆಂಬ ಶುದ್ಧಾತ್ಮಜ್ಞಾನಿಗೇನೆ ಸರ್ವಕರ್ಮಸನ್ಯಾಸವು ಹೇಳಲ್ಪಟ್ಟಿರುವುದು. "ಯಏನಂವೇತ್ತಿಹಂತಾರಂ ,, (೨॥ ೧೯) "ವೇದಾವಿನಾಶಿನಂನಿತ್ಯಂ ,, (೨॥ ೨೧) ಎಂಬೀ ಶ್ಲೋಕಗಳಿಂದ ಶುದ್ಧಾತ್ಮಸ್ವರೂ

ವನಾದ ಆತ್ಮಜ್ಞಾನಿಗೆ ಸರ್ವಕರ್ಮಸನ್ನ್ಯಾಸವನ್ನಾರಂಭಿಸಿ ಅನಂತರದಲ್ಲ ನೇಕ ಪ್ರಕರಣಗಳಲ್ಲಿ ಈ ವಿಷಯವನ್ನು ಕುರಿತು ವಿಸ್ತಾರವಾಗಿ ಹೇಳಿ "ನಹಂತಿನನಿಬಧ್ಯತೆ" ಎಂಬದಾಗಿ ಈ ಶ್ಲೋಕದಲ್ಲಿಪ್ರಯುಕ್ತವಾದ ಪದಗಳಿಂದ ಪೂರ್ತಿಮಾಡಲ್ಪಟ್ಟಿತು. ಆ ಪ್ರಕಾರವೆ ದೇಹಾಭಿಮಾನಿ ಯಾದ ಅವಿವೇಕಿಗೆ ಸಕಲ ಕರ್ಮಗಳೂ ಉಂಟೆಂಬದಾಗಿ ಹೇಳಿ ಇಲ್ಲಿ ಯೇ ಸಿದ್ಧಾಂತ ಮಾಡಲ್ಪಟ್ಟಿರುವುದು. ... ||೧೭||

(ಶ್ರೀ) ಕರ್ಮವನ್ನು ಮಾಡುವುವು ದೇಹೇಂದ್ರಿಯಾದಿಗಳಲ್ಲದೆ ನಿಸ್ಸಂಗನಾದ ಆತ್ಮನು ಕರ್ಮವನ್ನು ಮಾಡುವುದಿಲ್ಲವೆಂತಲೂ ತಾನು ಕರ್ತಾ ಅಲ್ಲವೆಂತಲೂ ತಿಳಿದ ಆತ್ಮಜ್ಞಾನಿಯು ಸಂಹಾರರೂಪವಾದ ಕರ್ಮ ವನ್ನು ಮಾಡಿದರೂ ಅನ್ಯರಿಗೆ ಅವನಲ್ಲಿ ಸಂಹಾರರೂಪವಾದ ಕ್ರಿಯೆಯು ಇರುವಂತೆ ತೋರಿದರೂ ಆತ್ಮದೃಷ್ಟಿಯುಳ್ಳವನು ಸಂಹಾರ ಕ್ರಿಯೆ ಯನ್ನು ತನ್ನದೆಂತಲಾದರೂ ತಾನು ಅದನ್ನು ಮಾಡಿದವನೆಂತಲಾದ ರೂ ತಿಳಿಯಲಾರನಾದುದರಿಂದ ಸಂಹಾರ ಕ್ರಿಯೆಯಿಂದುಂಟಾದ ದೋ ಷವು ಅವನಿಗಿಲ್ಲವು. ಆ ಪ್ರಕಾರವಾಗಿರುವಲ್ಲಿ ನಿತ್ಯಕರ್ಮದಿಂದ ಇವನು ಬಂಧವನ್ನು ಹೊಂದುವನೆಂಬದಾಗಿ ಹೇಳಲವಕಾಶವೇ ಇಲ್ಲವು. ||೧೭||

(ಗೀ|| ವಿ) ಲೋಕಸಂಹಾರಾರ್ಥವಾಗಿಯೇ ಹುಟ್ಟಿರುವ ರುದ್ರ ನು ಯಮನು ಇವರಿಗೆ ಕೊಲ್ಲುವುದರಿಂದುಂಟಾದ ದೋಷವಿಲ್ಲವೆಂಬು ದು ಈ ಶ್ಲೋಕತಾತ್ಪರ್ಯವಾಗಿರುವುದು. ಅನ್ಯರ ವಿಷಯದಲ್ಲಿಯೊ ಎಂದರೆ ಎಷ್ಟು ಬ್ರಹ್ಮಜ್ಞಾನಿಗಳಾಗಿದ್ದರೂ ಸ್ವಲ್ಪವಾದರೂ ಅಭಿಮಾ ನಾಹಂಕಾರಗಳಿಲ್ಲದೇ ಹೋಗಲಾರದು. ಮಹಾ ಬ್ರಹ್ಮಜ್ಞಾನಿಯಾದ ದೇವೇಂದ್ರನನ್ನು ಕೂಡ ವೃತ್ರಾಸುರ ಸಂಹಾರವಿಷಯದಲ್ಲಿ ಬ್ರಹ್ಮಹ ತ್ಯಾದೋಷವು ಪೀಡಿಸಲಿಲ್ಲವೇ? ಆದ್ದರಿಂದ ಎಂಥಾಜ್ಞಾನಿಯನ್ನಾದರೂ ಸಂಹಾರ ಪ್ರಯುಕ್ತವಾದ ದೋಷವು ಬಿಡಲಾರದು. ಆದುದರಿಂದ ಈ ಶ್ಲೋಕವು ಜ್ಞಾನಿವಿಷಯವಾಗಲಾರದು. ಈಪ್ರಕಾರವಾಗಿಕರ್ತೃತ್ವಾಭಿ ಮಾನಿಯು ಹಿಂದೆಯನ್ನೂ ಅಂತಹ ಅಭಿಮಾನವಿಲ್ಲದವನನ್ನು ತಿಯನ್ನೂ ಹೇಳುವುದರಿಂದ ಅಭಿಮಾನ ತ್ಯಾಗವೆ ಸನ್ನ್ಯಾಸಶಬ್ದಾರ್ಥವೆಂಬ

ದಾಗಿ ತಿಳಿಯಬರುವುದು.(ಇದಕ್ಕೆ ಸಮ್ಮತಿಯನ್ನು " ಸ್ವಾತನ್ತ್ರ್ಯ ವಿಶ್ವೇರೆ ವೇತ್ತಿ ನೈವಾತ್ಮನಿಕದಾಚನ । ಈಶ್ವರಾಧೀನವೇವಾತ್ಮ ಸ್ವಾತನ್ತ್ರ್ಯಂತುಜಡಾಸ್ಪೃತಿ ॥ ತಾರತಮ್ಯೇನ ಲಕ್ಷ್ಮ್ಯಾದೇರ್ಜೀವಾಸ್ಪ್ರತಿಚಸರ್ವಶಃ। ಯಸ್ತದರ್ಥಂ ಸಮುತ್ಪನ್ನೋಯಥಾರ್ಥದ್ಯೋಯಥಾಯಮಃ ॥ ಹತ್ವಾಪಿಸ ಇಮಾಁಲ್ಲೋಕಾನ್ನಹಂತಿನನಿಬಧ್ಯತೇ । ಅಜ್ಞಾಸ್ತದರ್ಥಂಜಾತೋಪಿಬದ್ಧ್ಯತೇ ದೈತ್ಯವದ್ಧ್ರುವಂ॥ ಅಪರೋಕ್ಷದೃಜ್ಞಜಾತೋಯಸ್ತದರ್ಥಂಮುಕ್ತಿಗಂಸುಖಂ ॥ ಹಿಂಸೇತ್ತ್ವಪರೋಕ್ಷಜ್ಞಃ ಕಿಂಚಿದ್ದೋಷೇಣಲಿಪ್ಯತೇ,,ಎಂಬದಾಗಿ ಗೀತಾತಾತ್ಪರ್ಯದಲ್ಲರಿಯಬೇಕು.॥೧೭॥

ಶ್ಲೋ॥ ಜ್ಞಾನಂಜ್ಞೇಯಂಪರಿಜ್ಞಾತಾತ್ರಿವಿಧಾಕರ್ಮಚೋ
ದನಾ ।ಕರಣಂಕರ್ಮಕರ್ತೇತಿತ್ರಿವಿಧಃಕರ್ಮಸಂಗ್ರಹಃ॥೧೮॥

ಪ॥ ಜ್ಞಾನಂ-ಜ್ಞೇಯಂ-ಪರಿಜ್ಞಾತಾ-ತ್ರಿವಿಧಾ-ಕರ್ಮಚೋದನಾ। ಕರಣಂ-ಕರ್ಮ-ಕರ್ತಾ-ಇತಿ-ತ್ರಿವಿಧಃ-ಕರ್ಮಸಂಗ್ರಹಃ ॥

(ಅ॥ ರಾ॥ ಭಾ) ಇನ್ನುಮುಂದೆ ಅಕರ್ತೃತ್ವಾನುಸಂಧಾನವು ಸತ್ವಗುಣಾಭಿವೃದ್ಧಿಯಿಂದಲೆ ಉಂಟಾಗಬೇಕಾಗಿರುವುದರಿಂದ ಸತ್ವಗುಣವು ಉಪಾದೇಯವೆಂಬ ಅಂಶವನ್ನು ತಿಳಿಸುವುದಕ್ಕಾಗಿ ಸತ್ವಾದಿಗುಣಕೃತವಾದ ವೈಷಮ್ಯವನ್ನು ವಿಸ್ತರಿಸುವಂತವರಾಗಿ ಮೊದಲು ಕರ್ಮವಿಧಿಪ್ರಕಾರವನ್ನು ಹೇಳುತ್ತಾರೆ. ಜ್ಞಾನಂ-ಮಾಡತಕ್ಕ ಕರ್ಮವಿಷಯವಾದ ಜ್ಞಾನವು, ಜ್ಞೇಯಂ-ಮಾಡತಕ್ಕ ಕರ್ಮವು, ಪರಿಜ್ಞಾತಾ-ಅದನ್ನರಿಯತಕ್ಕ ಜೀವಾತ್ಮನು, (ಇತಿ-ಎಂಬದಾಗಿ,) ಕರ್ಮಚೋದನಾ-ಜ್ಯೋತಿಷ್ಟೋಮಾದಿ ಕರ್ಮವಿಧಿಯು ಮೂರುವಿಧವಾಗಿರುವುದು. ಜ್ಞಾನಜ್ಞೇಯಜ್ಞಾತೃವಿಷಯವಾಗಿರುವುದು ಕರ್ಮವಿಧಿಯು ಎಂದರ್ಥವು, ಕರಣಂ-ತುಪ್ಪವೇ ಮೊದಲಾದ ಸಾಧನ ದ್ರವ್ಯಾದಿ ಸಮುದಾಯವು, ಕರ್ಮ-ಯಾಗಾದಿಕ್ರಿಯೆಯು, ಕರ್ತಾ-ಅದನ್ನನುಷ್ಠಿಸುವ ಜೀವಾತ್ಮನು, ಇತಿ-ಈ ರೀತಿಯಾಗಿ, ಕರ್ಮಸಂಗ್ರಹಃ-ಅನುಷ್ಠೇಯವಾದ ಕರ್ಮಸಮುದಾಯವು, ತ್ರಿವಿಧಃ-ಮೂರುವಿಧವಾಗಿರುವುದು. ... ॥೧೮॥

(ಶ್ರೀ) ಕರ್ಮಚೋದನಾ-ಕರ್ಮವನ್ನು ನಡೆಸುವುದಕ್ಕೆ ಕಾರಣವು, (ಮ) ಕರ್ಮವಿಧಿಯು, ಜ್ಞಾನಂ-(ಶ್ರೀ) ಇದು ತನ್ನ ಇಷ್ಟಕ್ಕೆ ಸಾಧನ

ವೆಂಬ ಬುದ್ಧಿಯು, ಜ್ಞೇಯಂ (ಶಂ) ತಿಳಿಯತಕ್ಕ ವಸ್ತುವು, (ಶ್ರೀ) ಇಷ್ಟಕ್ಕೆ ಕಾರಣವಾದದ್ದು, ಪರಿಜ್ಞಾತಾ- (ಶ್ರೀ) ಇಷ್ಟಹೇತುವು ಇದು ಎಂಬ ಜ್ಞಾನಕ್ಕೆ ಆಶ್ರಯಭೂತವಾದ ವಸ್ತುವು, (ಶಂ) ಅವಿದ್ಯೆಯಲ್ಲಿರುವ ಜೀವನು, ಕರ್ಮಸಂಗ್ರಹಃ-(ಶಂ॥ ಶ್ರೀ) ಕರ್ಮಕ್ಕೆ ಆಶ್ರಯವಾದದ್ದು ಅಥವಾ ಆಧಾರವಾದದ್ದು (ಮ) ಕರ್ಮದ ಸಂಕ್ಷೇಪವು, ಈ ಅಧ್ಯಾಯದ (೧೪) ನೇ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ಅಧಿಷ್ಠಾನಾದಿ ೫ ಕಾರಣಗಳಲ್ಲಿ ಮುಖ್ಯವಾದ ಮೂರುಕಾರಣಗಳಿಲ್ಲಿ ಹೇಳಲ್ಪಟ್ಟವು. ಕರಣಂ (ಶಂ) ಕಿವಿಮೊದಲಾದ ಇಂದ್ರಿಯಗಳು, ಬುದ್ಧಿಯೂ; ಕರ್ಮ- (ಶಂ) ಕಾರ್ಯದ ಫಲವುಂಟಾಗುವ ಸ್ಥಾನವು, ಕರ್ತಾ-ಇಂದ್ರಿಯಗಳಿಗೆ ವ್ಯಾಪಾರಗಳನ್ನುಂಟುಮಾಡುವಂತವನಾದ ಜೀವನು. ॥೧೮॥

(ಗೀ॥ ವಿ) ಕರ್ಮಚೋದನಾ-ಕರ್ಮಗಳನ್ನನುಷ್ಠಿಸುವಂತೆ ಮಾಡುವ ಭಗವದಾಜ್ಞೆಯು, ತ್ರಿವಿಧಾ-ಮೂರುವಿಧವಾಗಿರುವುದು. ಎಂದರೆ ಜ್ಞಾನಂ - ಭಗವದಾಜ್ಞೆಯು ಇಂಥಾದ್ದೆಂಬದಾಗಿ ತಿಳಿಯುವಿಕೆಯು, ಜ್ಞೇಯಂ- ಪುರುಷಪ್ರವೃತ್ತಿಯು ದೇಹಾದಿಗಳು ಕರ್ಮಫಲವು ಇವುಗಳು, ಪರಿಜ್ಞಾತಾ-ಭಗವದಧೀನನಾದ ಜೀವನು, ಇವರುಗಳೆ. ಇವರನ್ನು ನಿಮಿತ್ತೀಕರಿಸಿ ಭಗವದಾಜ್ಞೆಯು ಪ್ರವರ್ತಿಸುವುದು. ನಿಮಿತ್ತವು ತ್ರಿವಿಧವಾಗಿದ್ದರೂ ಭಗವದಾಜ್ಞೆಯೂ ಮೂರುವಿಧವೆಂಬದಾಗಿ ಹೇಗೆ ಹೇಳಬಹುದೆಂದರೆ ? ನಿಮಿತ್ತವು ಮೂರುವಿಧವಾಗಿರುವುದರಿಂದ ತನ್ನಿಮಿತ್ತಗಳಾದ ವಿಧಿಗಳೂ ಮೂರು ವಿಧಗಳೆಂಬದಾಗಿ ಉಪಚಾರದಿಂದ ಹೇಳಲ್ಪಟ್ಟಿರುವುವು. ವಿಧಿಯು ನೈಮಿತ್ತಿಕವಾಗಿಯೂ ಜ್ಞಾನಾದಿಗಳಾದ ಮೂರೂ ನಿಮಿತ್ತವಾಗಿಯೂ ಇರುವುವು. ಅದು ಹೇಗೆಂದರೆ? ವಿಧಿಯನ್ನು ತಿಳಿದಮೇಲೆ ಅದರಲ್ಲಿ ತಾನೆ ಪ್ರವೃತ್ತಿಸಬೇಕೆಂಬದಾಗಿ ಭಗವತ್ಪ್ರೇರಣವು ಇರುವುದೆಂಬದಾಗಿ ತಿಳಿಯುವಿಕೆಯೇ ಜ್ಞಾನವು, ಅಂಥಾ ಜ್ಞಾನದಿಂದ ಪ್ರವರ್ತಿಸಿದ್ದು ಜ್ಞೇಯವು, ಕ್ರಿಯೆಗಳನ್ನು ಮಾಡುವ ಜೀವನೆ ಪರಿಜ್ಞಾತಾ, ಈ ಮೂರನ್ನು ನಿಮಿತ್ತೀಕರಿಸಿಕೊಂಡು ವಿಧಿಯು ಪ್ರವರ್ತಿಸುವುದರಿಂದ ವಿಧಿಯು ನೈಮಿತ್ತಿಕವೆಂಬದಾಗಿ ಹೇಳಲ್ಪಟ್ಟಿತು. ಕರ್ಮಸಂಗ್ರಹಃ-ಕರ್ಮಗಳೆಂಬ ಅಧಿಷ್ಠಾನಾದಿ ಪಂಚ

ಕಗಳಲ್ಲಿ ಮುಖ್ಯವಾದ ಮೂರನ್ನು ಅಲ್ಲಿ ಸಂಗ್ರಹವಾಗಿ ಹೇಳಿರುವುದಾಗಿ ತಿಳಿಯತಕ್ಕದ್ದು. ಕರಣಂ - ಇಂದ್ರಿಯಗಳು, ಯಜ್ಞದಲ್ಲುಪಯೋಗಿಸುವ ಪಾತ್ರದರ್ಭಾದಿಗಳು-ದೇಹವು ಎಂಬೀ ಮೂರೂ,ಕರ್ಮ-ಕರ್ಮೇಂದ್ರಿಯಗಳೆಂಬ ಕೈ ಮೊದಲಾದವುಗಳ ವ್ಯಾಪಾರವೂ,ಕರ್ತಾ-ಪರಾಧೀನಕರ್ತಾ ಆದ ಜೀವನೂ ಸ್ವತನ್ತ್ರಕರ್ತಾ ಆದ ಪರಮಾತ್ಮನೂ,ಇತಿ-ಈ ಪ್ರಕಾರವಾಗಿ, ತ್ರಿವಿಧಃ-ಮೂರುವಿಧವಾಗಿರುವುದು, ಪರಾಧೀನಕರ್ತಾ ಆದ ಜೀವನು ಕರ್ಮಗಳನ್ನು ಮಾಡುವ ವಿಷಯದಲ್ಲಿ ಹೇಗೆ ವಿಧಿವಶ್ಯನಾಗಬಹುದೆಂದರೆ ಜೀವನಿಗೆ ಯಾವ ಪರಮಾತ್ಮನ ಆಜ್ಞೆಯೆಂಬ ವಿಧಿನಿಷೇಧಗಳಿಗೆ ವಶಪಟ್ಟು ನಡೆದು ಕೊಳ್ಳಬೇಕಾದದ್ದು ಕರ್ತವ್ಯವಾಗಿರುವುದರಿಂದ ಪರತನ್ತ್ರನಾಗಿಯೆ ಕರ್ಮಗಳನ್ನು ಮಾಡುತ್ತಾನೆ. ॥೧೮॥

ಶ್ಲೋ॥ ಜ್ಞಾನಂಕರ್ಮಚಕರ್ತಾಚತ್ರಿಧೈವಗುಣಭೇದತಃ ।
ಪ್ರೋಚ್ಯತೆಗುಣಸಂಖ್ಯಾನೇಯಥಾವಚ್ಛೃಣುತಾನ್ಯಪಿ ॥೧೯॥

ಪ॥ ಜ್ಞಾನಂ-ಕರ್ಮ-ಚ-ಕರ್ತಾ-ಚ-ತ್ರಿಧಾ-ಏವ-ಗುಣಭೇದತಃ। ಪ್ರೋಚ್ಯತೆ-ಗುಣಸಂಖ್ಯಾನೇ-ಯಥಾವತ್-ಶೃಣು-ತಾನಿ-ಅಪಿ ॥

(ಅ ॥ ರಾ ॥ ಭಾ) ಗುಣಸಂಖ್ಯಾನೆ- ಸತ್ವಾದಿಗುಣಗಳಕಾರ್ಯಗಳನ್ನು ಪರಿಗಣನೆಮಾಡುವುದರಲ್ಲಿ, ಜ್ಞಾನಂ-ಅನುಷ್ಠೇಯಕರ್ಮವಿಷಯವಾದ ಜ್ಞಾನವೂ, ಕರ್ಮಚ-ಅನುಷ್ಠಿಸಲ್ಪಡುವ ಕರ್ಮವೂ, ಕರ್ತಾಚ-ಕರ್ಮವನ್ನನುಷ್ಠಿಸುವ ಯಜಮಾನನೂ, ಗುಣಭೇದತಃ-ಸತ್ವಾದಿಗುಣಭೇದದಿಂದ, ತ್ರಿಧೈವ-ಮೂರುವಿಧವಾಗಿಯೆ, ಪ್ರೋಚ್ಯತೆ- ಹೇಳಲ್ಪಡುವುದು. ತಾನ್ಯಪಿ-ಅವುಗಳನ್ನು, ಯಥಾವತ್-ಯಥಾವತ್ತಾಗಿ, ಶೃಣು-ಕೇಳು. ... ... ॥೧೯॥

(ಶಂ ॥ ಭಾ) ಗುಣಸಂಖ್ಯಾನೆ-ಗುಣಗಳ ಸ್ವರೂಪವನ್ನು ಹೇಳುವ ಕಪಿಲಪ್ರಣೀತವಾದ ಸಾಂಖ್ಯಶಾಸ್ತ್ರದಲ್ಲಿ, ಕಪಿಲಮಹರ್ಷಿಪ್ರಣೀತವಾದ ಸಾಂಖ್ಯಶಾಸ್ತ್ರವು ಜೀವೇಶ್ವರ ಭೇದಪ್ರತಿಪಾದಕವಾಗಿರುವುದರಿಂದ ವಿರುದ್ಧವಾಗಿದ್ದರೂ ಗುಣತತ್ಕಾರ್ಯ ನಿರೂಪಣವಿಷಯದಲ್ಲಿ ಪ್ರಮಾಣವೆಂಬದಾಗಿ ಪ್ರಕೃತದಲ್ಲಿ ಸ್ವೀಕರಿಸಲ್ಪಟ್ಟಿರುವುದು. ಜ್ಞಾನವೂ

ಕ್ರಿಯಾ,ಕರ್ತೃ, ಈ ಮೂರೂ ತ್ರಿಗುಣಾಂತರ್ವರ್ತಿಯಲ್ಲದೆ ಅವುಗಳನ್ನ ತಿಕ್ರಮಿಸಿದವುಗಳಲ್ಲ ವೆಂಬೀ ಅರ್ಥಬೋಧನಕ್ಕಾಗಿ " ಏವ ,, ಎಂಬ ಪದವು ಪ್ರಯೋಗಿಸಲ್ಪಟ್ಟಿತು. ... ... ॥೧೯॥

(ಶ್ರೀ) ಈ ಶ್ಲೋಕದಲ್ಲಿರುವ"ಏವ,,ಎಂಬಪದದಿಂದ ಕರ್ತೃತ್ವವು ಗುಣಸಂಬಂಧ ಪ್ರಯುಕ್ತವೆಂತಲೂಆತ್ಮನಿಗೆಸ್ವಭಾವದಿಂದ ಕರ್ತೃತ್ವವಿಲ್ಲವೆಂತಲೂ ಹೇಳಲ್ಪಟ್ಟಿತೆಂದರಿಯಬೇಕು. ಬಂಧಕ್ಕೆ ಗುಣಗಳೆ ಕಾರಣವಾಗುವುವೆಂಬದಾಗಿ ( ೧೪ ) ನೇ ಅಧ್ಯಾಯದ ೬-೩-೮ ನೇ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುವುದು. ಹದಿನೇಳನೆ ಅಧ್ಯಾಯದಲ್ಲಿ ತ್ರಿಗುಣಸ್ವಭಾವ ನಿರೂಪಣದಿಂದ ಸಾತ್ವಿಕಾಹಾರಾದಿಸೇವನೆಯನ್ನು ಮಾಡಿ ಸಾತ್ವಿಕಸ್ವಭಾವವನ್ನು ಹೊಂದಬೇಕೆಂಬದಾಗಿ ಹೇಳಲ್ಪಟ್ಟಿತು. ಇಲ್ಲಿಯೊ ಕ್ರಿಯೆಗಳು, ಸಾಧನಗಳು, ಫಲವು, ಇವು ಆತ್ಮನಿಗಿಲ್ಲವು ಎಂಬೀ ಅಂಶವನ್ನು ತೋರಿಸುವದಕ್ಕಾಗಿ ಅವುಗಳಿಗೆ ತ್ರಿಗುಣಾತ್ಮಕತ್ವವು ಹೇಳಲ್ಪಡುವುದು. ... ... ॥೧೯॥

ಶ್ಲೋ॥ಸರ್ವಭೂತೇಷುಯೇನೈಕಂಭಾವಮವ್ಯಯಮೀಕ್ಷತೆ।ಅವಿಭಕ್ತಂವಿಭಕ್ತೇಷುತಜ್ಞಾನಂವಿದ್ಧಿಸಾತ್ವಿಕಂ॥೨೦॥

ಪ ॥ ಸರ್ವಭೂತೇಷು-ಯೇನ-ಏಕಂ-ಭಾವಂ-ಅವ್ಯಯಂ- ಈಕ್ಷತೆ । ಅವಿಭಕ್ತಂ-ವಿಭಕ್ತೇಷು-ತತ್-ಜ್ಞಾನಂ-ವಿದ್ಧಿ-ಸಾತ್ವಿಕಂ ॥

(ಅ ॥ ರಾ ॥ ಭಾ) ಸರ್ವಭೂತೇಷು- ಬ್ರಾಹ್ಮಣ ಕ್ಷತ್ರಿಯಾದಿ ವರ್ಣಗಳಿಂದಲೂ ಬ್ರಹ್ಮಚರ್ಯಾದ್ಯಾಶ್ರಮಗಳಿಂದಲೂ ಭೇದಪಟ್ಟಿರುವ ಕರ್ಮಾಧಿಕಾರಿಗಳಾದ ಸರ್ವಪ್ರಾಣಿಗಳಲ್ಲಿಯೂ, (ಶ್ರೀ) ಬ್ರಹ್ಮಾದಿಸ್ತಂಬಪರ್ಯಂತಗಳಾದ ಸರ್ವವಸ್ತುಗಳಲ್ಲಿಯೂ, ಯೇನ-ಯಾವಜ್ಞಾನದಿಂದ, ಭಾವಂ-ಆತ್ಮರೂಪವಾದ ವಸ್ತುವನ್ನು, ಏಕಂ_ಜ್ಞಾನವೆಂಬ ಒಂದೇ ಆಕಾರವುಳ್ಳವನ್ನಾಗಿಯೂ, ಅವ್ಯಯಂ_ಅಸ್ಥಿರಗಳಾದ ಶರೀರಗಳಲ್ಲಿದ್ದರೂ ಸ್ವಯಂ ನಾಶವಿಲ್ಲದವನನ್ನಾಗಿಯೂ, ವಿಭಕ್ತೇಷು ಅವಿಭಕ್ತಂ-ಬ್ರಾಹ್ಮಣತ್ವಾದಿ ಜಾತಿಗಳಿಂದಲೂ ಬಿಳುಪು ಕೆಂಪು ಮೊದಲಾದ ರೂಪಗಳಿಂದಲೂ ದೀರ್ಘತ್ವ ಹ್ರಸ್ವತಾದಿ ಪರಿಮಾಣಗಳಿಂದಲೂ ನಾನಾ ವಿಧಗಳಾಗಿರುವ ಭೂತಗಳಲ್ಲಿದ್ದರೂ ಜ್ಞಾನೈಕಾಕಾರವಾಗಿರುವುದರಿಂದ ಅಂಥಾವಿಭಾಗರಹಿತನನ್ನಾಗಿಯೂ, ( ಗವಾಮನೇಕವರ್ಣ

ನಾಂಕ್ಷೀರಸ್ಯೈತ್ವೇಕವರ್ಣತಾ " ಎಂಬೀ ಶ್ರುತ್ಯರ್ಥವನ್ನು ಇಲ್ಲಿ ತಿಳಿಯ ಬೇಕು. ಗೋವು (ಹಸುವು) ಅನೇಕವರ್ಣಗಳಾಗಿದ್ದರೂ ಅವುಗಳ ಲ್ಲಿರುವ ಹಾಲು ಬಿಳುಪಾಗಿ ಏಕವರ್ಣವಾಗಿರುವಂತೆ ಅನೇಕ ಪ್ರಕಾರಗ ಳಾದ ಶರೀರಗಳಲ್ಲಿರುವ ಆತ್ಮನು ಜ್ಞಾನವೆಂಬ ಒಂದೇ ಆಕಾರದಿಂದ ಏಕರೂಪನೆಂತಲೆ ತಿಳಿಯಬೇಕು.)ಈ ಸ್ವಭಾವದಿಂದ ಫಲಾದಿಸಂಗಕ್ಕೆ ಯೋಗ್ಯನಲ್ಲದೇ ಇರುವಂತವನನ್ನಾಗಿಯೂ,ಈಕ್ಷೇತ್ರ-ಕರ್ಮವನ್ನು ವಿಚಾರಿ ಸುವ ಸಂದರ್ಭದಲ್ಲಿ ತಿಳಿಯುತ್ತಾನೆಯೊ, ತದ್ಜ್ಞಾನಂ-ಅಂಥಾಜ್ಞಾನವ ನ್ನು,ಸಾತ್ವಿಕಂವಿದ್ಧಿ-ಸತ್ವಗುಣಕಾರ್ಯವೆಂಬದಾಗಿತಿಳದುಕೊಳ್ಳು.॥೨೦॥

(ಶಂ ॥ ಭಾ) ಜ್ಞಾನಕ್ಕೆ ತ್ರೈವಿಧ್ಯವನ್ನು ಹೇಳು ತ್ತಾನೆ. ಒಂದಾಗಿರುವ ಪರಮಾತ್ಮ ಸ್ವರೂಪವನ್ನು ಅವ್ಯಕ್ತಾದಿ ಸ್ಥಾವರಾಂತವಾಗಿರುವ ಸರ್ವ ಭೂತಗಳಲ್ಲಿಯೂ ಭೇದವಿಲ್ಲದೆ (ಆಕಾ ಶವು ಸರ್ವ ವಸ್ತುಗಳಲ್ಲಿಯೂ ತುಂಬಿರುವಂತೆ ಈ ಪರಮಾತ್ಮ ನೂ, ಸರ್ವತ್ರ ತುಂಬಿರುವನು ) ತುಂಬಿರುವಂತವನೆನ್ನಾಗಿಯೂ, ಸತ್ಯವಾದ ವಸ್ತುವು ಬ್ರಂಹ ಒಂದೆ ಎಂತಲೂ ಬ್ರಂಹಕ್ಕಾ ದರೂ ಅದರ ಧರ್ಮಕ್ಕಾದರೂ ವಿಕಾರವಿಲ್ಲವೆಂತಲೂ ಯಾವಜ್ಞಾ ನದಿಂದ ತಿಳಿಯುವನೊ ಅಂಥಾ ಜ್ಞಾನವು ಸಾತ್ವಿಕಜ್ಞಾನವೆಂಬ ದಾಗಿ ತಿಳದುಕೊಳ್ಳು. ಇಂತಹ ಅದ್ವೈತಜ್ಞಾನವೆ ಸಾಕ್ಷಾನ್ಮೋಕ್ಷ ಕಾರಣವೆಂತಲೂ ಸಾತ್ವಿಕವೆಂತಲೂ, ದ್ವೈತಜ್ಞಾನವು ಮೋಕ್ಷಹೇ ತುವಲ್ಲವೆಂತಲೂ, ಆದುದರಿಂದಲೆ ಅಂತಹ ದ್ವೈತ ಜ್ಞಾನವು ರಾಜಸ ವೆಂತಲೂ ತಿಳಿಯಬೇಕು. ... ... ॥೨೦॥

(ಗೀ॥ವಿ) ವಿಭಕ್ತೇಷು-ಭಿನ್ನಭಿನ್ನವಾಗಿಯೂ, ತಾರತಮ್ಯದೊ ಡನೆಯೂ ಇರುವ, ಸರ್ವಭೂತೇಷು- ಸರ್ವಜೀವಜಡವಸ್ತುಗಳಲ್ಲಿರು ವಂತವನಾಗಿಯೂ, ಏಕಂ-ಸರ್ವೋತ್ತಮನಾಗಿಯೂ, ಅವಿಭಕ್ತಂ-ಎಲ್ಲಿ ದ್ದರೂ ಸ್ಥಾನಭೇದದಿಂದ ಭೇದವನ್ನುಹೊಂದದವನಾಗಿಯೂ,(ಎಂದ ರೆ ಸದಾನಿರ್ದೋಷನಾಗಿಯೂ ಷಡ್ಗುಣ ಪರಿಪೂರ್ಣನಾಗಿಯೂ ಒಂದೇ ವಿಧವಾಗಿಯೂ ಇರುವನೆಂದು ತಾತ್ಪರ್ಯವು.) ಅವ್ಯಯಂ-ತನ್ನಿಂದಲಾ ದರೂ ತಾನುಯಾವ ವಸ್ತುವಿನಲ್ಲಿರುತ್ತಾನೆಯೊ ಆವಸ್ತುವಿನ ನಾಶದಿಂ

ದಳಾದರೂ ನಾಶವಿಲ್ಲದವನಾಗಿಯೂ, ಭಾವಂ-ಸದಾಸ್ಥಿರನಾಗಿಯೂ ಇರುವ ವಿಷ್ಣುವನ್ನು ಯಾವನು ತಿಳಿಯುತ್ತಾನೆಯೋ ಅಪ್ರಕಾರ ತಿಳಿಯುವುದಾದ ಜ್ಞಾನವನ್ನು ಸಾತ್ವಿಕವೆಂದರಿತು ಕೊಳ್ಳು. ॥೨೦॥

ಶ್ಲೋ ॥ಪೃಥಕ್ತ್ವೇನತುಯಜ್ಜ್ಞಾನಂ ನಾನಾಭಾವಾನ್
ಪೃಥಗ್ವಿಧಾನ್। ವೇತ್ತಿಸರ್ವೇಷುಭೂತೇಷು ತಜ್ಜ್ಞಾನಂವಿ
ದ್ಧಿರಾಜಸಂ॥ ... ... ... ॥೨೧॥

ಪ ॥ ಪೃಥಕ್ತ್ವೇನ-ತು-ಯತ್-ಜ್ಞಾನಂ-ನಾನಾಭಾವಾನ್-ಪೃಥಗ್ವಿಧಾನ್।ವೇತ್ತಿ-ಸರ್ವೇಷು-ಭೂತೇಷು-ತತ್-ಜ್ಞಾನಂ-ವಿದ್ಧಿ-ರಾಜಸಂ॥

(ಅ॥ ರಾ॥ ಭಾ) ಸರ್ವೇಷುಭೂತೇಷು- ಸರ್ವಪ್ರಾಣಿಗಳಲ್ಲಿಯೂ, ಪೃಥಕ್ತ್ವೇನ-ಬ್ರಾಹ್ಮಣತ್ವಾದ್ಯಾಕಾರಗಳುಬೇರೆಯಾಗಿರುವುದರಿಂದ, ಭಾವಾನ್- ಆತ್ಮವಸ್ತುಗಳನ್ನು ನಾನಾ-ನಾನಾ ವಿಧಗಳನ್ನಾಗಿಯೂ, ಪೃಥಗ್ವಿಧಾನ್-ಬಿಳುಪು ಕೆಂಪು ಮೊದಲಾದ ಆಕಾರಗಳು ಭಿನ್ನವಿಟ್ಟಿರುವುದರಿಂದ ಅನೇಕಾ ಕಾರಗಳುಳ್ಳವುಗಳನ್ನಾಗಿಯೂ ಫಲಸಂಗಾದಿಯೋಗ್ಯಗಳನ್ನಾಗಿಯೂ,ಯಜ್ಜ್ಞಾನಂ ವೇತ್ತಿ-ಕರ್ಮದಲ್ಲಿಳಿಯುವಾಗ ಯಾವಜ್ಞಾನವು ಪ್ರಕಾಶಪಡಿಸುವುದೋ ? ತತ್ಜ್ಞಾನಂ - ಆಜ್ಞಾನವನ್ನು, ರಾಜಸಂವಿದ್ಧಿ-ರಜೋಗುಣ ಮೂಲಕವೆಂದರಿತುಕೊಳ್ಳು. ॥೨೧॥

(ಶಂ ॥ ಭಾ ) ಸರ್ವೇಷು ಭೂತೇಷು-ಸಕಲವಾದ ಶರೀರಗಳಲ್ಲಿಯೂ, ಪೃಥಕ್ತ್ವೇನತು-ಒಂದೊಂದು ಶರೀರದಲ್ಲಿ ಒಂದೊಂದು ಜೀವನೆಂಬದಾಗಿ ಪ್ರತ್ಯೇಕವಾಗಿರುವುದರಿಂದ, ಭಾವಾನ್ - ಜೀವರನ್ನು, ನಾನಾ-ಭಿನ್ನಭಿನ್ನರಾಗಿರುತ್ತಾರೆಂತಲೂ, ಪೃಥಗ್ವಿಧಾನ್ - ಬೇರೆಬೇರೆ ಲಕ್ಷಣವುಳ್ಳವರೆಂತಲೂ, ಯಜ್ಜ್ಞಾನಂ-ಯಾವಜ್ಞಾನದಿಂದ, ವೇತ್ತಿ-ತಿಳಿಯುತ್ತಾನೆಯೋ, ತಜ್ಜ್ಞಾನಂ-ಅಜ್ಞಾನವನ್ನು, ರಾಜಸಂವಿದ್ಧಿ-ರಾಜಸವೆಂದರಿತುಕೊಳ್ಳು. ... ... ॥೨॥

(ಗೀ ॥ ವಿ) ಸರ್ವೇಷುಭೂತೇಷುಪೃಥಕ್ತ್ವೇನತುಯಜ್ಜ್ಞಾನಂ-ಸಕಲ ಜೀವಜಡಗಳನ್ನು ಪರಸ್ಪರ ಭಿನ್ನಭಿನ್ನಗಳಾಗಿ ತಿಳಿಸುವ ಜ್ಞಾನವು ಯಾವುದೋ, ಅದುಯಾವದೆಂದರೆ ? ನಾನಾಭಾವಾನ್ - ನಾನಾ ವಿಧಗಳಾಗಿರುವ ಜೀವಜಡರೂಪ ಪದಾರ್ಥಗಳನ್ನು, ಪೃಥಗ್ವಿಧಾನ್-

ಬಂದಕ್ಕೊಂದು ಭೇದವುಳ್ಳವುಗಳನ್ನಾಗಿಯೂ ತಾರತಮ್ಯವುಳ್ಳವುಗಳನ್ನಾಗಿಯೂ, ಪೇತ್ತಿ-ವಿಷ್ಣುವಿಗಿಂತಲೂ ಬೇರೆಯಾಗಿಯೂ ಯಥಾರ್ಥವಾಗಿಯೂ ಆದರೆ ವಿಷ್ಣುವಿಷಯದಲ್ಲಿ ಸಂಶಯವಾಗಿಯೂ ತಿಳಿಯುವುದು ಯಾವದೋ, ತದ್ಜ್ಞಾನಂ-ಆಜ್ಞಾನವನ್ನು, ರಾಜಸವೆಂಬದಾಗಿ ತಿಳಿಯಬೇಕು. ಈಶ್ವರವಿಷಯದಲ್ಲಿ ಸಂಶಯ ರೂಪವಾಗಿರುವದರಿಂದ ಈ ಜ್ಞಾನವುರಾಜಸವಾಯಿತು. ... ... ||೨೧||

ಶ್ಲೋ|| ಯತ್ತುಕೃತ್ಸ್ನವದೇಕಸ್ಮಿನ್ಕಾರ್ಯೇ(ಸಕ್ತಮಹೇ
(ಹೈ)ತುಕಂ | ಅತತ್ವಾರ್ಥವದಲ್ಪಂಚತತ್ತಾಮಸಮು
ದಾಹೃತಂ || ... ... ||೨೨||

ಪ || ಯತ್-ತು-ಕೃತ್ಸ್ನವತ್ - ಏಕಸ್ಮಿನ್-ಕಾರ್ಯೇ-ಸಕ್ತಂ-ಅಹೇತುಕಂ | ಅತತ್ವಾರ್ಥವತ್-ಅಲ್ಪಂ-ಚ-ತತ್-ತಾಮಸಂ-ಉದಾಹೃತಂ||

(ಅ || ರಾ || ಭಾ) ಯತ್ತು - ಯಾವಜ್ಞಾನವಾದರೆ, ಏಕಸ್ಮಿನ್ಕಾರ್ಯೆ - ಪ್ರೇತಭೂತ ಗಣಾದ್ಯಾರಾಧನ ರೂಪವಾಗಿಯೂ ಅತ್ಯಲ್ಪ ಫಲವಾಗಿಯೂ ಇರುವ ಒಂದು ಕರ್ಮದಲ್ಲಿ, ಕೃತ್ಸ್ನವತ್-ಸಕಲ ಫಲಪ್ರದವಾದ ಕರ್ಮದಂತೆ, ಸಕ್ತಂ - ಆಸಕ್ತವಾಗಿರುವುದೊ, ಅಹೇತುಕಂ-ಯಥಾವತ್ತಾಗಿ ನೋಡುವ ಸಂದರ್ಭದಲ್ಲಿ ಆರೀತಿಯಾದ ಆಸಕ್ತಿಯನ್ನಿಡುವುದಕ್ಕೆ ಕಾರಣವಿಲ್ಲದೆ ಇರುವುದೊ, ಅತತ್ವಾರ್ಥವತ್-ಮೊದಲುತೋರಿಸಿರುವಂತೆ ಜ್ಞಾನೈಕಾಕಾರನಾದ ಆತ್ಮನಲ್ಲಿ ಬ್ರಾಹ್ಮಣತ್ವಾದ್ಯಾಕಾರ ಪ್ರಯುಕ್ತವಾದ ಭೇದವನ್ನು ವಿಷಯೀಕರಿಸುವುದರಿಂದ ಮಿಥ್ಯಾಭೂತಾರ್ಥ ವಿಷಯವಾಗಿರುವುದೋ,ಅಲ್ಪಂಚ-ಪ್ರೇತಭೂತಾದ್ಯಾರಾಧನ ವಿಷಯವಾಗಿರುವುದರಿಂದ ಅಲ್ಪವಾಗಿಯೂ ಇರುವುದೊ, ತತ್ತಾಮಸಮುದಾಹೃತಂ- ಅಂತಹ ಜ್ಞಾನವು ತಮೋಗುಣಕಾರ್ಯವೆಂಬದಾಗಿಹೇಳಲ್ಪಟ್ಟಿತು. ... ... ||೨೭||

(ಶಂ|| ಭಾ) ಏಕಸ್ಮಿನ್ಕಾರ್ಯೇ-ದೇಹದಲ್ಲಿ ಜೀವನೂ ಬಾಹ್ಯದಲ್ಲಿರುವ ಪ್ರತಿಮಾದಿಗಳಲ್ಲಿ ಪರಮಾತ್ಮನೂ, ಕೃತ್ಸ್ನವತ್-"ಸರ್ವಂಖಲ್ವಿದಂಬ್ರಹ್ಮ, ಸರ್ವವೂ ಈಶ್ವರನೆ ಎಂಬಜ್ಞಾನದಿಂದಲೆ, ಸಕ್ತಂ- ದೇಹವು ಯಷ್ಟುಪರಿಮಾಣವುಳ್ಳದ್ದೋ ಅಷ್ಟೇ ಜೀವನು, ಪ್ರತಿಮಾದಿಗ

ಳೆಷ್ಟು ಪರಿಮಾಣ ವುಳ್ಳದ್ದೊ ಅಷ್ಟೇ ಈಶ್ವರನಿರುವನು ಎಂಬೀ ಅಭಿಪ್ರಾಯ ದೊಡನೆ ಕೂಡಿಯೂ, ಅಹೈತುಕಂ-ಏತಕ್ಕೆ ಆರೀತಿಯಾ ಗಿರಬೇಕೆಂಬ ವಿಷಯದಲ್ಲಿ ಯುಕ್ತಿರಹಿತವಾಗಿಯೂ, ಅತತ್ವಾರ್ಥವತ್- ಯಥಾರ್ಥವಾದ ವಿಷಯರಹಿತವಾಗಿಯೂ, ಅಲ್ಪಂಚ-ಅಲ್ಪವಿಷಯವಾಗಿ ಯೂ ಅಲ್ಪಫಲವುಳ್ಳದ್ದಾಗಿಯೂ ಇರುವ ಜ್ಞಾನವ್ಯಾವದೋ ಅದು ತಾ ಮಸವೆಂಬದಾಗಿ ಹೇಳಲ್ಪಡುವುದು. ತಾಮಸರಾದ ಅವಿವೇಕಿಗಳಿಗುಂಟಾ ಗುವಜ್ಞಾನವು ಇಂಥಾದ್ದೆಂದು ಭಾವವು. ॥೨೨॥

(ಗೀ॥ ವಿ) ಸಂಸಾರಿಯಾದ ಜೀವನು ಮುಕ್ತನಾಗುವಂತೆ ಮಾ ಡಲ್ಪಡುತ್ತಾನಾದುದರಿಂದ ಕಾರ್ಯವೆನ್ನಲ್ಪಡುತ್ತಾನೆ. ಕಾರ್ಯೇ-ಜೀವನಾದ ತನ್ನಲ್ಲಿ, ಕೃತ್ಸ್ನವತ್-ಪರಿಪೂರ್ಣವಾದ ಬ್ರಹ್ಮವೇ ತಾನೆಂಬದಾಗಿ ತಿಳಿ ಯತಕ್ಕದ್ದಾಗಿಯೂ, ಕಿಂಚ, ಕೃತ್ಸ್ನವತ್-ಜಗತ್ಸ್ವರೂಪವೆ ತಾನೆಂ ದು ತಿಳಿಯತಕ್ಕದ್ದಾಗಿಯೂ, ಏಕಸ್ಮಿನ್ಸಕ್ತಂ-ಜೀವನೊಬ್ಬನೆ,ಅವನೆ ಬ್ರಹ್ಮಸ್ವರೂಪನು, ಅವನೆ ಜಗತ್ಸ್ವರೂಪನೆಂದು ತಿಳಿಯತಕ್ಕದ್ದಾ ಗಿಯೂ, ಅಹೇತುಕಂ-ಯುಕ್ತಿವಿಹೀನವಾಗಿಯೂ, ಅತತ್ವಾರ್ಥವತ್- ಮಿಥ್ಯಾಭೂತಾರ್ಥವುಳ್ಳದ್ದಾಗಿಯೂ, ಅಲ್ಪಂಚ - ಅನೇಕ ಅಜ್ಞಾನಗ ಳೊಡನೆ ಕೂಡಿರುವುದಾಗಿಯೂ ಇರುವ, ಜ್ಞಾನಂ-ಜ್ಞಾನವು, ತಾಮಸ ಮುದಾಹೃತಂ- ತಾಮಸವೆಂದು ಹೇಳಲ್ಪಟ್ಟಿತು. ಜೀವೈಕ್ಯವಾದವೂ ಜೀವೇಶ್ವರೈಕ್ಯವಾದವೂ ಜಗನ್ಮಿಥ್ಯಾತ್ವವಾದಾದಿಗಳೆಲ್ಲವೂ ತಮೋಗುಣ ಮೂಲಕವೆಂಬದಾಗಿ ಹೇಳಲ್ಪಟ್ಟಿತೆಂದರ್ಥವು. ... ॥೨೨॥

ಶ್ಲೋ॥ ನಿಯತಂಸಂಗರಹಿತಮರಾಗದ್ವೇಷತಃಕೃತಂ।
ಅಫಲಪ್ರೇಪ್ಸುನಾಕರ್ಮಯತ್ತತ್ಸಾತ್ವಿಕಮುಚ್ಯತೇ॥೨೩॥

ಪ॥ ನಿಯತಂ-ಸಂಗರಹಿತಂ-ಅರಾಗದ್ವೇಷತಃ-ಕೃತಂ। ಅಫಲಪ್ರೇಪ್ಸುನಾ-ಕರ್ಮ- ಯತ್-ತತ್-ಸಾತ್ವಿಕಂ-ಉಚ್ಯತೇ ॥

(ಅ॥ ರಾ॥ ಭಾ) ಈ ಪ್ರಕಾರವಾಗಿ ಅನುಷ್ಠೇಯ ಕರ್ಮವಿ ಷಯಕವಾದ ಜ್ಞಾನಕ್ಕೆ ಕರ್ಮದಲ್ಲಧಿಕರಿಸುವಾಗ ಕರ್ಮಾಧಿಕಾರಿಯ ಅಂಶಕ್ಕನುರೂಪವಾಗಿ ಸತ್ವಾದಿಗುಣಪ್ರಯುಕ್ತವಾದ ತ್ರೈವಿಧ್ಯವನ್ನು ಹೇಳಿ ಅನುಷ್ಠೇಯವಾದ ಕರ್ಮಕ್ಕೆ ಸತ್ವಾದಿ ಗುಣಪ್ರಯುಕ್ತ

ಯಾವ ತ್ರೈವಿಧ್ಯವನ್ನು ಹೇಳುತ್ತಾರೆ. (ತ್ರೈವಿಧ್ಯವೆಂದರೆ ಮೂರು ಬಗೆಯಾಗಿರುವಿಕೆಯು.) ನಿಯತಂ - ತನ್ನವರ್ಣಾಶ್ರಮಗಳಿಗೆ ಉಚಿತವಾದದ್ದಾಗಿಯೂ, ಸಂಗರಹಿತಂ- ಕರ್ತೃತ್ವಾದಿಸಂಗವಿಲ್ಲದ್ದಾಗಿಯೂ, ಅರಾಗದ್ವೇಷತಃಕೃತಂ - ಕೀರ್ತಿಯಲ್ಲಪೇಕ್ಷೆಯಿಂದಲೂ ಅಕೀರ್ತಿಯಲ್ಲಿ ದ್ವೇಷದಿಂದಲೂ ಮಾಡಲ್ಪಡದೇ ಇರುವಂಥಾದ್ದಾಗಿಯೂ, ಡಂಭದಿಂದ ಮಾಡಲ್ಪಡದೆ ಇರುವಂಥಾದ್ದಾಗಿಯೂ ಎಂದರ್ಥವು. ಅಫಲಪ್ರೇಪ್ಸುನಾ-ಫಲಾಪೇಕ್ಷಾರಹಿತನಿಂದ, (ಕೃತಂ ಎಂಬದಾಗಿ ಅನುಷಂಗವು) ಕೃತಂ-ಅನುಷ್ಠಿಸಲ್ಪಟ್ಟದ್ದಾಗಿಯೂ ಇರುವ, ಕರ್ಮ-ಕರ್ಮವು, ಯತ್-ಯಾವದೋ,. ತತ್-ಅದು, ಸಾತ್ವಿಕಮುಚ್ಯತೆ - ಸತ್ವಗುಣಪ್ರಯುಕ್ತವೆಂಬದಾಗಿ ಹೇಳಲ್ಪಟ್ಟಿತು. ... ||೨೩||

(ಶಂ) ನಿಯತಂ-ನಿತ್ಯವೂ ಅನುಷ್ಠೇಯಗಳಾದ, (ಗೀ|| ವಿ) ಹರಿಸರ್ವೋತ್ತಮತ್ವಜ್ಞಾನ ಪೂರ್ವಕವಾಗಿ ಹರಿಸಮರ್ಪಣಾರ್ಥವಾಗಿಯೇ ಮಾಡಲ್ಪಡುವುದಾದ ತನ್ನವರ್ಣಾಶ್ರಮೋಚಿತವಾದ ಕರ್ಮವು, ಅರಾಗದ್ವೇಷತಃ- ( ಶಂ ) ರಾಗದ್ವೇಷವಿಲ್ಲದೆಯೂ, (ಶ್ರೀ) ಪುತ್ರಾದಿಗಳಲ್ಲಿ ಪ್ರೀತಿಯಿಂದಲಾದರೂ ಶತ್ರುಗಳಲ್ಲಿ ದ್ವೇಷದಿಂದಲಾದರೂ ಮಾಡಲ್ಪಡುವ ಕರ್ಮವು, (ರಾ|| ಗೀ|| ವಿ) ಏಕಾರ್ಥಕವೆ. ... ||೨೩||

ಶ್ಲೋ|| ಯತ್ತು ಕಾಮೇಪ್ಸುನಾಕರ್ಮ ಸಾಹಂಕಾರೇಣವಾ
ಪುನಃ | ಕ್ರಿಯತೆ ಬಹುಳಾಯಾಸಂ ತದ್ರಾಜಸ ಮುದಾ
ಹೃತಮ್ || ... ... ||೨೪||

ಪ||ಯತ್-ತು-ಕಾಮೇಪ್ಸುನಾ-ಕರ್ಮ-ಸಾಹಂಕಾರೇಣ-ವಾ-ಪುನಃ| ಕ್ರಿಯತೆ-ಬಹುಳಾಯಾಸಂ-ತತ್-ರಾಜಸಂ-ಉದಾಹೃತಂ||

(ಅ|| ರಾ|| ಭಾ) ಯತ್ತುಪುನಃ-ಯಾವಕರ್ಮವಾದರೆ, ಕಾಮೇಪ್ಸುನಾ-ಫಲೇಚ್ಛಾಯುಕ್ತನಾಗಿಯೂ, ಸಾಹಂಕಾರೇಣವಾ--ಕರ್ತೃತ್ವಾಭಿಮಾನಯುಕ್ತನಾಗಿಯೂ ಇರುವ ಅಧಿಕಾರಿಯಿಂದ, ಬಹುಳಾಯಾಸಂ-ಅನ್ಯನಿಂದ ಮಾಡಲ್ಪಡದ ಈ ಕರ್ಮವನ್ನು ಅಧಿಕವಾದ ಮನಃಕಾಯಕ್ಲೇಶದಿಂದ ನಾನು ಮಾಡುವೆನೆಂಬ ಅಹಂಕಾರದೊಡನೆ, ಕ್ರಿಯತೆ-ಅನುಷ್ಠಿಸಲ್ಪಡುವುದೊ, ತತ್-ಆಕರ್ಮವು, ರಾಜಸಮುದಾಹೃ

ತಂ- ರಜೋಗುಣಮೂಲಕವೆಂಬದಾಗಿ ಹೇಳಲ್ಪಟ್ಟಿರುವುದು. ಈ ಕರ್ಮವು ನನ್ನಿಂದಲೆ ಮಾಡಲ್ಪಟ್ಟಿತೆಂಬ ಅಭಿಮಾನವುಳ್ಳವನಿಂದ ಯಾವ ಕರ್ಮವು ಅನುಷ್ಠಿಸಲ್ಪಡುವುದೋ ಅದು ರಾಜಸವೆಂದು ತಾತ್ಪರ್ಯವು. ॥೨೪॥

(ಶಂ॥ಶ್ರೀ) ಸಾಹಂಕಾರೇಣವಾ-ನಾನಲ್ಲದೆ ಶ್ರೋತ್ರಿಯನು ಯಾವನಿರುವನು ಎಂಬ ಅಹಂಕಾರದೊಡನೆಯೂ, ಅಹಂಕಾರವು ದ್ವಿವಿಧವಾಗಿರುವುದು, ತಾನು ಕರ್ತಾ ಎಂಬುವುದು ಒಂದು ನಾನು, ಶ್ರೋತ್ರಿಯನು ಎಂದರೆ ವೇದಾಧ್ಯಯನವನ್ನು ಸಾಂಗವಾಗಿ ಮಾಡಿದವನೆಂಬುವುದು ಒಂದು. ಪುನಃ-(ಗೀ॥ವಿ) ಚಕಾರಾರ್ಥಕವಾಗಿ ಮಾಡಿಕೊಂಡು ಬಹುಲಾಯಾಸಂಚ-ಎಂಬದಾಗಿ ಅನ್ವಯವು (ಶಂ) ಶ್ಲೋಕಪೂರಣಾರ್ಥವು. ... ... ... ॥೨೪॥

ಶ್ಲೋ॥ ಅನುಬಂಧಂ ಕ್ಷಯಂ ಹಿಂಸಾ ಮನವೇಕ್ಷ್ಯಚ
ಪೌರುಷಂ । ಮೋಹಾ ದಾರಭ್ಯತೇ ಕರ್ಮ ಯತ್ತತ್ತಾಮಸ
ಮುಚ್ಯತೇ-॥ ... ... ॥೨೫॥

ಪ॥ ಅನುಬಂಧಂ-ಕ್ಷಯಂ-ಹಿಂಸಾಂ-ಅನವೇಕ್ಷ್ಯ-ಚ-ಪೌರುಷಂ । ಮೋಹಾತ್-ಆರಭ್ಯತೇ-ಕರ್ಮ-ಯತ್-ತತ್-ತಾಮಸಂ-ಉಚ್ಯತೇ ॥

(ಅ॥ರಾ॥ಭಾ)ಅನುಬಂಧಂ-ಹಿಂದೆಯೆಅನುಸರಿಸಿಬರುವ ದುಃಖವನ್ನೂ, ಕ್ಷಯಂ-ಧನವ್ಯಯವನ್ನೂ, (ಶಂ) ತನ್ನ ಶಕ್ತಿಹೀನತೆಯನ್ನೂ ಧನವ್ಯಯವನ್ನೂ, ಹಿಂಸಾಂ-ಪ್ರಾಣಿಪೀಡನವನ್ನೂ, ಪೌರುಷಂ-ಆರಂಭಿಸಿದ ಕರ್ಮವನ್ನು ಪೂರ್ತಿಮಾಡುವುದಕ್ಕೆ ತಕ್ಕ ತನ್ನ ಸಾಮರ್ಥ್ಯವನ್ನೂ, ಅನವೇಕ್ಷ್ಯ-ಪರ್ಯಾಲೋಚಿಸದೆ, (ಶ್ರೀ) ಅನಪೇಕ್ಷ್ಯ ಎಂಬದಾಗಿ ಪಾಠವು, ಅರ್ಥವ್ಯತ್ಯಾಸವಿಲ್ಲವು. ಮೋಹಾತ್-ಪರಮ ಪುರುಷನ ಕರ್ತೃತ್ವ ಜ್ಞಾನವಿಲ್ಲದೆ ಇರುವುದರಿಂದ, ಯತ್ಕರ್ಮಾರಭ್ಯತೇ-ಯಾವಕರ್ಮವು ಆರಂಭಿಸಲ್ಪಡುವುದೊ, ತತ್-ಆಕರ್ಮವು, ತಾಮಸ ಮುಚ್ಯತೇ-ತಮೋಗುಣಮೂಲಕವೆಂಬದಾಗಿ ಹೇಳಲ್ಪಡುವುದು. ॥೨೫॥

(ಶಂ) ಅನವೇಕ್ಷ್ಯ-ಆರಂಭಿಸಿದ ಕಾರ್ಯವನ್ನು ಪೂರ್ತಿಮಾಡಬಹುದು ಅಥವಾ ಪೂರ್ತಿಯಾಗಲಾರದೆಂದು ಯೋಚಿಸದೆ, ಮೋಹಾತ್-(ಗೀ॥

ವಿ) ತಾನು ಕರ್ತಾ ಎಂಬ ಅಜ್ಞಾನದಿಂದ (ಶ್ರೀ) ತತ್ತ್ವಮುಪಮುದಾ ಹೃತಂ ಎಂಬದಾಗಿ ಕೆಲವುಪುಸ್ತಕಪಾಠವು ಅರ್ಥಭೇದವಿಲ್ಲವು. ॥೨೫॥

ಶ್ಲೋ ॥ ಮುಕ್ತಸಂಗೋನಹಂವಾದೀಧೃತ್ಯುತ್ಸಾಹಸಮ
ನ್ವಿತಃ । ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃಕರ್ತಾಸಾತ್ತ್ವಿ
ಕಉಚ್ಯತೇ ॥ ... ... ॥೨೬॥

ಪ॥ ಮುಕ್ತಸಂಗಃ-ಅನಹಂವಾದೀ-ಧೃತ್ಯುತ್ಸಾಹಸಮನ್ವಿತಃ । ಸಿದ್ಧ್ಯಸಿದ್ಧ್ಯೋಃ-ನಿರ್ವಿಕಾರಃ-ಕರ್ತಾ-ಸಾತ್ತ್ವಿಕಃ-ಉಚ್ಯತೇ ॥

(ಅ॥ ರಾ॥ ಭಾ) ಮುಕ್ತಸಂಗಃ-ಫಲಸಂಗವನ್ನು ಬಿಟ್ಟವನಾಗಿಯೂ, ಅನಹಂವಾದೀ- ಕರ್ತೃತ್ವಾಭಿಮಾನವಿಲ್ಲದವನಾಗಿಯೂ, ಧೃತ್ಯುತ್ಸಾಹಸಮನ್ವಿತಃ - ಉಪಕ್ರಮಿಸಿದ ಕರ್ಮವು ಪೂರ್ತಿಯಾಗುವವರೆಗೂ ಮಧ್ಯಕಾಲದಲ್ಲಿ ಪ್ರಾಪ್ತವಾಗುವುದಾಗಿಯೂ ಅನುಭವಿಸಿಯೇ ತೀರಬೇಕಾಗಿಯೂ ಇರುವ ದುಃಖವನ್ನು ಧರಿಸುವಿಕೆ ಎಂಬ ಧೈರ್ಯದೊಡನೆಯೂ, ಮಾಡುವ ಕರ್ಮದಲ್ಲಿ ಉದ್ಯೋಗ ಯುಕ್ತವಾದ ಮನಸ್ಸುಳ್ಳವಿಕೆ ಎಂಬ ಉತ್ಸಾಹದೊಡನೆಯೂ ಕೂಡಿದವನಾಗಿಯೂ, ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ-ಯುದ್ಧಾದಿ ಕರ್ಮದಲ್ಲಿಯೂ ಅದಕ್ಕೆ ಉಪಕರಣವಾದ ದ್ರವ್ಯಾರ್ಜನಾದಿಗಳಲ್ಲಿಯೂ ಜಯಾದಿ ಫಲವು ಸಿದ್ಧಿಸಿದರೂ ಸಿದ್ಧಿಸದೇ ಹೋದರೂ ವಿಕಾರವಿಲ್ಲದ ಚಿತ್ತವುಳ್ಳವನಾಗಿರುವ,ಕರ್ತಾ-ಕರ್ಮವನ್ನನುಷ್ಠಿಸುವ ಅಧಿಕಾರಿಯು, ಸಾತ್ತ್ವಿಕ ಉಚ್ಯತೇ - ಸತ್ತ್ವಗುಣಪ್ರಧಾನನೆಂಬದಾಗಿ ಹೇಳಲ್ಪಡುತ್ತಾನೆ. ... ॥೨೬॥

(ಶಂ) ಅನಹಂವಾದೀ- ನಾನುಕರ್ತಾ ಎಂಬುವುದನ್ನು ಹೇಳದವನಾಗಿಯೂ, (ಗೀ॥ ವಿ) ಸರ್ವಕರ್ತಾ ಪರಮಾತ್ಮನೆಂಬ ನಿಶ್ಚಯದಿಂದ ತಾನು ಕರ್ತಾ ಎಂಬ ಅಭಿಮಾನವಿಲ್ಲದವನಾಗಿಯೂ, ಧೃತಿಃ-(ಗೀ ವಿ) ಧಾರಣವು, ಯಾವಾಗಲೂ ಜ್ಞಾಪಕದಲ್ಲಿಟ್ಟಿರುವಿಕೆಯು, ಸಿದ್ಧ್ಯಸಿದ್ಧ್ಯೋಃ-(ಶಂ) ಕರ್ಮಫಲವು ದೊರಕಿದರೂ ದೊರಕದೆ ಹೋದರೂ, ನಿರ್ವಿಕಾರಃ-(ಶಂ) ಶಾಸ್ತ್ರಪ್ರಮಾಣವನ್ನು ನಂಬಿದವನಾಗಿಯೂ ಫಲೇಚ್ಛಾರಹಿತನಾಗಿಯೂ ಪ್ರವರ್ತಿಸುವಂತವನು. .... ॥೨೬॥

ಶ್ಲೋ ॥ ರಾಗೀಕರ್ಮಫಲಪ್ರೇಪ್ಸುರ್ಲುಬ್ಧೋಹಿಂಸಾತ್ಮ

ಶ್ಲೋ ೨೭ । ಹರ್ಷಶೋಕಾನ್ವಿತಃಕರ್ತಾರಾಜಸಃಪರಿಕೀ
ರ್ತಿತಃ ॥೨೭॥

ಪ॥ ರಾಗೀ-ಕರ್ಮಫಲಪ್ರೇಪ್ಸುಃ-ಲುಬ್ಧಃ-ಹಿಂಸಾತ್ಮಕಃ-ಅಶುಚಿಃ । ಹರ್ಷಶೋಕಾ
ನ್ವಿತಃ-ಕರ್ತಾ-ರಾಜಸಃ-ಪರಿಕೀರ್ತಿತಃ ॥

(ಅ॥ರಾ ॥ ಭಾ) ರಾಗೀ-ಯಶಸ್ಸಿನಲ್ಲಪೇಕ್ಷೆಯುಳ್ಳವನಾಗಿಯೂ-ಕರ್ಮಫಲಪ್ರೇಪ್ಸುಃ - ಕರ್ಮಫಲವನ್ನ ಪೇಕ್ಷಿಸಿದವನಾಗಿಯೂ, ಲುಬ್ಧಃ- ಕರ್ಮಕ್ಕಪೇಕ್ಷಿತ ವಾದ ದ್ರವ್ಯತ್ಯಾಗವನ್ನು ಮಾಡ ಕೊಡದ ಲೋಭಗುಣ ಮುಳ್ಳವನಾಗಿಯೂ, ಹಿಂಸಾತ್ಮಕಃ - ಅನ್ಯರನ್ನು ಪೀಡಿಸಿ ಅವರಿಂದ ಕಾರ್ಯವನ್ನು ಮಾಡಿಕೊಳ್ಳುವಂತವ ನಾಗಿಯೂ,ಅಶುಚಿಃ-ಕರ್ಮಕ್ಕೆ ಅಪೇಕ್ಷಿತವಾದ ಶುದ್ಧಿ ರಹಿತನಾಗಿಯೂ, ಹರ್ಷಶೋಕಾನ್ವಿತಃ - ಯುದ್ಧಾದಿಕರ್ಮದಲ್ಲಿ ಶತ್ರುಜಯವು ಘಟಿಸ್ಥಿಸಿದರೆ ಅದರಲ್ಲಿ ಸಂತೋಷವೂ ಅದುಸಿದ್ಧಿಸದೆ ಹೋದರೆ ಆದರಲ್ಲಿ ದುಃಖವುಳ್ಳವನಾಗಿಯೂ ಇರುವ, ಕರ್ತಾ-ಕರ್ಮಾನುಷ್ಠಾತಾಆದ ಅಧಿಕಾರಿಯು, ರಾಜಸಃ ಪರಿಕೀರ್ತಿತಃ ರಜೋಗುಣ ಪ್ರಧಾನನೆಂಬದಾಗಿ ಹೇಳಲ್ಪಡುತ್ತಾನೆ, ... ... ... ॥೨೭॥

(ಶಂ) ರಾಗೀ-ಅಭಿಮಾನವುಳ್ಳವನು, (ಗೀ ॥ ವಿ॥ ರಾ) ಏಕಾರ್ಥಕವೆ. ಲುಬ್ಧಃ-(ಶಂ) ಪರಸ್ವದಲ್ಲಪೇಕ್ಷೆಯು ಅಥವಾ ತನ್ನ ದ್ರವ್ಯವನ್ನು ಯಜ್ಞಾದಿ ಸತ್ಕಾರ್ಯಗಳಲ್ಲಿ ಉಪಯೋಗಿಸಲು ಇಷ್ಟವಿಲ್ಲದವನು. (ರಾ ॥ ಗೀ ॥ ವಿ) ಏಕಾರ್ಥವೆ. ಹಿಸಾತ್ಮಕಃ- [ಶಂ) ಪರಹಿಂಸಾಸ್ವಭಾವವುಳ್ಳವನು. ಅಶುಚಿಃ- (ಶಂ) ಆನ್ತರವಾಗಿಯೂ, ಬಾಹ್ಯವಾಗಿಯೂ ಇರುವ ಶುದ್ಧಿರಹಿತನು. (ಗೀ ॥ ವಿ) ದ್ರವ್ಯಶುದ್ಧಿರಹಿತನು, ಹರ್ಷಶೋಕಾನ್ವಿತಃ-(ಶಂ)ಇಷ್ಟಸಿದ್ಧಿಯಲ್ಲಿಸಂತೋಷದಿಂದಲೂ ಅನಿಷ್ಟಪ್ರಾಪ್ತಿಯಲ್ಲಿಇಷ್ಟಸಿದ್ಧಿಯಾಗದೆಇರುವುದರಿಂದವ್ಯಸನದಿಂದಲೂ ಕೂಡಿಇರುವಂತವನು. ... ... ॥೨೭॥

ಶ್ಲೋ ॥ ಅಯುಕ್ತಃ ಪ್ರಾಕೃತಸ್ತಬ್ಧ ಶ್ಶಠೋ ನೈಕೃತಿ
ಕೋಽಲಸಃ।ವಿಷಾದೀ ದೀರ್ಘಸೂತ್ರೀಚ ಕರ್ತಾ ತಾಮಸ
ಉಚ್ಯತೇ॥ ... ... ।೨೮।

ಪ ‖ ಅಯುಕ್ತಃ-ಪ್ರಾಕೃತಃ-ಸ್ತಬ್ಧಃ-ಶಠಃ-ನೈಕೃತಿಕಃ-ಅಲಸಃ। ವಿಷಾದೀ-ದೀರ್ಘಸೂತ್ರೀ-ಚ-ಕರ್ತಾ-ತಾಮಸಃ-ಉಚ್ಯತೇ ‖

(ಅ ‖ ರಾ ‖ ಭಾ) ಅಯುಕ್ತಃ - ಶಾಸ್ತ್ರೀಯಕರ್ಮಯೋಗ್ಯನಾಗಿಯೂ, ಪ್ರಾಕೃತಃ-ವಿದ್ಯಾ ಶೂನ್ಯನಾಗಿಯೂ, ಸ್ತಬ್ಧಃ - ಯಾವಕಾರ್ಯವನ್ನೂ ಮಾಡದ ಸ್ವಭಾವ ಶೀಲನಾಗಿಯೂ, ಶಠಃ-ಅಭಿಚಾರಾದಿ ಕರ್ಮಗಳಲ್ಲಿ ರುಚಿಯುಳ್ಳವನಾಗಿಯೂ, (ಅಭಿಚಾರವೆಂದರೆದ್ವೇಷಿಗಳನ್ನು ಕೊಲ್ಲುವುದು ಅಥವಾ ಪೀಡಿಸುವುದಕ್ಕಾಗಿ ಮಾಡುವ ಮಂತ್ರಾದಿ ಪ್ರಯೋಗರೂಪವಾದ ಕ್ರಿಯೆಯು. ಇದು ಅಥರ್ವಣವೇದಪ್ರಸಿದ್ಧವಾದದ್ದು)ನೈಕೃತಿಕಃ-ವಂಚನ ಪರನಾಗಿಯೂ, ಅಲಸಃ-ಉಪಕ್ರಮಿಸಿದ ಕಾರ್ಯಗಳನ್ನು ತ್ವರೆಯಾಗಿ ಪೂರ್ತಿಮಾಡದ ಆಲಸ್ಯವುಳ್ಳವನಾಗಿಯೂ,ವಿಷಾದೀ-ಅಧಿಕವಾಗಿ ದುಃಖಿಸುವ ಸ್ವಭಾವವುಳ್ಳವನಾಗಿಯೂ, ದೀರ್ಘಸೂತ್ರೀಚ-ಅಭಿಚಾರಾದಿ ಕರ್ಮಗಳನ್ನು ಮಾಡುವಾಗ ಶತ್ರುಗಳು ದೀರ್ಘಕಾಲ ಪರ್ಯಂತವಾಗಿ ದುಃಖಿಸುವಂತೆ ಮಾಡುವ ದೀರ್ಘಾಲೋಚನವುಳ್ಳವನಾಗಿಯೂ ಇರುವ, ಕರ್ತಾ-ಕರ್ಮವನ್ನು ಮಾಡುವಂತವನು, ತಾಮಸ ಉಚ್ಯತೇ-ತಮೋಗುಣ ಪ್ರಧಾನನೆಂಬದಾಗಿ ಹೇಳಲ್ಪಡುತ್ತಾನೆ. ... ... ‖೨೮‖

(ಗೀ ‖ ವಿ) ಅಯುಕ್ತಃ - ಭಗವದರ್ಪಣವನ್ನು ಮಾಡದವನು, (ಶಂ) ಮನಸ್ಸಮಾಧಾನವಿಲ್ಲದವನು, ಪ್ರಾಕೃತಃ- (ಶಂ) ಬಾಲರಂತೆ ಸಂಸ್ಕಾರ ಯುಕ್ತವಾಗದ ಬುದ್ಧಿಯುಳ್ಳವನು, ಅವಿವೇಕಿಯೆಂದರ್ಥವು. (ಗೀ ‖ ವಿ) ಭಕ್ತಿಯಿಂದ ಶ್ರೇಷ್ಠ್ಯವನ್ನು ಹೊಂದದವನು, ಸ್ತಬ್ಧಃ- (ಶಂ) ಯಾರಿಗೂ ದಂಡಾಕಾರವಾಗಿ ನಮಸ್ಕಾರಮಾಡದವನು,(ಗೀ‖ವಿ) ತಾನು ಶ್ರೇಷ್ಠನೆಂಬ ಸಂಭಾವನೆಯಿಂದ ಯಾರಿಗೂ ಬಗ್ಗದವನು, ಶಠಃ-(ಶಂ) ಮಾಯಾವಿಯು, (ಗೀ ‖ ವಿ)ವಂಚಕನು, ನೈಕೃತಿಕಃ (ಶಂ) ನೈಷ್ಕೃತಿಕಃ- ಎಂಬದಾಗಿ ಪಾಠವು ಅರ್ಥವು ಒಂದೇ. (ಗೀ ‖ ವಿ) ಕೆಟ್ಟಕಾರ್ಯವನ್ನು ಮಾಡುವಂತವನು, ಅಲಸಃ- (ಗೀ ‖ ವಿ) ಕಾಲದಲ್ಲಿ ಮಾಡತಕ್ಕದ್ದನ್ನು ಮಾಡದವನು. (ಶಂ) ಯಾವಕಾರ್ಯದಲ್ಲಿಯೂ ಪ್ರವೃತ್ತಿ ಇಲ್ಲದವನು. ವಿಷಾದೀ- (ಶಂ) ಸರ್ವದಾವ್ಯಸನಸ್ವಭಾವವುಳ್ಳವನು, ದೀರ್ಘಸೂತ್ರೀಚ- (ಶಂ) ಒಂದು ದಿನದಲ್ಲಿ ಮಾಡಬೇಕಾ

ದಕಾರ್ಯವನ್ನು ಬಂದು ತಿಂಗಳಲ್ಲಿಯೂ ಕೂಡ ಮಾಡದವನು (ಗೀ ॥ ವಿ) ಮಾಡತಕ್ಕ ಕಾರ್ಯವನ್ನು ಆಮೇಲೆ ಮಾಡೋಣವೆಂಬದಾಗಿ ನೆನೆಸುವಂತವನು. ... ... ... ॥೨೮॥

(ಶ್ರೀ) ಕರ್ತೃ ತ್ರಿವಿಧನೆಂದು ಹೇಳಿದ್ದರಿಂದ ಜ್ಞಾತಾ ತ್ರಿವಿಧನೆಂತಲೂ ಕರ್ಮವು ಮೂರುವಿಧವೆಂದು ಹೇಳಿರುವುದರಿಂದ ತಿಳಿಯತಕ್ಕವಸ್ತುವು ಮೂರುವಿಧವೆಂತಲೂ ಹೇಳಲ್ಪಟ್ಟಿತು. ಬುದ್ಧಿಯು ಮೂರುವಿಧವೆಂಬದಾಗಿ ಮುಂದೇ ಹೇಳಲ್ಪಡುವುದರಿಂದ ಕರಣವೂ ಮೂರುವಿಧವೆಂಬದಾಗಿ ಹೇಳಲ್ಪಡುವುದಾಗಿ ತಿಳಿಯತಕ್ಕದ್ದು. ॥೨೮॥

ಶ್ಲೋ॥ ಬುದ್ಧೇರ್ಭೇದಂಧೃತೇಶ್ಚೈವಗುಣತಸ್ತ್ರಿವಿಧಂಶೃಣು । ಪ್ರೋಚ್ಯಮಾನಮಶೇಷೇಣಪೃಥಕ್ತ್ವೇನಧನಂಜಯ ॥ ... ... ॥೨೯॥

ಪ ॥ ಬುದ್ಧೇಃ-ಭೇದಂ-ಧೃತೇಃ-ಚ-ಏವ-ಗುಣತಃ-ತ್ರಿವಿಧಂ-ಶೃಣು । ಪ್ರೋಚ್ಯಮಾನಂ-ಅಶೇಷೇಣ-ಪೃಥಕ್ತ್ವೇನ-ಧನಂಜಯ ॥

(ಅ ॥ ರಾ ॥ ಭಾ) ಈ ಪ್ರಕಾರವಾಗಿ ಕರ್ತವ್ಯ ಕರ್ಮವಿಷಯವಾದ ಜ್ಞಾನದಲ್ಲಿಯೂ, ಅನುಷ್ಠೇಯವಾದ ಕರ್ಮದಲ್ಲಿಯೂ ಅನುಷ್ಠಾತಾ ಆದ ಕರ್ತೃ ಆದವನಲ್ಲಿಯೂ ಸತ್ವಾದಿಗುಣಭೇದದಿಂದ ತ್ರೈವಿಧ್ಯವು ಹೇಳಲ್ಪಟ್ಟಿತು. ಇನ್ನು ಮುಂದೆ ಸರ್ವಪುರುಷಾರ್ಥಸಿದ್ಧಿಯು ರೂಪವಾದ ಬುದ್ಧಿಯಲ್ಲಿಯೂ ಉಪಕ್ರಮಿಸಿರುವ ಕರ್ಮಕ್ಕೆ ಮಧ್ಯಕಾಲದಲ್ಲಿ ವಿಘ್ನ ಬಂದರೂ ಅದನ್ನು ಪ್ರಾಪ್ತಿಮಾಡದೆ ಬಿಡಲಾರದ ಧೃತಿ (ಧೈರ್ಯ) ಯಲ್ಲಿಯೂ ಸತ್ವಾದಿಗುಣ ಮೂಲಕವಾದ ತ್ರೈವಿಧ್ಯವನ್ನು ಹೇಳುತ್ತಾರೆ. ಬುದ್ಧೇಃ- (ಯೋಗ್ಯವಾದದ್ದನ್ನೂ ಅಯೋಗ್ಯವಾದದ್ದನ್ನೂ ವಿಭಾಗಿಸಿ ತಿಳಿಯುವುದಾದ ವಿವೇಕದಿಂದುಂಟಾದ ನಿಶ್ಚಯವೆಂಬ) ಬುದ್ಧಿಗೂ, ಧೃತೇಶ್ಚೈವ-ಪ್ರಾರಂಭಿಸಿರುವ ಕ್ರಿಯೆಗೆ ಮಧ್ಯಕಾಲದಲ್ಲಿ ವಿಘ್ನಗಳು ಪ್ರಾಪ್ತಗಳಾದರೂ ಅದನ್ನು ಬಿಡಲಾರದೆಂಬ ಧೃತಿಗೂ, ಪೃಥಕ್ತ್ವೇನ ಪ್ರೋಚ್ಯಮಾನಂ-ಒಂದಕ್ಕೊಂದು ಕಲೆತಿರುವಿಕೆ ಯಿಲ್ಲದೆ ನನ್ನಿಂದ ಹೇಳಲ್ಪಡುವ, ಗುಣತಃ-ಸತ್ವಾದಿ ಗುಣಭೇದದಿಂದ, ತ್ರಿವಿ

ಧಂ-ಮೂರುವಿಧವಾದ, ಭೇದಂ-ವಿಭಾಗವನ್ನು, ಧನಂಜಯ-ಎಲೈ ಅರ್ಜುನನೇ ! ಅಶೇಷೇಣಶೃಣು-ವಿಸ್ತಾರವಾಗಿ ಕೇಳು. ॥೨೯॥

ಶ್ಲೋ॥ ಪ್ರವೃತ್ತಿಂಚನಿವೃತ್ತಿಂಚಕಾರ್ಯಾಕಾರ್ಯೆಭಯಾಭಯೇ । ಬಂಧಂಮೋಕ್ಷಂಚ ಯಾವೇತ್ತಿಬುದ್ಧಿಸ್ಸಾಪಾರ್ಥಸಾತ್ತ್ವಿಕೀ ॥ ... ॥೩೦॥

ಪ॥ ಪ್ರವೃತ್ತಿಂ-ಚ-ನಿವೃತ್ತಿಂ-ಚ-ಕಾರ್ಯಾಕಾರ್ಯೇ-ಭಯಾಭಯೇ|ಬಂಧಂ-ಮೋಕ್ಷಂ-ಚ-ಯಾ-ವೇತ್ತಿ-ಬುದ್ಧಿಃ-ಸಾ-ಪಾರ್ಥ-ಸಾತ್ವಿಕೀ ॥

(ಅ॥ ರಾ॥ ಭಾ) ಪ್ರವೃತ್ತಿಂಚ-ಶ್ರೇಯಸ್ಸಾಧನವಾದ ಕರ್ಮವನ್ನೂ, (ಶಂ)ಬಂಧಹೇತುವಾದ ಕರ್ಮಮಾರ್ಗದ ಪ್ರವೃತ್ತಿಯನ್ನೂ, (ಗೀ॥ ವಿ) ಬಂಧಕಾರಣವನ್ನೂ, ನಿವೃತ್ತಿಂಚ- ಮೋಕ್ಷಸಾಧನವಾದ ಧರ್ಮವನ್ನೂ, (ಶಂ) ಮೋಕ್ಷಕಾರಣವಾದ ಸನ್ನ್ಯಾಸ ಮಾರ್ಗವನ್ನೂ, (ಗೀ॥ ವಿ) ಮೋಕ್ಷಕಾರಣವನ್ನೂ, (ರಾ) ಪ್ರವೃತ್ತಿಧರ್ಮವೆಂತಲೂ ನಿವೃತ್ತಿ ಧರ್ಮವೆಂತಲೂ ಪ್ರಸಿದ್ಧವಾದ ಈ ಎರಡರಲ್ಲೊಂದನ್ನು ಅವಲಂಬಿಸಿರುವ ಬ್ರಾಹ್ಮಣಾದಿ ಸರ್ವವರ್ಣಗಳಿಗೂ ಆಯಾ ದೇಶ ವಿಶೇಷದಲ್ಲಿಯೂ ಕಾಲವಿಶೇಷದಲ್ಲಿಯೂ ಅವಸ್ಥಾವಿಶೇಷದಲ್ಲಿಯೂ ಇದುಮಾಡತಕ್ಕದ್ದೆಂತಲೂ ಇದು ಮಾಡತಕ್ಕದ್ದಲ್ಲವೆಂತಲೂ ಇರುವ ಕರ್ತವ್ಯಾಕರ್ತವ್ಯಗಳನ್ನೂ ಎಂದರ್ಥವು. ಭಯಾಭಯೇ-ಶಾಸ್ತ್ರಾತಿಕ್ರಮವೆಂಬ ಭಯಸ್ಥಾನವನ್ನೂ ಶಾಸ್ತ್ರಾನುವೃತ್ತಿಯೆಂಬ ಅಭಯ ಸ್ಥಾನವನ್ನೂ, ಬಂಧಂ-ಸಂಸಾರದ ತತ್ವಸ್ಥಿತಿಯನ್ನೂ, ಮೋಕ್ಷಂಚ-ಮೋಕ್ಷಸ್ವರೂಪದ ತತ್ವಸ್ಥಿತಿಯನ್ನೂ, ಯಾ-ಯಾವ ಬುದ್ಧಿಯಾದರೆ, ವೇತ್ತಿ- ತಿಳಿಯುತ್ತದೆಯೊ, ಪಾರ್ಥ- ಎಲೈ ಅರ್ಜುನನೆ, ಸಾಬುದ್ಧಿಃ- ಆ ಬುದ್ಧಿಯು, ಸಾತ್ವಿಕೀ-ಸತ್ವಗುಣ ಮೂಲಕವಾದದ್ದು. ॥೩೦॥

(ಶಂ॥ ಭಾ) ಬಂಧಹೇತುವಾದ ಶಾಸ್ತ್ರವಿಹಿತವಾಗಿರುವ ಕರ್ಮಮಾರ್ಗವೂ ಮೋಕ್ಷಹೇತುವಾದ ಸನ್ನ್ಯಾಸಮಾರ್ಗವೂ ಪ್ರವೃತ್ತಿನಿವೃತ್ತಿ ಶಬ್ದಗಳಿಂದ ಹೇಳಲ್ಪಡುವುವು. ಇವುಗಳನ್ನೂ ಆಯಾ, ದೇಶಕಾಲಗಳಲ್ಲಿ ದೃಷ್ಟಾದೃಷ್ಟಫಲಗಳನ್ನು ಕೊಡತಕ್ಕ ಕರ್ಮಗ

ಳ ಮಾಡುವಿಕೆಯನ್ನೂ ಮಾಡದೇ ಬಿಡುವಿಕೆಯನ್ನೂ ಭಯಕಾರಣವಾದ ವ್ಯಾಘ್ರಾದಿಗಳನ್ನೂ ಭಯವನ್ನುಂಟುಮಾಡದ ವಸ್ತುಗಳನ್ನೂ ಅದರ ಕಾರಣವನ್ನೂ ಮೋಕ್ಷವನ್ನೂ ಅದರ ಕಾರಣವನ್ನೂ ತಿಳಿಯುವ ಬುದ್ಧಿಯು ಸಾತ್ವಿಕ ಬುದ್ಧಿಯೆನ್ನಲ್ಪಡುವುದು. ॥೩೦॥

ಶ್ಲೋ॥ ಯಯಾಧರ್ಮ ಮಧರ್ಮಂಚ ಕಾರ್ಯಂ ಚಾಕಾರ್ಯ
ಮೇವಚ । ಅಯಥಾವತ್ಪ್ರಜಾನಾತಿ ಬುದ್ಧಿಸ್ಸಾಪಾ
ರ್ಥರಾಜಸೀ ॥ ... ... ॥೩೧॥

ಪ॥ ಯಯಾ-ಧರ್ಮಂ-ಅಧರ್ಮಂ-ಚ-ಕಾರ್ಯಂ-ಚ-ಅಕಾರ್ಯಂ-ಏವ-ಚ-।ಅಯಥಾವತ್-ಪ್ರಜಾನಾತಿ-ಬುದ್ಧಿಃ-ಸಾ-ಪಾರ್ಥ-ರಾಜಸೀ ॥

(ಅ॥ ರಾ॥ ಭಾ) ಪಾರ್ಥ-ಎಲೈ ಅರ್ಜುನನೆ, ಧರ್ಮಂ - ಹಿಂದೇ ಹೇಳಿರುವ ಪ್ರವೃತ್ತಿ ನಿವೃತ್ತಿ ಧರ್ಮವನ್ನೂ, ಅಧರ್ಮಂಚ-ಅದಕ್ಕೆ ವಿರುದ್ಧವಾದ ಅಧರ್ಮವನ್ನೂ, ಕಾರ್ಯಂಚ ಅಕಾರ್ಯಮೇವಚ - ಧರ್ಮನಿಷ್ಠರಿಗೆ ದೇಶಕಾಲಾವಸ್ಥಾದಿಗಳಲ್ಲಿ ಹಿಂದೆ ಹೇಳಿರುವ ಕರ್ತವ್ಯವನ್ನೂ ಅಕರ್ತವ್ಯವನ್ನೂ, ಯಯಾ-ಯಾವಬುದ್ಧಿಯಿಂದ, ಅಯಥಾವತ್ಪ್ರಜಾನಾತಿ-ಯಥಾವತ್ತಾಗಿ ತಿಳಿಯುವುದಿಲ್ಲವೋ, ಸಾಬುದ್ಧಿಃ-ಆ ಬುದ್ಧಿಯು, ರಾಜಸೀ-ರಜೋಗುಣಮೂಲಕವಾದದ್ದು. ॥೩೧॥

(ಶಂ( ಧರ್ಮಂ-ಶಾಸ್ತ್ರಚೋದಿತ ಧರ್ಮವನ್ನೂ, ಅಧರ್ಮಂ-ಶಾಸ್ತ್ರದಲ್ಲಿ ಪ್ರತಿಷೇಧಿಸಲ್ಪಟ್ಟ ಅಧರ್ಮವನ್ನೂ, ಅಯಥಾವತ್-ಒಂದೊಂದು ಕಾರ್ಯದಲ್ಲಿಯೂ ನಿಶ್ಚಯ ಬುದ್ಧಿರಹಿತವಾಗಿ, ( ಗೀ॥ ವಿ ) ಅಲ್ಲಿ ಹೇಳಿರುವ ಧರ್ಮಾದಿಗಳಲ್ಲಿ ಕೆಲವನ್ನು ಯುಕ್ತವಾಗಿಯೂ ಕೆಲವನ್ನು ವಿಪರೀತವಾಗಿಯೂ ತಿಳಿಯುವುದಾದ. ... ॥೩೧॥

ಶ್ಲೋ॥ಅಧರ್ಮಂಧರ್ಮ (ಮಿ) (ತಿ) ತಿಯಾಮನ್ಯತೇತಮ
ಸಾವೃತಾ । ಸರ್ವಾರ್ಥಾನ್ವಿಪರೀತಾಂಶ್ಚಬುದ್ಧಿಸ್ಸಾಪಾ
ರ್ಥತಾಮಸೀ ॥ ... ... ॥೩೨॥

ಪ॥ ಅಧರ್ಮಂ-ಧರ್ಮಂ-ಇತಿ-ಯಾ-ಮನ್ಯತೇ-ತಮಸಾ-ಆವೃತಾ । ಸರ್ವಾರ್ಥಾನ್-ವಿಪರೀತಾನ್-ಚ-ಬುದ್ಧಿಃ-ಸಾ-ಪಾರ್ಥ-ತಾಮಸೀ ।

(ಅ॥ ರಾ॥ ಭಾ) ಪಾರ್ಥ-ಎಲೈ ಅರ್ಜುನನೆ, ಯಾ- ಯಾವಬು

ದ್ಧಿಯಾದರೆ, ತಮಸಾ ಆವೃತಾ - ತಮೋಗುಣದಿಂದ ವ್ಯಾಪಿಸಲ್ಪಟ್ಟಿ ಕೊಂಡು, ಅಧರ್ಮಂ ಧರ್ಮಮಿತಿ-ಅಧರ್ಮವನ್ನು ಧರ್ಮವೆಂತಲೂ, ಧರ್ಮಮಧರ್ಮಮಿತಿ-ಧರ್ಮವನ್ನು ಅಧರ್ಮವೆಂತಲೂ, ಸರ್ವಾರ್ಥಾಂಶ್ಚ ವಿಪರೀತಾನ್-ಇರುವುದನ್ನು ಇಲ್ಲದ್ದನ್ನಾಗಿಯೂ ಇಲ್ಲದ್ದನ್ನು ಇರುವುದನ್ನಾಗಿಯೂ ಪರತತ್ವವನ್ನು ಅಪರ ತತ್ವವನ್ನಾಗಿಯೂ ಅವರ ತತ್ವವನ್ನು ಪರತತ್ವವನ್ನಾಗಿಯೂ ಈ ಪ್ರಕಾರವಾಗಿ ಸರ್ವಪದಾರ್ಥಗಳನ್ನು ವ್ಯತ್ಯಾಸವಾಗಿ, ಮನ್ಯತೆ- ತಿಳಿಯುತ್ತದೆಯೊ, ಸಾಬುದ್ಧಿಃ-ಆ ಬುದ್ಧಿಯು, ತಾಮಸೀ-ತಮೋಗುಣ ಮೂಲಕವಾದದ್ದು. ॥೩೨॥

(ಶಂ॥ ಭಾ) ಎಲೈ ಅರ್ಜುನನೆ ಯಾವ ಅಂತಃಕರಣವು ಅವಿವೇಕದಿಂದ ಮುಚ್ಚಲ್ಪಟ್ಟದ್ದಾಗಿ ಅಶಾಸ್ತ್ರೀಯವಾದದ್ದನ್ನು ಶಾಸ್ತ್ರೋಕ್ತವನ್ನಾಗಿಯೂ ಸಮಸ್ತ ವಸ್ತುಗಳನ್ನು ವಿರುದ್ಧಗಳನ್ನಾಗಿಯೂ ತಿಳಿಯುವುದೋ ಅಂಥಾ ಬುದ್ಧಿಯು ತಮೋಗುಣ ಪ್ರಧಾನವಾದದ್ದು. ... ... ... ॥೩೨॥

(ಶ್ರೀ) ಹಿಂದಿನ ಎರಡು ಶ್ಲೋಕಗಳಲ್ಲಿಯೂ ಈ ಶ್ಲೋಕದಲ್ಲಿಯೂ ಹೇಳಲ್ಪಟ್ಟ ಬುದ್ಧಿಯೆಂಬುವುದು ಅಂತಃಕರಣವು, ಜ್ಞಾನವೆಂಬುವುದು ಅದರ ವ್ಯಾಪಾರವು, ಧೃತಿಯೆಂಬುವುದು ಬುದ್ಧಿಯ ವ್ಯಾಪಾರವು. ಅಥವಾಬುದ್ಧಿಯೆಂಬುವುದು ನಿಶ್ಚಯ ಸ್ವರೂಪವಾದ ಅಂತಃಕರಣ ವ್ಯಾಪಾರವೆನ್ನಲ್ಪಡುವುದು. ಧರ್ಮಾಧರ್ಮಗಳಿಗೆ ಮುಖ್ಯಸಾಧನವು ಬುದ್ಧಿಜ್ಞಾನ ಧೃತಿಗಳಾದುದರಿಂದ ಅವುಗಳನ್ನು ಕುರಿತು ಮಾತ್ರವೆ ಇಲ್ಲಿ ಹೇಳಲ್ಪಟ್ಟಿರುವುದು.ಆದುದರಿಂದ ಇಚ್ಛಾದಿಗಳನ್ನು ಕೂಡ ತ್ರಿಗುಣಗಳುಳ್ಳದ್ದನ್ನಾಗಿ ತಿಳಿಯಬೇಕು. ... ॥೩೨॥

ಶ್ಲೋ ॥ ಧೃತ್ಯಾಯಯಾಧಾರಯತೇಮನಃಪ್ರಾಣೇಂದ್ರಿ
ಯಕ್ರಿಯಾಃ । ಯೋಗೇನಾವ್ಯಭಿಚಾರಿಣ್ಯಾಧೃತಿಸ್ಸಾಪಾ
ರ್ಥ~~ತಾಮಸೀ~~ ॥ ಸಾತ್ವಿಕೀ ... ॥೩೩॥

ಪ॥ ಧೃತ್ಯಾ-ಯಯಾ-ಧಾರಯತೆ-ಮನಃಪ್ರಾಣೇಂದ್ರಿಯಕ್ರಿಯಾಃ । ಯೋಗೇನ-ಅವ್ಯಭಿಚಾರಿಣ್ಯಾ-ಧೃತಿಃ-ಸಾ-ಪಾರ್ಥ-ಸಾತ್ವಿಕೀ ॥

(ಅ॥ ರಾ॥ ಭಾ) ಪಾರ್ಥ-ಎಲೈ ಅರ್ಜುನನೆ, ಯೋಗೇನ- ಮೋ

ಕ್ಷಸಾಧನವಾದ ಭಗವದುಪಾಸನದಿಂದ, ಅದುಸಿದ್ಧಿಸುವುದಕ್ಕಾಗಿ ಎಂ ದರ್ಥವು, ಅವ್ಯಭಿಚಾರಿಣ್ಯಾ-ಇನ್ನೊಂದು ವಿಷಯದಲ್ಲಿಯೂ ಪ್ರವೇಶಿಸ ದೇ ಇರುವ, ಯಯಾಧೃತ್ಯಾ-ಯಾವಧೃತಿ-(ಧೈರ್ಯ-ಧೀರತ್ವ) ಯಿಂದ, ಮನಃಪ್ರಾಣೇಂದ್ರಿಯಕ್ರಿಯಾಃ - ಮನಸ್ಸೇನು, ಪ್ರಾಣಾಪಾನಾದಿ ಶರೀರವಾಯುಗಳೇನು, ಚಕ್ಷುರಾದೀಂದ್ರಿಯಗಳೇನು, ಅವುಗಳ ವ್ಯಾ ಪಾರಗಳನ್ನು, ಧಾರಯತೆ-ಧರಿಸುತ್ತಾನೊ, ಸಾಧೃತಿಃ - ಆಧೃತಿಯು, ಸಾತ್ವಿಕೀ-ಸತ್ವಗುಣಮೂಲಕವಾದದ್ದು. ... ॥೩೩॥

(ಶಂ ॥ ಭಾ) ಯೋಗೇನ-ಯೋಗಸಮಾಧಿಯಿಂದ, ಅವ್ಯಭಿಚಾರಿ ಣ್ಯಾ-ಯಾವಾಗಲೂ ಸಮಾಧಿಯೊಡನೆ ಕೂಡಿರುವ, ಯಯಾಧೃತ್ಯಾ- ಯಾವ ಧೈರ್ಯದಿಂದ, ಧಾರಯತೆ-ಮನಃಪ್ರಾಣೇಂದ್ರಿಯಗಳ ವ್ಯಾಪಾ ರಗಳನ್ನು ವಿಷಯಾಂತರಗಳಿಂದ ನಿವೃತ್ತಿಪಡಿಸಿ ಆತ್ಮಚಿಂತನದಲ್ಲಿ ನಿಲ್ಲಿಸುತ್ತಾನೆಯೊ ಅಂಥಾ ಧೈರ್ಯವು ಸಾತ್ವಿಕ ವಾದದ್ದು. ॥೩೩॥.

(ಗೀ ॥ ವಿ) ಯೋಗೇನ-ಭಗವದ್ಭಕ್ತಿಯೊಡನೆ ಕೂಡಿರುವ ಯೋಗ ದಿಂದ, ಅವ್ಯಭಿಚಾರಿಣ್ಯಾ ವಿಹಿತವಾದ ಮಾರ್ಗದಲ್ಲಿರುವ. ॥೩೩॥

ಶ್ಲೋ ॥ ಯಯಾತು ಧರ್ಮಕಾಮಾರ್ಥಾನ್ ಧೃತ್ಯಾಧಾರ
ಯತೇಽರ್ಜುನ।ಪ್ರಸಂಗೇನಫಲಾಕಾಂಕ್ಷೀಧೃತಿಸ್ಸಾಪಾ
ರ್ಥರಾಜಸೀ ॥ ... ... ॥೩೪॥

ಪ ॥ ಯಯಾ-ತು-ಧರ್ಮಕಾಮಾರ್ಥಾನ್-ಧೃತ್ಯಾ-ಧಾರಯತೆ-ಅರ್ಜನ । ಪ್ರಸಂಗೇ ನ-ಫಲಾಕಾಂಕ್ಷೀ-ಧೃತಿಃ-ಸಾ-ಪಾರ್ಥ-ರಾಜಸೀ ॥

(ಅ ॥ ರಾ ॥ಭಾ) ಪಾರ್ಥ-ಎಲೈ ಅರ್ಜುನನೆ ! ಫಲಾಕಾಂಕ್ಷೀನ ರಃ-ಧರ್ಮಕಾಮಾರ್ಥಗಳೆಂಬ ಫಲಗಳಲ್ಲಿ ಅಪೇಕ್ಷೆಯುಳ್ಳ ಪುರುಷನು, ಪ್ರ ಸಂಗೇನ, ಅಧಿಕವಾದ ಫಲಾಸಕ್ತಿಯಿಂದ,ಧರ್ಮಕಾಮಾರ್ಥಾನ್-ಧರ್ಮಕಾ ಮಾರ್ಥಸಾಧನಗಳಾದಮನಃಪ್ರಾಣೇಂದ್ರಿಯಕ್ರಿಯೆಗಳನ್ನು, ಯಯಾ ಧೃತ್ಯಾ-ಯಾವಧೃತಿಯಿಂದ, ಧಾರಯತೆ-ಧರಿಸುತ್ತಾನೆಯೊ, ಸಾಧೃ ತಿಃ-ಆಧೃತಿಯು, ರಾಜಸೀ-ರಜೋಗುಣಮೂಲಕವಾದದ್ದು. ॥೩೪॥

(ಶಂ ॥ ಭಾ) ಎಲೈ ಅರ್ಜುನನೆ ಯಾವಧೈರ್ಯದಿಂದ ಧರ್ಮಕಾ ಮಾರ್ಥಗಳನ್ನು, ಧಾರಯತೆ-ಅವು ಬಿಡತಕ್ಕದ್ದಲ್ಲವು ಯಾವಾಗಲೂ

ಮಾಡತಕ್ಕವುಗಳೆ ಎಂಬದಾಗಿ ನಿಶ್ಚಯಿಸಿತಪ್ಪದೆ ಅನುಷ್ಠಿಸುತ್ತಾನೆ ಯೊ, ಧರ್ಮಕಾಮಾರ್ಥಗಳ ಧಾರಣಪ್ರಸಂಗದಿಂದ ಫಲಾಪೇಕ್ಷಿಯಾಗಿ ಯೂ ಆಗುವನೊ ಅಂಥಾಧೈರ್ಯವುರಜೋಗುಣಪ್ರಧಾನವಾದದ್ದು.॥೩೪॥

(ಗೀ ॥ ವಿ) ಪ್ರಸಂಗೇನ-ತನ್ನದೆಂಬ ಅಭಿಮಾನದಿಂದ. ॥೩೪॥

**ಶ್ಲೋ॥ ಯಯಾಸ್ವಪ್ನಂಭಯಂ ಶೋಕಂ ವಿಷಾದಂಮ ದಮೇವಚ | ನವಿಮುಂಚತಿದುರ್ಮೇಧಾಧೃತಿಸ್ಸಾಪಾರ್ಥ ತಾಮಸೀ ॥ ... ... ॥೩೫॥**

ಪ ॥ ಯಯಾ-ಸ್ವಪ್ನಂ-ಭಯಂ-ಶೋಕಂ-ವಿಷಾದಂ-ಮದಂ-ಏವ-ಚ | ನ-ವಿಮುಂ ಚತಿ-ದುರ್ಮೇಧಾಃ-ಧೃತಿಃ-ಸಾ-ಪಾರ್ಥ-ತಾಮಸೀ ॥

(ಅ ॥ ರಾ ॥ ಭಾ) ಹೇಪಾರ್ಥ-ಎಲೈ ಅರ್ಜುನನೆ, ಯಯಾ-ಯಾವ ಧೃತಿಯಿಂದ, ಸ್ವಪ್ನಂ-ನಿದ್ರೆಯನ್ನು ಕುರಿತೂ, ಮದಂ- ವಿಷಯಾನುಭವದಿಂದುಂಟಾಗುವ ಮನೋವಿಕಾರ ರೂಪವಾದ ಮದವನ್ನು ಕುರಿತೂ,ಭಯಂ-ಭಯಪ್ರದವಾದ ವಿಷಯವನ್ನು ಕುರಿತೂ, ಶೋಕಂ ಶೋಕಪ್ರದವಾದ ವಸ್ತುವನ್ನು ಕುರಿತೂ, ವಿಷಾದಂ-ವ್ಯಸನವನ್ನು ಕೊಡುವ ವಿಷಯವನ್ನು ಕುರಿತೂ,ಮನಃಪ್ರಾಣೇಂದ್ರಿಯಕ್ರಿಯಾಃ- (ಈ ಪದವನ್ನು ಹಿಂದಿನ ಶ್ಲೋಕದಿಂದ ಕೂಡಿಸಿಕೊಳ್ಳಬೇಕು) ಮನಃ ಪ್ರಾಣೇಂದ್ರಿಯ ವ್ಯಾಪಾರಗಳನ್ನೂ, ದುರ್ಮೇಧಾಃ- ದುಷ್ಟಬುದ್ಧಿಯುಳ್ಳ ಪುರುಷನು,ನವಿಮುಂಚತಿ-ಬಿಡುವುದಿಲ್ಲವೊ, ಧರಿಸುತ್ತಾನೆಯೊ ಎಂದರ್ಥವು, ಸಾಧೃತಿಃ-ಆಧೃತಿಯು, ತಾಮಸೀ-ತಮೋಗುಣ ಮೂಲಕವಾದದ್ದು. ... ... ॥೩೫॥

(ಗೀ ॥ ವಿ) ಸ್ವಪ್ನಂ-ಅಧಿಕನಿದ್ರೆಯು, ಶೋಕಂ- (ಆ ॥ ಗಿ) ಇಷ್ಟವಾದವಸ್ತುವು ನಾಶಹೊಂದುವುದರಿಂದುಂಟಾದ ದುಃಖವು, ಪ್ರಿಯವಿಯೋಗ ನಿಮಿತ್ತವಾದ ಸಂತಾಪವೆಂದರ್ಥವು. ವಿಷಾದಂ- ಇಂದ್ರಿಯಗ್ಲಾನಿಯು; ಮನೋ ವಿಕಾರವೆಂದರ್ಥವು. ಮದಮೇವಚ. (ಶಂ ॥ ರಾ ) ಏಕಾರ್ಥವೆ. ( ಗೀ ॥ ವಿ ) ನಿಷಿದ್ಧಗಳಾಗಿರುವ ಸ್ವಪ್ನಾದಿಗಳನ್ನು ಯಾವಧೈರ್ಯದಿಂದ ಬಿಡುವುದಿಲ್ಲವೊ ಅದುತಾಮಸವೆಂದರ್ಥವು. ... ... ॥೩೫॥

ಶ್ಲೋ ॥ ಸುಖಂತ್ವಿದಾನೀಂತ್ರಿವಿಧಂ ಶೃಣು ಮೇಭರತ
ರ್ಷಭ । ಅಭ್ಯಾಸಾದ್ರಮತೆಯತ್ರ ದುಃಖಾಂತಂಚನಿಗ
ಚ್ಛತಿ ॥ ... ... ॥೩೬॥

ಪ॥ಸುಖಂ-ತು-ಇದಾನೀಂ-ತ್ರಿವಿಧಂ-ಶೃಣು-ಮೆ-ಭರತರ್ಷಬ । ಅಭ್ಯಾಸಾತ್-ರಮತೆ-ಯತ್ರ-ದುಃಖಾಂತಂ-ಚ-ನಿಗಚ್ಛತಿ ॥

(ಅ ॥ ರಾ ॥ ಭಾ) ಭರತರ್ಷಭ-ಭರತವಂಶದಲ್ಲಿ ಶ್ರೇಷ್ಠನಾದ ಎಲೈ ಅರ್ಜುನನೆ ! ಸುಖಂತು-ಇದುವರೆಗೂ ಹೇಳಲ್ಪಟ್ಟ ಜ್ಞಾನಕರ್ಮಕರ್ತ್ರಾದಿಗಳು ಯಾವ ಸುಖಕ್ಕೆ ಶೇಷಭೂತಗಳೊ ಅಂಥಾ ಸುಖವನ್ನು, ತ್ರಿವಿಧಂ-ಸತ್ವಾದಿಗುಣ ಭೇದದಿಂದ ಮೂರು ವಿಧವಾಗಿರುವಪ್ರಕಾರವಾಗಿ, ಮೇ-ನನ್ನ ದೆಶೆಯಿಂದ,ಇದಾನೀಂ-ಈಗ, ಶೃಣು-ಕೇಳು. ಯತ್ರ-ಯಾವ ಸುಖದಲ್ಲಿ, (ಶಂ) ಯತ್ರ-ಯಾವ ಸುಖಾನುಭವದಲ್ಲಿ ಅಭ್ಯಾಸಾತ್-ಆಗಾಗ್ಗೆಯ ಅನುಭವ ಕ್ರಮದಿಂದ, ರಮತೆ-ಅಧಿಕವಾದ ಆದರಯುಕ್ತನಾಗುವನೊ, ದುಃಖಾಂತಂ-ಸಮಸ್ತಸಾಂಸಾರಿಕ ದುಃಖನಿವೃತ್ತಿಯನ್ನು, ನಿಗಚ್ಛತಿಚ-ಹೊಂದುತ್ತಾನೆಯೊ, ಅಂಥಾ ಸುಖವು ಮೂರು ವಿಧವಾಗಿರುವ ಪ್ರಕಾರವನ್ನು ಕೇಳೆಂದು ಭಾವವು. ॥೩೬॥

ಶ್ಲೋ ॥ ಯತ್ತದಗ್ರೇವಿಷಮಿವಪರಿಣಾಮೇಽಮೃತೋಪ
ಮಂ । ತತ್ಸುಖಂ ಸಾತ್ವಿಕಂ ಪ್ರೋಕ್ತಮಾತ್ಮ ಬುದ್ಧಿ
ಪ್ರಸಾದಜಂ ॥ ... ... ॥೩೭॥

ಪ ॥ ಯತ್-ತತ್-ಅಗ್ರೇ- ವಿಷಂ-ಇವ-ಪರಿಣಾಮೆ-ಅಮೃತೋಪಮಂ । ತತ್-ಸುಖಂ-ಸಾತ್ವಿಕಂ-ಪ್ರೋಕ್ತಂ-ಆತ್ಮಬುದ್ಧಿಪ್ರಸಾದಜಂ ॥

ಅ ॥ ರಾ ॥ ಯತ್ತತ್-ಯಾವಸುಖವಾದರೆ, ಅಗ್ರೇ- ಯೊಗೊಪಕ್ರಮ ಸಮಯದಲ್ಲಿ, (ಶಂ) ಜ್ಞಾನವೈರಾಗ್ಯ ಧ್ಯಾನಸಮಾಧಿಗಳನ್ನು ಅನುಷ್ಠಿಸುವುದಕ್ಕೆ ಆರಂಭಿಸುವ ಕಾಲದಲ್ಲಿ, ವಿಷಮಿವ-ಅಧಿಕವಾಗಿ ಪ್ರಯಾಸಪಟ್ಟು ಸಾಧಿಸತಕ್ಕದ್ದಾಗಿರುವುದರಿಂದಲೂ, ಆವಾಗ, ಆತ್ಮಸ್ವರೂಪವು ಪೃಥಕ್ತ್ವೇನ ತಿಳಿಯಲಸಾಧ್ಯವಾಗಿರುವುದರಿಂದಲೂ, ದುಃಖದಂತೆ ಸಹಿಸಲು ಶ್ರಮಕರವಾಗಿರುವುದೊ, ಪರಿಣಾಮೇ-ವಿಪಾಕ

ದಶೆಯಲ್ಲಿ, ಅಮೃತೋಪಮಂ - ಅಭ್ಯಾಸಫಲದ ಶೆಗಳಲ್ಲಿ ಆತ್ಮಸ್ವರೂಪವು ಪೃಥಕ್ಕಾಗಿ ತಿಳಿಯುವುದರಿಂದ ಅಮೃತ ಪಾನಮಾಡಿದಂತೆ ಇರುವುದೊ, ಆತ್ಮಬುದ್ಧಿಪ್ರಸಾದಜಂ-ಆತ್ಮಸ್ವರೂಪಜ್ಞಾನದ ಪ್ರಸಾದವೆಂದರೆ ಇತರ ವಿಷಯಗಳ್ಯಾವತ್ತನ್ನೂ ಬಿಟ್ಟಿರುವಿಕೆಯು,ಅದರಿಂದುಂಟಾಗಿರುವ, ತತ್ಸುಖಂ-ಆ ಆತ್ಮಸ್ವರೂಪಾನುಭವಸುಖವು, ಸಾತ್ವಿಕಂ ಪ್ರೋಕ್ತಂ-ಸತ್ವಗುಣಮೂಲಕವೆಂಬದಾಗಿ ಹೇಳಲ್ಪಟ್ಟಿತು.॥೩೭॥

(ಶಂ) ಪರಿಣಾಮೇ-ಜ್ಞಾನವೈರಾಗ್ಯಾದಿ ಸಿದ್ಧ್ಯನಂತರದಲ್ಲಿ, ಆತ್ಮಬುದ್ಧಿಪ್ರಸಾದಜಂ - ಪರಿಶುದ್ಧವಾದ ಯಾವ ಆತ್ಮಜ್ಞಾನವುಂಟೋ ಅಂಥಾ ನಿರ್ಮಲವಾದ ಜ್ಞಾನದಿಂದುಂಟಾದ (ಅಥವಾ) ಅಖಂಡಾತ್ಮಸ್ವರೂಪವಲ್ಲದೆ ಅನ್ಯ ವಿಷಯಗಳಲ್ಲಿ ಪ್ರವರ್ತಿಸದ ಜ್ಞಾನವು ಪೂರ್ಣವಾಗಿ ಜನಿಸುವಕಾಲದಲ್ಲುಂಟಾದ. ... ... ॥೩೭॥

(ಗೀ ॥ ವಿ) ಆತ್ಮಬುದ್ಧಿಪ್ರಸಾದಜಂ-ವಿಷ್ಣುಪ್ರಸಾದದಿಂದುಟಾದದ್ದು ಬುದ್ಧಿಪ್ರಸಾದವು, ಅದುಯಾವದೆಂದರೆ, ವಿಷ್ಣುವನ್ನು ಬಿಟ್ಟು ಇತರ ವಿಷಯಗಳನ್ನು ಗ್ರಹಿಸದೆ ಇರುವಿಕೆಯೆ, ಅದರಿಂದುಂಟಾದದ್ದು ಆತ್ಮಬುದ್ಧಿಪ್ರಸಾದಜವು. ... ... ॥೩೭॥

ಶ್ಲೋ ॥ ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃ
ತೋಪಮಂ । ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ
ಸ್ಮೃತಂ ॥ ... ... ॥೩೮॥

ಪ ॥ ವಿಷಯೇಂದ್ರಿಯಸಂಯೋಗಾತ್-ಯತ್-ತತ್-ಅಗ್ರೇ-ಅಮೃತೋಪಮಂ ಪರಿಣಾಮೇ-ವಿಷಂ-ಇವ-ತತ್-ಸುಖಂ-ರಾಜಸಂ-ಸ್ಮೃತಂ ॥

(ಅ ॥ ರಾ ॥ ಭಾ) ಅಗ್ರೇ-ವಿಷಯಾನುಭವಕಾಲದಲ್ಲಿ, (ಶಂ ॥ ಗೀ ॥ ವಿ) ಪ್ರಾರಂಭದಲ್ಲಿ, ವಿಷಯೇಂದ್ರಿಯ ಸಂಯೋಗಾತ್-ರಸಮೊದಲಾದ ವಿಷಯಗಳಿಗೂನಾಲಿಗೆ ಮೊದಲಾದ ಇಂದ್ರಿಯಗಳಿಗೂ ಇರುವಸಂಬಂಧದಿಂದ,ಯತ್ತತ್-ಯಾವ ಸುಖವಾದರೆ,ಅಮೃತೋಪಮಂ-ಅಮೃತ ಪಾನಮಾಡಿದಂತೆ ಇರುವುದೊ,ಪರಿಣಾಮೆ-ಪರಿಪಾಕದಶೆಯಲ್ಲಿ, ವಿಷಯಗಳು ಸುಖವಾಗಿ ತೋರುವುದಕ್ಕೆ ಕಾರಣವಾದ ಕ್ಷುತ್ತು(ಹಸಿವು) ಮೊದಲಾದವು ನಿವರ್ತಿಸಿದ ಮೇಲೆ ಎಂದರ್ಥವು. ವಿಷಮಿವ-

ಮೊದಲು ಅನುಭವಿಸಿದ ವಿಷಯ ಸುಖವೆ ನರಕ ಹೇತುವಾಗಿರುವುದರಿಂದ ವಿಷಪಾನವಾದಿಹಂತೆ ಆಗುವದೋ, ತತ್ಸುಖಂ-ಆಸುಖವು, ರಾಜಸಂ-ರಜೋಗುಣಮೂಲಕ ವೆಂಬದಾಗಿ ಹೇಳಲ್ಪಡುವುದು. ॥೩೮॥

(ಶಂ॥ ಭಾ)ವಿಷಮಿವ-ವಿಷಯಸುಖವು ತನ್ನ ಸ್ತ್ರೀ ಮೊದಲಾದ ವಿಷಯಗಳಲ್ಲಿ ಬಲ ಪರಾಕ್ರಮ ರೂಪ ಜ್ಞಾಪಕ ಶಕ್ತಿ ಧನ ಉತ್ಸಾಹಗಳನ್ನು ಹೋಗಲಾಡಿಸುವುದು, ಅನ್ಯಸ್ತ್ರೀ ವಿಷಯದಲ್ಲಿ ಪಾಪ ಫಲವಾದ ನರಕಪತನಕ್ಕೂ ಕಾರಣವಾಗಿರುವುದರಿಂದ ವಿಷದಂತೆ ಹೇಳಲ್ಪಟ್ಟಿತು. ... ... ॥೩೮॥

(ಶ್ರೀ) ಸ್ತ್ರೀಸಂಭೋಗಾದಿಗಳು ಆರಂಭದಲ್ಲಿ ಸುಖದಂತೆ ತೋರಿದರೂ ಅದನ್ನನುಭವಿಸಿದ ಮೇಲೆ ಇಹಪರಗಳಲ್ಲಿ ದುಃಖವನ್ನುಂಟುಮಾಡುವುದು. ಆದುದರಿಂದ ವಿಷದಂತೆ ಹೇಳಲ್ಪಟ್ಟಿತು. ॥೩೮॥

ಶ್ಲೋ ॥ ಯದಗ್ರೇ ಚಾನುಬಂಧೇಚ ಸುಖಂ ಮೋಹ ನ
ಮಾತ್ಮನಃ । ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸ
ಮುದಾಹೃತಂ ॥ ... ... ॥೩೯॥

ಪ॥ ಯತ್-ಅಗ್ರೇ-ಚ-ಅನುಬಂಧೇ-ಚ-ಸುಖಂ-ಮೋಹನಂ-ಆತ್ಮನಃ । ನಿದ್ರಾಲಸ್ಯ ಪ್ರಮಾದೋತ್ಥಂ-ತತ್-ತಾಮಸಂ-ಉದಾಹೃತಂ ॥

(ಅ॥ ರಾ॥ ಭಾ) ಯತ್ಸುಖಂ-ಯಾವ ಸುಖವು, ಅಗ್ರೇಚ- ಅನುಭವಕಾಲದಲ್ಲಿಯೂ, ಅನುಬಂಧೇಚ- ಅನಂತರದಲ್ಲಿ ಪ್ರಾಪ್ತವಾಗುವ ಪರಿಣಾಮ ದಶೆಯಲ್ಲಿಯೂ, ಆತ್ಮನೋ ಮೋಹನಂ-ಆತ್ಮನಿಗೆ ವಸ್ತು ಯಥಾತ್ಮ್ಯಾನುಗುಣವಾಗಿ ಪ್ರಕಾಶಿಸುವಿಕೆ ಇಲ್ಲವೆಂಬ ಮೋಹವನ್ನುಂಟುಮಾಡುವುದೋ, ನಿದ್ರಾಲಸ್ಯ ಪ್ರಮಾದೋತ್ಥಂ-ನಿದ್ರೆಯಿಂದಲೂ ಇಂದ್ರಿಯವ್ಯಾಪಾರ ಮಾಂದ್ಯದಿಂದಲೂ ಕೃತ್ಯದಲ್ಲಿ ಅವಧಾನವಿಲ್ಲದೆ ಇರುವಿಕೆಯೆಂಬ ಪ್ರಮಾದದಿಂದಲೂ ಉಂಟಾಗಿರುವುದೋ,ತತ್-ಆ ಸುಖವು, ತಾಮಸ ಮುದಾಹೃತಂ-ತಮೋಗುಣ ಮೂಲಕವೆಂಬದಾಗಿ ಹೇಳಲ್ಪಟ್ಟಿತು. ನಿದ್ರೆಯು ಮೋಹಹೇತುವೆಂಬುವುದು ಸ್ಪಷ್ಟವಾಗಿಯೇ ಇರುವುದು. ಇಂದ್ರಿಯ ವ್ಯಾಪಾರವು ಮಂದವಾದಾಗ ಜ್ಞಾನಮಾಂದ್ಯವೂ ಸಿದ್ಧವೆ. ಮಾಡತಕ್ಕ ಕಾರ್ಯಗಳಲ್ಲಿ ಜಾಗರೂಕತೆ ಇಲ್ಲದಿರುವಿಕೆ

ಯೆಂಬ ಪ್ರಮಾದದಲ್ಲಿಯೂ ಜ್ಞಾನಮಾಂದ್ಯವು ಸಿದ್ಧವು. ಆದುದರಿಂದ ನಿದ್ರಾಲಸ್ಯ ಪ್ರಮಾದಗಳು ಮೋಹಕಾರಣಗಳಾದವು. ಇದರಿಂದ ಮುಮುಕ್ಷುವಾದ ಅಧಿಕಾರಿಗೆರಜಸ್ತಮೋ ಗುಣಗಳನ್ನು ಅಣಗಿಸಿ ಸತ್ವಗುಣವೇ ಸ್ವೀಕಾರ್ಯವೆಂದು ಹೇಳಿದಂತೆ ಆಯಿತು. ... ॥೩೯॥

(ಶಂ॥ ಭಾ) ಯಾವ ಸುಖವು ಆರಂಭದಲ್ಲಿಯೂ ಅಂತದಲ್ಲಿಯೂ ತನಿಗೆ ಮೋಹವನ್ನುಂಟುಮಾಡತಕ್ಕದ್ದಾಗಿಯೂ ನಿದ್ರಾಲಸ್ಯ ಪ್ರಮಾದಗಳಿಂದುಂಟಾಗಿರುವುದಾಗಿಯೂ ಇರುವುದೋ ಅಂಥಾ ಸುಖವು ತಾಮಸ ಸುಖವೆಂಬದಾಗಿ ಹೇಳಲ್ಪಡುವುದು. ... ॥೩೯॥

ಶ್ಲೋ॥ ನತದಸ್ತಿ ಪೃಥಿವ್ಯಾಂವಾ ದಿವಿದೇವೇಷುವಾಪುನಃ । ಸತ್ತ್ವಂಪ್ರಕೃತಿಜೈರ್ಮುಕ್ತಂಯದೇಭಿಸ್ಸ್ಯಾತ್ತ್ರಿಭಿರ್ಗುಣೈಃ ॥ ... ॥೪೦॥

ಪ॥ ನ-ತತ್-ಅಸ್ತಿ-ಪೃಥಿವ್ಯಾಂ-ವಾ-ದಿವಿ-ದೇವೇಷು-ವಾ-ಪುನಃ । ಸತ್ವಂ-ಪ್ರಕೃತಿಜೈಃ-ಮುಕ್ತಂ-ಯತ್-ಏಭಿಃ-ಸ್ಯಾತ್-ತ್ರಿಭಿಃ-ಗುಣೈಃ ॥

(ಅ॥ ರಾ॥ ಭಾ) ಪೃಥಿವ್ಯಾಂವಾ-ಭೂಲೋಕವಾಸಿಗಳಾದ ಮನುಷ್ಯಾದಿಗಳಲ್ಲಿಯಾಗಲಿ, ದಿವಿದೇವೇಷುವಾಪುನಃ-ಸ್ವರ್ಗಾದಿ ಲೋಕಗಳಲ್ಲಿರುವ ಬ್ರಹ್ಮಾದಿ ದೇವತೆಗಳಲ್ಲಿ ಯಾಗಲಿ, ಪ್ರಕೃತಿಯೊಡನೆ ಕಲೆತಿರುವ ಬ್ರಹ್ಮಾದಿ ಸ್ಥಾವರಾಂತಗಳಲ್ಲಿ ಯೆಂದರ್ಥವು. ಪ್ರಕೃತಿಜೈಃ-ಪ್ರಕೃತಿಯಿಂದುಂಟಾಗಿರುವ, ತ್ರಿಭಿರ್ಗುಣೈಃ - ಈ ಸತ್ವಾದಿಗಳಾದ ಮೂರುಗುಣಗಳಿಂದ, ಮುಕ್ತಂ-ಬಿಡಲ್ಪಟ್ಟಿರುವುದು,ಯತ್ಸತ್ವಂ-ಯಾವಪ್ರಾಣಿವರ್ಗವೋ, ತನ್ನಾಸ್ತಿ-ಅಂತಹ ಪ್ರಾಣಿವರ್ಗವಿಲ್ಲವು. ಸಮಸ್ತ ಪ್ರಾಣಿವರ್ಗವೂ ಪ್ರಾಕೃತ ಗುಣಪರ ತಂತ್ರವಾಗಿಯೇ ಇರುವುದೆಂದರ್ಥವು. ... ... ... ॥೪೦॥

(ಗೀ॥ ವಿ) ಮುಕ್ತರಿಗೆ ತ್ರಿಗುಣ ಸಂಬಂಧವಿಲ್ಲವೆಂಬುವುದನ್ನು ತೋರಿಸುವುದಕ್ಕಾಗಿ ಮನುಷ್ಯಲೋಕದಲ್ಲಿಯೂ ದೇವಲೋಕದಲ್ಲಿಯೂ ತ್ರಿಗುಣ ಸಂಬಂಧ ವಿಲ್ಲದ ಜೀವವರ್ಗವಿಲ್ಲವೆಂಬದಾಗಿ ಹೇಳಿರುವಂತೆ ತಿಳಿಯಬೇಕು. ಸಾತ್ವಿಕರಾಜಸತಾಮಸ ಭೇದದಿಂದ ಜೀವರು ತ್ರಿವಿಧರಾಗಿರುವರು. ಸಾತ್ವಿಕಾದಿ ಜೀವರೂ ಕೂಡ ಪ್ರತ್ಯೇಕವಾಗಿ

ಮೂರುವಿಧರಾಗಿರುವರು. ಪಿತೃಗಂಧರ್ವಾದಿಗಳು ಸಾತ್ವಿಕ ತಾಮಸರು,
ಮುನಿಗಳು ಸಾತ್ವಿಕರಾಜಸರು, ದೇವತೆಗಳು ಸಾತ್ವಿಕ ಸಾತ್ವಿಕರು.
ಸಾತ್ವಿಕ ಸಾತ್ವಿಕರಲ್ಲಿಯೂ, ಬೃಹಸ್ಪತ್ಯಾಚಾರ್ಯರೆ ಮೊದಲಾದವರು
ಸಾತ್ವಿಕತಾಮಸರು, ಇಂದ್ರನು ಸಾತ್ವಿಕ ಸಾತ್ವಿಕರಾಜಸನು, ಬ್ರ
ಹ್ಮಾದಿ ರುದ್ರಾಂತರಾದವರು ಸಾತ್ವಿಕ ಸಾತ್ವಿಕ ಸಾತ್ವಿಕರು. ಅವರ
ಲ್ಲಿಯೂ ರುದ್ರನು ಸಾತ್ವಿಕ ಸಾತ್ವಿಕ ಸಾತ್ವಿಕತಾಮಸನು, ಬ್ರಹ್ಮಾ
ಣೀ ಭಾರತಿಗಳು(ಬ್ರಹ್ಮಾಣೀ-ಸರಸ್ವತೀದೇವಿಯು, ಭಾರತೀವಾಯು
ಪತ್ನಿಯು, ) ಸಾತ್ವಿಕಸಾತ್ವಿಕ ಸಾತ್ವಿಕ ರಾಜಸರು, ಬ್ರಹ್ಮವಾ
ಯುಗಳು ಸಾತ್ವಿಕ ಸಾತ್ವಿಕ ಸಾತ್ವಿಕರೇ ಎಂದರಿಯಬೇಕು. ಮಧ್ಯ
ಮೊತ್ತಮ ಮನುಷ್ಯರು ರಾಜಸರು, ಅವರೂ ಪ್ರತ್ಯೇಕವಾಗಿ ಮೂ
ರು ಬಗೆಯಾಗಿರುವರು. ಅವರಲ್ಲಿ ವಿಪ್ರಾದಿ ಚಂಡಾಲ ಪರ್ಯಂತರಾದ
ಯಾವ ಭಾಗವತರುಂಟೋ ಅವರು ರಾಜಸಸಾತ್ವಿಕರು, ರಾಜಸ ಸಾ
ತ್ವಿಕರಲ್ಲಿಯೂ ಬ್ರಾಹ್ಮಣರು ರಾಜಸ ಸಾತ್ವಿಕ ಸಾತ್ವಿಕರು, ಕ್ಷತ್ರಿ
ಯರು ಸ್ವಲ್ಪವಾದ ರಜೋಗುಣದಿಂದಕೂಡಿರುವ ಕಾರಣ ರಾಜಸ ರಾಜ
ಸಸಾತ್ವಿಕರು, ವೈಶ್ಯರು ಸಮವಾದ ಸತ್ವರಜಸ್ಸುಳ್ಳವರಾದುದರಿಂದ
ರಾಜಸ ರಾಜಸ ಸಾತ್ವಿಕರು, ಶೂದ್ರರೂ ತಮಸ್ಸಿಗಿಂತಲೂ ಅಲ್ಪವಾದ
ಸತ್ವದಿಂದಲೂ ಅಧಿಕವಾದ ರಜಸ್ಸಿನಿಂದಲೂ ಕೂಡಿರುವುದರಿಂದ ತಾ
ಮಸ ರಾಜಸ ಸಾತ್ವಿಕರು, ರಾಜಸ ಸಾತ್ವಿಕ ಬ್ರಾಹ್ಮಣರಲ್ಲಿಯೂ
ಕೂಡ ಯಾರಾದರೆ ಶುದ್ಧಸತ್ವಸ್ವರೂಪರೋ ಅವರು ಪರಮ ಹಂಸರೆಂ
ಬಶಿಖಾಯಜ್ಞೋಪ ವೀತತ್ಯಾಗಿಗಳಾದ ಏಕದಂಡಿ ಸನ್ಯಾಸಿಗಳು,
ಸ್ವಲ್ಪರಜಸ್ಸಿನೊಡನೆ ಕೂಡಿರುವ ಸತ್ವಗುಣವುಳ್ಳವರು ಹಂಸ ಶಬ್ದವಾ
ಚ್ಯರೂ ಯಜ್ಞೋಪವೀತ ಮುಳ್ಳವರೂ ಆದ ಶಿಖಾವಿಹೀನರಾಗಿರುವ
ಏಕದಂಡಿಗಳು. ಅದಕ್ಕಿಂತಲೂ ಅಧಿಕ ರಜಸ್ಸುಳ್ಳ ಸತ್ವಮುಳ್ಳವರು
ತ್ರಿದಂಡವುಳ್ಳವರಾಗಿಯೂ ಶಿಖಾಯಜ್ಞೋಪವೀತ ಗಳುಳ್ಳವರಾಗಿಯೂ
ಗ್ರಾಮೈಕರಾತ್ರವಾಗಿ ತಿರುಗುವಂತವರಾಗಿಯೂ ಇರುವ ಬಹೂದಕ
ರೆಂಬ ಸನ್ಯಾಸಿಗಳು. ಅದಕ್ಕಿಂತಲೂ ಅಧಿಕ ರಜೋಯುಕ್ತ ಸತ್ವವಂ
ತರು ತ್ರಿದಂಡಿಗಳೂ ಶಿಖಾಯಜ್ಞೋಪವೀತ ಯುಕ್ತರೂ ಯಾವ

ಜ್ಜೀವವೂ ಪುತ್ರಾದಿಗಳಿಂದ ಕೂಡಲ್ಪಟ್ಟ ಭೃಷ್ಟಾನ್ನವುಳ್ಳವರೂ ಆದ ಕುಟೀಚಕರು. ತಾಮಸರೂ ಕೂಡ ಸಾತ್ವಿಕಾದಿ ಭೇದದಿಂದ ತ್ರಿವಿಧರಾಗಿರುವರು, ಅವರಲ್ಲಿ ನರಾಧಮರು ಸಾತ್ವಿಕ ತಾಮಸರು, ದೈತ್ಯಭೃತ್ಯರು ರಾಜಸ ತಾಮಸರು, ಮಹಾದೈತ್ಯರು ತಾಮಸ ತಾಮಸರೆಂಬದಾಗಿ ಇದರ ವಿವರವನ್ನರಿಯಬೇಕು. ... ... ॥೪೦॥

ಶ್ಲೋ ॥ ಬ್ರಾಹ್ಮಣ ಕ್ಷತ್ರಿಯವಿಶಾಂ ಶೂದ್ರಾಣಾಂ
ಚಪರಂತಪ । ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈ
ರ್ಗುಣೈಃ ॥ ... ... ॥೪೧॥

ಪ ॥ ಬ್ರಾಹ್ಮಣಕ್ಷತ್ರಿಯವಿಶಾಂ-ಶೂದ್ರಾಣಾಂ-ಚ-ಪರಂತಪ । ಕರ್ಮಾಣಿ-ಪ್ರವಿಭಕ್ತಾನಿ-ಸ್ವಭಾವಪ್ರಭವೈಃ-ಗುಣೈಃ ॥

(ಅ) ಹೇಪರಂತಪ-ಶತ್ರುಗಳನ್ನು ಸಂತಾಪಿಸುವಂಥಾ ಶಕ್ತಿಯುಳ್ಳ ಎಲೈ ಅರ್ಜುನನೆ ? ಬ್ರಾಹ್ಮಣ ಕ್ಷತ್ರಿಯವಿಶಾಂ - ಬ್ರಾಹ್ಮಣಕ್ಷತ್ರಿಯ ವೈಶ್ಯರಿಗೂ, ಶೂದ್ರಾಣಾಂಚ - ಶೂದ್ರರಿಗೂ, ಕರ್ಮಾಣಿ-ಕರ್ಮಗಳು, ಸ್ವಭಾವಪ್ರಭವೈಃ-ಸ್ವಭಾವ ಜನ್ಯಗಳಾದ, ಗುಣೈಃ-ಗುಣಗಳಿಂದ, ಪ್ರವಿಭಕ್ತಾನಿ-ವಿಭಾಗಿಸಲ್ಪಟ್ಟಿರುವವು. ॥೪೧॥

(ಶ್ರೀ) ಸಕಲವೂಗುಣದಿಂದ ವ್ಯಾಪ್ತವಾಗಿದ್ದರೆ ಮೋಕ್ಷಹೊಂದುವುದಕ್ಕೆ ಮಾರ್ಗ ತಾನೆ ಹ್ಯಾಗೆ ? ಎಂದರೆ ವರ್ಣಾಶ್ರಮೋಚಿತ ಕರ್ಮಗಳನ್ನು ಭಗವದಾರಾಧನವಾಗಿಯೆ ಮಾಡಿಕೊಂಡು ಬಂದರೆ ಆಭಗವತ್ಪ್ರಸಾದದಿಂದಲೆ ಜ್ಞಾನವನ್ನು ಹೊಂದಿ ಅದರಿಂದ ಮೋಕ್ಷವನ್ನು ಹೊಂದಬಹುದೆಂಬೀ ಗೀತಾಸಾರಭೂತವಾದ ಅರ್ಥವು ಇದುಮೊದಲು ಅಧ್ಯಾಯ ಪೂರ್ತಿ ಪರ್ಯಂತವಾಗಿ ಹೇಳಲ್ಪಡುವದು. ॥೪೧॥

( ರಾ ॥ ಭಾ ) ಇದುವರೆಗೂ “ ತ್ಯಾಗೇನೈಕೆ ಅಮೃತತ್ವಮಾನಶುಃ ” ಇತ್ಯಾದಿ ಶ್ರುತಿಗಳಲ್ಲಿ ಮೋಕ್ಷಸಾಧನವೆಂಬದಾಗಿ ನಿರ್ದೇಶಿಸಲ್ಪಟ್ಟ ತ್ಯಾಗವು ಸನ್ಯಾಸ ಶಬ್ದಾರ್ಥದೊಡನೆ ಅಭಿನ್ನವೆಂತಲೂ ಅದೂ ಅನುಷ್ಠಿಸಿಕೊಂಡು ಬರುವ ಕರ್ಮಗಳಲ್ಲಿ ಪರಮಪುರುಷನ ಕರ್ತೃ ಎಂಬದಾಗಿ ಅನುಸಂಧಾನ ಮಾಡುವುದರಿಂದುಂಟಾದ ತನ್ನ ಅಕರ್ತೃತ್ವಾನು ಸಂಧಾನದಿಂದ ಪ್ರಾಪ್ತವಾಗುವುದೆಂತಲೂ ತನ್ನಮಾವಾಗಿ ಬರುವ ಫಲತ್ಯಾಗವೂ ಕರ್ಮವು ಆಪರಮಾತ್ಮನಿಗೆ ಶೇಷವೆಂಬದಾಗಿ ಅನುಸಂಧಿಸುವಿಕೆಯೆಂಬ ಕರ್ಮತ್ಯಾಗವೂ ಎಂಬಿಷ್ಟು ಮಾತ್ರವಲ್ಲದೆ

ಕರ್ಮಸ್ವರೂಪತ್ಯಾಗವಲ್ಲವೆಂತಲೂ ಹೇಳಲಾಯಿತು.. ಇವೆಲ್ಲವೂ ಸತ್ವ ಗುಣಕಾರ್ಯವಾದುದರಿಂದಸತ್ವಗುಣ ವೃದ್ಧಿಯು ಅಪೇಕ್ಷಿತವೆಂಬದಾಗಿ ಸತ್ವಗುಣದ ಉಪಾದೇಯತೆಯನ್ನು ತಿಳಿಸುವುದಕಕ್ಕಾಗಿ ಸತ್ವರಜಸ್ತ ಮಸ್ಸುಗಳ ಕಾರ್ಯಭೇದಗಳನ್ನು ವಿಸ್ತಾರಪಡಿಸಿದನು. ಇನ್ನುಮುಂದೆ ಈರೀತಿಯಾಗಿ ಮೋಕ್ಷಸಾಧನತ್ವೇನ ಅನುಷ್ಠಿಸುವ ಕರ್ಮವು ಪರಮ ಪುರುಷಾರಾಧನರೂಪವೆಂಬುವುದನ್ನೂ ಆರೀತ್ಯಾಅನುಷ್ಠಿಸಲ್ಪಟ್ಟ ಕ ರ್ಮಕ್ಕೆ ಭಗವತ್ಪ್ರಾಪ್ತಿ ಎಂಬ ಫಲವನ್ನೂ ಪ್ರತಿಪಾದಿಸುವುದಕಕ್ಕಾಗಿ ಬ್ರಾಹ್ಮಣಾದ್ಯಧಿಕಾರಿಗಳಿಗೆ ಸ್ವಭಾವಾನುಬಂಧಿ ಸತ್ವಾದಿಗುಣಭೇದ ಭಿನ್ನವಾದಕರ್ತವ್ಯ ಕರ್ಮಸ್ವರೂಪವನ್ನೂ ಅವರವೃತ್ತಿಯನ್ನೂ ಹೇಳು ತ್ತಾರೆ. ಎಲೈ ಅರ್ಜುನನೆ ಬ್ರಹ್ಮಕ್ಷತ್ರಿಯ ವೈಶ್ಯಶೂದ್ರರೆಂಬೀ ನಾ ಲ್ವರಿಗೂ, ತಮ್ಮ ತಮ್ಮಗಳ ಪ್ರಾಚೀನ ಕರ್ಮಾನುಸಾರವಾಗಿ ಸ್ವಭಾವ ಜನ್ಯಗಳಾದ ಗುಣಾನುಗುಣವಾಗಿ ಮಾಡತಕ್ಕ ಕರ್ಮಗಳೂ ವೃತ್ತಿಗಳೂ ಇವು ಇವೆಂಬದಾಗಿ ಶಾಸ್ತ್ರಗಳು ವಿಭಾಗಿಸಿ ಹೇಳುವುವು. ॥೪೧॥

ಬ್ರಾಹ್ಮಣನಿಗೆ-(ಶಂ॥ಶ್ರೀ) ಸತ್ವಗುಣವಧಿಕವು. (ರಾ) ರಜಸ್ತ ಮೋಗುಣಗಳನ್ನಣಗಿಸಿ ಸತ್ವಗುಣವು ವೃದ್ಧಿ ಹೊಂದಿರುತ್ತಾದುದರಿಂದ ಅವನ ಕರ್ಮವುಸಾತ್ವಿಕರಾಗಿರುವುದು. ...

ಕ್ಷತ್ರಿಯನಿಗೆ- ( ಶಂ ॥ ಶ್ರೀ ) ಸತ್ವಗುಣವು ಸ್ವಲ್ಪವಾಗಿರುವು ದು. ರಜೋಗುಣ ವಧಿಕವಾಗಿರುವುದು. (ರಾ) ಸತ್ವತಮೋ ಗುಣ ಗಳನ್ನಣಗಿಸಿರಜೋಗುಣವು ಅಭಿವೃದ್ಧವಾಗಿರುವುದರಿಂದ ಅವನ ಕರ್ಮ ವು ರಾಜಸವಾಗಿರುವುದು. ... ...

ವೈಶ್ಯನಿಗೆ - ( ಶಂ ॥ ಶ್ರೀ ॥ ) ತಮೋಗುಣವು ಸ್ವಲ್ಪವಾಗಿರು ವುದು; ರಜೋಗುಣವೇ ಅಧಿಕವಾಗಿರುವುದು. ( ರಾ ) ಸತ್ವ ರಜೋ ಗುಣಗಳನ್ನು ಅಣಗಿಸಿ ತಮೋಗುಣವು ಸ್ವಲ್ಪವಾಗಿ ಯೆದ್ದಿರುವುದ ರಿಂದ ಅವನವ್ಯಾಪಾರವು ಸ್ವಲ್ಪ ತಾಮಸವಾಗಿಯೆ ಇರುವುದು.

ಶೂದ್ರನಿಗೆ(ಶಂ॥ ಶ್ರೀ) ರಜೋಗುಣವು ಸ್ವಲ್ಪವಾಗಿ ತಮೋಗುಣವು ಅಧಿಕವಾಗಿರುವುದು.(ರಾ)ಸತ್ವರಜೋ ಗುಣಗಳನ್ನು ಅಣಗಿಸಿ ತಮೋಗುಣ ವುಅಧಿಕವಾಗಿ ವೃದ್ಧಿಹೊಂದಿರುವುದಾದುದರಿಂದ ಅವನ ಕರ್ಮವು ತಾ

ಮುಸವಾಗಿರುವುದೆಂದು ತಿಳಿಯಬೇಕು. ಬ್ರಾಹ್ಮಣಾದಿಗಳು ಇಂಥಾ ಗುಣಗಳುಳ್ಳವರು, ಇವು ಇವರುಗಳಿಗೆ ಕರ್ಮಗಳು, ಇವರ ವೃತ್ತಿಯು ಇವು ಎಂಬದಾಗಿ ವಿಭಾಗಿಸಿ ಶಾಸ್ತ್ರಗಳಿಂದ ಪ್ರತಿಪಾದಿಸಲ್ಪಟ್ಟಿರುವುವೆಂದರ್ಥವು. ... ... ॥೪೧॥

ಶ್ಲೋ ॥ ಶಮೋದಮಸ್ತಪಶ್ಶೌಚಂಕ್ಷಾಂತಿರಾರ್ಜವಮೇವಚ । ಜ್ಞಾನಂವಿಜ್ಞಾನಮಾಸ್ತಿಕ್ಯಂಬ್ರಾಹ್ಮಂಕರ್ಮಸ್ವಭಾವಜಂ ॥೪೨॥

ಪ॥ ಶಮಃ-ದಮಃ-ತಪಃ-ಶೌಚಂ-ಕ್ಷಾಂತಿಃ-ಆರ್ಜವಂ-ಏವ-ಚ । ಜ್ಞಾನಂ-ವಿಜ್ಞಾನಂ-ಆಸ್ತಿಕ್ಯಂ-ಬ್ರಾಹ್ಮಂ-ಕರ್ಮ-ಸ್ವಭಾವಜಂ ॥

(ಅ॥ ರಾ॥ ಭಾ) ಶಮಃ-ಚಕ್ಷುರಾದಿಗಳಾದ ಬಾಹ್ಯೇಂದ್ರಿಯಗಳನ್ನು ದುರ್ವಿಷಯಗಳ ದೆಶೆಯಿಂದ ನಿಯಮಿಸುವಿಕೆಯು, ದಮಃ-ಮನೋನಿಗ್ರಹವು, ತಪಃ ಶಾಸ್ತ್ರಸಿದ್ಧವಾದ ಪ್ರಕಾರದಿಂದ ಭೋಗವನ್ನು ನ್ಯೂನ ಮಾಡುವುದೆಂಬ ಶರೀರ ಕ್ಲೇಶವು, ಶೌಚಂ-ಶಾಸ್ತ್ರೀಯಕರ್ಮಯೋಗ್ಯತೆಯು, ಕ್ಷಾಂತಿಃ-ಅನ್ಯರು ಪೀಡಿಸುವಾಗಲೂ ಅವರಲ್ಲಿ ಚಿತ್ತವಿಕಾರರಾಹಿತ್ಯವು, ಆರ್ಜವಮೇವಚ-ಅನ್ಯರಲ್ಲಿ ಮನೋನುರೂಪವಾಗಿಯೆ ಬಾಹ್ಯಚೇಷ್ಟಾಪ್ರಕಾಶನವನ್ನು ಮಾಡುವಿಕೆಯು, ಜ್ಞಾನಂ-ಪರಾವರತತ್ವಗಳನ್ನು ಯಥಾವತ್ತಾಗಿ ತಿಳಿಯುವಿಕೆಯು, ವಿಜ್ಞಾನಂ- ಪರತತ್ವವಾದ ವಸ್ತುವಿನ ಅಸಾಧಾರಣ ವಿಶೇಷ ವಿಷಯಜ್ಞಾನವು, ಆಸ್ತಿಕ್ಯಂ-ವೇದಸಿದ್ಧವಾದವುಗಳೆಲ್ಲವೂ ಸತ್ಯವೆಂಬ ನಿಶ್ಚಯವು, ಆನಿಶ್ಚಯವು ಹೇಗಿರಬೇಕೆಂದರೆ ? ವಾದಿಗಳು ಎಷ್ಟುಹೇತೂಪನ್ಯಾಸಗಳನ್ನು ಮಾಡಿದರೂ ಚಲಿಸದೇ ಇರಬೇಕು. ಅದು ಹೇಗೆಂದರೆ ? ಭಗವಾನ್ ಪುರುಷೋತ್ತಮನಾದ ವಾಸುದೇವನೆ ನಿರಸ್ತನಿಖಿಲದೋಷಗಂಧನಾಗಿಯೂ ಸ್ವಾಭಾವಿಕಾನವಧಿಕಾತಿಶಯ ಜ್ಞಾನಶಕ್ತ್ಯಾದ್ಯಸಂಖ್ಯೇಯ ಕಲ್ಯಾಣ ಗುಣಗಣನಾಗಿಯೂ ನಿಖಿಲ ವೇದವೇದ್ಯನಾಗಿಯೂ ಇರುವ ಪರಬ್ರಹ್ಮನು. ಅವನೇ ಸಮಸ್ತಜಗತ್ತಿಗೂ ಮುಖ್ಯಕಾರಣನು, ಸರ್ವಜಗತ್ತಿಗೂ ಆಧಾರ ಭೂತನು, ಸರ್ವಜಗನ್ನಿಯಾಮಕನು, ವೈದಿಕವಾದ ಸಮಸ್ತ ಕರ್ಮವೂ ಅವನಿಗೆ ಆರಾಧನವಾಗಿರುವುದು, ಆಯಾ ಅಧಿ

ಕಾರಿಗಳಿಂದ ಆಯಾ ಕರ್ಮಗಳಿಂದ ಆರಾಧಿಸಲ್ಪಟ್ಟವನಾಗಿ ಅವನೆ ಅವರಿಗೆ ಧರ್ಮಾರ್ಥಕಾಮಮೋಕ್ಷ ರೂಪವಾದ ಫಲವನ್ನು ಕೊಡುವನೆಂಬೀ ಅರ್ಥವು ಸತ್ಯವೆಂಬ ನಿಶ್ಚಯವೆಂದು ತಾತ್ಪರ್ಯವು. ಈ ಅರ್ಥವು "ವೇದೈಶ್ಚಸರ್ವೈರಹಮೇವವೇದ್ಯಃ-ಅಹಂಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೆ । ಮಯಿಸರ್ವಮಿದಂಪ್ರೋತಂ॥ ಭೋಕ್ತಾರಂಯಜ್ಞತಪಸಾಂ ॥ ಜ್ಞಾತ್ವಾಮಾಂಶಾಂತಿಮೃಚ್ಛತಿ ॥ ಮತ್ತಃ ಪರತರಂನಾನ್ಯತ್ ॥ ಯತಃ ಪ್ರವೃತ್ತಿರ್ಭೂತಾನಾಂ ॥ ಸ್ವಕರ್ಮಣಾತಮಭ್ಯರ್ಚ್ಯ ॥ ಯೋಮಾಮಜಮನಾದಿಂಚ,, ಇತ್ಯಾದಿಗೀತಾವಾಕ್ಯದಿಂದಲೆ ಪ್ರಪಂಚಿತವಾಗಿರುವುದು. ಬ್ರಾಹ್ಮಂಸ್ವಭಾವಜಂಕರ್ಮ-ಶಮಾದಿಗಳೆಂಬಿವು ಬ್ರಾಹ್ಮಣನಿಗೆ ಸ್ವಭಾವಜನ್ಯಗಳಾದಕರ್ಮಗಳು. ... ॥೪೨॥

(ಶಂ) ಶಮಃ-ಮನೋನಿಗ್ರಹವು, ದಮಃ- ಬಾಹ್ಯೇಂದ್ರಿಯನಿಗ್ರಹವು, ತಪಃ-ಮನೋವಾಕ್ಕಾಯಗಳಿಂದ ಮಾಡಲ್ಪಡುವ ತಪಸ್ಸು, ಶೌಚಂ-ಬಾಹ್ಯಾಂತರಶುದ್ಧಿಯು,ಕ್ಷಾಂತಿಃ-ಕ್ಷಮಾ, ಸಹಿಸುವಿಕೆಯು. ಆರ್ಜವಂ-ನಿಷ್ಕಾಪಟ್ಯವು, ಜ್ಞಾನಂ-ಶಾಸ್ತ್ರಜ್ಞಾನವು,ವಿಜ್ಞಾನಂ-ಗುರೂಪದೇಶಾದಿಗಳಪ್ರಕಾರವಾಗಿ ಅನುಷ್ಠಿಸುವುದರಿಂದುಂಟಾದ ಅನುಭವಜನ್ಯಜ್ಞಾನವು,ಆಸ್ತಿಕ್ಯಂ-ಆಗಮಾರ್ಥಗಳಲ್ಲಿ ಶ್ರದ್ಧಾಳುವಾಗಿರುವಿಕೆಯು, ಎಂಬಿವುಸ್ವಭಾವಜನ್ಯಗಳಾದ (ಬ್ರಾಹ್ಮಣರಿಗೆ ವಿಹಿತಗಳಾದ) ಕರ್ಮಗಳಾಗಿರುವುವು. (ಎಂದರೆ ಈ ಸ್ವಭಾವವುಳ್ಳವನೆ ಬ್ರಾಹ್ಮಣನು, ಪೂರ್ವಕಾಲದಲ್ಲಿ ಬ್ರಾಹ್ಮಣರಿಗೆಇಂಥಾಸ್ವಭಾವವೆ ಇರಬಹುದು,ಅನಂತರದಲ್ಲಿಕಾಲವೈಪರೀತ್ಯದಿಂದ ಇಂಥಾ ಸ್ವಭಾವವು ಕೆಟ್ಟುಹೋದರೂ ಆ ವಂಶಪರಂಪರೆಯನ್ನು ಹಿಡಿದು ಇವನು ಬ್ರಾಹ್ಮಣನೆಂದು ಹೇಳುತ್ತಾರಲ್ಲದೆ ಅನುಷ್ಠಾನ ಮಾತ್ರ ದುರ್ಲಭವಾಗಿರುವುದು. ... ॥೪೨॥

(ಗೀ॥ ವಿ) ಶಮಃ-ಭಗವನ್ನಿಷ್ಠೆಯು, ದಮಃ - ಇಂದ್ರಿಯನಿಗ್ರಹವು, ಆರ್ಜವಂ- ಮನೋವಾಕ್ಕಾಯಗಳ ಕೃತ್ಯವು ಏಕರೂಪವಾಗಿರುವಿಕೆಯು, ಜ್ಞಾನಂ - ವಸ್ತುವಿಷಯವಾದ ಸಾಧಾರಣಜ್ಞಾನವು, ವಿಜ್ಞಾನಂ-ವಸ್ತುವಿಷಯಕವಾದ ವಿಶೇಷ ಜ್ಞಾನವು, ಆಸ್ತಿಕ್ಯಂ-ಧರ್ಮಾದಿಗಳಿಂದ ಪ್ರಯೋಜನವುಂಟೆಂಬ ನಿಶ್ಚಯವು. ॥೪೨॥

(ಶ್ರೀ) ಆಸ್ತಿಕ್ಯಂ-ಪರಲೋಕವುಂಟೆಂಬ ನಿಶ್ಚಯವು, ಬ್ರಹ್ಮ

ಕರ್ಮ ಎಂಬದಾಗಿ ಮಾತವು-ಬ್ರಾಹ್ಮಣನು ಮಾಡತಕ್ಕ ಕರ್ಮಗಳೆಂದರ್ಥವು. ... ... ॥೪೨॥

ಶ್ಲೋ॥ಶೌರ್ಯಂತೇಜೋಧೃತಿರ್ದಾಕ್ಷ್ಯಂಯುದ್ಧೇಚಾಪ್ಯಪಲಾಯನಂ । ದಾನಮೀಶ್ವರ ಭಾವಶ್ಚ ಕ್ಷಾತ್ರಂ ಕರ್ಮಸ್ವಭಾವಜಂ ॥ ... ... ॥೪೩॥

ಪ॥ ಶೌರ್ಯಂ-ತೇಜಃ-ಧೃತಿಃ-ದಾಕ್ಷ್ಯಂ-ಯುದ್ಧೇ-ಚ-ಅಪಿ-ಅಪಲಾಯನಂ। ದಾನಂ-ಈಶ್ವರಭಾವಃ-ಚ-ಕ್ಷಾತ್ರಂ-ಕರ್ಮ-ಸ್ವಭಾವಜಂ ॥

(ಅ॥ ರಾ॥ ಭಾ) ಶೌರ್ಯಂ-ಯುದ್ಧದಲ್ಲಿ ಭಯವಿಲ್ಲದೆ ಪ್ರವೇಶಿಸುವಂಥಾ ಸಾಮರ್ಥ್ಯವು, ತೇಜಃ-ಅನ್ಯರಿಂದ ತಿರಸ್ಕರಿಸಲ್ಪಡದೆ ಇರುವಿಕೆಯು, ಧೃತಿಃ-ಉಪಕ್ರಾಂತವಾದಕಾರ್ಯಕ್ಕೆ ವಿಘ್ನಗಳು ಬಂದರೂಪೂರ್ತಿಮಾಡುವ ಸಾಮರ್ಥ್ಯವು, ದಾಕ್ಷ್ಯಂ-ಸರ್ವಕಾರ್ಯಗಳನ್ನು ನೆರವೇರಿಸುವ ಸಾಮರ್ಥ್ಯವು, ಯುದ್ಧೇಚಾಪ್ಯಪಲಾಯನಂ-ಯುದ್ಧದಲ್ಲಿ ತನಿಗೆ ಮರಣ ವುಂಟಾಗುವುದೆಂದು ತಿಳಿದರೂ ಓಡಿಹೋಗದೆ ಇರುವಿಕೆಯು, ದಾನಂ-ತನ್ನದಾದ ದ್ರವ್ಯವನ್ನು ಅನ್ಯರ ಸ್ವತ್ತನ್ನಾಗಿ ಮಾಡುವ ಪರ್ಯಂತವಾದ ತ್ಯಾಗವು, ಈಶ್ವರಭಾವಃ-ತನಿಗಿಂತಲೂ ಅನ್ಯರಾದ ಸರ್ವರನ್ನಾಳುವ ಸಾಮರ್ಥ್ಯವು, (ಏತತ್-ಇದು) ಕ್ಷಾತ್ರಂಸ್ವಭಾವಜಂ ಕರ್ಮ-ಕ್ಷತ್ರಿಯನಿಗೆ ಸ್ವಭಾವದಿಂದುಂಟಾದ ಕೃತ್ಯವು. ಇಲ್ಲಿನ ಈಶ್ವರಭಾವ ಶಬ್ದದಿಂದ ದುಷ್ಟನಿಗ್ರಹ ಶಿಷ್ಟಾನುಪಾಲನ ಶಕ್ತಿಯೇ ವಿವಕ್ಷಿತವಾಗಿರುವುದೆಂದರಿಯಬೇಕು. ... ॥೪೩॥

(ಶಂ) ಶೌರ್ಯಂ-ಶೂರಸ್ಯಭಾವಃ- ಬಲಿಷ್ಠರನ್ನುಕೂಡ ಪ್ರಹರಿಸುವಂಥಾ ವಿಕ್ರಮವು, ತೇಜಃ-ಪ್ರಾಗಲ್ಭ್ಯಂ- ಅನ್ಯರಿಂದ ತಿರಸ್ಕರಿಸಲ್ಪಡದೇ ಇರುವಿಕೆಯು, ಧೃತಿಃ-ಯೆಂಥಾ ಅವಸ್ಥೆಯಲ್ಲಿಯೂ ಮನಸ್ಸನ್ನು ಅಸಮಾಧಾನ ಪಡಿಸಿಕೊಳ್ಳದ ಧೀರತ್ವವು, ದಾಕ್ಷ್ಯಂ-ಸಮಯದಲ್ಲಿ ಮೋಹವನ್ನು ಹೊಂದದೆ ತತ್ಕ್ಷಣವೆ ಮಾಡುವಿಕೆಯು, ಯುದ್ಧೇಅಪಲಾಯನಂ-ಯುದ್ಧದಲ್ಲಿ ಯಾವ ಕಾರ್ಯವನ್ನು ಮಾಡದೆದೇ ಹೋಗುವುದು ಪಲಾಯನವು, ಅದಿಲ್ಲದೆ ಶತ್ರುಗಳ ದೆಶೆಯಿಂದ ಪರಾಙ್ಮುಖನಾಗದೇ ಇರುವಿಕೆಯು; ದಾನಂ-ಸತ್ಪಾತ್ರದಲ್ಲಿ ಕೊಡುವಿಕೆಯು, ಈಶ್ವರಭಾ

ನೇ-ತನ್ನಾಳುವಿಕೆಗೆಸೇರಿದವುಗಳಲ್ಲಿ ತನ್ನ ಪ್ರಭುಶಕ್ತಿಯು ಪ್ರಕಟೀಕರಣವು. ... ... .... ॥೪೩॥

(ಗೀ॥ ವಿ)ತೇಜಃ-ದೇಹಕಾಂತಿಯು, ದಾಕ್ಷ್ಯಂ-ಸಾಮರ್ಥ್ಯವು, ದಾನಂ - ಸತ್ಪಾತ್ರದಾನವು, ಈಶ್ವರಭಾವಶ್ಚ - ದಂಡನಾದಿ ಕರ್ತೃತ್ವವು. ... ... ... ॥೪೩॥

ಶ್ಲೋ॥ ಕೃಷಿಗೋರಕ್ಷವಾಣಿಜ್ಯಂವೈಶ್ಯಂಕರ್ಮಸ್ವಭಾವ
ಜಂ । ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿಸ್ವ
ಭಾವಜಂ ॥ ... ... ॥೪೪॥

ಪ॥ ಕೃಷಿಗೋರಕ್ಷವಾಣಿಜ್ಯಂ-ವೈಶ್ಯಂ-ಕರ್ಮ-ಸ್ವಭಾವಜಂ । ಪರಿಚರ್ಯಾತ್ಮಕಂ-ಕರ್ಮ-ಶೂದ್ರಸ್ಯ-ಅಪಿ-ಸ್ವಭಾವಜಂ ॥

(ಅ॥ ರಾ॥ ಭಾ) ಕೃಷಿಗೋರಕ್ಷವಾಣಿಜ್ಯಂ-ಕೃಷಿ ಎಂದರೆ ಪೈರಿಡುವಿಕೆಯು, ಗೋರಕ್ಷ- ಪಶುಗಳನ್ನು ಮೇಯಿಸುತ್ತಾ ಕಾಯುವಿಕೆ ಮೊದಲಾದ ಗೋರಕ್ಷಣವು,ವಾಣಿಜ್ಯಂ-ಧನಸಂಪಾದನಕ್ಕೆ ಹೇತುವಾದ ಕ್ರಯ ವಿಕ್ರಯಾತ್ಮಕವಾದ ವ್ಯಾಪಾರವು,ವೈಶ್ಯಂ ಸ್ವಭಾವಜಂಕರ್ಮ-ಇವು ವೈಶ್ಯನಿಗೆ ಸ್ವಭಾವದಿಂದುಂಟಾದ ಕೃತ್ಯವು. ॥೪೩೪॥

ಪರಿಚರ್ಯಾತ್ಮಕಂ ಕರ್ಮ-ಬ್ರಾಹ್ಮಣ ಕ್ಷತ್ರಿಯವೈಶ್ಯರಿಗೆ ಶುಶ್ರೂಷೆಯನ್ನು ಮಾಡುವಂಥಾ ಕರ್ಮವು, ಶೂದ್ರಸ್ಯಾಪಿ-ಶೂದ್ರನಿಗೂ, ಸ್ವಭಾವಜಂ-ಸ್ವಭಾವ ಸಿದ್ಧವಾದದ್ದು, ಈ ರೀತಿಯಾಗಿ ನಾಲ್ಕುವರ್ಣಗಳಿಗೂ ಕೆಲವನ್ನು ಯೆತ್ತಿ ಹೇಳಿರುವುದು ಶಾಸ್ತ್ರವಿಹಿತಗಳಾಗಿ ಅವಶ್ಯಾನುಷ್ಠೇಯಗಳಾದ ಯಜ್ಞಾದಿ ಕರ್ಮಗಳಿಗೂ ಉಪಲಕ್ಷಣಗಳೆಂದರಿಯಬೇಕು. ಯಜ್ಞಾದಿಗಳು ಬ್ರಾಹ್ಮಣಾದಿಗಳಾದ ತ್ರಿವರ್ಣಗಳಿಗೂ ಸಾಧಾರಣಗಳೆಂಬದಾಗಿತಾನೆ ಶಾಸ್ತ್ರವು ಪ್ರತಿಪಾದಿಸುವುದು. ಶಮಾದಿಗಳು ಮುಮುಕ್ಷುಗಳಾದ ಮೂರು ವರ್ಣದವರಿಗೂ ಸಾಧಾರಣಗಳಾಗಿದ್ದರೂ ಬ್ರಾಹ್ಮಣನಿಗೆ ಸತ್ವಗುಣೋದ್ರೇಕವು ಸ್ವಾಭಾವಿಕವಾಗಿರುವುದರಿಂದ ಶಮದಮಾದ್ಯನುಷ್ಠಾನವು ಸುಕರವೆಂದು ತಿಳಿದು ಶಮಾದಿಗಳನ್ನು ಅವನಿಗೆ ಸ್ವಭಾವ ಜನ್ಯವಾದ ಕರ್ಮಗಳೆಂಬದಾಗಿ ಹೇಳಿತು. ಕ್ಷತ್ರಿಯ ವೈಶ್ಯರಿಬ್ಬರೂ ಸ್ವಭಾವದಿಂದ ರಜಸ್ತಮಃ ಪ್ರಧಾ

ನರಾಗಿರುವುದರಿಂದ ಶಮದಮಾದ್ಯನುಷ್ಠಾನವು ಅವರಿಗೆ ದುರ್ಲಭವೆಂಬದಾಗಿ ನೆನಸಿ ಅವನ್ನು ಅವರ ಕೃತ್ಯವಾಗಿ ಹೇಳಲಿಲ್ಲವು, ಬ್ರಾಹ್ಮಣನಿಗೆ ಯಜ್ಞಾದಿ ಯಾಜನವೂ ವೇದಾಧ್ಯಾಪನವೂ ಧನಾದಿಗಳನ್ನು ಪ್ರತಿಗ್ರಹಿಸುವಿಕೆಯೂ ವೃತ್ತಿಯಾಗಿರುವುದು. ಕ್ಷತ್ರಿಯನಿಗೆ ರಾಜ್ಯಪರಿಪಾಲನವೆ ವೃತ್ತಿಯು, ವೈಶ್ಯನಿಗೆ ಕೃಷಿವಾಣಿಜ್ಯಾದಿಗಳು ಎಂಬದಾಗಿ ಮುಂದೆಯೆ ಹೇಳಲ್ಪಟ್ಟಿರುವುದು. ಶೂದ್ರನಿಗೆ ಬ್ರಾಹ್ಮಣಾದಿ ವರ್ಣತ್ರಯ ಪರಿಚರಣವೆ ವೃತ್ತಿಯು. ... ॥೪೪॥

(ಶ್ರೀ) ವೈಶ್ಯಕರ್ಮ ಇತಿಪಾಠಃ-ಅರ್ಥಭೇದ ವಿಲ್ಲವು. ॥೪೪॥

ಶ್ಲೋ॥ ಸ್ವೇಸ್ವೇಕರ್ಮಣ್ಯಭಿರತಸ್ಸಂಸಿದ್ಧಿಂಲಭತೇನರಃ।
ಸ್ವಕರ್ಮನಿರತಸ್ಸಿದ್ಧಿಂಯಥಾವಿಂದತಿತಚ್ಛೃಣು ॥೪೫॥

ಪ॥ ಸ್ವೇ-ಸ್ವೇ-ಕರ್ಮಣಿ-ಅಭಿರತಃ-ಸಂಸಿದ್ಧಿಂ-ಲಭತೇ-ನರಃ । ಸ್ವಕರ್ಮನಿರತಃ-ಸಿದ್ಧಿಂ-ಯಥಾ-ವಿಂದತಿ-ತತ್-ಶೃಣು ॥

(ಅ॥ ರಾ॥ ಭಾ) ಸ್ವೇಸ್ವೇಕರ್ಮಣಿ-ಶಾಸ್ತ್ರವಿಹಿತವಾದ ತಮ್ಮ ತಮ್ಮಗಳ ಕರ್ಮದಲ್ಲಿ, ಅಭಿರತಃ-ಆಸಕ್ತಿಯುಳ್ಳವನಾಗಿರುವ, ನರಃ-ಪುರುಷನು, ಸಂಸಿದ್ಧಿಂ - ಪರಮಪದಪ್ರಾಪ್ತಿಯನ್ನು, ಲಭತೆ ಹೊಂದುತ್ತಾನೆ. ಸ್ವಕರ್ಮನಿರತಃ-ತನಿಗೆ ಶಾಸ್ತ್ರವಿಹಿತ ಕರ್ಮದಲ್ಲಿ ಆಸಕ್ತಿಯುಳ್ಳ ಪುರುಷನು, ಯಥಾ-ಹೇಗಾದರೆ,ಸಿದ್ಧಿಂವಿಂದತಿ-ಪರಮ ಪದವನ್ನು ಹೊಂದುವನೊ, ತತ್-ಆ ಪ್ರಕಾರವನ್ನು, ಶೃಣು-ಕೇಳು. ... ॥೪೫॥

(ಗೀ॥ ವಿ) ಅಭಿರತಃ-ಕರ್ಮವನ್ನನುಷ್ಠಿಸಿ ಭಗವದಾರಾಧನವನ್ನು ಮಾಡುವ, ಸಂಸಿದ್ಧಿಂ-(ಶಂ) ಕರ್ಮಾನುಷ್ಠಾನದಲ್ಲಿ ಅಶುಚಿಯು ನಿವೃತ್ತವಾಗಿ ದೇಹೇಂದ್ರಿಯಗಳಿಗೆ ಜ್ಞಾನನಿಷ್ಠಾ ಯೋಗ್ಯತಾರೂಪವಾದ ಸಿದ್ಧಿಯನ್ನು, (ಗೀ॥ ವಿ) ಜ್ಞಾನದ್ವಾರಾ ಮೋಕ್ಷವನ್ನು. ॥೪೫॥

(ತಾ॥ ಚಂ) ವರ್ಣಧರ್ಮವಿಭಾಗವನ್ನು ಈ ಮೋಕ್ಷಶಾಸ್ತ್ರದಲ್ಲಿ ಏತಕ್ಕೆ ಹೇಳಬೇಕು. ಅವರವರ ಕರ್ಮದಲ್ಲಿ ಆಸಕ್ತಿಯುಳ್ಳವನಿಗೆ ಮೋಕ್ಷಸಿದ್ಧಿಯಾಗುವುದರಿಂದ ವರ್ಣ ಧರ್ಮವಿಭಾಗವು ಆವಶ್ಯಕವಾದದ್ದೇ ಎಂದರಿಯಬೇಕು. ಇಲ್ಲಿನ ಸಂಸಿದ್ಧಿ ಶಬ್ದಕ್ಕೆ ಅರ್ಥಾಂತರವನ್ನು ಅನ್ಯರು ಹೇಳುವ ಸಂದರ್ಭದಲ್ಲಿ ಪರಮಪದ ಪ್ರಾಪ್ತಿರೂಪವಾದ ಅರ್ಥವನ್ನು ಹೇಳಬಹುದೋ ಎಂದರೆ ಈ ಪ್ರಕರಣದಲ್ಲಿ ಮುಂದೇ ಶ್ರೀಕೃಷ್ಣನೇ " ಶಾಶ್ವತಂ ಪದಮವ್ಯಯಂ ,, (೧೮॥ ೫೬) ಎಂಬದಾಗಿ ಹೇ

ಳಿರುವುದರಿಂದ ಅದನ್ನನುಸರಿಸಿ ಇಲ್ಲಿ ಹೇಳಿರುವ ಅರ್ಥವು ಉಚಿತವಾದದ್ದೆಂತಲೆ ತಿಳಿಯಬೇಕು. (ಅಥವಾ) ಸಿದ್ಧಿ ಶಬ್ದವು ಮುಂದೇ ಹೇಳಲ್ಪಡುವ ನೈಷ್ಕರ್ಮ್ಯಸಿದ್ಧಿಯನ್ನಾದರೂ ಹೇಳಬಹುದು. ನೈಷ್ಕರ್ಮ್ಯಸಿದ್ಧಿ ಎಂದರೆ ಜ್ಞಾನಯೋಗ ಫಲಭೂತವಾದ ಶ್ರೇಷ್ಠವಾಗಿರುವ ಧ್ಯಾನಸಿದ್ಧಿಯು, ಅದರ ಪರ್ಯವಸಾನವು ಮೋಕ್ಷರೂಪವಾಗಿರುವುದರಿಂದ ಇಲ್ಲಿ ಪರಮಪದ ಪ್ರಾಪ್ತಿಯನ್ನೆ ಸಂಸಿದ್ಧಿ ಶಬ್ದಾರ್ಥತ್ವೇನ ಹೇಳಿರುವುದಾಗಿ ತಿಳಿಯಬೇಕು.

ಆದರೂ ಇಲ್ಲಿ ಸ್ವಕರ್ಮ ನಿರತನಾದ ಶೂದ್ರನಿಗೂ ಕೂಡ ಸಂಸಿದ್ಧಿಯನ್ನು ಹೇಳಿರುವುದು ಯುಕ್ತವಲ್ಲವು. ಅವನಿಗೆ ಮೋಕ್ಷಸಾಧನಗಳಾದ ಬ್ರಹ್ಮವಿದ್ಯೆಗಳಲ್ಲಿ ಅಧಿಕಾರವಿಲ್ಲದೆ ಇರುವಿಕೆಯನ್ನು ಶಾರೀರಕಶಾಸ್ತ್ರದಲ್ಲಿ ಅಪಶೂದ್ರಾಧಿಕರಣದಲ್ಲಿ ಹೇಳಲಿಲ್ಲವೆ ? ಎಂದರೆ ಸತ್ಯವೆ, ಆದರೂ ಹಿಂದಿನ ಜನ್ಮಗಳಲ್ಲಿ ಬ್ರಹ್ಮವಿದ್ಯಾಧಿಕಾರವುಂಟಾಗಿ ಈ ಜನ್ಮದಲ್ಲಿ ಅದರ ಪೂರ್ತಿಯಿಂದ ಮೋಕ್ಷಫಲ ಪ್ರಾಪ್ತಿಯುಂಟಾಗಬಹುದು. ಉಪಾಸನಾರಂಭವು ತ್ರೈವರ್ಣಿಕ ಶರೀರದಲ್ಲಿಯೇ ಆದರೂ ಅದರ ಪೂರ್ತಿಯು ಸರ್ವಶರೀರಗಳಲ್ಲಿಯೂ ಆಗಬಹುದು. ಈ ಅಂಶವನ್ನು ವಿದುರಾದಿಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಆದುದರಿಂದಲೆ ಶೌನಕರೂ ಕೂಡ “ಧರ್ಮವ್ಯಾಧಾದಯೋಪ್ಯನ್ಯೇ ಪೂರ್ವಾಭ್ಯಾಸಾಜ್ಜುಗುಪ್ಸಿತೇ । ವರ್ಣಾವರತ್ವೇ ಸಂಪ್ರಾಪ್ತಾಸ್ಸಂಸಿದ್ಧಿಂ ಶ್ರಮಣೀಯಥಾ,, ಎಂಬದಾಗಿ ಈ ಅರ್ಥವನ್ನು ಪ್ರತಿಪಾದಿಸಿರುತ್ತಾರೆ.

ಆದರೂ ಮಿತವಾದ ಫಲಗಳನ್ನು ಕೊಡುವುದಕ್ಕೆ ಯೋಗ್ಯರಾದ ಅಗ್ನೀಂದ್ರಾದಿ ದೇವತೆಗಳ ಆರಾಧನ ರೂಪಗಳಾದಲಯಾವರ್ಣಾಶ್ರಮ ಧರ್ಮಗಳಿಗೆ ಪರಮ ಪದ ಪ್ರಾಪ್ತಿಹೇತುತ್ವವು ಹೇಗೆ ? ಎಂದರೆ ಅಗ್ನೀಂದ್ರಾದಿ ಶಬ್ದಗಳಿಂದ ತತ್ತದ್ದೇವತಾ ಶರೀರಕನಾದ ಪರಮಾತ್ಮನೇ ಹೇಳಲ್ಪಡುತ್ತಾನಲ್ಲದೇ ಶರೀರಗಳಾದ ಪ್ರಸಿದ್ಧಾಗ್ನೀಂದ್ರಾದಿಗಳಿಗೆ ಇವು ವಾಚಕಗಳಾಗಲಾರವು. ಆದುದರಿಂದ ಮುಮುಕ್ಷುಗಳಿಂದ ಮಾಡಲ್ಪಡುವ ಕರ್ಮಗಳೆಲ್ಲವೂ ಅಗ್ನೀಂದ್ರಾದಿ ತತ್ತದ್ದೇವತಾ ಶರೀರಿಯಾದ ಪರಮಾತ್ಮನ ಆರಾಧನ ರೂಪವಾಗಿರುವುದರಿಂದ ಅವರು ಸಂಸಿ

ದ್ಧಿಯನ್ನು ಹೊಂದುವ ವಿಷಯದಲ್ಲಿ ಯಾವ ಆಕ್ಷೇಪವೂ ಇರುವುದಿಲ್ಲವು. ಕಿಂಚ ಈ ಕರ್ಮವು ಪರಿಮಿತ ಫಲಪ್ರದರಾದ ಅಗ್ನೀಂದ್ರಾದ್ಯಾರಾಧನವೂ ಆಗಲಾರದು.

(ಈ ವಿಷಯದಲ್ಲಿ ವೇದಾನ್ತ ಪ್ರಸಿದ್ಧವಾದ ತಾತ್ಪರ್ಯವು ಇಲ್ಲಿ ವಿಸ್ತರಿಸಲ್ಪಡುವುದು.)

ಇಲ್ಲಿ ವರ್ಣಾಶ್ರಮ ಧರ್ಮಗಳು ಅನುಷ್ಠೇಯಗಳಾದರೆ ಅಗ್ನೀಂದ್ರಾದಿ ದೇವತಾಂತರ ಶಬ್ದಘಟಿತಗಳಾದ ಮಂತ್ರಗಳಿಂದ ಸಾಧಿಸತಕ್ಕ ವರ್ಣಾಶ್ರಮ ಧರ್ಮವು ದೇವತಾಂತರಾರಾಧನವಾಗಿರುವುದರಿಂದ ದೇವತಾಂತರೋಪಾಸಕನಲ್ಲದ ಮುಮುಕ್ಷುವಿಗೆ ಆದರಿಂದ ಪಾರಮೈಕಾಂತ್ಯ ಭಂಗವಿಲ್ಲವೋ? ಎಂದರೆ ಈ ಚೋದ್ಯವನ್ನು ವೇದಾಂತವ್ಯುತ್ಪತ್ತಿಶೂನ್ಯರು ಮಾಡುತ್ತಾರಲ್ಲದೆ ವೇದಾಂತಿಗಳು ಮಾಡಲಾರರು. ಇಲ್ಲಿ “ಸಾಕ್ಷಾದಪ್ಯವಿರೋಧಂಜೈಮಿನಿಃ“ ಎಂಬೀ ವೇದಾಂತಸೂತ್ರಪ್ರಕಾರವಾಗಿ (ಅಗ್ರಂನಯತೀತ್ಯಗ್ನಿಃ) ಅಗ್ರನಯನಾದಿವ್ಯುತ್ಪತ್ತಿವಶದಿಂದಅಗ್ನ್ಯಾದಿ ಶಬ್ದಗಳನ್ನು ಸರ್ವೇಶ್ವರನಿಗೆ ಸಾಕ್ಷಾದ್ವಾಚಕಗಳಾಗಿ ನಿರ್ವಹಿಸಿರುವರು. ಅಥವಾ ಸಹಸ್ರನಾಮದಲ್ಲಿರುವ “ರುದ್ರೋಬಹುಶಿರಾ ಬಭ್ರುಃ“ ಇತ್ಯಾದಿ ಶಬ್ದಗಳು ಸಾಕ್ಷಾದ್ಭಗವದ್ವಾಚಕಗಳಾಗಿರುವುದರಿಂದ ಹೇಗಾದರೆ ಶ್ರೀಸಹಸ್ರನಾಮ ಪಾರಾಯಣದಲ್ಲಿ ಪಾರಮೈಕಾನ್ತ್ಯಭಂಗವಿಲ್ಲವೋ ಇಲ್ಲಿಯೂ ಅದರಂತೆಯೆ ತಿಳಿಯಬೇಕು. ಶ್ರೀಸಹಸ್ರನಾಮ ಘಟಿತದಿವ್ಯ ಭಗವನ್ನಾಮಗಳು ಗುಣಪೌಷ್ಕಲ್ಯನಿಮಿತ್ತಕವಾಗಿರುವುದರಿಂದ ಅಲ್ಲಿ ಸಾಕ್ಷಾದ್ವಾಚಕತ್ವವು ಯುಕ್ತವೆಂಬುವ ಪಕ್ಷದಲ್ಲಿ ಇಲ್ಲಿಯೂ ಅದೇ ನ್ಯಾಯವನ್ನವಲಂಬಿಸಬೇಕು. ಗುಣಪೌಷ್ಕಲ್ಯವು ಭಗವದೇಕಾಂತವಾಗಿರುವದರಿಂದಲೆ ಈ ಶಬ್ದಗಳೂ ಗುಣಲೇಶದಿಂದ ಕೂಡಿರುವ ದೇವತಾಂತರ ವಾಚಕಗಳಾಗಲಾರವು. ಆದುದರಿಂದ ಅಗ್ನ್ಯಾದಿ ಶಬ್ದಸಮೂಹವು ಅಗ್ರನಯನಾದಿ ಗುಣಪೌಷ್ಕಲ್ಯಯುಕ್ತಭಗವದೇಕಾಂತವೆಂತಲೇ ತಿಳಿಯಬೇಕು.

ಆದರೂ ಈ ಪ್ರಕಾರವಾಗಿ ದೇವತಾಂತರಾನನ್ಯಥಾಸಿದ್ಧಲಿಂಗಗಳಿಲ್ಲ

ದ ಸ್ಥಲಗಳಲ್ಲಿ "ಸಾಕ್ಷಾದಪ್ಯವಿರೋಧಂಜೈಮಿನಿಃ "ಎಂಬ ನ್ಯಾಯವು ಯುಕ್ತವಾದರೂ ಆದುದರಿಂದಲೆ ಪಾರಮ್ಯೈಕಾಂತ್ಯಭಂಗವಿಲ್ಲದಿದ್ದರೂ ಜೀವಲಿಂಗಗಳುಳ್ಳ ಪ್ರಕರಣಗಳಲ್ಲಿ ಸಾಕ್ಷಾದಪ್ಯವಿರೋಧ ನ್ಯಾಯವು ಲಿಂಗವಿರೋಧದಿಂದ ಯುಕ್ತವಲ್ಲವಾದುದರಿಂದ ಅಲ್ಲಿ ಜೀವಲಿಂಗಯುಕ್ತದೇವತಾಂತರಾರಾಧನ ಪ್ರಯುಕ್ತವಾದ ದೇವತಾಂತರ ಸ್ಪರ್ಶವಿಲ್ಲವೊ ? ಅಂತವನಿಗೆ ಮೋಕ್ಷರೂಪ ಸಿದ್ಧಿಯನ್ನು ಹೇಳಬಹುದೋ ? ಎಂದರೆ ಅಲ್ಲಿಯೂ ಪ್ರತರ್ದನ ವಿದ್ಯಾನ್ಯಾಯದಿಂದ ತತ್ತದ್ದೇವತಾಂತರ್ಯಾಮಿಯಾದ ಪರಮಾತ್ಮನನ್ನು ಕುರಿತು ಆಯಾ ಕರ್ಮಗಳನ್ನು ಅನುಷ್ಠಿಸುವಿಕೆಯು ಶಾಸ್ತ್ರಸಿದ್ಧವಾಗಿರುವುದರಿಂದ ಅವರು ದೇವತಾಂತರಾರಾಧಕರಾಗಲಾರರೆಂದರಿಯಬೇಕು. " ಉಪಾಸಾತ್ರೈವಿಧ್ಯಾತ್ ,, ಎಂಬ ಸೂತ್ರದಲ್ಲಿ ಬ್ರಹ್ಮಕ್ಕೆ ಸ್ವರೂಪದಿಂದ ಚೇತನಾಚೇತನಾಂತರ್ಯಾಮಿತ್ವೇನ ಉಪಾಸನವು ಪ್ರಾಪ್ತವಾಗಿದ್ದರೂ ಅಲ್ಲಿ ಚೇತನಾ ಚೇತನಗಳಿಗೆ ಮುಮುಕ್ಷೂಪಾಸ್ಯತ್ವವು ಹೇಗಾದರೆ ಇಲ್ಲವೊ ಆ ಪ್ರಕಾರವೇ ಇಲ್ಲಿಯೂ ಶರೀರ ಭೂತರಾದ ಅಗ್ನೀಂದ್ರಾದಿಗಳಿಗೆ ಆರಾಧ್ಯತ್ವವಿಲ್ಲವು. ... ... ... *

ಆದರೂ " ತೃಪ್ತವಿತ್ಯೈನಮಿಂದ್ರಃ ಪ್ರಜಯಾಪಶುಭಿಃ ,, ಇತ್ಯಾದಿ ಮಂತ್ರಾರ್ಥವಾದಾದಿಗಳಲ್ಲಿ ದೇವತಾಂತರಾರಾಧನ ರೂಪತ್ವವು ಸ್ಪಷ್ಟವಾಗಿ ತೋರುವಲ್ಲಿ ಅವುಗಳಿಗೆ ಕೇವಲ ಭಗವದಾರಾಧನ ರೂಪತ್ವವು ಯುಕ್ತವೊ ? ಮತ್ತು ವಿಶೇಷಣತ್ವ ರೂಪದಿಂದಲಾದರೂ ಅವುಗಳನ್ನುಚ್ಚರಿಸಿದರೆ ದೇವತಾಂತರ ಸಂಬಂಧವು ಅವರ್ಜನೀಯವಲ್ಲವೆ ? ಎಂದರೆ :: ಅಹಂಹಿಸರ್ವ ಯಜ್ಞಾನಾಂ ಭೋಕ್ತಾಚ ಪ್ರಭುರೇವಚ । ಹವ್ಯಕವ್ಯಭುಗೇಕಸ್ತ್ವಂ ಪಿತೃದೇವ ಸ್ವರೂಪಧೃತ್ ॥ ಯೇಯಜಂತಿ ಪಿತೄನ್‌ದೇವಾನ್ ಬ್ರಾಹ್ಮಣಾನ್ ಸಹುತಾಶನಾನ್ । ಸರ್ವಭೂತಾಂತರಾತ್ಮಾನಂ ವಿಷ್ಣುಮೇವಯಜಂತಿತೆ ,, ಇತ್ಯಾದಿ ಪ್ರಮಾಣಾರ್ಥಗಳನ್ನು ಸಮೀಚೀನವಾಗಿ ಪರ್ಯಾಲೋಚಿಸಿ ನೋಡಿದರೆ ಸರ್ವಾಂತರ್ಯಾಮಿಯಾದ ಪರಮಾತ್ಮನೆ ಪ್ರತಿ ಬುದ್ಧನಾದ ಅಧಿಕಾರಿಗೆ ಆರಾಧ್ಯನಾಗಿರುವುದರಿಂದ ನಿಮ್ಮ ಚೋದ್ಯಕ್ಕೆ ಅವಕಾಶವಿಲ್ಲವು.

ಈ ಪ್ರಕಾರವಾಗಿ ಹೇಳುವ ಪಕ್ಷದಲ್ಲಿ ಬ್ರಹ್ಮರುದ್ರಾದಿಗಳಿಗೂ ಕೂಡ ನಿತ್ಯನೈಮಿತ್ತಿಕಾಂತರ್ಗತತ್ವ ವಿರುವುದರಿಂದ ಅವರವರ ಆಲಯ ಪ್ರವೇಶ ತದಾರಾಧನಾದಿಗಳೂ ಭಗವದಾಲಯ ಪ್ರವೇಶ ಭಗವದಾರಾಧನಾದಿ ರೂಪಗಳೆಂತಲೆ ತಿಳಿದು ಆವುಗಳನ್ನು ಮಾಡಬಹುದಷ್ಟೇ ? ಇವು ಪಾರಮೈಕಾಂತ್ಯಭಂಜಕವೆಂದರೆ ನಿತ್ಯನೈಮಿತ್ತಿಕ ಕರ್ಮಗಳಲ್ಲಿಯೂ ಪಾರಮೈಕಾಂತ್ಯಭಂಗ ಪ್ರಸಂಗ ವುಂಟಾಗಬಹುದೆಂದರೆ ? “ನಾರಾಯಣಂ ಪರಿತ್ಯಜ್ಯ ಹೃದಿಸ್ಥಂ ಪ್ರಭುಮೀಶ್ವರಂ । ಯೋನ್ಯಮರ್ಚಯತೇ ದೇವಂ ಪರಬುದ್ಧ್ಯಾ ಸಪಾಪಭಾಕ್ ॥ ಯಸ್ತು ನಾರಾಯಣಂ ದೇವಂ ಸಾಮಾನ್ಯೇನಾಭಿಮನ್ಯತೇ । ಸಯಾತಿ ನರಕಂ ಘೋರಂ ಯಾವಚ್ಚಂದ್ರದಿವಾಕರಂ ॥ ಬುದ್ಧರುದ್ರಾದಿವಸತಿಂ ಸ್ಮಶಾನಂ ಶವಮೇವಚ । ಅಟವೀಂ ರಾಜಧಾನೀಂ ಚ ದೂರತಃ ಪರಿವರ್ಜಯೇತ್ ॥,, ಇತ್ಯಾದಿ ಪ್ರಮಾಣಗಳಿಂದ ದೇವತಾಂತರಗಳಲ್ಲಿ ಪರತ್ವಬುದ್ಧಿಯೂ ಸಮತ್ವಬುದ್ಧಿಯೂ ನಿತ್ಯನೈಮಿತ್ತಿಕ ಕರ್ಮಗಳಿಗೆ ಬಹಿರ್ಭೂತವಾದ ದೇವತಾಂತರಸ್ಥಲಗಳಿಗೆ ಹೋಗುವಿಕೆಯೂ ಪರಮೈಕಾಂತಿಗೆ ದೋಷವೆಂಬದಾಗಿ ನಿಂದಿಸಲ್ಪಟ್ಟಿರುವುದು ಮಾತ್ರವಲ್ಲದೆ ನರಕರೂಪಪ್ರಬಲವಾದ ಅನಿಷ್ಟಫಲವೂ ಕೂಡ ಪ್ರತಿಪಾದಿಸಲ್ಪಟ್ಟಿರುವುದು. ಇಷ್ಟುಮಾತ್ರದಿಂದ ನಿತ್ಯನೈಮಿತ್ತಿಕಗಳಲ್ಲಿ ಆರಾಧ್ಯನಾದ ಸರ್ವಾಂತರ್ಯಾಮಿಯಾದ ಪರಮಾತ್ಮನಿಗೆ ಶರೀರವಾಗಿರುವ ಸ್ಥಿತಿಯನ್ನು ನೋಡಿದರೆ ಈ ದೇವತಾಂತರಗಳಲ್ಲಿ ಪರತ್ವ ಬುದ್ಧಿಯೂ ಸಾಮ್ಯಬುದ್ಧಿಯೂ ಭಗವಚ್ಛೇಷ ಭೂತರಲ್ಲವೆಂಬ ಬುದ್ಧಿಯೂ ಆರಾಧ್ಯತ್ವಬುದ್ಧಿಯೂ ಫಲಪ್ರದತ್ವಬುದ್ಧಿಯೂ ಇಲ್ಲವಾದುದರಿಂದ ಉಪಾಸ್ಯ ವಿಶೇಷಣಗಳಾದ ಪ್ರಾಣವೈಶ್ವಾನರಾದಿಗಳಿಂದ ಇವನಿಗೆ ವ್ಯಭಿಚಾರವಿಲ್ಲದಂತೆ ಶಾಸ್ತ್ರಸಿದ್ಧಗಳಾದ ಅಗ್ನೀಂದ್ರಾದಿ ವಿಶೇಷಣಗಳಿಂದಲೂ ಇವನಿಗೆ ಐಕಾಂತ್ಯವಿರೋಧ ವಿಲ್ಲವೆಂದರಿಯಬೇಕು. ಆದುದರಿಂದ ವರ್ಣಾಶ್ರಮಾನು ಗುಣಗಳಾದ ಕರ್ಮಗಳಿಂದ ಸರ್ವಶಬ್ದವಾಚ್ಯನಾಗಿಯೂ ಸರ್ವಾಂತರ್ಯಾಮಿಯಾಗಿಯೂ ಇರುವ ಪರಮಾತ್ಮನೆ ಆರಾಧಿಸಲ್ಪಡುತ್ತಾನಾದುದರಿಂದ ಸ್ವಕರ್ಮ ನಿರತನಾದ ಅಧಿಕಾರಿಯು ಪಾರಮೈಕಾಂತ್ಯಕ್ಕೆ ಹಾನಿಯನ್ನು ಸಂಪಾದಿಸದೆ

ಪರಮಪದ ಪ್ರಾಪ್ತಿರೂಪವಾದ ಸಂಸಿದ್ಧಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲವು. ( ಈ ಅಂಶದಲ್ಲಿ ತೋರುವ ಇನ್ನೂ ಅನೇಕ ಚೋದ್ಯಗಳಿಗೆ ಶ್ರೀಭಾಷ್ಯ ಶ್ರುತಪ್ರಕಾಶಿಕಾದಿಗಳಲ್ಲಿ ವಿಸ್ತಾರವಾಗಿ ಪರಿಹಾರಗಳನ್ನರಿಯಬೇಕು. ಗ್ರಂಥ ವಿಸ್ತರ ಭಯದಿಂದ ಇಲ್ಲಿ ಸಂಗ್ರಹಿಸಿರುವುದೆಂದು ತಿಳಿಯಬೇಕು.) ... ... ||೪೫||

ಶ್ಲೋ॥ ಯತಃಪ್ರವೃತ್ತಿರ್ಭೂತಾನಾಂಯೇನಸರ್ವಮಿದಂ
ತತಂ | ಸ್ವಕರ್ಮಣಾ ತಮಭ್ಯರ್ಚ್ಯಸಿದ್ಧಿಂ ವಿಂದತಿ
ಮಾನವಃ ॥ ... ||೪೬||

ಪ॥ ಯತಃ- ಪ್ರವೃತ್ತಿಃ- ಭೂತಾನಾಂ- ಯೇನ- ಸರ್ವಂ- ಇದಂ- ತತಂ | ಸ್ವಕರ್ಮಣಾ- ತಂ- ಅಭ್ಯರ್ಚ್ಯ- ಸಿದ್ಧಿಂ- ವಿಂದತಿ- ಮಾನವಃ ॥

(ಅ॥ ರಾ॥ ಭಾ॥) ಸರ್ವಕಾರಣ ಭೂತನಾಗಿಯೂ ಸರ್ವಾಂತರ್ಯಾಮಿಯಾಗಿಯೂ ಇರುವ ಪರಮಾತ್ಮನು ತನ್ನಿಂದಸೃಷ್ಟಿಸಲ್ಪಟ್ಟವರಾಗಿಯೂ ತನಗೆ ಶರೀರ ಭೂತರಾಗಿಯೂ ಇರುವ ಇಂದ್ರಾದಿ ದೇವತೆಗಳಿಗೆ ವಾಚಕಗಳಾದ ಆಯಾ ಶಬ್ದಗಳಿಂದ ಹೇಳಲ್ಪಡುತ್ತಾನಾದುದರಿಂದಲೆ ಸರ್ವಕರ್ಮಗಳೂ ಭಗವದಾರಾಧನ ರೂಪಗಳಾಗಿರುವುದರಿಂದ ವರ್ಣಾಶ್ರಮ ಧರ್ಮಗಳಿಗೆ ಮೋಕ್ಷರೂಪ ಸಂಸಿದ್ಧಿ ಸಾಧನತ್ವವು ಯುಕ್ತವೆಂಬುದಾಗಿ ಈ ಶ್ಲೋಕದಲ್ಲಿ ಹೇಳಲ್ಪಡುವುದು. ಯತಃ= ಯಾವ ಪರಮಾತ್ಮನ ದೆಸೆಯಿಂದ, ಭೂತಾನಾಂ-ಪ್ರಾಣಿಗಳಿಗೆ, ಪ್ರವೃತ್ತಿಃ-ಉತ್ಪತ್ತ್ಯಾದಿಕವು ಉಂಟಾಗುವುದೋ, ಯೇನ-ಯಾವ ಪರಮಾತ್ಮನಿಂದ, ಇದಂ ಸರ್ವಂ-ಈ ಸರ್ವಜಗತ್ತೂ, ತತಂ-ವ್ಯಾಪ್ತವಾಗಿರುವುದೋ, ಸ್ವಕರ್ಮಣಾ-ತನ್ನ ತನ್ನ ಕರ್ಮಗಳಿಂದ, ತಂ-ಇಂದ್ರಾದಿದೇವತಾಂತರ್ಯಾಮಿಯಾಗಿರುವ ಆ ಪರಮಾತ್ಮನನ್ನು, ಅಭ್ಯರ್ಚ್ಯ-ಆರಾಧಿಸಿ, (ಮತ್ಪ್ರಸಾದಾತ್-ನನ್ನ ಅನುಗ್ರಹದೆಸೆಯಿಂದ) ಮಾನವಃ-ಮನುಷ್ಯನು, ಸಿದ್ಧಿಂವಿಂದತಿ-ನನ್ನನ್ನು ಹೊಂದುವುದೆಂಬ ಸಿದ್ಧಿಯನ್ನು ಹೊಂದುತ್ತಾನೆ. ... ... ||೪೬||

(೪೦) ಪ್ರವೃತ್ತಿ = ಉತ್ಪತ್ತಿಯು ಅಥವಾ ಚೇಷ್ಟೆಯು, ಸ್ವಕ

ರ್ಮಣಾ- ಆಯಾವರ್ಣಾಶ್ರಮಾನು ಗುಣಗಳಾದ ವೇದೋಕ್ತ ಕರ್ಮಗ
ಳಿಂದ,(ಗೀ॥ ೩)ಶಮದಮಾದಿಗಳೊಡನೆ ಕೂಡಿರುವ ಕರ್ಮದಿಂದ.॥೪೬॥

ಶ್ಲೋ॥ ಶ್ರೇಯಾನ್ಸ್ವಧರ್ಮೋವಿಗುಣಃ ಪರಧರ್ಮಾತ್ಸ್ವ
ನುಷ್ಠಿತಾತ್ । ಸ್ವಭಾವನಿಯತಂಕರ್ಮಕುರ್ವನ್ನಾಪ್ನೋ
ತಿಕಿಲ್ಬಿಷಂ ॥ ... ... ॥೪೭॥

ಪ॥ ಶ್ರೇಯಾನ್-ಸ್ವಧರ್ಮಃ-ವಿಗುಣಃ-ಪರಧರ್ಮಾತ್-ಸ್ವನುಷ್ಠಿತಾತ್।ಸ್ವಭಾವನಿ
ಯತಂ-ಕರ್ಮ-ಕುರ್ವನ್-ನ-ಆಪ್ನೋತಿ-ಕಿಲ್ಬಿಷಂ ॥

(ಅ॥ ರಾ॥ ಭಾ) ಸ್ವಧರ್ಮಃ-ಹಿಂದೇ ಹೇಳಿರುವ ಪ್ರಕಾರವಾಗಿ ಕರ್ತೃತ್ವಾದಿ ತ್ಯಾಗಯುಕ್ತವಾಗಿಯೂ ನನಿಗೆ ಆರಾಧನ ರೂಪವಾಗಿಯೂ ತನ್ನಿಂದ ಅನುಷ್ಠಿಸುವುದಕ್ಕೆ ಶಕ್ಯವಾಗಿಯೂ ಇರುವ ಕರ್ಮಯೋಗಾತ್ಮಕವಾದ ಧರ್ಮವು, ವಿಗುಣಃ-ಗುಣರಹಿತವಾಗಿದ್ದರೂ, ಸ್ವನುಷ್ಠಿತಾತ್-ಸಕಲೇಂದ್ರಿಯನಿಯಮನ ರೂಪವಾಗಿರುವುದರಿಂದ ಪ್ರಮಾದ ಸಂಭಾವನೆ ಯುಳ್ಳದ್ದಾಗಿಯೂ ದೈವಾಧೀನದಿಂದ ಒಂದು ಸಮಯದಲ್ಲಿ ಚನ್ನಾಗಿ ಅನುಷ್ಠಿಸಲ್ಪಟ್ಟದ್ದಾಗಿಯೂ ಇರುವ, ಪರಧರ್ಮಾತ್-ಇಂದ್ರಿಯ ಜಯ ಸಮರ್ಥನಾದ ಪುರುಷನ ಧರ್ಮವಾದ ಜ್ಞಾನಯೋಗಕ್ಕಿಂತಲೂ, ಶ್ರೇಯಾನ್-ಶ್ರೇಷ್ಠವು. ಅದು ಹೇಗೆಂದರೆ? ಸ್ವಭಾವನಿಯತಂ ಕರ್ಮ ಕುರ್ವನ್-ಪ್ರಕೃತಿ ಸಂಸೃಷ್ಟನಾದವನಿಗೆ ಇಂದ್ರಿಯ ವ್ಯಾಪಾರ ರೂಪವಾಗಿರುವುದರಿಂದ ಸ್ವಭಾವದಿಂದಲೆ ನಿಯತವಾಗಿರುವ ಕರ್ಮವನ್ನನುಷ್ಠಿಸುವಂತವನು, ಕಿಲ್ಬಿಷಂನಪ್ರಾಪ್ನೋತಿ-ಕರ್ಮಯೋಗವು ಪ್ರಮಾದ ಶೂನ್ಯವಾಗಿರುವುದರಿಂದ ಸಂಸಾರವನ್ನು ಹೊಂದಲಾರನು. ಜ್ಞಾನಯೋಗವೊ ಎಂದರೆ ಇಂದ್ರಿಯನಿಯಮನ ಸಾಧ್ಯವಾಗಿರುವುದರಿಂದ ಪ್ರಮಾದ ಸಂಭಾವನಾಯುಕ್ತವಾಗಿರುವುದು. ಆದುದರಿಂದ ಒಂದಾನೊಂದು ಕಾಲದಲ್ಲಿ ಸಂಸಾರವನ್ನು ಹೊಂದಿದರೂ ಹೊಂದಬಹುದು. ... ... ॥೪೭॥

(ಶಂ॥ ಭಾ) ವಿಷದಲ್ಲಿರುವ ಕ್ರಿಮಿಗಳಿಗೆ ವಿಷವು ಹೇಗಾದರೆ ದೋಷವಿಲ್ಲವೊ, ಇತರ ಪ್ರಾಣಿಗಳಿಗೆ ವಿಷವು ಹೇಗಾದರೆ ದೋಷವಾಗು

ವುದೊ, ಅದರಂತೆ ಅನ್ಯರ ಕರ್ಮವು ದೋಷ ಹೇತುವಾದರೂ ಸ್ವಕರ್ಮ ವು ಅನುಷ್ಠಿಸಲ್ಪಟ್ಟರೆ ಅದರಲ್ಲಿ ಪಾಪವಿಲ್ಲವು. ... ॥೪೭॥

(ಶ್ರೀ) ಕ್ಷತ್ರಿಯನಾದ ನಿನಿಗೆ ಯುದ್ಧದಿಂದ ಶತ್ರುಗಳನ್ನು ಕೊಲ್ಲುವದು ಸ್ವಧರ್ಮವಾಗಿಯೂ, ಭಿಕ್ಷಾವೃತ್ತಿಯಿಂದ ಅನ್ನ ಸಂಪಾದನಾದಿಕರ್ಮಗಳು ಪರಧರ್ಮವಾಗಿಯೂಇರುವುದು. ಆದರಿಂದ("ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹಲೋಕೇ ,, ಎಂಬ ದ್ವಿತೀಯಾಧ್ಯಾಯ ಶ್ಲೋಕಕ್ಕೆ ಪ್ರತ್ಯುತ್ತರವನ್ನು ಹೇಳಿರುವಂತೆ ತಿಳಿಯಬೇಕು.) ॥೪೭॥

ಶ್ಲೋ ॥ ಸಹಜಂಕರ್ಮಕೌಂತೇಯಸದೋಷಮಪಿನತ್ಯ
ಜೇತ್ | ಸರ್ವಾರಂಭಾಹಿದೋಷೇಣ ಧೂಮೇನಾಗ್ನಿರಿ
ವಾವೃತಾಃ ॥ ... ... ॥೪೮॥

ಪ॥ ಸಹಜಂ-ಕರ್ಮ-ಕೌಂತೇಯ-ಸದೋಷಂ-ಅಪಿ-ನ-ತ್ಯಜೇತ್| ಸರ್ವಾರಂಭಾಃ-ಹಿ-ದೋಷೇಣ-ಧೂಮೇನ-ಅಗ್ನಿಃ-ಇವ-ಆವೃತಾಃ ॥

(ಅ॥ ರಾ॥ ಭಾ) ಆದುದರಿಂದ ಕರ್ಮನಿಷ್ಠೆಯೆ ಶ್ರೇಷ್ಠವೆಂಬದಾಗಿ ಮೂರನೇ ಅಧ್ಯಾಯದಲ್ಲಿ ಹೇಳಿರುವ ಅರ್ಥವನ್ನು ಸ್ಮರಣೆ ಮಾಡಿಸುತ್ತಾರೆ. ಸಹಜಂಕರ್ಮ-ಸಹಜವಾಗಿರುವುದರಿಂದ ಅನುಷ್ಠಿಸುವುದಕ್ಕೆ ಸುಲಭವಾಗಿಯೂ ಅಪ್ರಮಾದವಾಗಿಯೂ ಇರುವ ಕರ್ಮವನ್ನು, ಸದೋಷಮಪಿ-ದುಃಖದೊಡನೆ ಕೂಡಿರುವುದಾಗಿದ್ದರೂ, ನತ್ಯಜೇತ್-ಜ್ಞಾನಯೋಗಯೋಗ್ಯನಾದವನೂ ಕೂಡ ಬಿಡಬಾರದು, ಸರ್ವಾರಂಭಾಹಿ-ಕರ್ಮಾರಂಭವೂ ಜ್ಞಾನಾರಂಭವೂ, ದೋಷೇಣ-ದುಃಖದಿಂದ, ಧೂಮೇನಾಗ್ನಿರಿವ-ಹೊಗೆಯಿಂದ ಅಗ್ನಿಯಂತೆ, ಆವೃತಾಃ - ಸುತ್ತಲ್ಪಟ್ಟಿಲ್ಲವೆ ಇರುವುದು. ಕರ್ಮಯೋಗವು ಅನುಷ್ಠಿಸುವುದಕ್ಕೆ ಸುಕರವಾಗಿಯೂ ಅಪ್ರಮಾದವಾಗಿಯೂ ಇರುವುದು, ಜ್ಞಾನಯೋಗವು ಅನುಷ್ಠಿಸುವುದಕ್ಕೆ ದುಷ್ಕರವಾಗಿಯೂ ಪ್ರಮಾದ ಯುಕ್ತವಾಗಿಯೂ ಇರುವುದೆಂಬಿದೇ ವಿಶೇಷವು. ... ... ॥೪೮॥

(ಶಂ॥ ಭಾ) ಸಹಜಂ-ತನ್ನೊಡನೆ ಹುಟ್ಟಿರುವುದು, ಸದೋಷಮಪಿ-ತ್ರಿಗುಣಾತ್ಮಕವಾಗಿರುವುದರಿಂದ ದೋಷದೊಡನೆ ಕೂಡಿದ್ದರೂ, ಸರ್ವಾರಂಭಾಃ-ಸ್ವಕರ್ಮ ಪರಕರ್ಮಗಳೆಲ್ಲವೂ, ದೋಷೇಣ - ದೋಷದಿಂದ

ಮುಚ್ಚಲ್ಪಟ್ಟಿರುವುವು. ಧೂಮೇನಾಗ್ನಿರಿವಾವೃತಾಃ- ಹೊಗೆಯಿಂದ ಅಗ್ನಿಯು ಮುಚ್ಚಲ್ಪಟ್ಟಿರುವಂತೆ. ಆದರೆ ದೋಷಯುಕ್ತವಾದ ಕರ್ಮವನ್ನು ಯೇತಕ್ಕೆ ಅನುಷ್ಠಿಸಬೇಕೆಂದರೆ ಕರ್ಮವನ್ನು ಮಾಡದೆ ಬಿಟ್ಟಿರುವುದಕ್ಕೆ ಮನುಷ್ಯನು ಶಕ್ತನಲ್ಲವು, "ನಹಿಕಶ್ಚಿತ್ ಕ್ಷಣಮಪಿಜಾತುತಿಷ್ಠತ್ಯ ಕರ್ಮಕೃತ್,, ( ೩॥ ೫ ) ಎಂಬದಾಗಿ ಒಂದುಕ್ಷಣವೂ ಕೂಡ ಕರ್ಮವನ್ನು ಮಾಡದೆ ಇರುವುದಕ್ಕೆ ಯಾವನಿಂದಲೂ ಆಗಲಾರದೆಂದು ಮೂರನೇ ಅಧ್ಯಾಯದಲ್ಲಿಯೇ ಹೇಳಲ್ಪಟ್ಟಿರುವುದು. ಆದರೆ ಕರ್ಮವು ದೋಷಯುಕ್ತವಾಗಿರುವ ಪಕ್ಷದಲ್ಲಿ ಅನ್ಯಕರ್ಮಗಳನ್ನು ಅನುಷ್ಠಿಸುವುದರಲ್ಲಿ ಬಾಧಕವೇನೆಂದರೆ ? ಅನ್ಯರ ಕರ್ಮಗಳನ್ನು ಅನುಷ್ಠಿಸುವುದರಲ್ಲಿ ಪಾತಕಗಳುಂಟೆಂದು ಪೂರ್ವವೇ ಹೇಳಲ್ಪಟ್ಟಿರುವುದು. ಪರಮಾರ್ಥ ಸನ್ಯಾಸಿಯಾದ ಬ್ರಹ್ಮಜ್ಞಾನಿಗೆ ಕರ್ಮತ್ಯಾಗವು ಯುಕ್ತವಾಗಿದ್ದರೂ ಅನ್ಯರು ಕರ್ಮಗಳನ್ನು ಯಾವ ಕಾಲದಲ್ಲಿಯೂ ಬಿಡಬಾರದು. ... ... ... ॥೪೮॥

(ಗೀ॥ ವಿ) ಎಲೈ ಅರ್ಜುನನೇ ? ತನಿಗೆ ಸ್ವಾಭಾವಿಕವಾದ ಕರ್ಮವು ದೋಷಯುಕ್ತವಾಗಿದ್ದರೂ ಅದನ್ನು ಬಿಡಬಾರದು. ಹೊಗೆಯಿಂದ ಬೆಂಕಿಯು ಸುತ್ತಲ್ಪಟ್ಟಿರುವಂತೆ ಸರ್ವಕರ್ಮಗಳೂ ಯಾವದಾದರೊಂದು ದೋಷದಿಂದ ವ್ಯಾಪಿಸಲ್ಪಟ್ಟಿದ್ದರೂ ಧೂಮರೂಪವಾದ ದೋಷವನ್ನು ಬಿಡಿಸಿ ಶೀತಿ ನಿವೃತ್ತಿಗೋಸ್ಕರ ಹ್ಯಾಗಾದರೆ ಲೋಕರು ಅಗ್ನಿಯನ್ನು ಸೇವನ ಮಾಡುತ್ತಾರಯೊ ಅಂದರಂತೆ ಫಲಾಪೇಕ್ಷಾದಿ ದೋಷಗಳನ್ನು ಬಿಟ್ಟು ಶ್ರೀಕೃಷ್ಣಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡಬೇಕೆಂದು ತಾತ್ಪರ್ಯವು. ... ॥೪೮॥

ಶ್ಲೋ॥ ಅಸಕ್ತಬುದ್ಧಿಸ್ಸರ್ವತ್ರ - ಜಿತಾತ್ಮಾವಿಗತಸ್ಪೃಹಃ । ನೈಷ್ಕರ್ಮ್ಯಸಿದ್ಧಿಂಪರಮಾಂ ಸನ್ನ್ಯಾಸೇನಾಧಿಗಚ್ಛತಿ॥ ... ... ... ॥೪೯॥

ಪ॥ ಅಸಕ್ತಬುದ್ಧಿಃ-ಸರ್ವತ್ರ-ಜಿತಾತ್ಮಾ-ವಿಗತಸ್ಪೃಹಃ। ನೈಷ್ಕರ್ಮ್ಯಸಿದ್ಧಿಂ-ಪರಮಾಂ-ಸನ್ನ್ಯಾಸೇನ-ಅಧಿಗಚ್ಛತಿ॥

(ಅ|| ರಾ|| ಭಾ) ಸರ್ವತ್ರ-ಫಲಾದಿ ಸರ್ವವಿಷಯದಲ್ಲಿಯೂ, ಅಸಕ್ತಬುದ್ಧಿಃ-ಬುದ್ಧಿಸಂಗವನ್ನು ಬಿಟ್ಟವನಾಗಿಯೂ, ಜಿತಾತ್ಮಾ-ಮನಸ್ಸನ್ನು ಜಯಿಸಿದವನಾಗಿಯೂ,ವಿಗತಸ್ಪೃಹಃ-ಪರಮ ಪುರುಷಕರ್ತೃತ್ವಾನುಸಂಧಾನದಿಂದ ತನ್ನ ಕರ್ತೃತ್ವದಲ್ಲಿ ಆಶಾರಹಿತನಾಗಿಯೂ, ಸನ್ನ್ಯಾಸೇನ-ತ್ಯಾಗದೊಡನೆ ಅಭಿನ್ನವಾದ ಫಲತ್ಯಾಗಾದಿ ರೂಪವಾದ ಸನ್ನ್ಯಾಸದೊಡನೆ, (ಯುಕ್ತ ಇತಿಶೇಷಃ) ಯುಕ್ತಃ-ಸೇರಿಕೊಂಡು ಕರ್ಮವನ್ನನುಷ್ಠಿಸುವಂತವನು, ಪರಮಾಂ ನೈಷ್ಕರ್ಮ್ಯಸಿದ್ಧಿಂ-ಶ್ರೇಷ್ಠವಾದ ಪರಮಾತ್ಮಧ್ಯಾನ ನಿಷ್ಠೆಯನ್ನೂ, ಅಧಿಗಚ್ಛತಿ-ಹೊಂದುತ್ತಾನೆ. ಜ್ಞಾನಯೋಗಕ್ಕೂ ಫಲಭೂತವಾಗಿಯೂ ಸರ್ವೇಂದ್ರಿಯ ಕರ್ಮೋಪರತಿ ರೂಪವಾಗಿಯೂ ಇರುವ ಮುಂದೇ ವಿವರಿಸಲ್ಪಡುವ ಪರಮಾತ್ಮಧ್ಯಾನನಿಷ್ಠೆಯನ್ನು ಹೊಂದುತ್ತಾನೆಂದರ್ಥವು. ||೪೯||

(ಶಂ|| ಭಾ) ಸರ್ವತ್ರ- ಪುತ್ರಮಿತ್ರಕಳತ್ರಾದಿ ವಸ್ತುಗಳಲ್ಲಿ, ಅಸಕ್ತ ಬುದ್ಧಿಃ-ತನ್ನದೆಂಬಅಭಿಮಾನವನ್ನು ಬಿಟ್ಟ ಬುದ್ಧಿಯುಳ್ಳವನೂ, ಜಿತಾತ್ಮಾ-ಮನಸ್ಸನ್ನು ಜಯಿಸಿದವನೂ, ವಿಗತಸ್ಪೃಹಃ-ದೇಹಜೀವಿತ ಭೋಗಗಳಲ್ಲಿ ಆಶಾರಹಿತನಾಗಿಯೂ ಇರುವ ಆತ್ಮಜ್ಞಾನಿಯು,ಪರಮಾಂ-ಶ್ರೇಷ್ಠವಾದ, ನೈಷ್ಕರ್ಮ್ಯಸಿದ್ಧಿಂ - ಜ್ಞಾನನಿಷ್ಠೆಯನ್ನು ನಿಷ್ಕ್ರಿಯವಾದ ಬ್ರಹ್ಮವು ತಾನೆಂಬದಾಗಿ ತಿಳಿಯುವಂತವನು ನಿಷ್ಕರ್ಮನು ಅಂತವನಾಗುವಿಕೆಯೆಂಬ ಸಿದ್ಧಿಯನ್ನು, ಇದು ಕರ್ಮಜನ್ಯವಾದ ಸಿದ್ಧಿಗಿಂತಲೂ ವಿಲಕ್ಷಣವಾದದ್ದು. (ಅಥವಾ) ಸದ್ಯೋಮುಕ್ತಿಯನ್ನು, ಸನ್ನ್ಯಾಸೇನ- ಚೆನ್ನಾಗಿ ಹೊಂದಿರುವ ಬ್ರಹ್ಮಜ್ಞಾನದಿಂದ ಅಥವಾ ಬ್ರಹ್ಮಜ್ಞಾನವುಂಟಾಗಿ ಸಕಲ ಕರ್ಮವನ್ನೂ ಬಿಟ್ಟಿರುವುದರಿಂದ, ಅಧಿಗಚ್ಛತಿ-ಹೊಂದುತ್ತಾನೆ. ... ||೪೯||

(ಗೀ|| ವಿ) ವಿಗತಸ್ಪೃಹಃ- ಇಹಪರದ ಸುಖಾಪೇಕ್ಷಾರಹಿತನು, ಪರಮಾಂ ಶ್ರೇಷ್ಠವಾದ, ನೈಷ್ಕರ್ಮ್ಯಸಿದ್ಧಿಂ-ಮೋಕ್ಷಕ್ಕೆ ಉಪಯುಕ್ತವಾಗಿರುವ ಜ್ಞಾನನಿಷ್ಠಾನೈಷ್ಕರ್ಮ್ಯದ ಸಾಧನವನ್ನು, ಸನ್ನ್ಯಾಸೇನ- ಕಾಮ್ಯಕರ್ಮತ್ಯಾಗದಿಂದ, ಅಥವಾ ಭಗವದರ್ಪಣ ಮಾಡುವುದರಿಂದ, ಅಧಿಗಚ್ಛತಿ-ಹೊಂದುತ್ತಾನೆ. ... ... ||೪೯||

ಶ್ಲೋ॥ ಸಿದ್ಧಿಂಪ್ರಾಪ್ತೋಯಥಾಬ್ರಹ್ಮತಥಾಪ್ನೋತಿನಿ
ಬೋಧಮೇ । ಸಮಾಸೇನೈವಕೌಂತೇಯನಿಷ್ಠಾಜ್ಞಾ
ನಸ್ಯಯಾಪರಾ ॥ ... ... ॥೫೦॥

ಪ॥ ಸಿದ್ಧಿಂ-ಪ್ರಾಪ್ತಃ-ಯಥಾ-ಬ್ರಹ್ಮ-ತಥಾ-ಆಪ್ನೋತಿ-ನಿಬೋಧ-ಮೇ । ಸಮಾಸೇನ-ಏವ-ಕೌಂತೇಯ-ನಿಷ್ಠಾ-ಜ್ಞಾನಸ್ಯ-ಯಾ-ಪರಾ ॥

(ಅ ॥ ರಾ ॥ ಭಾ) ಕೌಂತೇಯ-ಎಲೈ ಅರ್ಜುನನೆ, ಸಿದ್ಧಿಂಪ್ರಾಪ್ತಃ-ಪ್ರಯಾಣಪರ್ಯಂತವಾಗಿ ಪ್ರತಿದಿನದಲ್ಲಿಯೂ ಅನುಷ್ಠಿಸಲ್ಪಡುವ ಕರ್ಮಯೋಗದಿಂದುಂಟಾದ ಧ್ಯಾನಸಿದ್ಧಿಯನ್ನು ಹೊಂದಿದವನು, ಯಥಾ-ಹೇಗೆ ಇದ್ದುಕೊಂಡು, ಜ್ಞಾನಸ್ಯಯಾಪರಾನಿಷ್ಠಾತದ್ಬ್ರಹ್ಮಾಪ್ನೋತಿ-ಧ್ಯಾನರೂಪವಾದ ಜ್ಞಾನಕ್ಕೆ ಯಾವದು ಉತ್ತಮವಾದಪ್ರಾಪ್ಯವೋ ಆ ಬ್ರಹ್ಮವನ್ನು ಹೇಗೆ ಹೊಂದುತ್ತಾನೆಯೋ,ತಥಾ-ಆಪ್ರಕಾರವನ್ನು, ಸಮಾಸೇನಮೇನಿಬೋಧ-ಸಂಗ್ರಹವಾಗಿ ನನ್ನಿಂದ ಕೇಳು.॥೫೦॥

(ಶಂ॥ ಭಾ) ತಮ್ಮ ತಮ್ಮಗಳ ಕರ್ಮಗಳಿಂದ ಈಶ್ವರನನ್ನು ಆರಾಧಿಸಿ ಅವನ ಅನುಗ್ರಹದಿಂದ ಶರೀರೇಂದ್ರಿಯಗಳು ಜ್ಞಾನನಿಷ್ಠೆಗೆ ಯೋಗ್ಯಗಳಾಗುವಿಕೆ ಎಂಬ ಸಿದ್ಧಿಯನ್ನು ಹೊಂದಿದವನು ಬ್ರಹ್ಮವನ್ನು ಹೊಂದುವಿಕೆಯೇ ಜ್ಞಾನದ ನಿಷ್ಠೆಯೆಂದರೆ ಪರಿಸಮಾಪ್ತಿಯು, ಆತ್ಮನು ಜ್ಞಾನಾಕಾರನು ಆದಿತ್ಯವರ್ಣನು ಭಾರೂಪನು (ಪ್ರಕಾಶವನ್ನೆ ಸ್ವರೂಪವಾಗಿ ಯುಳ್ಳವನು) ಸ್ವಯಂಜ್ಯೋತಿಸ್ಸು ಎಂಬೀಪ್ರಕಾರವಾಗಿ ಹೇಳುವಿಕೆಯು ದ್ರವ್ಯಗುಣಾದ್ಯಾಕಾರನಲ್ಲವೆಂಬೀ ವಾಕ್ಯದ ಹಿಂದೆಯೆ ಹೇಳಬೇಕಾಗಿರುವ ತಮೋ ರೂಪತ್ವವನ್ನು ನಿಷೇಧಿಸುವುದಕ್ಕಲ್ಲದೆ ಆತ್ಮನಿಗೆ ರೂಪವುಂಟೆಂದು ಹೇಳುವುದಕ್ಕಲ್ಲವು. ತನ್ನ ಶರೀರವನ್ನು ತಾನು ತಿಳಿಯುವುದಕ್ಕೆ ಪ್ರಮಾಣಾಂತರಾಪೇಕ್ಷೆಯು ಹೇಗಾದಗೆ ಅನಾವಶ್ಯಕವೋ ಅದರಂತೆ ಆ ದೇಹಕ್ಕಿಂತಲೂ ಭಿನ್ನನಾದ ಆತ್ಮನನ್ನು ತಿಳಿಯುವುದಕ್ಕೆ ಪ್ರಮಾಣಾವಶ್ಯಕತೆಯು. ಇರುವುದಿಲ್ಲವು. ಆತ್ಮನಲ್ಲದ್ದನ್ನು ಆತ್ಮನೆನ್ನುವ ಅಂಶವನ್ನು ನಿವೃತ್ತಿ ಮಾಡುವುದರಲ್ಲಿಯೇ ಪ್ರಯತ್ನವನ್ನು ಮಾಡಬೇಕೆಂದು ಶಾಂಕರ ಭಾಷ್ಯತಾತ್ಪರ್ಯ ಸಂಗ್ರಹವು. ... ... ॥೫೦॥

(ಗೀ ॥ ವಿ) “ಅಸಕ್ತ ಬುದ್ಧಿಸ್ಸರ್ವತ್ರ,, ಎಂಬುವುದರಿಂದ ಹೇಳಲ್ಪಡುವ ನೈಷ್ಕರ್ಮ್ಯಸಿದ್ಧಿಗೆಸಾಧನವನ್ನು ವಿವರಿಸುವಂತವನಾಗಿ ನೈಷ್ಕರ್ಮ್ಯಸಿದ್ಧಿಯಾದಮೇಲೆ ಆಗುವ ಮೋಕ್ಷಫಲವನ್ನು ಹೇಳುತ್ತಾನೆ. ಎಲೈ ಅರ್ಜುನನೆ ಯಾವಸಿದ್ಧಿಯು ಜ್ಞಾನದ ಉತ್ತಮವಾದ ನಿಷ್ಠೆಯೊ ಆಸಿದ್ಧಿಯನ್ನು ಯಾವಪ್ರಕಾರದಿಂದ ಹೊಂದಿದವನಾಗಿರುವ ಪುರುಷನು ಶ್ರೀ ಮಹಾಲಕ್ಷ್ಮಿಯನ್ನು ಹೊಂದುವನೊ ಆಪ್ರಕಾರವನ್ನು ಸಂಕ್ಷೇಪವಾಗಿ ನನ್ನಿಂದ ಕೇಳುವಂತವನಾಗು. ॥೫೦॥

ಶ್ಲೋ ॥ ಬುದ್ಧ್ಯಾವಿಶುದ್ಧಯಾಯುಕ್ತೋ ಧೃತ್ಯಾತ್ಮಾ
ನಂ ನಿಯಮ್ಯಚ । ಶಬ್ದಾದೀನ್ ವಿಷಯಾಂ ಸ್ತ್ಯ
ಕ್ತ್ವಾರಾಗದ್ವೇಷೌವ್ಯುದಸ್ಯಚ ॥ ೫೧ ॥ ವಿವಿಕ್ತಸೇವೀಲ
ಘ್ವಾಶೀಯತ ವಾಕ್ಕಾಯಮಾನಸಃ । ಧ್ಯಾನಯೋಗ ಪ
ರೋನಿತ್ಯಂವೈರಾಗ್ಯಂಸಮುಪಾಶ್ರಿತಃ ।೫೨॥ ಅಹಂಕಾ
ರಂಬಲಂದರ್ಪಂಕಾಮಂಕ್ರೋಧಂಪರಿಗ್ರಹಂ ।ವಿಮುಚ್ಯನಿ
ರ್ಮಮಶ್ಶಾಂತೋಬ್ರಹ್ಮಭೂಯಾಯಕಲ್ಪತೇ ॥ ॥೫೩॥

ಪ । ಬುದ್ಧ್ಯಾ- ವಿಶುದ್ಧಯಾ-ಯುಕ್ತಃ-ಧೃತ್ಯಾ - ಆತ್ಮಾನಂ - ನಿಯಮ್ಯ-ಚ । ಶಬ್ದಾದೀನ್-ವಿಷಯಾನ್-ತ್ಯಕ್ತ್ವಾ-ರಾಗದ್ವೇಷೌ-ವ್ಯುದಸ್ಯ-ಚ॥ ವಿವಿಕ್ತಸೇವೀ-ಲಘ್ವಾಶೀ-ಯತವಾಕ್ಕಾಯಮಾನಸಃ । ಧ್ಯಾನಯೋಗಪರಃ- ನಿತ್ಯಂ - ವೈರಾಗ್ಯಂ-ಸಮುಪಾಶ್ರಿತಃ ॥ ಅಹಂಕಾರಂ-ಬಲಂ-ದರ್ಪಂ-ಕಾಮಂ-ಕ್ರೋಧಂ - ಪರಿಗ್ರಹಂ। ವಿಮುಚ್ಯ-ನಿರ್ಮಮಃ-ಶಾಂತಃ-ಬ್ರಹ್ಮಭೂಯಾಯ-ಕಲ್ಪತೇ।

(ಅ ॥ ರಾ ॥ ಭಾ) ವಿಶುದ್ಧಯಾಬುದ್ಧ್ಯಾಯುಕ್ತಃ-ಯಥಾವತ್ತಾಗಿ ಆತ್ಮತತ್ವವನ್ನು ವಿಷಯೀಕರಿಸಿರುವ ಬುದ್ಧಿಯೊಡನೆ ಕೂಡಿದವನಾಗಿ, ಧೃತ್ಯಾ ಆತ್ಮಾನಂನಿಯಮ್ಯಚ - ಶಬ್ದಾದಿ ವಿಷಯವಿಮುಖವನ್ನಾಗಿ ಮಾಡಿಸುವ ಧೈರ್ಯದಿಂದ ಮನಸ್ಸನ್ನು ಯೋಗಯೋಗ್ಯವಾಗುವಂತೆ ಮಾಡಿಕೊಂಡು, ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ - ಶಬ್ದಾದಿ ವಿಷಯಗಳನ್ನು [illegible] ದೂರದಲ್ಲಿ ತ್ಯಾಗವಾಗುವಂತೆ ಪರಿಹರಿಸಿಕೊಂಡು, ರಾಗದ್ವೇಷೌಚವ್ಯುದಸ್ಯ-ಶಬ್ದಾದಿನಿಮಿತ್ತಕಗಳಾದ ರಾಗದ್ವೇಷಗಳನ್ನೂ ಬಿಟ್ಟು ಬಿಟ್ಟು, ವಿವಿಕ್ತಸೇವೀ-ಧ್ಯಾನವಿರೋಧಿ

ಳಿಲ್ಲದ ವಿವಿಕ್ತಪ್ರದೇಶಗಳಲ್ಲಿ ವಾಸಮಾಡುವಂತವನಾಗಿಯೂ, ಲಘ್ವಾ ಶೀ-ಅಧಿಕಾಶನವೂ ಅನಶನವೂ ಇಲ್ಲದೆ ಮಿತವಾದ ಆಹಾರವುಳ್ಳವನಾಗಿ ಯೂ, ಯತವಾಕ್ಕಾಯಮಾನಸಃ - ಧ್ಯಾನಯೋಗಾಭಿ ಮುಖಗಳಾದ ವಾಕ್ಛರೀರ ಮನಸ್ಸುಗಳುಳ್ಳವನಾಗಿಯೂ, ನಿತ್ಯಂಧ್ಯಾನಯೋಗಪರಃ- ಊರ್ಧ್ವಕಾಲವಾಗಿದ್ದುಕೊಂಡು ಪ್ರಯಾಣಪರ್ಯಂತವಾಗಿ ಪ್ರತಿದಿನದಲ್ಲಿ ಯೂ ಧ್ಯಾನಯೋಗವನ್ನನುಷ್ಠಿಸುವಂತವನಾಗಿಯೂ, ವೈರಾಗ್ಯಂ ಸಮುಪಾಶ್ರಿತಃ-ತನ್ನಧ್ಯಾನಕ್ಕೆ ವಿಷಯನಾದ ಪರಮಾತ್ಮನಿಗಿಂತಲೂ ಅನ್ಯಗಳಾದ ವಸ್ತುಗಳಲ್ಲಿರುವ ಅಲ್ಪತ್ವಾಸ್ಥಿರತ್ವಾದಿ ದೋಷಗಳನ್ನು ಪುನಃಪುನಃ ಪರಾಮರ್ಶಮಾಡುವುದರಿಂದ ಅವುಗಳಲ್ಲಿ ತನಿಗೆ ಇಚ್ಛಾ ರಾಹಿತ್ಯವೆಂಬ ವೈರಾಗ್ಯವನ್ನು ವೃದ್ಧಿಪಡಿಸಿಕೊಂಡವನಾಗಿಯೂ, ಅಹಂಕಾರಂ-ದೇಹದಲ್ಲಿ ಆತ್ಮಭ್ರಾಂತಿಯನ್ನೂ, ಬಲಂ-ಅದಕ್ಕೆ ವೃದ್ಧಿ ಹೇತುವಾದ ವಾಸನಾ ಬಲವನ್ನೂ, ದರ್ಪಂ-ತನ್ಮೂಲಕವಾಗಿ ಹಿರಿಯ ರನ್ನು ಅವಮಾನಪಡಿಸುವುದೆಂಬ ಮನೋವಿಕಾರರೂಪವಾದ ದರ್ಪವ ನ್ನೂ, ಕಾಮಂ-ಸ್ತ್ರೀಜನಾಪೇಕ್ಷೆಯನ್ನೂ, ಕ್ರೋಧಂ-ಅಪರಾಧಿಗಳ ಲ್ಲುಂಟಾದ ಮನಸ್ತಾಪವೆಂಬ ಕೋಪವನ್ನೂ, ಪರಿಗ್ರಹಂ-ದೇಹಧಾರ ಣಾರ್ಥವಾದದ್ದಲ್ಲದೆ ಅಧಿಕವಾದ ವಸ್ತ್ರವಾಹನಗೃಹಕ್ಷೇತ್ರಾರಾಮಧ ನಪರಿಚಾರಕಾದಿಗಳನ್ನೂ, ವಿಮುಚ್ಯ-ಬಿಟ್ಟು, ನಿರ್ಮಮಃ-ತನ್ನದಲ್ಲದ ವುಗಳಲ್ಲಿ ತನ್ನದೆಂಬ ಬುದ್ಧಿರಹಿತನಾಗಿಯೂ, ಶಾಂತಃ - ಆತ್ಮಾನುಭ ವೈಕ ಸುಖವುಳ್ಳವನಾಗಿಯೂ ಇರುವ ಧ್ಯಾನಯೋಗಾಧಿಕಾರಿಯು, ಬ್ರಹ್ಮಭೂಯಾಯಕಲ್ಪತೆ- ಬ್ರಹ್ಮಸ್ವಭಾವವನ್ನು ಹೊಂದುತ್ತಾನೆ, ಸರ್ವಬಂಧಗಳಿಂದಲೂ ಬಿಡಲ್ಪಟ್ಟು ಯಥಾವತ್ತಾಗಿ ಆತ್ಮನನ್ನು ಅನು ಭವಿಸಲರ್ಹನಾಗುತ್ತಾನೆಂದರ್ಥವು. ॥೫೦॥ ॥೫೧॥ ॥೫೩॥

(೫೦) ವಿಶುದ್ಧಯಾ - ಮಾಯಾರಹಿತಯಾ, ಕಪಟವಿಲ್ಲದ, ಬುದ್ಧ್ಯಾ-ನಿಶ್ಚಯಾತ್ಮಕವಾದ ಬುದ್ಧಿಯೊಡನೆ, ಆತ್ಮಾನಂ - ಕಾರ್ಯ ಕಾರಣರೂಪವಾದ ಅಂತಃಕರಣವನ್ನು, ನಿಯಮ್ಯಚ- ಸ್ವಾಧೀನಪಡಿ ಸಿಕೊಂಡು, ಶಬ್ದಾದೀನ್ವಿಷಯಾನ್- ಶರೀರಧಾರಣಕ್ಕಾಗಿ ಅಪೇಕ್ಷಿತ ವಾದ ಆಹಾರಾದಿಗಳನ್ನಲ್ಲದೆ ಇತರಗಳಾದವಿಷಯಗಳನ್ನು, ರಾಗದ್ವೇ

ಷ್ಠಾ-ಶರೀರ ರಕ್ಷಣಕ್ಕಾಗಿ ತನ್ನ ಪ್ರಯತ್ನವಿಲ್ಲದೆ ದೊರೆತ ಅನ್ನಪಾನಾದಿಗಳಲ್ಲಿರುಚಿಯಿಂದ ಅಪೇಕ್ಷೆಯನ್ನೂ ಅರುಚಿಯಿಂದ ದ್ವೇಷವನ್ನೂ,ವಿವಿಕ್ತಸೇವೀ-ಅರಣ್ಯಪ್ರದೇಶಗಳು ನದೀತೀರಗಳಲ್ಲಿರುವ ಮರಳು ಪ್ರದೇಶಗಳು ಪರ್ವತಗುಹೆಗಳೇ ಮೊದಲಾದ ಏಕಾಂತಸ್ಥಲಗಳಲ್ಲಿ ವಾಸಮಾಡುವಂತವನು, ನಿತ್ಯಂ-ಯಾವಾಗಲೂ, ಧ್ಯಾನಯೋಗಪರಃ-ಆತ್ಮಸ್ವರೂಪಚಿಂತನವು ಧ್ಯಾನವು, ಅದರಲ್ಲಿ ಏಕಾಗ್ರಚಿತ್ತನಾಗಿರುವಿಕೆಯು ಯೋಗವು,ಇವುಗಳು ಶ್ರೇಷ್ಠವಾದ ಕರ್ತವ್ಯಗಳೆಂಬದಾಗಿ ಇವುಗಳಲ್ಲಾಸಕ್ತನಾಗಿ, ವೈರಾಗ್ಯಂ ಸಮುಪಾಶ್ರಿತಃ - ದೃಷ್ಟಾದೃಷ್ಟವಸ್ತುಗಳಲ್ಲಾ ಸಕ್ತಿ ರಹಿತನಾದವನು, ಅಹಂಕಾರಂ - ತಾನೆನ್ನುವ ಅಹಂಕಾರವನ್ನೂ, ಬಲಂ - ಕಾಮರಾಗಗಳೊಡನೆ ಕೂಡಿರುವ ಶಕ್ತಿಯುಲ್ಲದೆ ದೇಹಶಕ್ತಿಯಲ್ಲವು, ಅದು ಯಾವದೆಂದರೆ ? ತನ್ನಲ್ಲಿರುವ ವಸ್ತುಗಳು ತನ್ನನ್ನು ಬಿಟ್ಟು ಹೋಗದೆ ಇರುವುದಕ್ಕಾಗಿ ಪ್ರಯತ್ನಿಸುವ ಸಾಮರ್ಥ್ಯವು ಕಾಮದಿಂದ ಕೂಡಿರುವ ಶಕ್ತಿಯು, ತನಿಗಿಲ್ಲದ ವಸ್ತುವನ್ನು ಸಂಪಾದಿಸುವುದಕ್ಕೆ ಪ್ರಯತ್ನಿಸುವ ಸಾಮರ್ಥ್ಯವು ರಾಗದೊಡನೆ ಕೂಡಿರುವ ಶಕ್ತಿಯು_ಇವನ್ನೂ, ದರ್ಪಂ-ಅಧಿಕ ಸಂತೋಷದಿಂದ ಧರ್ಮವಿರೋಧವಾಗಿ ಉಂಟಾಗುವ ಮದವನ್ನೂ, ಕಾಮಂ - ವಿಷಯಾಪೇಕ್ಷೆಯನ್ನೂ, ಕ್ರೋಧಂ_ದ್ವೇಷವನ್ನೂ, ಪರಿಗ್ರಹಂ-ದೇಹರಕ್ಷಣದಲ್ಲಾಗಲಿ ಧರ್ಮಾನುಷ್ಠಾನದಲ್ಲಾಗಲಿ ಮಧ್ಯದಲ್ಲಿ ಪ್ರಾಪ್ತವಾಗುವ ಅನಾವಶ್ಯಕವಾದ ವಿಷಯವನ್ನು, ನಿರ್ಮಮಃ-ತನ್ನ ದೇಹದಲ್ಲಿಯೂ ಕೂಡ ಅಭಿಮಾನವನ್ನು ಬಿಟ್ಟವನು, ಶಾಂತಃ-ವಿಷಯಗಳ ದಶೆಯಿಂದ ಮನೋನಿವೃತ್ತಿ ರೂಪವಾದ ಉಪಶಾಂತಿಯನ್ನು ಹೊಂದಿದವನು, ಬ್ರಹ್ಮಭೂಯಾಯಕಲ್ಪತೆ-ಬ್ರಹ್ಮವಾಗುವುದಕ್ಕೆ ಯೋಗ್ಯನಾಗುತ್ತಾನೆಂದು ತಾತ್ಪರ್ಯವು. ... ... ॥೫೧॥೫೨॥೫೩॥

(ಶ್ರೀ) ಬುದ್ಧ್ಯಾ-ಸಾತ್ವಿಕ ಬುದ್ಧಿಯೊಡನೆ, ಧೃತ್ಯಾ-ಸಾತ್ವಿಕಧೈರ್ಯದಿಂದ,ವಿವಿಕ್ತಸೇವೀ-ಪರಿಶುದ್ಧವಾದ ಸ್ಥಳದಲ್ಲಿರುವಂತವನು, ಅಹಂಕಾರಂ-ತಾನು ವೈರಾಗ್ಯನಿಷ್ಠನೆಂಬ ಅಹಂಕಾರವನ್ನೂ,ದರ್ಪಂ-ಯೋಗಸಾಮರ್ಥ್ಯದಿಂದ ದುರ್ಮಾರ್ಗ ಪ್ರವರ್ತನೆಯನ್ನೂ, ಕಾಮಂ-

ಪ್ರಾರಬ್ಧವಶದಿಂದ ಪ್ರಾಪ್ತವಾದ ವಸ್ತುಗಳಲ್ಲಿರುವ ಅಪೇಕ್ಷೆಯನ್ನೂ, ಕ್ರೋಧಂ-ತಾನು ಪಡದಿರುವ ವಸ್ತುಗಳನ್ನು ಅಪಹರಿಸಿದ ಅಥವಾ ನಾಶಪಡಿಸಿದವನಲ್ಲುಂಟಾಗಿರುವ ಕೋಪವನ್ನೂ, ನಿರ್ಮಮಃ- ಅಪ್ರಯತ್ನದಿಂದ ಒಂದ ವಸ್ತುಗಳಲ್ಲಿಯೂ ಕೂಡ ಅಭಿಮಾನವಿಲ್ಲದವನು, ಶಾಂತಃ- ಸಕಲ ವಿಷಯಗಳಿಂದಲೂ ನಿವೃತ್ತನಾದವನು. ॥೫೧॥೫೨॥೫೩॥

(ಗೀ॥ ವಿ) ವಿಶುದ್ಧಯಾ-ವಿಷಯಾಪೇಕ್ಷಾರಹಿತವಾದ, ಧೃತ್ಯಾ- ಸ್ತಂಭನ ಶಕ್ತಿಯಿಂದ, (ನಿಲ್ಲಿಸುವ ಶಕ್ತಿಯಿಂದ ಎಂದರ್ಥವು) ಆತ್ಮಾನಂ-ಮನಸ್ಸನ್ನು, ಶಬ್ದಾದೀನ್ವಿಷಯಾನ್-ಶಬ್ದಾದಿಗಳನ್ನನುಭವಿಸಬೇಕೆಂಬ ಇಚ್ಛೆಗಳನ್ನು, ಯತವಾಕ್ಕಾಯಮಾನಸಃ - ಅಯೋಗ್ಯವಾದ ವಿಷಯದಲ್ಲಲ್ಲದೆ ಇತರ ವಿಷಯಗಳಲ್ಲಿ ವಾಕ್ದೇಹಮನಸ್ಸುಗಳನ್ನು ಉಪಯೋಗಿಸುವಂತವನು. ಅಹಂಕಾರಂ-ತಾನುಕರ್ತಾ ಎಂಬ ಅಭಿಮಾನವನ್ನೂ, ಬಲಂ-ತಾನು ಅಧಿಕಸಾಮರ್ಥ್ಯವುಳ್ಳವನೆಂಬ ಅಭಿಮಾನವನ್ನೂ, ದರ್ಪಂ-ತಾನು ಭಯಪಡತಕ್ಕವಿಷಯದಲ್ಲಿಯೂಕೂಡ ಭಯಪಡದೆ ಇರುವಿಕೆಯನ್ನೂ, ನಿರ್ಮಮಃ-ತಾನುಮಾಡುವ ಕರ್ಮಗಳು ತನ್ನವೆಂಬ ಅಭಿಮಾನ ರಹಿತನು, ಶಾಂತಃ-ಕೋಪಸ್ಥಾನದಲ್ಲಿಯೂ ಕೂಡಕ್ಷಮಾಗುಣವುಳ್ಳವನು, ಬ್ರಹ್ಮಭೂಯಾಯ - ಬ್ರಹ್ಮಜ್ಞಾನ ಕ್ಕೋಸ್ಕರ, ಕಲ್ಪತೆ-ಯೋಗ್ಯನಾಗುತ್ತಾನೆ. ॥೫೧॥ ॥೫೨॥ ॥೫೩॥

ಶ್ಲೋ॥ ಬ್ರಹ್ಮಭೂತಃ ಪ್ರಸನ್ನಾತ್ಮಾ ನಶೋಚತಿನಕಾಂ
ಕ್ಷತಿ । ಸಮಸ್ಸರ್ವೇಷು ಭೂತೇಷುಮದ್ಭಕ್ತಿಂಲಭತೆಪ
ರಾಂ ॥ ... ... ॥೫೪॥

ಪ ॥ ಬ್ರಹ್ಮಭೂತಃ-ಪ್ರಸನ್ನಾತ್ಮಾ-ನ-ಶೋಚತಿ-ನ-ಕಾಂಕ್ಷತಿ । ಸಮಃ-ಸರ್ವೇಷು-ಭೂತೇಷು-ಮದ್ಭಕ್ತಿಂ-ಲಭತೆ-ಪರಾಂ ॥

(ಅ ॥ ರಾ ॥ ಭಾ) ಬ್ರಹ್ಮಭೂತಃ-ಅಳವಿಲ್ಲದ ಜ್ಞಾನಸ್ವರೂಪವಾಗಿಯೂ ಪರಶೇಷತ್ವೈಕಸ್ವಭಾವ ವಾಗಿಯೂ ಇರುವ ಆತ್ಮಸ್ವರೂಪಾವಿರ್ಭಾವವುಳ್ಳವ ನಾಗಿಯೂ, ಪ್ರಸನ್ನಾತ್ಮಾ - ಕ್ಲೇಶ ಕರ್ಮಾದಿಗಳಿಂದ ವ್ಯಾಕುಲಿತವಾಗದ ಸ್ವರೂಪವುಳ್ಳವನೂ ಆದ ಅಧಿಕಾರಿಯು,

ನಶೋಚತಿ-ಯಾವ ವಿಷಯದಲ್ಲಿಯೂ ಶೋಕಪಡಲಾರನು, ನಕಾಂಕ್ಷತಿ-ಯಾವವಿಷಯದಲ್ಲಿಯೂ ಆಶೆಯುಳ್ಳವನಾಗಲಾರನು, ಸರ್ವೇಷು ಭೂತೇಷುಸಮಃ- ನನಿಗೆ ಭಿನ್ನಪಟ್ಟ ಸರ್ವಭೂತಗಳಲ್ಲಿಯೂ ಅನಾದರಯುಕ್ತನಾಗಿರುವಕಾರಣ, ಏಕರೂಪವಾಗಿ ಸರ್ವವಸ್ತುಗಳನ್ನೂ ತೃಣದಂತೆ ಯೆಣಿಸುವಂತವನಾಗಿ, ಪರಾಂ-ಉತ್ತಮವಾದ, ಮದ್ಭಕ್ತಿಂ-ಸರ್ವೇಶ್ವರನಾಗಿಯೂ ಸರ್ವಜಗತ್ಸೃಷ್ಟ್ಯಾದಿಗಳನ್ನೆ ಲೀಲೆಯಾಗಿವುಳ್ಳವನಾಗಿಯೂ ಅನವಧಿಕಾತಿಶಯಾಸಂಖ್ಯೇಯ ಕಲ್ಯಾಣ ಗುಣೈಕತಾನನಾಗಿಯೂ ಲಾವಣ್ಯಾಮೃತ ಸಾಗರನಾಗಿಯೂ ಶ್ರೀವಮಾನಾಗಿಯೂ ಪುಂಡರೀಕನಯನನಾಗಿಯೂ ತನಿಗೆ ಸ್ವಾಮಿಯಾಗಿಯೂ ಇರುವನನ್ನಲ್ಲಿ ಅತ್ಯರ್ಥಪ್ರಿಯಾನುಭವರೂಪವಾದ ಪರಭಕ್ತಿಯನ್ನು ಹೊಂದುತ್ತಾನೆ. ... ... ॥೫೪॥

(ಶಂ ॥ ಭಾ) ಬ್ರಹ್ಮ ಭೂತನೆಂದರೆ ಬ್ರಹ್ಮವನ್ನು ಹೊಂದಿದವನು, ಪ್ರಸನ್ನಾತ್ಮಾ-ಪ್ರತ್ಯಗಾತ್ಮನಲ್ಲಿ ಆವಿರ್ಭವಿಸಿರುವ ಆನಂದವುಳ್ಳವನು,ನಶೋಚತಿ-ತನಿಗುಂಟಾಗಿರುವ ಲೋಪಗಳಿಗಾಗಿ ವಿಚಾರಪಡಲಾರನು, ನಕಾಂಕ್ಷತಿ - ಇಲ್ಲದ್ದನ್ನಪೇಕ್ಷಿಸಲಾರನು, ನಹೃಷ್ಯತಿ ಎಂತಲೂಪಾಠವು. ಸಂತೋಷಿಸಲಾರನೆಂದರ್ಥವು.ಸಮನೆಂದರೆಸರ್ವಭೂತಗಳ ಸುಖದುಃಖಗಳನ್ನೂ ತನಿಗೆಬಂದಸುಖದುಃಖಗಳಂತೆತಿಳಿಯುವಂತವನು, ಇಂತವನುಪರಮೇಶ್ವರನಾದನನ್ನಲ್ಲಿ "ಚತುರ್ವಿಧಾಭಜಂತೆಮಾಂ"(೭॥೧೬)ಎಂಬಶ್ಲೋಕದಲ್ಲಿ ಪ್ರತಿಪಾದಿತವಾದ ನಾಲ್ಕನೆಭಕ್ತಿಯನ್ನು ಎಂದರೆ ಉತ್ತಮವಾದಜ್ಞಾನನಿಷ್ಠೆಯನ್ನು ಹೊಂದುವನು,ಸರ್ವಭೂತೇಷು ಸಮಃ-ಎಂಬ ಸ್ಥಾನದಲ್ಲಿ ಆತ್ಮಸಾಮ್ಯವರ್ಥವಲ್ಲವು, ಮೇಲೆವಿವರಿಸಿರುವ ಅರ್ಥವೇಎಂದರಿಯಬೇಕು. ... ॥೫೪॥

(ಗೀ ॥ ವಿ ) ಬ್ರಹ್ಮಭೂತಃ-ತನ್ನಮನಸ್ಸನ್ನು ಬ್ರಹ್ಮದಲ್ಲಿಯೆ ಇಟ್ಟಿರುವಂತವನು, ಎಂದರೆ ಲಕ್ಷ್ಮೀದೇವಿಯನ್ನು ಹೊಂದದವನೆಂದರ್ಥವು. ಪ್ರಸನ್ನಾತ್ಮಾ - ತಾನಾಗಿಯೆ ವಿಷಯಗಳ ದೆಶೆಯಿಂದ ನಿವೃತ್ತವಾದಮನಸ್ಸುಳ್ಳವನು. ... ... ॥೫೪॥

ಶ್ಲೋ॥ ಭಕ್ತ್ಯಾಮಾಮಭಿಜಾನಾತಿಯಾವಾನ್ ಯಶ್ಚಾ

ಸ್ಮಿತತ್ತ್ವತಃ | ತತೋಮಾಂತತ್ತ್ವತೋಽಜ್ಞಾತ್ವಾವಿಶತೇತ
ದನಂತರಂ ॥ ... ... ॥೫೫॥

ಪ॥ ಭಕ್ತ್ಯಾ-ಮಾಂ-ಅಭಿಜಾನಾತಿ-ಯಾವಾನ್-ಯಃ-ಚ-ಅಸ್ಮಿ-ತತ್ವತಃ |ತತಃ-ಮಾಂ-ತತ್ವತಃ-ಜ್ಞಾತ್ವಾ-ವಿಶತೆ-ತದನಂತರಂ ॥

(ಅ॥ರಾ॥ಭಾ) ಈಶ್ಲೋಕದಿಂದ ಹಿಂದಿನ ಶ್ಲೋಕದಲ್ಲಿ ಪ್ರತಿಪಾದಿತವಾದಭಕ್ತಿಯಫಲವನ್ನು ಹೇಳುತ್ತಾರೆ (ಅಹಂ-ನಾನು,)ಯೊಸ್ಮಿ-ಯಾವಸ್ವರೂಪನೊ, ಯಾವ ವಿಧಗಳಾದ ಗುಣಗಳುಳ್ಳವನೊ, ಯಾವಾಂಶ್ಚಾಸ್ಮಿ-ಯೆಷ್ಟುವಿಭೂತಿಗಳುಳ್ಳವನೊ, (ತಂಮಾಂ - ಅಂಥಾ ನನ್ನನ್ನು,) ಭಕ್ತ್ಯಾ-ಇಂಥಾ ಭಕ್ತಿಯಿಂದ, ತತ್ವತಃ ಅಭಿಜಾನಾತಿ- ಯಥಾವತ್ತಾಗಿ ತಿಳಿಯುತ್ತಾನೆಯೊ, ಮಾಂತತ್ವತೋಽಜ್ಞಾತ್ವಾ - ನನ್ನನ್ನು ಯಥಾವತ್ತಾಗಿ ತಿಳಿದು, ತದನಂತರಂ-ಅದಕ್ಕನಂತರದಲ್ಲಿ,ತತಃ-ಅಂಥಾ ಪರಭಕ್ತಿಯಿಂದಲೆ, ಮಾಂ- ನನ್ನನ್ನು, ವಿಶತೆ - ಪ್ರವೇಶಿಸುತ್ತಾನೆ. ಯಥಾವತ್ತಾಗಿ ಸ್ವರೂಪ ಸ್ವಭಾವಗುಣ ವಿಭೂತಿಗಳನ್ನು ತಿಳಿದಮೇಲೆ ವೃದ್ಧಿಹೊಂದಿದ ಅತ್ಯಂತಅತಿ ಶಯಿತ ಭಕ್ತಿಯಿಂದ ನನ್ನನ್ನು ಹೊಂದುತ್ತಾನೆಂದರ್ಥವು. ಈ ಶ್ಲೋಕದಲ್ಲಿ ತತಃ ಎಂಬದಾಗಿ ಭಕ್ತಿಯೇ ಭಗವತ್ಪ್ರಾಪ್ತಿಗೆ ಹೇತುವಾಗಿ ನಿರ್ದೇಶಿಸಲ್ಪಟ್ಟಿತು. "ಭಕ್ತ್ಯಾತ್ವನನ್ಯಯಾಶಕ್ಯಃ ಅಹಮೇವಂ ವಿಧೋಽರ್ಜುನ । ಜ್ಞಾತುಂ ದ್ರಷ್ಟುಂಚ ತತ್ವೇನ ಪ್ರವೇಷ್ಟುಂಚ ಪರಂತಪ ,, ಎಂಬದಾಗಿ ಭಕ್ತಿಗೇನೆ ತತ್ವತಃ ಪ್ರವೇಶ ಹೇತುತ್ವವು ಕಂಠೋಕ್ತವಾಗಿರುವುದರಿಂದ ಎಂದರಿಯಬೇಕು. ... ... ॥೫೫॥

(ಶಂ॥ ಭಾ) ಯಾವಾನಸ್ಮಿ-ಮಾಯಯೇ ಮೊದಲಾದ ಯಾವ ಯಾವ ಉಪಾಧಿಗಳೊಡನೆ ಕೂಡಿರುವೆನೊ, ಯಶ್ಚಾಸ್ಮಿ-ಉಪಾಧಿರಹಿತವಾಗಿಯೂ ಅಖಂಡವಾಗಿಯೂ ಜ್ಞಾನಸ್ವರೂಪಿಯಾಗಿಯೂ ಸರ್ವವ್ಯಾಪಿಯಾಗಿಯೂ ಇರುವ ಯೆಂತಹ ಸ್ವರೂಪವುಳ್ಳವನಾಗಿರುವೆನೊ ಆವಿಧವಾಗಿ, ಅಭಿಜಾನಾತಿ-ತಿಳಿಯುತ್ತಾನೆ. ತತೋಽಮಾಂತತ್ವತೋಽಜ್ಞಾತ್ವಾವಿಶತೆ ತದನಂತರಂ ಎಂಬದಾಗಿ ಹೇಳಲ್ಪಟ್ಟಿರುವುದರಿಂದ ಜ್ಞಾನವನ್ನು ಹೊಂದಿ ತದನಂತರದಲ್ಲಿ ಬ್ರಹ್ಮದಲ್ಲಿ ಪ್ರವೇಶಿಸುತ್ತಾನೆಂಬ

ಅರ್ಥವಿರುವಂತೆ ಕಾಣುವುದು. ಜ್ಞಾನಫಲವೆಲ್ಲವೂ ಕೂಡ ಅವಿದ್ಯಾ ನಿವೃತ್ತಿಯಲ್ಲದೆ ಬೇರೊಂದಿಲ್ಲವು. "ಕ್ಷೇತ್ರಜ್ಞಂಚಾಪಿಮಾಂ ವಿದ್ಧಿಸರ್ವಕ್ಷೇತ್ರೇಷುಭಾರತ,, (೧೩॥ ೨) ಎಂಬಂತೆ ಕ್ಷೇತ್ರಜ್ಞನು ಅಖಂಡ ಬ್ರಹ್ಮವೆಂಬದಾಗಿ ಹೇಳಲ್ಪಟ್ಟಿರುವನು. ಜೀವನೆಂಬ ಹೆಸರುಳ್ಳತಾನೆ ಆ ಅಖಂಡ ಬ್ರಹ್ಮವಾಗಿರುವುದರಿಂದ ಅವನು ಹೊಂದತಕ್ಕದ್ದು ಯಾವದೂ ಇಲ್ಲವು, ಬೇರೊಂದಿದ್ದರೆ ಯಲ್ಲವೆ ಅದನ್ನು ಹೊಂದುತ್ತಾನೆಂದು ಹೇಳಬಹುದು. ಹೊಂದುವುದೆಂದರೆ ಅವಿದ್ಯಾ ನಿವೃತ್ತಿಯನ್ನು ಹೊಂದುವದೆ. ಅದೇ ಬ್ರಹ್ಮವನ್ನು ಹೊಂದುವುದೆಂತಲೂ ಹೇಳಲ್ಪಡುವುದು. ಅವಿದ್ಯಾವಸ್ಥೆಯಲ್ಲಿರುವ ಬ್ರಹ್ಮವು ಜೀವನೆಂಬದಾಗಿ ವ್ಯವಹರಿಸಲ್ಪಡುವುದು. ಅವಿದ್ಯಾ ನಿವೃತ್ತಿಯಾದರೆ ಪ್ರಕಾಶವಾದ ಜೀವಸ್ವರೂಪವು ಸ್ವಪ್ರಕಾಶವಾಗಿಯೆ ಇರುವುದು.

ಆದರೆ ಈ ಅಧ್ಯಾಯುದಲ್ಲಿಯೇ ೫೦ನೇ ಶ್ಲೋಕದಲ್ಲಿ ಜ್ಞಾನನಿಷ್ಠೆಯಿಂದ ಬ್ರಹ್ಮವನ್ನು ಹೊಂದುತ್ತಾನೆಂಬದಾಗಿ ಹೇಳಿರುವುದು ವಿರುದ್ಧವಲ್ಲವೊ ? ಎಂದರೆ ಅಲ್ಲಿಯೂ ಈ ಅರ್ಥವನ್ನೆ ಗ್ರಹಿಸಬೇಕು. ನಿಷ್ಠೆ ಇಂಥಾದ್ದೆಂಬದಾಗಿ ತಿಳಿದು ಕೊಳ್ಳುವಿಕೆಯು ಅಜ್ಞಾನನಿವೃತ್ತಿಗೆ ಸಾಧನವು. ಗುರೂಪದಿಷ್ಟವಾದ ಶಾಸ್ತ್ರಜ್ಞಾನದಿಂದ ಉಂಟಾದದ್ದಾಗಿಯೂ ಅಮಾನಿತ್ವಾದಿ ಗುಣಗಳೊಡನೆ ಕೂಡಿರುವುದಾಗಿಯೂ, ಆತ್ಮಕ್ಕಿಂತಲೂ ಭಿನ್ನವಾದ ಯಾವವಸ್ತುವೂ ಇಲ್ಲವು ತಾನೆ ಅಂತಹ ಆತ್ಮಸ್ವರೂಪಿ ಎಂಬ ನಿಶ್ಚಯದೊಡನೆ ಕೂಡಿರುವುದಾಗಿಯೂ ಇರುವ ದೃಢವಾದ ಅಖಂಡಧ್ಯಾನ ವ್ಯಾಪದೊ ಅದೇ ಜ್ಞಾನನಿಷ್ಠೆಯೆಂಬದಾಗಿ ಹೇಳಲ್ಪಡುವುದು. "ಚತುರ್ವಿಧಾಭಜಂತೆಮಾಂ ,, ಎಂಬ ಶ್ಲೋಕದಲ್ಲಿ (೭॥೧೬) ಹೇಳಲ್ಪಟ್ಟ ನಾಲ್ಕು ವಿಧಗಳಾದ ಭಕ್ತಿಗಳಲ್ಲಿ ನಾಲ್ಕನೇದಾದ ಜ್ಞಾನಭಕ್ತಿಯೇ ಶ್ರೇಷ್ಠವಾದದ್ದು. ಇದೇ ಜ್ಞಾನನಿಷ್ಠೆಯು, ಇದೇ ಜೀವೇಶ್ವರ ಭೇದವನ್ನು ನಿರಾಕರಿಸುವುದು. ಇದೇ ಪೂರ್ಣವಾದ ಬ್ರಹ್ಮಜ್ಞಾನವು, ಇಂಥಾಜ್ಞಾನಿಗೇನೆ ಸರ್ವಕರ್ಮ ಸನ್ಯಾಸವು ಹೇಳಲ್ಪಟ್ಟಿರುವುದು. ಇಂತವನಿಗೆ ಆತ್ಮಸ್ವರೂಪಪ್ರಾಪ್ತಿ ಎಂಬಮೋಕ್ಷವುಂಟಾಗುವುದೆಂದು ಹೇಳಲ್ಪಟ್ಟಿರುವುದು. ಆದಕ್ಕೆ ಇದಕ್ಕಿಂತಲೂ

ಬೇರೇಯದಾದ್ಯಾವ ಮಾರ್ಗವೂ ಇಲ್ಲವು. ಬೇರೇ ಮಾರ್ಗವುಂಟೆಂಬ ದಾಗಿ ತಿಳಿದರೆ ಪಶ್ಚಿಮ ಸಮುದ್ರಕ್ಕೆ ಹೋಗಬೇಕೆಂದು ನಿಶ್ಚಯಿಸಿಕೊಂಡು ಅವನು ಪೂರ್ವಸಮುದ್ರಮಾರ್ಗವಾಗಿ ಪ್ರಯಾಣ ಮಾಡಿದರೆ ಅಂತವನಿಗೆ ಪಶ್ಚಿಮ ಸಮುದ್ರವು ಹೇಗೆ ದೊರಕುವುದೊ ಆ ಪ್ರಕಾರವೆ ಇವನಿಗೂ ಮೋಕ್ಷವುಂಟಾಗಬಹುದು. (ಮೋಕ್ಷವಿಲ್ಲ ವೆಂಬರ್ಥವು.) ಈಗ ಹೇಳಿರುವ ಜ್ಞಾನನಿಷ್ಠಾಮಾರ್ಗವು ಒಂದು ಪರ್ವತದಂತೆ ಇರುವುದು. ಇತರ ಮಾರ್ಗಗಳು ಸಾಸುವೆ ಕಾಳುಗಳಂತೆ ಇರುವುವು. ಆದುದರಿಂದ ಬ್ರಹ್ಮದಲ್ಲಿ ಪ್ರವೇಶಿಸುವುದೆಂಬ ವಾಕ್ಯಕ್ಕೆ ಅಖಂಡಾಕಾರ ಬ್ರಹ್ಮ ಸ್ವರೂಪ ವಾಗಿರುವಿಕೆಯು ಅರ್ಥವೆಂದರಿಯಬೇಕು. ... ... ||೫೪||

(ಗೀ|| ವಿ) ಯಾವಾನಸ್ಮಿ - ಎಂಥಾಪರಿಣಾಮವುಳ್ಳವನಾಗಿರುವೆನೊ, ಯಶ್ಚಾಸ್ಮಿ - ಎಂಥಾ ನಾಮರೂಪಗಳೊಡನೆ ಕೂಡಿರುವೆನೊ, ಅಂತವನಾಗಿ, ಎಂದರೆ, ಸರ್ವದೇಶ ಸರ್ವಕಾಲ ವ್ಯಾಪಿಯಾಗಿಯೂ ಸಕಲ ಗುಣ ಪೂರ್ಣನಾಗಿಯೂ ದಿವ್ಯನಾಮ ರೂಪಗಳುಳ್ಳವನಾಗಿಯೂ ಇರುವ, ಮಾಂ-ನನ್ನನ್ನು, ಭಕ್ತ್ಯಾ-(ಈ ಹಿಂದಿನ ಶ್ಲೋಕದಲ್ಲಿ ಹೇಳಿರುವ) ಪರಮ ಭಕ್ತಿಯಿಂದ, ತತ್ವತಃ-ತನ್ನ ಯೋಗ್ಯತಾನುಸಾರವಾಗಿ, ಅಭಿಜಾನಾತಿ-ಯಾವನು ತಿಳಿಯುತ್ತಾನೆಯೊ ಅವನು, ತತಃ-ಆ ಭಕ್ತಿಯಿಂದಲೆ, ಮಾಂ-ನನ್ನನ್ನು, ತತ್ವತಃ- ಯಥಾವತ್ತಾಗಿ, ಜ್ಞಾತ್ವಾತದನಂತರಂ-ತಿಳಿದಮೇಲೆ, ಮಾಂ ವಿಶತೆ-ನನ್ನನ್ನು ಹೊಂದುತ್ತಾನೆ. ಮೋಕ್ಷವನ್ನು ಹೊಂದುತ್ತಾನೆಂದು ತಾತ್ಪರ್ಯವು. ... ||೫೫||

ಶ್ಲೋ|| ಸರ್ವಕರ್ಮಾಣ್ಯಪಿಸದಾಕುರ್ವಾಣೋ ಮದ್ವ್ಯಪಾಶ್ರಯಃ | ಮತ್ಪ್ರಸಾದಾ ದವಾಪ್ನೋತಿಶಾಶ್ವತಂ ಪದಮವ್ಯಯಂ || ... ... ||೫೬||

ಪ|| ಸರ್ವಕರ್ಮಾಣಿ-ಅಪಿ-ಸದಾ-ಕುರ್ವಾಣಃ-ಮದ್ವ್ಯಪಾಶ್ರಯಃ | ಮತ್ಪ್ರಸಾದಾತ್-ಅವಾಪ್ನೋತಿ-ಶಾಶ್ವತಂ-ಪದಂ-ಅವ್ಯಯಂ ||

(ಅ|| ರಾ|| ಭಾ) ಈ ಪ್ರಕಾರವಾಗಿ ಫಲಸಂಗಾದಿ ತ್ಯಾಗಯುಕ್ತಗಳಾಗಿಯೂ ಪರಮ ಪುರುಷಾರಾಧನ ರೂಪದಿಂದ ಅನುಷ್ಠಿಸಲ್ಪ

ಟ್ಟು, ವರ್ಣಾಶ್ರಮೋಚಿತಗಳಾಗಿಯೂ ಇರುವ ನಿತ್ಯನೈಮಿತ್ತಿಕ ಕರ್ಮಗಳಿಗೆ ಪರಿಪಾಕವು ಹೇಳಲ್ಪಟ್ಟಿತು. ಇನ್ನು ಮುಂದೆ ಕಾಮ್ಯಗಳಾದ ಕರ್ಮಗಳನ್ನು ಕೂಡ ಫಲಸಂಗ ಕರ್ತೃತ್ವ ತ್ಯಾಗಾದಿ ಯುಕ್ತವಾಗಿನುಷ್ಠಿಸಿದರೆ ಅವುಗಳಿಗೂ ಆ ಭಗವತ್ಪ್ರಾಪ್ತಿಯೆವಿಹಿತವೆಂಬದಾಗಿಹೇಳುತ್ತಾರೆ. ಸರ್ವಕರ್ಮಾಣ್ಯಪಿ - ನಿತ್ಯನೈಮಿತ್ತಿಕ ಕರ್ಮಗಳಿಗೆ ಮಾತ್ರವೆ ಈರೀತಿಯಾದ ಅನುಷ್ಠಾನವೇರ್ಪಟ್ಟರೆ ಪೂರ್ವೋಕ್ತ ವಿಪಾಕವೆಂಬ ನಿರ್ಬಂಧವಿಲ್ಲವು, ಸರ್ವಾಣ್ಯಪಿಕರ್ಮಾಣಿ - ಕಾಮ್ಯಗಳಾದ ಕರ್ಮಗಳನ್ನೂ ಕೂಡ, ಮದ್ವ್ಯಪಾಶ್ರಯಃ-ನನ್ನಲ್ಲಿ ಕರ್ತೃತ್ವಾದಿಗಳನ್ನಿಟ್ಟವನಾಗಿ, ಸದಾ-ಸರ್ವಕಾಲದಲ್ಲಿಯು, ಕುರ್ವಾಣಃ-ಅನುಷ್ಠಿಸುವಂತವನು, ಮತ್ಪ್ರಸಾದಾತ್-ನನ್ನ ಅನುಗ್ರಹದಿಂದ, ಶಾಶ್ವತಂಪದಂ-ಸರ್ವಪ್ರಕಾರದಿಂದಲೂನಿತ್ಯನಾಗಿಯೂ ಹೊಂದಲ್ಪಡತಕ್ಕವನಾಗಿಯೂ ಇರುವ ನನ್ನನ್ನು,ಅವ್ಯಯಂ-ಸ್ವಲ್ಪವೂ (ವಿಕಲವಿಲ್ಲದೆ)ಕೊರತೆಯಿಲ್ಲದೆ, ಸಕಲಗುಣವಿಭೂತಿಗಳೊಡನೆ ಎಂದರ್ಥವು, ಅವಾಪ್ನೋತಿ-ಹೊಂದುತ್ತಾನೆ. ॥೫೬॥

(ಗೀ ॥ ವಿ) ಸರ್ವಕರ್ಮಾಣ್ಯಪಿ-ವಿಹಿತಗಳಾದ ಸಕಲ ಕರ್ಮಗಳನ್ನೂ, ಮದ್ವ್ಯಪಾಶ್ರಯಃ- (ಶಂ) ವಾಸುದೇವನಾದ ನನ್ನನ್ನೇ ಆಶ್ರಯವಾಗಿ ವುಳ್ಳವನು, ಎಂದರೆ ನನ್ನಲ್ಲರ್ಪಿಸಲ್ಪಟ್ಟ ಮನೋವಾಕ್ಕಾಯಾದಿಗಳುಳ್ಳವನು, ಶಾಶ್ವತಂ-(ಶಂ ॥ ಗೀ ವಿ) ನಿತ್ಯವಾದ, ಅವ್ಯಯಂ (ಶಂ ॥ ಗೀ ॥ ವಿ) ವಿಕಾರಶೂನ್ಯವಾದ, ಪದಂ- (ಶಂ) ವಿಷ್ಣುವಿನ ಸ್ಥಾನವನ್ನು, (ರಾ ॥ ಗೀ ॥ ವಿ) ನನ್ನನ್ನು. ॥೫೬॥

(ಗೀ ॥ ವಿ) ಇದರಲ್ಲಿ (ಅಪಿ) ಶಬ್ದವು ಯಾವ ಕರ್ಮವನ್ನೂ ಭಗವದಾರಾಧನರೂಪವಾಗಿಯೆ ಮಾಡಬೇಕೆಂಬುವುದನ್ನು ಸೂಚಿಸುತ್ತದೆ. ... ... ॥೫೬॥

ಶ್ಲೋ॥ ಚೇತಸಾಸರ್ವಕರ್ಮಾಣಿಮಯಿಸನ್ನ್ಯಸ್ಯಮತ್ಪರಃ । ಬುದ್ಧಿಯೋಗ ಮುಪಾಶ್ರಿತ್ಯ ಮಚ್ಚಿತ್ತಸ್ಸತತಂಭವ ॥ ... ... ॥೫೭॥

ಪ ॥ ಚೇತಸಾ-ಸರ್ವಕರ್ಮಾಣಿ-ಮಯಿ-ಸನ್ನ್ಯಸ್ಯ-ಮತ್ಪರಃ । ಬುದ್ಧಿಯೋಗಂ-ಉಪಾಶ್ರಿತ್ಯ-ಮಚ್ಚಿತ್ತಃ-ಸತತಂ-ಭವ ॥

(ಅ ॥ ರಾ ॥ ಭಾ) ಚೇತಸಾ_ಆತ್ಮವಸ್ತುವು ನನಿಗೆ ಶೇಷಭೂತವೆಂತಲೂ ನನಿಗೆ ನಿಯಾಮ್ಯವೆಂತಲೂ ತಿಳಿದುಕೊಂಡಿರುವ ಬುದ್ಧಿಯಿಂದ, ಸರ್ವಕರ್ಮಾಣಿ-ಸರ್ವ ಕರ್ಮಗಳನ್ನೂ, (ಕರ್ತೃತ್ವದೊಡನೆಯೂ ಆರಾಧ್ಯದೇವತೆಗಳೊಡನೆಯೂ) ಮಯಿಸನ್ನ್ಯಸ್ಯ-ನನ್ನಲ್ಲಿ ಶೇಷವೆಂಬದಾಗಿ ಸಮರ್ಪಣೆಮಾಡಿ, "ಮಯಿಸರ್ವಾಣಿಕರ್ಮಾಣಿಸನ್ನ್ಯಸ್ಯಾಧ್ಯಾತ್ಮಚೇತಸಾ" ಎಂಬದಾಗಿಯೂ ಹೇಳಿರುವನು. ಮತ್ಪರಃ-ನಾನೆ ಸರ್ವಸ್ಮಾತ್ಪರನಾದುದರಿಂದ ಪ್ರಾಪ್ಯನೆಂದನು ಸಂಧಾನ ಮಾಡುವಂತವನಾಗಿ, ಯುದ್ಧಾದಿಕರ್ಮಗಳನ್ನು ಅನುಷ್ಠಿಸುತ, ಬುದ್ಧಿಯೋಗಮುಪಾಶ್ರಿತ್ಯ - ಪೂರ್ವೋಕ್ತವಾದ ಧ್ಯಾನಯೋಗವನ್ನೆ ಅವಲಂಬಿಸಿಕೊಂಡು, ಸತತಂ- ಸರ್ವಕಾಲದಲ್ಲಿಯೂ, ಮಚ್ಚಿತ್ತೋಭವ-ನನ್ನಲ್ಲಿಯೇ ಸ್ಥಿರಪಟ್ಟ ಮನಸ್ಸುಳ್ಳವನಾಗಿರು. ... ॥೫೭॥

(ಶಂ) ಸರ್ವಕರ್ಮಾಣಿ_ಇಹಪರ ಸಾಧನಗಳಾದಸರ್ವಕರ್ಮಗಳನ್ನೂ, (ಗೀ॥ವಿ)ಸಕಲವಾದವಿಹಿತಕರ್ಮಗಳನ್ನೂ,ಚೇತಸಾ-(ಶಂ)ವಿವೇಕಬುದ್ಧಿಯಿಂದ, ಸನ್ನ್ಯಸ್ಯ- "ಯತ್ಕರೋಷಿಯದಶ್ನಾಸಿ" (೯॥೨೭) ಎಂಬ ಶ್ಲೋಕದಲ್ಲಿ ಹೇಳಿರುವಂತೆ ನನಿಗರ್ಪಣವನ್ನು ಮಾಡಿ, ಮತ್ಪರಃ-ನನ್ನನ್ನೇ ಉತ್ತಮವಾದ ದೈವವೆಂಬು ನಂಬಿದವನಾಗಿ, (ಗೀ॥ವಿ)ನಾನೇ ಸರ್ವೋತ್ತಮನೆಂಬ ಬುದ್ಧಿಯೊಡನೆ ಕೂಡಿದವನಾಗಿ, ಬುದ್ಧಿಯೋಗಮುಪಾಶ್ರಿತ್ಯ- (ಶಂ) ಮನಸ್ಸನ್ನು ನನ್ನಲ್ಲಿ ಸ್ಥಿರವಾಗಿನಿಲ್ಲುವಂತೆ ಮಾಡಿಕೊಂಡು ಎಂದರೆ ನನ್ನಲ್ಲಿಯೆ ಶರಣಾಗತಿಮಾಡಿ, (ಗೀ ॥ ವಿ) ಬುದ್ಧಿಯನ್ನು ವಿಷಯಗಳಲ್ಲಿ ಪ್ರವರ್ತಿಸದಂತೆ ತಡೆಮಾಡಿ ನನ್ನಲ್ಲಿ ನಿಲ್ಲಿಸಿ, ಸತತಂಮಚ್ಚಿತ್ತೋಭವ-ನನ್ನನ್ನೆ ಧ್ಯಾನಿಸಿಕೊಂಡಿರು. ॥೫೭॥

ಶ್ಲೋ ॥ ಮಚ್ಚಿತ್ತಸ್ಸರ್ವದುರ್ಗಾಣಿಮತ್ಪ್ರಸಾದಾತ್ತರಿಷ್ಯಸಿ ।ಅಥಚೇತ್ತ್ವಮಹಂಕಾರಾನ್ನಶ್ರೋಷ್ಯಸಿವಿನಂಕ್ಷ್ಯಸಿ ॥ ... ... ॥೫೮॥

ಪ ॥ ಮಚ್ಚಿತ್ತಃ-ಸರ್ವದುರ್ಗಾಣಿ-ಮತ್ಪ್ರಸಾದಾತ್-ತರಿಷ್ಯಸಿ । ಅಥ-ಚೇತ್-ತ್ವಂ-ಅಹಂಕಾರಾತ್-ನ-ಶ್ರೋಷ್ಯಸಿ-ವಿನಂಕ್ಷ್ಯಸಿ ॥

(ಅ ॥ ರಾ ॥ ಭಾ) ಮಚ್ಚಿತ್ತಃ-ಸರ್ವಕಾಲಗಳಲ್ಲಿಯೂ ಕರ್ಮಗಳನ್ನೆನುಷ್ಠಿಸುತ ನನ್ನಲ್ಲಿಯೇ ಇಡಲ್ಪಟ್ಟ ಮನಸ್ಸುಳ್ಳ ನೀನು, ಸರ್ವದುರ್ಗಾಣಿ-ಸಮಸ್ತಗಳಾದ ಸಾಂಸಾರಿಕ ಕ್ಲೇಶಗಳನ್ನೂ, ಮತ್ಪ್ರಸಾದಾತ್-ನನ್ನ ಅನುಗ್ರಹದಿಂದ, ತರಿಷ್ಯಸಿ-ಅತಿಕ್ರಮಿಸುವಿ. ॥೫೮॥

ಅಥತ್ವಂ-ಈಪ್ರಕಾರವಾಗಿ ಮಾಡದೆ, ನೀನು, ಅಹಂಕಾರಾತ್-ನಾನೆಕೃತ್ಯಾಕೃತ್ಯಗಳಾದ ಸಮಸ್ತಗಳನ್ನು ತಿಳಿದಿರುವೆನು ಎಂಬೀ ಅಹಂಕಾರದಿಂದ, (ನಾನು ಹೇಳಿರುವ ಅರ್ಥವನ್ನು) ನಶ್ರೋಷ್ಯಸಿಚೇತ್-ಕೇಳದೇಹೊದರೆ, ವಿನಂಕ್ಷ್ಯಸಿ- ನಶಿಸಿಹೊಗುವಿ. ಏತಕ್ಕೆಂದರೆ, ನನಗಿಂತಲೂ ಭಿನ್ನನಾದ ಒಬ್ಬನು ಸಮಸ್ತ ಪ್ರಾಣಿಗಳ ಕೃತ್ಯಾಕೃತ್ಯಗಳನ್ನು ಯಥಾವತ್ತಾಗಿ ತಿಳಿದವನಾಗಿಯೂ ಅಕೃತ್ಯಕಾರಿಗಳನ್ನು ಶಿಕ್ಷಿಸುವಂತವನಾಗಿಯೂ ಇರುವನೋ? ಇಲ್ಲವು. ಆದುದರಿಂದ ಶ್ರೇಯಸ್ಕಾಮನಾದ ಪುರುಷನು ನನ್ನ ಆಜ್ಞೆಯನ್ನು ವಿನೀತನಾಗಿ ಕೇಳಿತಿಳಿದುಕೊಂಡು ಅಪ್ರಕಾರವಾಗಿ ನಡಿಸಿಯೇ ತೀರಬೇಕೆಂದು ಭಾವವು. ... ... ॥೫೮॥

(೪೦) ಸರ್ವದುರ್ಗಾಣಿ - ಸಂಸಾರ ಹೇತುಗಳಾದ ಸಕಲ ಕರ್ಮಗಳನ್ನು. ... ... ॥೫೮॥

ಶ್ಲೋ ॥ ಯದ್ಯಹಂಕಾರಮಾಶ್ರಿತ್ಯನಯೋತ್ಸ್ಯಇತಿಮನ್ಯಸೇ । ಮಿಥ್ಯೈಷವ್ಯವಸಾಯಸ್ತೇ ಪ್ರಕೃತಿಸ್ತ್ವಾಂನಿಯೋಕ್ಷ್ಯತಿ । ... ... ॥೫೯॥

ಪ ॥ ಯದಿ-ಅಹಂಕಾರಂ-ಆಶ್ರಿತ್ಯ-ನ-ಯೋತ್ಸ್ಯೇ-ಇತಿ-ಮನ್ಯಸೇ । ಮಿಥ್ಯಾ-ಏಷಃ-ವ್ಯವಸಾಯಃ-ತೇ-ಪ್ರಕೃತಿಃ-ತ್ವಾಂ-ನಿಯೋಕ್ಷ್ಯತಿ ।

(ಅ ॥ ರಾ ॥ ಭಾ) ಅಹಂಕಾರಂಯದ್ಯಾಶ್ರಿತ್ಯ - ಹಿತಾಹಿತಗಳನ್ನು ನಾನೇ ತಿಳಿದುಕೊಳ್ಳುವೆನೆಂಬ ಸ್ವಾತಂತ್ರ್ಯಾಭಿಮಾನವನ್ನಾಶ್ರಯಿಸಿ ನನ್ನ ಆಜ್ಞೆಯನ್ನು ಅನಾದರಿಸಿಕೊಂಡು, ನಯೋತ್ಸ್ಯಇತಿಮನ್ಯಸೆ-ಪ್ರಾಪ್ತವಾಗಿಯೂ ಧರ್ಮಯುಕ್ತವಾಗಿಯೂ ಇರುವ ಯುದ್ಧ

ವನ್ನು ಮಾಡಲಾರೆ ನೆಂಬದಾಗಿನೆನೆಸುತ್ತೀಯೋ,ಏಷತೇವ್ಯವಸಾಯಃ- ಈ ನಿನ್ನ ಸ್ವಾತಂತ್ರ್ಯವ್ಯವಸಾಯವು, ಮಿಥ್ಯಾ- (ಭವಿಷ್ಯತೀತಿಶೇಷಃ) ಸುಳ್ಳಾಗಿ ಹೋಗುವುದು, ಏತಕ್ಕೆಂದರೆ ? ಪ್ರಕೃತಿಸ್ತ್ವಾಂನಿಯೋಕ್ಷ್ಯತಿ- ನನ್ನ ಆಜ್ಞಾನುಸಾರವಾಗಿನಡೆಯುವ ನನ್ನ ಸ್ವಾತಂತ್ರ್ಯವನ್ನು ನೋಡಿ ಭಯಪಡುವ ಯೇನುಅರಿಯದ ನಿನ್ನನ್ನು ನನ್ನಆಜ್ಞೆಯಿಂದ ನಿನ್ನ ಸ್ವಭಾವವೆ ಯುದ್ಧವನ್ನು ಮಾಡೆಂದು ಪ್ರೇರಣಮಾಡುವುದು. ... ... ॥೫೯॥

(ಶ್ರೀ ॥ ಗೀ ॥ ವಿ) ಯದಹಂಕಾರಂ ಎಂಬದಾಗಿ ಪಾಠವು. ಯನ್ಮನ್ಯಸೆ - ಯಾವನಿಶ್ಚಯವನ್ನು ಸ್ವೀಕರಿಸುವಿಯೊ, ಮಿಥ್ಯಾ- (ಗೀ॥ ವಿ)ವ್ಯರ್ಥವು, ಪ್ರಕೃತಿಃ-(ಶಂ) ಕ್ಷಾತ್ರಸ್ವಭಾವವು, (ಗೀ॥ ವಿ) ಈಶ್ವರೇಚ್ಛೆಯು. ... ... ॥೫೯॥

ಶ್ಲೋ॥ ಸ್ವಭಾವಜೇನ ಕೌಂತೇಯ ನಿಬದ್ಧಸ್ಸ್ವೇನಕರ್ಮಣಾ । ಕರ್ತುಂನೇಚ್ಛಸಿಯನ್ಮೋಹಾತ್ಕರಿಷ್ಯಸ್ಯವಶೋಪಿತತ್ ॥ ... ... ॥೬೦॥

ಪ ॥ ಸ್ವಭಾವಜೇನ-ಕೌಂತೇಯ-ನಿಬದ್ಧಃ-ಸ್ವೇನ-ಕರ್ಮಣಾ । ಕರ್ತುಂ-ನ-ಇಚ್ಛಸಿ-ಯತ್-ಮೋಹಾತ್-ಕರಿಷ್ಯಸಿ-ಅವಶಃ-ಅಪಿ-ತತ್॥

(ಅ ॥ ರಾ ॥ ಭಾ) ಹಿಂದಿನ ಶ್ಲೋಕದಲ್ಲಿ ಹೇಳಿರುವ ಅರ್ಥವನ್ನೆ ದೃಢಪಡಿಸುತ್ತಾರೆ. ಸ್ವಭಾವಜೇನಸ್ವೇನ ಕರ್ಮಣಾ-ಕ್ಷತ್ರಿಯನಿಗೆ ಸ್ವಭಾವದಿಂದುಂಟಾಗಿರುವ ಶೌರ್ಯವೆಂಬ ತನ್ನ ಕರ್ಮದಿಂದ, ನಿಬದ್ಧಃ - ಕಟ್ಟಲ್ಪಟ್ಟವನಾಗಿ, ಅವಶಃ - ಶತ್ರುಗಳು ಮಾಡುವ ಅವಮಾನವನ್ನು ಸಹಿಸದೆ ಪರವಶನಾಗಿಯೇ, ಯತ್ಮೋಹಾತ್ ಕರ್ತುಂನೇಚ್ಛಸಿ-ಯಾವ ಯುದ್ಧವನ್ನು ಈಗ ಅಜ್ಞಾನದಿಂದ ಮಾಡಲಿಚ್ಛೆಸಲಾರೆಯೊ, ತದಪಿ- ಅದನ್ನೂ, ಕರಿಷ್ಯಸಿ-ಮಾಡಹೊಗುತ್ತೀ, (ಅದನ್ನು ಏತಕ್ಕೆ ಮಾಡುತ್ತೇನೆಂದರೆ ? ಆವಿವರವನ್ನು ಮುಂದಿನ ಶ್ಲೋಕದಲ್ಲಿ ನೋಡಬಹುದು.) ... ... ॥೬೦॥

(ಗೀ॥ ವಿ) ಮೋಹಾತ್- ಬಂಧುಸ್ನೇಹದ್ವಾರಯಿಂದ, ಅವಶಃ-

(ಶಂ) ಅವಶೋಪಿ-ಪರಾಧೀನನಾಗಿಯೆ, (ಗೀ॥ ವಿ) ಭಗವದಿಚ್ಛಾಧೀನನಾಗಿದ್ದುಕೊಂಡು. ... ... ॥೬೦॥

ಶ್ಲೋ॥ ಈಶ್ವರಸ್ಸರ್ವಭೂತಾನಾಂಹೃದ್ದೇಶೇಽರ್ಜುನತಿಷ್ಠತಿ । ಭ್ರಾಮಯನ್ಸರ್ವಭೂತಾನಿಯಂತ್ರಾರೂಢಾನಿಮಾಯಯಾ ॥ ... ... ॥೬೧॥

ಪ॥ ಈಶ್ವರಃ-ಸರ್ವಭೂತಾನಾಂ-ಹೃದ್ದೇಶೇ-ಅರ್ಜುನ-ತಿಷ್ಠತಿ । ಭ್ರಾಮಯನ್-ಸರ್ವಭೂತಾನಿ-ಯಂತ್ರಾರೂಢಾನಿ-ಮಾಯಯಾ ॥

(ಅ॥ ರಾ॥ ಭಾ) ಹಿಂದಿನ ಶ್ಲೋಕದಲ್ಲಿ ಹೇಳಿರುವ ಅರ್ಥಕ್ಕೆ ಕಾರಣವೇನೆಂದರೆ ? ಸಮಸ್ತವಾದ ಪ್ರಾಣಿವರ್ಗವೂ ಸರ್ವೇಶ್ವರನಾದ ನನ್ನಿಂದ ಪೂರ್ವಕರ್ಮಾನುಗುಣವಾಗಿ ಸ್ವಭಾವಾನುವರ್ತನದಿಂದ ಕಟ್ಟಲ್ಪಟ್ಟಿಲ್ಲವೋ ಇರುವುದು. ಅದನ್ನು ಹೇಳುವೆನು ಕೇಳು. ಅರ್ಜುನ-ಎಲೈ ಅರ್ಜುನನೆ, ಈಶ್ವರಃ-ಸರ್ವಪ್ರಾಣಿಗಳನ್ನಾಳುವ ವಾಸುದೇವನು, ಸರ್ವಭೂತಾನಾಂ- ಸಮಸ್ತಗಳಾದ ಪ್ರಾಣಿಗಳ, ಹೃದ್ದೇಶೇ- (ಸಕಲ ಪ್ರವೃತ್ತಿನಿವೃತ್ತಿಮೂಲವಾದ) ಜ್ಞಾನೋತ್ಪತ್ತಿ ಸ್ಥಾನವಾದ ಹೃದಯ ಪ್ರದೇಶದಲ್ಲಿ, ಯಂತ್ರಾರೂಢಾನಿ - ತನ್ನಿಂದ ನಿರ್ಮಿಸಲ್ಪಟ್ಟ ದೇಹೇಂದ್ರಿಯ ರೂಪವಾಗಿಯೂಇರುವ ಪ್ರಕೃತಿಯೆಂಬ ಯಂತ್ರವನ್ನು ಹತ್ತಿರುವ, ಸರ್ವಭೂತಾನಿ- ಸಮಸ್ತ ಪ್ರಾಣಿಗಳನ್ನು, ಮಾಯಯಾ-ತನ್ನ ಸತ್ವರಜಸ್ತಮೋಗುಣಮಯವಾದ ಮೋಹನ ಶಕ್ತಿಯಿಂದ,ಭ್ರಾಮಯನ್-ಅವನವನ ಪೂರ್ವಕರ್ಮ ಮೂಲಕವಾಗಿರುವ ಸತ್ವಾದಿ ಗುಣಾನುಗುಣವಾಗಿ ಪ್ರೇರಿಸುವಂತವನಾಗಿ, ತಿಷ್ಠತಿ-ಇರುವನು. ॥೬೧॥

(ಶಂ)ಹೇ ಅರ್ಜುನ-ಶುದ್ಧಾಂತಃಕರಣನಾದ ಎಲೈ ಅರ್ಜುನನೆ,ಯಂತ್ರಾರೂಢಾನೀವ-(ಶ್ರೀ)ಶರೀರವೆಂಬ ಯಂತ್ರದಲ್ಲಿಹತ್ತಿರುವವಸ್ತುಗಳಂತೆ,(ಗೀ॥ ವಿ) ಶರೀರದಲ್ಲಿರುವ, ಸರ್ವಭೂತಾನಿ- (ಶ್ರೀ) ದೇಹಾಭಿಮಾನದೊಡನೆ ಕೂಡಿರುವ ಸಕಲ ಪ್ರಾಣಿಗಳನ್ನು, ಮಾಯಯಾ- (ಗೀ॥ವಿ) ನನ್ನ ಸ್ವರೂಪವಾದ ಇಚ್ಛಾಶಕ್ತಿಯಿಂದ, (ಶ್ರೀ) ಈ ಶ್ಲೋಕೋಕ್ತವಾದ ಅರ್ಥದಲ್ಲಿ "ಏಕೋದೇವಸ್ಸರ್ವಭೂತೇಷು ಗೂಢಸ್ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ । ಕರ್ಮಾಧ್ಯಕ್ಷ ಸ್ಸರ್ವಭೂತಾಧಿವಾಸಸ್ಸಾಕ್ಷೀ

ಚೇತಾ ಕೇವಲೋನಿರ್ಗುಣಶ್ಚ ॥ ಯ ಆತ್ಮನಿತಿಷ್ಠನ್ನಾತ್ಮನೋಽನ್ತ ರೋಯ ಮಾತ್ಮಾ ನ ವೇದಯಸ್ಯಾತ್ಮಾ ಶರೀರಂ-ಯ ಆತ್ಮಾನಮನ್ತ ರೋಯಮಯತಿ ಸ ತ ಆತ್ಮಾನ್ತರ್ಯಾಮ್ಯಮೃತಃ॥,, ಇತ್ಯಾದಿ ಶ್ವೇತಾಶ್ವತರಾಂತರ್ಯಾಮಿ ಬ್ರಾಹ್ಮಣಾದಿ ಪ್ರಮಾಣಗಳನ್ನರಿಯಬೇಕು.

(೫೯-೬೦) ನೇ ಶ್ಲೋಕಗಳಿಂದ ಸಾಙ್ಖ್ಯರೇ ಮೊದಲಾದವರ ಸಿದ್ಧಾಂತವನ್ನು ಅನುಸರಿಸಿ ಜೀವರು ಪ್ರಕೃತಿಗೆ ಒಳಪಟ್ಟವರೆಂತಲೂ ಸ್ವಭಾವವಾದ ಕರ್ಮಕ್ಕೆ ಒಳಪಟ್ಟವರೆಂತಲೂ ಹೇಳಿ ಈ (೬೧॥೬೨) ನೇ ಶ್ಲೋಕಗಳಿಂದ ಜೀವರು ತನ್ನ ಅಧೀನರೆಂಬ ಸ್ವಮತವನ್ನು ಭಗವದ್ವಾಸುದೇವನು ಹೇಳುವನೆಂದರಿಯಬೇಕು. ॥೬೧॥

ಶ್ಲೋ ॥ ತಮೇವಶರಣಂಗಚ್ಛಸರ್ವಭಾವೇನಭಾರತ ।
ತತ್ಪ್ರಸಾದಾತ್ಪರಾಂಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ
ಶಾಶ್ವತಂ ॥ ... ... ॥೬೨॥

ಪ॥ ತಂ-ಏವ-ಶರಣಂ-ಗಚ್ಛ-ಸರ್ವಭಾವೇನ-ಭಾರತ । ತತ್ಪ್ರಸಾದಾತ್-ಪರಾಂ-ಶಾಂತಿ-ಸ್ಥಾನಂ-ಪ್ರಾಪ್ಸ್ಯಸಿ-ಶಾಶ್ವತಂ ॥

(ಅ॥ರಾ॥ಭಾ) ಈ ಶ್ಲೋಕದಿಂದ ಪೂರ್ವ ಶ್ಲೋಕದಲ್ಲಿ ಹೇಳಿರುವ ಮಾಯಾತರಣಕ್ಕೆ ಹೇತುವನ್ನು ಹೇಳುತ್ತಾರೆ. ಭಾರತ-ಅರ್ಜುನನೆ, ತಮೇವ-ಸರ್ವಪ್ರಾಣಿಗಳಿಗೂ ನಿಯಂತಾ ಆಗಿಯೂ ಆಶ್ರಿತವಾತ್ಸಲ್ಯದಿಂದ ನಿನಗೆ ಸಾರಥ್ಯವನ್ನೂ ಮಾಡಿಕೊಂಡು ಈ ಪ್ರಕಾರವಾಗಿ ಮಾಡೆಂದು ನಿಯಮಿಸುವ ಶ್ರೀವಾಸುದೇವನನ್ನೇ, ಸರ್ವಭಾವೇನ-ಸರ್ವಪ್ರಕಾರದಿಂದಲೂ, ಶರಣಂಗಚ್ಛ - ರಕ್ಷಕನೆಂಬದಾಗಿ ನಂಬಿಅನುಸರಿಸು. ಆ ಪ್ರಕಾರವಾಗಿನಂಬಿಅನುಸರಿಸದೆ ಹೋದರೂ ಆ ಈಶ್ವರನ ಮಾಯೆಯಿಂದಲೆ ಪ್ರೇರಿಸಲ್ಪಟ್ಟವನಾಗಿಯೂ ಅಜ್ಞನಾಗಿಯೂ ಇರುವ ನೀನು ಯುದ್ಧವನ್ನು ಮಾಡಿಯೇ ತೀರುವಿ. ಆದುದರಿಂದ ನಾನು ಹೇಳಿದ ಪ್ರಕಾರವಾಗಿಯೇ ಯುದ್ಧಾದಿ ಕರ್ಮವನ್ನು ಮಾಡೆಂದು ತಾತ್ಪರ್ಯವು. ತತ್ಪ್ರಸಾದಾತ್-ಆಸರ್ವೇಶ್ವರನ ಅನುಗ್ರಹದಿಂದ,ಪರಾಂಶಾಂತಿಂ-ಸಮಸ್ತಕರ್ಮ ಬಂಧನಿವೃತ್ತಿಯನ್ನೂ, ಶಾಶ್ವತಂಸ್ಥಾನಂ - ಶ್ರೀವೈಕುಂಠವೆಂಬ ನಿತ್ಯಸ್ಥಾನವನ್ನೂ, ಪ್ರಾಪ್ಸ್ಯಸಿ-ಹೊಂದುತ್ತೀಯೇ. ॥೬೨॥

(ಶ್ರೀ॥ ಶಂ) ಪರಾಂಶಾಂತಿಂ-ಶ್ರೇಷ್ಠವಾದ ಉಪಶಾಂತಿಯನ್ನು, (ಗೀ॥ ವಿ) ಬುದ್ಧಿಯನ್ನು ಯಾವಾಗಲೂ ಪರಮಾತ್ಮನಲ್ಲಿರಿಸುವಿಕೆಯನ್ನು, ಸ್ಥಾನಂ-(ಶಂ)ವಿಷ್ಣುವಾದ ನನ್ನ ಸ್ಥಾನವನ್ನು(ಗೀ॥ವಿ) ನನ್ನ ವೈಕುಂಠಲೋಕವನ್ನು. ... ॥೬೨॥

ಶ್ಲೋ॥ಇತಿತೇಜ್ಞಾನ ಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ । ವಿಮೃಶ್ಯೈತದಶೇಷೇಣ ಯಥೇಚ್ಛಸಿತಥಾಕುರು ॥ ... ... ॥೬೩॥

ಪ॥ ಇತಿ-ತೇ-ಜ್ಞಾನಂ-ಆಖ್ಯಾತಂ-ಗುಹ್ಯಾತ್-ಗುಹ್ಯತರಂ-ಮಯಾ। ವಿಮೃಶ್ಯ-ಏತತ್-ಅಶೇಷೇಣ-ಯಥಾ-ಇಚ್ಛಸಿ-ತಥಾ-ಕುರು ॥

(ಅ॥ ರಾ॥ ಭಾ) ಇತಿ-ಈರೀತಿಯಾಗಿ, ತೇ-"ಶಿಷ್ಯಸ್ತೇಹಂಶಾಧಿಮಾಂತ್ವಾಂಪ್ರಪನ್ನಂ„ಎಂಬದಾಗಿ ಶಿಷ್ಯವೃತ್ತಿಯೊಡನೆ ನನ್ನನ್ನು ಶರಣ ಹೊಂದಿರುವ ನಿನಗೆ, ಗುಹ್ಯಾದ್ಗುಹ್ಯತರಂ-ಸಮಸ್ತಗಳಾದ ರಹಸ್ಯಾರ್ಥಗಳಿಗಿಂತಲೂ ರಹಸ್ಯಗಳಾಗಿರುವ, ಜ್ಞಾನಂ- ಮುಮುಕ್ಷುಗಳಿಗೆ ಅವಶ್ಯವಾಗಿ ತಿಳಿಯಬೇಕಾಗಿಯೂ ಕರ್ಮಯೋಗ ವಿಷಯವಾಗಿಯೂ ಜ್ಞಾನಯೋಗವಿಷಯವಾಗಿಯೂ ಭಕ್ತಿಯೋಗವಿಷಯವಾಗಿಯೂ ಇರುವ ಸಮಸ್ತ ಜ್ಞಾನವೂ, ಮಯಾ-ನನ್ನಿಂದ, ಆಖ್ಯಾತಂ-ಹೇಳಲ್ಪಟ್ಟಿತು. ಏತತ್-ಈ ಜ್ಞಾನವಿಷಯವನ್ನು, ಅಶೇಷೇಣ - ಸಂಪೂರ್ಣವಾಗಿ, ವಿಮೃಶ್ಯ-ಚೆನ್ನಾಗಿ ಆಲೋಚಿಸಿ, ಯಥೇಚ್ಛಸಿ - ನಿನ್ನ ಅಧಿಕಾರಾನುಗುಣವಾಗಿ ಕರ್ಮಯೋಗವನ್ನಾದರೂ ಜ್ಞಾನಯೋಗವನ್ನಾದರೂ ಭಕ್ತಿಯೋಗವನ್ನಾದರೂ ಹೇಗೆ ಇಚ್ಛಿಸುವಿಯೊ ಆರೀತಿಯಾಗಿ ಅನುಷ್ಠಿಸು॥೬೩॥

(ಶಂ) ಜ್ಞಾನಂ- ಜ್ಞಾನಹೇತುವಾದ ಶಾಸ್ತ್ರವನ್ನು, ವಿಮೃಶ್ಯ-ಆಲೋಚಿಸಿ. ... ... ॥೬೩॥

ಶ್ಲೋ॥ ಸರ್ವಗುಹ್ಯತಮಂ ಭೂಯಶ್ಶೃಣುಮೇಪರಮಂವಚಃ । ಇಷ್ಟೋಸಿಮೇ ದೃಢಇತಿ ತತೋವಕ್ಷ್ಯಾಮಿತೇಹಿತಂ ॥ ... ... ॥೬೪॥

ಪ॥ ಸರ್ವಗುಹ್ಯತಮಂ- ಭೂಯಃ-ಶೃಣು-ಮೇ-ಪರಮಂ-ವಚಃ । ಇಷ್ಟಃ-ಅಸಿ-ದೃಢಂ-ಇತಿ-ತತಃ-ವಕ್ಷ್ಯಾಮಿ-ತೇ-ಹಿತಂ ।

(ಅ ॥ ರಾ ॥ ಭಾ) ಸರ್ವಗುಹ್ಯತಮಂ- (ರಹಸ್ಯಗಳಾದ ಅರ್ಥಗಳಮಧ್ಯದಲ್ಲಿ ಭಕ್ತಿಯೋಗವು ಶ್ರೇಷ್ಠವಾಗಿರುವುದರಿಂದ ಅತ್ಯಂತ ಗುಹ್ಯವೆಂಬದಾಗಿ - (" ಇದಂ ತುತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೆ,, (೯ ॥ ೧॥) ಹೇಳಿರುವುದು ಆ ಭಕ್ತಿಯೋಗ ವಿಷಯವಾದುದರಿಂದ ) ಸಮಸ್ತ ರಹಸ್ಯಗಳಲ್ಲಿಯೂ ರಹಸ್ಯತಮವಾಗಿಯೂ, ಪರಮಂ-ಶ್ರೇಷ್ಠವಾಗಿಯೂ ಇರುವ, ಮೆ-ನನ್ನ, ವಚಃ-ವಚನವನ್ನು, ಭೂಯಃ ಶೃಣು-ಪೂರ್ವದಲ್ಲಿ ಹೇಳಿದಅರ್ಥವನ್ನು ಇನ್ನೊಂದುಸಲಕೇಳು, ಮೇಇಷ್ಟೋಽಸಿ-ನನಿಗೆ ಅತ್ಯಂತ ಪ್ರಿಯನಾಗಿರುವಿ, ಅದುಮಾತ್ರವಲ್ಲದೆ, ದೃಢಃ - ದೃಢಚಿತ್ತನಾಗಿಯೂ ಇರುವಿ, ಇತಿತತಃ- ಎಂಬೀ ಕಾರಣದಿಂದ, ತೆ - ನಿನಿಗೆ, ಹಿತಂ ವಕ್ಷ್ಯಾಮಿ - ಹಿತವಚನವನ್ನು ಹೇಳುತ್ತೇನೆ. ... ... ॥೬೪॥

(ಶಂ ॥ ಭಾ) ಈಗ ನಿನಿಗೆ ನಾನು ಹೇಳುವ ವಾಕ್ಯಗಳು ನಿನ್ನ ಭಯದಿಂದಲಾದರೂ ಅಥವಾ ದ್ರವ್ಯಾಶೆಯಿಂದಲಾದರೂ ಹೇಳಲ್ಪಡುವು ವೆಂದರಿಯದೆ ನನಿಗೆ ನೀನು ಅತ್ಯಂತ ಪ್ರಿಯನೆಂಬದಾಗಿ ನನ್ನ ದೃಢವಿಶ್ವಾಸಕ್ಕೆ ಪಾತ್ರನಾದುದರಿಂದ ಉಪದೇಶಿಸಲ್ಪಟ್ಟ ವೆಂದರಿತುಕೊಳ್ಳು. ... ... ॥೬೪॥

ಶ್ಲೋ ॥ ಮನ್ಮನಾಭವ ಮದ್ಭಕ್ತೋಮದ್ಯಾಜೀಮಾಂ ನ
ಮಸ್ಕುರು ।ಮಾಮೇವೈಷ್ಯಸಿ ಸತ್ಯಂತೆ ಪ್ರತಿಜಾನೆ ಪ್ರಿ
ಯೋಽಸಿಮೇ ॥ ... ... ॥೬೫॥

ಪ ॥ ಮನ್ಮನಾಃ-ಭವ-ಮದ್ಭಕ್ತಃ-ಮದ್ಯಾಜೀ-ಮಾಂ-ನಮಸ್ಕುರು। ಮಾಂ-ಏವ-ಏಷ್ಯಸಿ-ಸತ್ಯಂ-ತೆ-ಪ್ರತಿಜಾನೆ-ಪ್ರಿಯಃ-ಅಸಿ-ಮೆ ॥

(ಅ ॥ರಾ॥ ಭಾ) ಮನ್ಮನಾಭವ- (ವೇದಾಂತಗಳಲ್ಲಿ " ವೇದಾಹಮೇತಂಪುರುಷಂಮಹಾಂತಂ- ಆದಿತ್ಯವರ್ಣಂತಮಸಃಪರಸ್ತಾತ್-ತಮೇವಂವಿದ್ವಾನಮೃತಇಹಭವತಿನಾನ್ಯಃ ಪಂಥಾವಿದ್ಯತೇಽಯನಾಯ ,, ಇತ್ಯಾದಿ ವಾಕ್ಯಗಳಲ್ಲಿ ಮೋಕ್ಷವನ್ನಪೇಕ್ಷಿಸುವಂತವನಿಗೆ ವೇದನಧ್ಯಾನೋಪಾಸನಾದಿ ಶಬ್ದವಾಚ್ಯವಾಗಿಯೂ ದರ್ಶನ ಸಮಾನಾಕಾರವಾಗಿಯೂ ಅತ್ಯರ್ಥಪ್ರಿಯವಾಗಿಯೂ ಇರುವ ಸ್ಮೃತಿ (ಸ್ಮರಣ) ಸಂತಾನ

ವು ವಿಹಿತವಾಗಿರುವುದರಿಂದ ) ಅಂಥಾ ಸ್ಮೃತಿಯನ್ನು ನನ್ನಲ್ಲಿ ಮಾಡು,ಮದ್ಭಕ್ತಃ-ಅಂಥಾ ಸ್ಮೃತಿಯನ್ನು ಮಾಡುವಕಾಲದಲ್ಲಿಅತ್ಯಂತವಾಗಿ ನನ್ನನ್ನು ಪ್ರಿಯ ವಸ್ತುವನ್ನಾಗಿ ಸ್ವೀಕರಿಸಿ ಸ್ಮೃತಿಮಾಡು, ಮದ್ಯಾಜೀ -( ಇಲ್ಲಿಯೂ ಮದ್ಭಕ್ತಃ ಎಂಬದಾಗಿ ಸೇರಿಸಿಕೊಳ್ಳಬೇಕು ) ಮದ್ಭಕ್ತೋಮದ್ಯಾಜೀ- ಆಪ್ರಕಾರನನ್ನನ್ನು ಅತ್ಯಂತ ಪ್ರಿಯವಸ್ತುವನ್ನಾಗಿ ಸ್ವೀಕರಿಸಿಯೆ ನನ್ನನ್ನಾರಾಧಿಸು, ಆರಾಧನವೆಂದರೆ ಪರಿಪೂರ್ಣವಾದ ಶೇಷವೃತ್ತಿಯು, ( ಕೈಂಕರ್ಯವೆಂದರಿಯಬೇಕು.) ಮಾಂನಮಸ್ಕುರು-ನನ್ನನ್ನು ನಮಸ್ಕರಿಸು,ನನ್ನಲ್ಲಿ ಅತ್ಯಂತ ಪ್ರಿಯವಾಗಿರುವ ಪ್ರಹ್ವೀಭಾವವನ್ನು ( ಬಗ್ಗಿರುವಿಕೆಯನ್ನು ) ಮಾಡು, ಮಾಮೇವೈಷ್ಯಸಿ - ಈಪ್ರಕಾರವಾಗಿರುವ ನೀನು ನನ್ನನ್ನೇ ಹೊಂದುತ್ತೀ, ಈ ಅರ್ಥವು ಸತ್ಯವಲ್ಲದೆ ಬೇರೊಂದಲ್ಲವು, ತೇಪ್ರತಿಜಾನೇ-ನಿನಿಗೆ ಪ್ರತಿಜ್ಞೆ ಮಾಡುವೆನು, ಈವಾಕ್ಯವು ವಂಚಕವಲ್ಲವು, ಮೇಪ್ರಿಯೋಸಿ-ನನಿಗೆ ನೀನು ಇಷ್ಟನಾಗಿಯಲ್ಲವೆ ಇರುವಿ, ಯಾವನಿಗೆ ನನ್ನಲ್ಲಿ ಅತ್ಯಂತ ಪ್ರೀತಿ ಇರುವುದೋ ಅಂತವನಲ್ಲಿ ನನಿಗೆ ಅತ್ಯಂತ ಪ್ರೀತಿಯುಂಟಾಗಿರುವುದು. ಆದುದರಿಂದ ಅಂತವನ ವಿಶ್ಲೇಷವನ್ನು ಸಹಿಸದ ನಾನು ಅವನಿಗೆ ನನ್ನ ಪ್ರಾಪ್ತಿಯನ್ನುಂಟುಮಾಡುವೆನು. ಆದುದರಿಂದ ನನ್ನನ್ನು ಹೊಂದುತ್ತೀಎಂಬದಾಗಿ ಸತ್ಯವಾಗಿಯೆ ಪ್ರತಿಜ್ಞೆಯನ್ನು ಮಾಡಿರುವೆನು. ... ॥೬೫॥

(ಶಂ॥ ಭಾ) ನಮಸ್ಕಾರವನ್ನು ಕೂಡ ನನಿಗೇನೆ ಮಾಡು. ಈಪ್ರಕಾರವಾಗಿ ವಾಸುದೇವನಲ್ಲಿಯೆ ಸಮರ್ಪಿಸಲ್ಪಟ್ಟ ಸಾಧ್ಯಸಾಧನ ಪ್ರಯೋಜನಗಳುಳ್ಳವನಾದನೀನು ನನ್ನನ್ನೇ ಹೊಂದುತ್ತೀ ಎಂದು ತಾತ್ಪರ್ಯವು. ... ... ॥೬೫॥

ಶ್ಲೋ ॥ ಸರ್ವಧರ್ಮಾನ್ ಪರಿತ್ಯಜ್ಯಮಾಮೇಕಂ ಶರಣಂ ವ್ರಜ । ಅಹಂತ್ವಾಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ ಮಾಶುಚಃ ॥ ... ... ॥೬೬॥

ಪ ॥ ಸರ್ವಧರ್ಮಾನ್-ಪರಿತ್ಯಜ್ಯ-ಮಾಂ-ಏಕಂ-ಶರಣಂ-ವ್ರಜ । ಅಹಂ-ತ್ವಾ-ಸರ್ವಪಾಪೇಭ್ಯಃ-ಮೋಕ್ಷಯಿಷ್ಯಾಮಿ-ಮಾಶುಚಃ ।

(ಅ) ಸರ್ವಧರ್ಮಾನ್-ಸಮಸ್ತ ಧರ್ಮಗಳನ್ನು ಪರಿತ್ಯಜ್ಯ-ಬಿಟ್ಟು ಬಿಟ್ಟು, ಏಕಂ-ಅದ್ವಿತೀಯನಾದ, ಮಾಂ-ನನ್ನನ್ನು, ಶರಣಂವ್ರಜ-ರಕ್ಷಕನನ್ನಾಗಿ ಹೊಂದು ಅಹಂ-ನಾನು, ತ್ವಾ-ನಿನ್ನನ್ನು, ಸರ್ವಪಾಪೇಭ್ಯಃ-ಸಮಸ್ತ ಪಾಪಗಳ ದಶೆಯಿಂದಲೂ, ಮೋಕ್ಷಯಿಷ್ಯಾಮಿ-ಬಿಡಿಸುವೆನು, ಮಾಶುಚಃ-ದುಃಖಿಸಬೇಡ. ... ||೬೬||

(ಶಂ || ಭಾ) ಸಕಲವಾದ ಕರ್ಮನಿಷ್ಠೆಗಿಂತಲೂ ಪರಮ ರಹಸ್ಯವಾದ ಈಶ್ವರ ಶರಣಾಗತಿಯು ಸಂಪೂರ್ಣವಾಗಿ ಹೇಳಲ್ಪಟ್ಟಿತು. ಈಗಕರ್ಮಯೋಗನಿಷ್ಠೆಗೂಕೂಡ ಫಲಭೂತವಾಗಿಯೂವೇದಾಂತಸಾರಭೂತವಾಗಿಯೂ ಇರುವ ಪರಿಪೂರ್ಣಜ್ಞಾನವು ( ಸಮ್ಯಗ್ದರ್ಶನವು ) ಈ ಶ್ಲೋಕದಲ್ಲಿ ಹೇಳಲ್ಪಡುವುದು. ...

ಸರ್ವಧರ್ಮಾನ್-ಸಕಲ ಧರ್ಮಗಳನ್ನೂ, ( ಇಲ್ಲಿ ಧರ್ಮಶಬ್ದದಿಂದ ಅಧರ್ಮವೂ ಗ್ರಹಿಸಲ್ಪಡುವುದು, ನೈಷ್ಕರ್ಮಸಿದ್ಧಿಯಾಗಬೇಕಾಗಿರುವುದರಿಂದ ) ಪರಿತ್ಯಜ್ಯ-ಬಿಟ್ಟು, ಮಾಮೇಕಂ-ಸರ್ವಾತ್ಮಾ ಆಗಿಯೂ ಸರ್ವಭೂತಸಮನಾಗಿಯೂ ಸರ್ವಭೂತಾಧಿ ವಾಸಿಯಾಗಿಯೂ ಈಶ್ವರನಾಗಿಯೂ ಇರುವ ನನ್ನನ್ನು ನೀನೆ ಎಂಬದಾಗಿ, ನೀನೆ ಅಂಥಾ ಬ್ರಹ್ಮವೆಂಬದಾಗಿ ಎಂದರ್ಥವು. ಶರಣಂವ್ರಜ-ನನ್ನನ್ನು ವಿನಾ ಬೇರೆ ಇಲ್ಲವೆಂಬ ನಿಶ್ಚಯವನ್ನು ಸ್ವೀಕರಿಸು,ತ್ವಾ-ಇಂಥಾ ನಿನ್ನನ್ನು, ಅಹಂ-ನಾನು, ಸರ್ವಪಾಪೇಭ್ಯಃ-ಬಂಧಕಗಳಾದ ಸರ್ವಪಾಪಗಳ ದಶೆಯಿಂದಲೂ, ಮೋಕ್ಷಯಿಷ್ಯಾಮಿ-ನನ್ನ ಸ್ವರೂಪ ಪ್ರಕಾಶವನ್ನುಂಟು ಮಾಡುವುದರಿಂದ ಬಿಡಿಸುವೆನು. ಈ ಅರ್ಥವು " ನಾಶಯಾಮ್ಯಾತ್ಮಭಾವ ಸ್ಥೋಜ್ಞಾನ ದೀಪೇನ ಭಾಸ್ವತಾ " (೧೦|| ೧೧) ಎಂಬ ಗೀತಾಶ್ಲೋಕದಲ್ಲಿ ಹೇಳಲಟ್ಟಿರುವುದು. ಮಾಶುಚಃ- ವ್ಯಸನ ಪಡಬೇಡ. ... ... ||೬೬||

(ರಾಭಾ) ಸರ್ವಧರ್ಮಾನ್ ಪರಿತ್ಯಜ್ಯ-ಮೋಕ್ಷಸಾಧನಗಳಾಗಿಯೂ ನನಗೆಆರಾಧನ ರೂಪಗಳಾಗಿಯೂಇರುವಕರ್ಮಯೋಗಜ್ಞಾನಯೋಗ ಭಕ್ತಿಯೋಗಗಳನ್ನು ಅಧಿಕ ಪ್ರೀತಿಯೊಡನೆ ನಿನ್ನ ಅಧಿಕಾರಾನುಗುಣವಾಗಿ ಅನುಷ್ಠಿಸುವಾಗ ನಾನು ಹಿಂದೆ ಹೇಳಿರುವ ಪ್ರಕಾರವಾಗಿ ಫಲಕರ್ಮಕರ್ತೃತ್ವಾದಿಗಳನ್ನು ಬಿಡುವಿಕೆ ಎಂಬ ಧರ್ಮವನ್ನು ಅನುಷ್ಠಿಸಿ, ಮಾಮೇಕಂ ಶರಣಂವ್ರಜ-ನನ್ನನ್ನೊಬ್ಬನನ್ನೇ ಆರಾಧ್ಯನನ್ನಾಗಿಯೂ

ಪ್ರಾಪ್ಯವನ್ನಾಗಿಯೂ ಉಪಾಯವನ್ನಾಗಿಯೂ ಅನುಸಂಧಾನಮಾಡು, ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ - ಸರ್ವಶಕ್ತನಾದ ನಾನು ಈ ಪ್ರಕಾರವಾಗಿರುತಲಿರುವ ನಿನ್ನನ್ನು ನನ್ನ ಪ್ರಾಪ್ತಿಗೆ ವಿರೋಧಿಗಳಾಗಿಯೂ ಅನಾದಿಕಾಲ ಸಂಚಿತಗಳಾಗಿಯೂ ಅನಂತಗಳಾಗಿಯೂ ಇರುವ ಅಕೃತ್ಯ ಕರಣಕೃತ್ಯಾಕರಣ ರೂಪಗಳಾದ ಸಮಸ್ತಪಾಪಗಳ ದೆಶೆಯಿಂದಲೂ ಬಿಡಿಸುವೆನು. ಮಾಶುಚಃ-ದುಃಖಿಸಬೇಡ, ಇದೊಂದು ವಿಧವಾದ ಯೋಜನೆಯು, ಯೋಜನಾಂತರವೂ ಉಂಟು. ಸರ್ವಪಾಪ ವಿನಿರ್ಮುಕ್ತನಾಗಿಯೂ ಅತ್ಯಂತವಾಗಿ ಭಗವತ್ಪ್ರಿಯನಾಗಿಯೂ ಇರುವ ಪುರುಷನಿಗೇನೆ ಭಕ್ತಿಯೋಗವು ಸಾಧ್ಯವಾಗಿರುವುದರಿಂದ ಅಂಥಾ ಭಕ್ತಿಯೋಗಕ್ಕೆ ವಿರೋಧಿಗಳಾದ ಪಾಪಗಳು ಅನಂತಗಳಾಗಿರುವುದರಿಂದ ಸ್ವಲ್ಪಕಾಲಾನುಷ್ಠಿತಗಳಾದ ಪ್ರಾಯಶ್ಚಿತ್ತಗಳಿಂದ ಅಂಥಾ ಪಾಪಗಳ ಪರಿಹಾರವು ಅಶಕ್ಯವಾಗಿರುವುದರಿಂದ ತನಗೆ ಭಕ್ತಿಯೋಗದಲ್ಲಿ ಯೋಗ್ಯತೆಯು ಇಲ್ಲವೆಂದು ಆಲೋಚಿಸಿಕೊಂಡು ಶೋಕಿಸುವ ಅರ್ಜುನನಶೋಕಪರಿಹಾರಾರ್ಥವಾಗಿ ಈ ಶ್ಲೋಕವನ್ನು ಅನುಗ್ರಹಿಸುತ್ತಾನೆಂದರಿಯಬೇಕು.

ಸರ್ವಧರ್ಮಾನ್ಪರಿತ್ಯಜ್ಯ-ಭಕ್ತಿಯೋಗಾರಂಭ ವಿರೋಧಿಗಳಾಗಿಯೂ ಅನಾದಿ ಕಾಲದಿಂದ ಸಂಪಾದಿಸಲ್ಪಟ್ಟವುಗಳಾಗಿಯೂ ಅಪಾರಗಳಾಗಿಯೂಇರುವ ಪಾಪಗಳನ್ನು ಹೋಗಲಾಡಿಸುವಂಥವುಗಳಾಗಿಯೂ ಕೃಚ್ಛ್ರಚಾಂದ್ರಾಯಣಾದಿ ಪ್ರಾಯಶ್ಚಿತ್ತರೂಪಗಳಾಗಿಯೂ ನಾನಾವಿಧಗಳಾಗಿಯೂ ಅನಂತಗಳಾಗಿಯೂ ಸ್ವಲ್ಪಕಾಲವರ್ತಿಯಾಗಿರುವ ನಿನ್ನಿಂದ ಅನುಷ್ಠಿಸಲಶಕ್ಯಗಳಾಗಿಯೂ ಇರುವ ಸರ್ವಧರ್ಮಗಳನ್ನು ಬಿಟ್ಟು ಬಿಟ್ಟು, ಮಾಮೇಕಂ-ಭಕ್ತಿಯೋಗಾರಂಭ ಸಿದ್ಧಿಗಾಗಿ ಪರಮ ಕಾರುಣಿಕನಾಗಿಯೂ ಅನಾಲೋಚಿತ ವಿಶೇಷಾ ಶೇಷಲೋಕಶರಣ್ಯನಾಗಿಯೂ ಆಶ್ರಿತ ವಾತ್ಸಲ್ಯ ಜಲಧಿಯಾಗಿಯೂ ಇರುವ ನನ್ನನ್ನೊಬ್ಬನನ್ನೆ, ಶರಣಂವ್ರಜ-ಉಪಾಯತ್ವೇನ ಹೊಂದು, ಅಹಂ- ನಾನು, ತ್ವಾ-ನಿನ್ನನ್ನು, ಸರ್ವಪಾಪೇಭ್ಯಃ-ಹಿಂದೇಹೇಳಿರುವ ಭಕ್ತಿಯೋಗದ

ಆರಂಭಕ್ಕೆ ವಿರೋಧಿಗಳಾದ ಸಮಸ್ತ ಪಾಪಗಳ ದೆಶೆಯಿಂದಲೂ, ಮೋಕ್ಷಯಿಷ್ಯಾಮಿ-ಬಿಡಿಸುವೆನು, ಮಾಶುಚಃ-ಶೋಕಿಸಬೇಡ. ॥೬೬॥

ಈ ಶ್ಲೋಕಕ್ಕೆ ರಹಸ್ಯ ಶಾಸ್ತ್ರ ಪ್ರತಿಪಾದ್ಯಗಳಾದ ಅರ್ಥಗಳು ವಿವರಿಸಲ್ಪಡುವುವು.

" ವಿಷನಾರಾಯಣ ಶ್ರೀಮಾನ್‌ ಕ್ಷೀರಾರ್ಣವನಿಕೇತನಃ । ನಾಗಪರ್ಯಂಕಮುತ್ಸೃಜ್ಯಹ್ಯಾಗತೋಮಧುರಾಂಪುರೀಂ " ಎಂಬುವಂತೆ ಶ್ರಿಯಃಪತಿಯಾದ ಸರ್ವೇಶ್ವರನು ಸಾಧು ಸಂರಕ್ಷಣ ದುಷ್ಟಶಿಕ್ಷಣ ಧರ್ಮಸಂಸ್ಥಾಪನೆಗಳಿಗೋಸ್ಕರ ಶ್ಲಾಘ್ಯವಾದ ದ್ವಾರಕಾನಾಥನಾಗಿ " ದ್ರೌಪದ್ಯಾಸಹಿತಾಸ್ಸರ್ವೇ ನಮಶ್ಚಕ್ರು ರ್ಜನಾರ್ದನಂ ,, ಎಂಬೀ ಪ್ರಕಾರವಾಗಿ ಶರಣಾಗತರಾದ ಪಾಂಡು ಕುಮಾರರಿಗೆ ಇಂತವರ ದೂತನೆಂಬದಾಗಿ ನಿಂತ ದೆಶೆಯಲ್ಲಿ (ಈಗಲೂಕೂಡ ಪಾಂಡವ ದೂತನೆಂಬದಾಗಿ ಹೇಗಾದರೆ ಸರ್ವರೂ ಹೇಳುವರೊ ಆ ಪ್ರಕಾರವಾಗಿ ನಿಂತದೆಶೆಯಲ್ಲಿ ಎಂದರ್ಥವು.) ಅರ್ಜುನನನ್ನು ರಥಿಯಾಗಿಮಾಡಿ ತಾನವನರಥಕ್ಕೆ ಸಾರಥಿಯಾಗಿ ಅವನಿಗೆ ವಿಧೇಯಕೊಟಿಯಲ್ಲಿ ನಿಂತ ದೆಶೆಯಲ್ಲಿ ಈ ಅರ್ಜುನನನ್ನು ನಿಮಿತ್ತೀಕರಿಸಿ ಸರ್ವೇಶ್ವರೇಶ್ವರನಾದ ಶ್ರೀಕೃಷ್ಣನು ತನ್ನ ಶತ್ರುಗಳನ್ನು ಸಂಹರಿಸಬೇಕೆಂಬದಾಗಿರುವ ಅಭಿಪ್ರಾಯವನ್ನು ತಿಳಿದು ಬಂಧು ವಿನಾಶವು ನಿಶ್ಚಯವೆಂದು ಸ್ಥಿರಪಡಿಸಿಕೊಂಡನು. ಆವಾಗ ಅಸ್ಥಾನ ಸ್ನೇಹದಿಂದುಂಟಾದ ಶೋಕದಿಂದಲೂ ಅಸ್ಥಾನಕೃಪೆಯಿಂದಲೂ ಆಚಾರ್ಯರೇ ಮೊದಲಾದವರು ಯುದ್ಧೋನ್ಮುಖರಾಗಿದ್ದರೂಕೂಡ ತಾನವರನ್ನು ಸಂಹಾರಮಾಡುವುದಕ್ಕೆ ಇಷ್ಟಪಡದೆ ಅವರುಗಳ ಸಂಹಾರದಿಂದ ತನಗೆ ಪಾಪವುಂಟಾಗುವುದೆಂಬ ಭಯದಿಂದಲೂ ವ್ಯಾಕುಲನಾಗಿ ಈ ಸಂದರ್ಭದಲ್ಲಿ ಯಾವದು ಹಿತವೊ ಅದನ್ನರಿಯಬೇಕೆಂದು ಯೋಚಿಸಿ " ಯಚ್ಛ್ರೇಯಸ್ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಹಂ ಶಾಧಿಮಾಂತ್ವಾಂ ಪ್ರಪನ್ನಂ ,, (೭॥ ೨॥) ಎಂಬದಾಗಿ ಶ್ರೀಕೃಷ್ಣನ ಸನ್ನಿಧಿಯಲ್ಲಿ ವಿಜ್ಞಾಪನೆಯನ್ನು ಮಾಡಲು ಈವಾಕ್ಯವನ್ನು ಕೇಳಿದ ಶ್ರೀರುಕ್ಮಿಣೀವಲ್ಲಭನು ಬಂಧುನಾಶಾದಿ ಪ್ರಯುಕ್ತವಾದ ಅರ್ಜುನನ ಶೋಕವನ್ನು ನಿವೃತ್ತಿ ಮಾಡುವುದಕ್ಕಾಗಿ ದೇಹಾದಿ

ವ್ಯತಿರಿಕ್ತವಾಗಿ ಪರಮಾತ್ಮನಿಗೆ ಶೇಷಭೂತವಾಗಿಯೇ ಇರುವ ನಿತ್ಯಾತ್ಮ ಸ್ವರೂಪವನ್ನೂ ಇಂತಹ ಸ್ವರೂಪವನ್ನು ತಿಳಿದವನಿಗೆ ಮೋಕ್ಷಕ್ಕೆ ಪರಂಪರೆಯಿಂದ ಕಾರಣಗಳಾದ ಕರ್ಮಯೋಗ ಜ್ಞಾನಯೋಗಗಳನ್ನೂ (ಪ್ರಥಮ ಷಟ್ಕಾರ್ಥವಿದು) ಸಾಕ್ಷಾನ್ಮೋಕ್ಷೋಪಾಯವೆಂಬದಾಗಿ ಶಾಸ್ತ್ರಚೋದಿತವಾದ ಭಕ್ತಿಯೋಗವನ್ನೂ (ದ್ವಿತೀಯಷಟ್ಕಾರ್ಥವಿದು) ತೃತೀಯ ಷಟ್ಕದಲ್ಲಿ ಪ್ರಸಿದ್ಧವಾದ ಅವುಗಳ ಪರಿಕರಗಳನ್ನೂ ಉಪದೇಶಿಸಲು ಈ ಪರಮ ಪುರುಷಾರ್ಥವೆಂಬ ಮೋಕ್ಷವನ್ನು ತ್ವರೆಯಾಗಿ ಹೊಂದಬೇಕೆಂಬಆಶಾವಿಶೇಷ ವುಂಟಾಗಿದ್ದರೂಸಪರಿಕರವಾದಈಭಕ್ತಿರೂಪವಾದ ಉಪಾಯದದೌಷ್ಕರ್ಯದಿಂದಲೂಇಂತಹಉಪಾಯದಅನುಷ್ಠಾನಕ್ಕೆ ಅಪೇಕ್ಷಿತವಾದ ಜ್ಞಾನಶಕ್ತ್ಯಾದಿಗಳಿದ್ದರೂ ಅತ್ಯಂತವಾದ ಜಾಗರೂಕತೆಯಿಂದಲೂ ಕೂಡ ಚಿರಕಾಲಸಾಧ್ಯವಾದಉಪಾಯಸ್ವಭಾವದಿಂದ ಅಭಿಮತವಾದಮೋಕ್ಷವುಲಭಿಸದೇಇರುವುದರಿಂದಲೂಅತ್ಯಂತ ಶೋಕಾವಿಷ್ಟನಾದ ಅರ್ಜುನನನ್ನು ವ್ಯಾಜೀಕರಿಸಿ ಸಕಲಲೋಕರಕ್ಷಾರ್ಥವಾಗಿ ಪರಮ ಕಾರುಣಿಕನಾದ ಗೀತೋಪನಿಷದಾಚಾರ್ಯನು (ಶ್ರೀಕೃಷ್ಣನು) "ಭಕ್ತ್ಯಾ ಪರಮಯಾವಾಪಿ ಪ್ರಪತ್ತ್ಯಾವಾಮಹಾಮತೇ। ಪ್ರಾಪ್ಯೋಹಂನಾನ್ಯಥಾ ಪ್ರಾಪ್ಯೋಮಮಕೈಂಕರ್ಯಲಿಪ್ಸುಭಿಃ" (ನನ್ನ ಕೈಂಕರ್ಯವನ್ನು ಅಪೇಕ್ಷಿಸುವ ಜನಗಳಿಂದ ಪರಮ ಭಕ್ತಿರೂಪವಾದ ಅವಸ್ಥೆಯನ್ನು ಹೊಂದಿರುವ ಸಾಧನ ಭಕ್ತಿಯಿಂದಲಾದರೂ ಶರಣಾಗತಿಯಿಂದಲಾದರೂ ಪರಮಪದ ವಾಸಿಯಾದ ನಾನು ಪ್ರಾಪ್ಯನು, ಅನ್ಯಥಾ-ಉಪಾಯಾಂತರಗಳಾಗಿರುವ ಮೋಕ್ಷಕ್ಕೆ ಪರಂಪರೆಯಿಂದ ಸಾಧನವಾಗಿರುವ ಕರ್ಮಯೋಗಾದಿಗಳಿಂದ ಸಾಕ್ಷಾತ್ತಾಗಿ ನಾನು ಪ್ರಾಪ್ಯನಾಗುವುದಿಲ್ಲವು, (ಹೊಂದಲ್ಪಡತಕ್ಕವನಲ್ಲವು.) ಎಂಬದಾಗಿ ಈಶ್ಲೋಕಾರ್ಥವು) ಎಂಬದಾಗಿ ತಾನು ವಿಕಲ್ಪಿಸಿ (ಭಕ್ತಿಯಿಂದಲಾದರೂ ಪ್ರಪತ್ತಿಯಿಂದಲಾದರೂ ಎಂಬುವುದೇ ವಿಕಲ್ಪವು) ವಿಧಿಸಿರುವ ಉಪಾಯಗಳಲ್ಲಿ "ತಾವದಾರ್ತಿಸ್ತಥಾವಾಂಛಾತಾವನ್ಮೋಹಸ್ತಥಾ ಽಸುಖಂ। ಯಾವನ್ನಯಾತಿಶರಣಂ ತ್ವಾಮಶೇಷಾಘನಾಶನಂ" (ಸರ್ವಪಾಪ ಪರಿಹಾರಕನಾದ ನಿನ್ನ ದಿವ್ಯಚರಣಾರವಿಂದ ಶರಣ ಹೊಂದುವ ಪರ್ಯಂತವಾ

ಗಿಯೇ ಭ್ರಷ್ಟೈಶ್ವರ್ಯನಾದ ಅಧಿಕಾರಿಗೆ ಐಶ್ವರ್ಯ ಭ್ರಂಶದಿಂದುಂಟಾದ ದುಃಖವೂ ಇರುವುದು. ಅಪೂರ್ವೈಶ್ವರ್ಯಾರ್ಥಿಗಳಿಗೆ ಶೀಘ್ರವಾಗಿ ಫಲ ಪ್ರಾಪ್ತಿಯಾಗುವುದರಿಂದ ಅದರ ಅಪೇಕ್ಷೆಯೂ ಭಗವಚ್ಛರಣಾರ ವಿಂದ ಶರಣಾಗತಿಯನ್ನು ಮಾಡುವ ಪರ್ಯಂತವೆ. ಕೈವಲ್ಯಾರ್ಥಿಗಳಿಗೆ ಕೈವಲ್ಯವನ್ನು ಹೊಂದುವೆವೊ ? ಇಲ್ಲವೊ ? ಎಂಬ ಮೋಹವೂ ಅದರ ಪರ್ಯಂತವೆ. ಮುಮುಕ್ಷುಗಳಿಗೆ ಸಂಸಾರ ದುಃಖವಾದರೂ, ಅಥ ವಾ ಮೋಕ್ಷಪ್ರಾಪ್ತಿಯಾಗುವುದೊ ಅಲ್ಲವೊ ಎಂಬ ದುಃಖವಾದರೂ ಸರ್ವಫಲಪ್ರದನಾದ ನಿಮ್ಮ ಚರಣಗಳನ್ನು ಶರಣಹೊಂದುವಪರ್ಯಂತವೆ, ಶರಣ ಹೊಂದಿದಮೇಲೆ ಸರ್ವರಿಗೂ ಸಮಸ್ತವೂ ಸಿದ್ಧಿಯಾಗುವುದೆಂ ದೀಶ್ಲೋಕಾರ್ಥವು.) ಎಂಬೀ ಪ್ರಕಾರವಾಗಿ ತನ್ನ ಚರಣಗಳನ್ನು ಹೊಂದುವುದಕ್ಕೂ ಇತರಗಳಾದ ಸರ್ವಾಪೇಕ್ಷಿತಗಳಿಗೂ ಸಾಧಾರಣ ಸಾಧನವಾಗಿಯೂ ಆನುಕೂಲ್ಯ ಸಂಕಲ್ಪಾದಿಯಾದ ಅಂಗಪಂಚಕಗಳಿ ಗಿಂತಲೂ ವ್ಯತಿರಿಕ್ತಗಳಾದಪರಿಕರಗಳಿಂದ ನಿರಪೇಕ್ಷವಾಗಿಯೂ ಬಹು ಸುಲಭವಾಗಿಯೂ ಕ್ಷಣಮಾತ್ರ ಸಾಧ್ಯವಾಗಿಯೂ ಇರುವ ರಹಸ್ಯತ ಮವಾದ ಶರಣಾಗತಿಯನ್ನು ಪರೀಕ್ಷಾಪೂರ್ವಕವಾಗಿ ಉಪದೇಶಿಸಿದನು. " ಸತ್ಕರ್ಮ ನಿರತಾಶ್ಶುದ್ಧಾಸ್ಸಾಂಖ್ಯಯೋಗ ವಿದಸ್ತಥಾ । ನಾರ್ಹಂತಿ ಶರಣಸ್ಥಸ್ಯಕಲಾಂಕೋಟಿತಮೀಮಪಿ ,, ಇತ್ಯಾದಿ ಪ್ರಮಾಣಗಳಿಂದ ಶರಣಾಗತಿ ರೂಪವಾದಉಪಾಯಕ್ಕೆ ಸಮಸ್ತವಾದ ಮೋಕ್ಷೋಪಾಯ ಗಳಿಗಿಂತಲೂ ಆಧಿಕ್ಯತೋರುವುದರಿಂದ ಇದಕ್ಕಿಂತಲೂ ಉಪದೇಶಿಸ ಲ್ಪಡಬೇಕಾದ ಬೇರೆವಿಷಯಗಳಿಲ್ಲವಾದುದರಿಂದಲೂ ಶ್ರೀಮದ್ಗೀತೆಯ ಲ್ಲಿ ಇದು ಚರಮವಾದ ಶ್ಲೋಕವಾಯಿತೆಂದರಿಯಬೇಕು. ಇದರಲ್ಲಿ ಶರಣಾಗತಿಗೆ ಅಪೇಕ್ಷಿತವಾದ ಸರ್ವಾರ್ಥಗಳೂ ಸ್ಫುಟವಾಗಿರುವುದರಿಂದ ಇದನ್ನು ಶ್ರವಣ ಮಾಡಿದಮೇಲೆ ಈ ವಿಷಯಕ್ಕಾಗಿ ಶ್ರೋತವ್ಯ ಶೇಷ ವೆ ಇರುವದಿಲ್ಲವು. ... ... *

ಆದರೂ "ನಪ್ರಸೀದತಿವೈವಿದ್ಯಾವಿನಾಸದುಪದೇಶತಃ,, ಎಂಬ ದಾಗಿ ಆಚಾರ್ಯಾನುಜ್ಞೆಯಿಂದಲೆ ಈ ಉಪಾಯವನ್ನು ಅನುಷ್ಠಿಸಬೇ ಕಾಗಿರುವುದರಿಂದಲೂ ಅದಿಲ್ಲವಾದುದರಿಂದ ಭಗವದುಪದಿಷ್ಟಾರ್ಥಗಳಿಗೆ

ಕಾರ್ಯಕರತ್ವವಿಲ್ಲದೇ ಇರುವುದರಿಂದಲೂ ಶೋಕನಿವರ್ತಕತ್ವವು ಈಶ್ಲೋಕಕ್ಕುಂಟಾಗಲಾರದೆಂದರೆ ಇಂಥಾ ಅರ್ಥವನ್ನು ಉಪದೇಶಿಸುವ ಶ್ರೀಕೃಷ್ಣನಿಗೇನೆ ಆಚಾರ್ಯತ್ವವಿರುವುದರಿಂದಲೂ "ಯೋಬ್ರಹ್ಮಾಣಂವಿದಧಾತಿಪೂರ್ವಂ" ಎಂಬ ಶ್ರುತಿಯಲ್ಲಿ ಸರ್ವೇಶ್ವರನ ಶರಣವರಣವು ವಿಹಿತವಾಗಿರುವುದರಿಂದ ಅದನ್ನು ಅಂಥಾ ಶರಣಾಗತಿಗೆ ವಿಷಯನಾದ ಶರಣ್ಯನೆ ಉಪದೇಶಿಸುವಾಗ "ಸಂತ್ಯಜ್ಯವಿಧಿನಾನಿತ್ಯಂ ಷಡ್ವಿಧಾಂಶರಣಾಗತಿಂ । ಆಚಾರ್ಯಾನುಜ್ಞಯಾ ಕುರ್ಯಾ ಚ್ಛಾಸ್ತ್ರದೃಷ್ಟೇನವರ್ತ್ಮನಾ" ಎಂಬ ಆಚಾರ್ಯಾನುಜ್ಞೆಯೂ ಆಗಿರುವುದರಿಂದಲೂ ನಿಮ್ಮಚೋದ್ಯಕ್ಕೆ ಅವಕಾಶವಿಲ್ಲವು.

—*ಮೂ ॥ ಸರ್ವಧರ್ಮಾನ್*—

ಸರ್ವಧರ್ಮಾನಿತ್ಯಾದಿ- ಇಲ್ಲಿ ಧರ್ಮವೆಂದರೆ ಶಾಸ್ತ್ರಮಾತ್ರದಿಂದಲೆ ತಿಳಿಯಬೇಕಾಗಿರುವ ಪುರುಷಾರ್ಥಸಾಧನವು. (ಇಲ್ಲಿ ಧರ್ಮಶಬ್ದಕ್ಕೆ- ಅಲೌಕಿಕತ್ವಂಚ ವೇದತದುಪಬೃಹ್ಮಣೇತರ ಪ್ರಮಾಣಬೋಧಿತೇಷ್ಟಸಾಧನತಾಕತ್ವರಹಿತತ್ವಂ - ತಚ್ಚ ವೇದತದುಪಜೀವಿ ಪ್ರಮಾಣಬೋಧಿತ ಇಷ್ಟಾಸಾಧನತಾಕತ್ವೇಪರ್ಯವಸನ್ನಂ " ಎಂಬೀ ಲಕ್ಷಣ ವಾಕ್ಯತಾತ್ಪರ್ಯವನ್ನರಿಯಬೇಕು. ಪರಮ ಪುರುಷಾರ್ಥಲಾಭಕ್ಕೆ ಶಾಸ್ತ್ರಮಾತ್ರದಿಂದಲೆ ಹೊಂದಲ್ಪಡತಕ್ಕ ಸಾಧನವು ಯಾವದೋ ಅದೇ ಧರ್ಮಶಬ್ದಾರ್ಥವು. ಇಲ್ಲಿನ ಧರ್ಮಶಬ್ದಗತವಾದ ಬಹುವಚನದಿಂದ ಅಪೇಕ್ಷಿತಸಾಧನತ್ವೇನಶಾಸ್ತ್ರಚೋದಿತಗಳಾದ ಧರ್ಮಗಳ ಅನೇಕ ತ್ವವುಬೊಧಿಸಲ್ಪಡುವುದು. ಸರ್ವಶಬ್ದದಿಂದ ಧರ್ಮಗಳ ಪರಿಕರವು ಹೇಳಲ್ಪಡುವುದು. ಆದರೆ "ಸಾಂಗಾದ್ವೈದಿಕ ಕರ್ಮಣಃಫಲಾವಶ್ಯಂಭಾವಃ" ಎಂಬ ನ್ಯಾಯದಿಂದ ಸಪರಿಕರಗಳಾದವಿದ್ಯೆಗಳಿಗೇನೆ ಧರ್ಮತ್ವವು ಸ್ಫುಟವಾಗಿರುವುದರಿಂದ ಧರ್ಮಶಬ್ದಗತವಾದ ಬಹುವಚನದಿಂದಲೆ ಧರ್ಮಪರಿಕರವೂ ಸಿದ್ಧಿಸುವ ಸಂದರ್ಭದಲ್ಲಿ ಸರ್ವಶಬ್ದದಿಂದ ಪ್ರಯೋಜನವಿಲ್ಲವೆಂಬದಾಗಿ ಸಂದೇಹಿಸದೆ ಪರಿಕರ ಬಹುತ್ವವನ್ನು ಸ್ಫುಟವಾಗಿ ಹೇಳುವ ಉದ್ದೇಶ್ಯದಿಂದ ಸರ್ವಶಬ್ದಪ್ರಯೋಜನವನ್ನರಿಯಬೇಕು. ಒಂದು ವಿದ್ಯೆಗೆ ಅನೇಕ ಪರಿಕರಗಳಿರುವಾಗ ಸರ್ವಶಬ್ದಕ್ಕೆ ಸಾರ್ಥಕ್ಯವುಂಟಾದ

ರೂ ಧರ್ಮಶಬ್ದದಲ್ಲಿ ಬಹುವಚನವಿಲ್ಲದಿದ್ದರೆ ಸಪರಿಕರವಾದ ಏಕವಿದ್ಯಾತ್ಯಾಗವೇ ಹೇಳಿದಂತೆ ಆಗುವುದು. ಏಕವಿದ್ಯಾತ್ಯಾಗವನ್ನು ಹೇಳಿದರೆ ಅನೇಕಗಳಾದ ಇತರ ವಿದ್ಯೆಗಳನ್ನು ಸಪರಿಕರವಾಗಿ ಅನುಷ್ಠಿಸಬೇಕೆಂಬದಾಗಿ ಹೇಳಿದಂತೆ ಆಗುವುದರಿಂದ ಉಪಾಯಾಂತರಾಶಕ್ತರಾದ ಅಕಿಂಚನಾಧಿಕಾರಿಗೆ ಪ್ರಪತ್ತ್ಯನುಷ್ಠಾನವು ಸಿದ್ಧಿಸಲಾರದು. ಆದುದರಿಂದ ಬಹುವಚನವು ಅಪೇಕ್ಷಿತವಾಯಿತು. ಆದರೆ ಸರ್ವಶಬ್ದವನ್ನು ಬಿಟ್ಟು ಕೇವಲ ಬಹುವಚನದಿಂದಲೆ ಈ ಅರ್ಥವು ಸಿದ್ಧಿಸಲಾರದೋ? ಎಂದರೆ ಕಪಿಜಂಲಾಧಿಕರಣ ನ್ಯಾಯದಿಂದ ಬಹುವಚನಕ್ಕೆ ಮೂರರಲ್ಲಿ ಪರ್ಯವಸಾನ ವಿರುವುದರಿಂದ ಎರಡು ಮೂರು ವಿದ್ಯಾ ವಿಶೇಷಗಳನ್ನು ತ್ಯಾಗಮಾಡಿ ವಿದ್ಯಾಂತರಗಳಲ್ಲಿ ಶಕ್ತರಾದವರಿಗೆ ಭರನ್ಯಾಸದಲ್ಲಿ ಅಧಿಕಾರವನ್ನು ಹೇಳಿದಂತೆ ಆಗುವುದು. ವಿದ್ಯಾಂತರಾಧಿಕಾರವುಳ್ಳವರಿಗೆ ಭರನ್ಯಾಸದಲ್ಲಧಿಕಾರವಿಲ್ಲವಷ್ಟೆ. ವಿದ್ಯಾಂತರಗಳನ್ನನುಷ್ಠಿಸುವುದಕ್ಕೆ ಜ್ಞಾನಶಕ್ತ್ಯಾದಿಗಳಿಲ್ಲದ ಅಕಿಂಚನಾಧಿಕಾರಿಗಳಿಗೇನೆ ಈ ಶರಣಾಗತಿಯಲ್ಲಧಿಕಾರವೆಂದರಿಯಬೇಕು. ಆದರೂ ವಿದ್ಯಾಂತರಾಧಿಕಾರಿಗಳೂ ಕೂಡ ಶರಣಾಗತಿಯನ್ನು ಮಾಡಬಹುದೆಂದರೆ " ಸಕೃದೇವಪ್ರಪನ್ನಸ್ಯಕೃತ್ಯಂನೈವಾದಿನ್ಯಪ್ಯತೇ। ಉಪಾಯಾಪಾಯಸಂಯೋಗೆನಿಷ್ಠಯಾ ಹೀಯತೆನಯಾ ,, ಇತ್ಯಾದಿ ಪ್ರಮಾಣಗಳಿಂದ ಹೇಳಲ್ಪಟ್ಟ ಇಲ್ಲಿ ಏಕಶಬ್ದದಿಂದ ವಿವಕ್ಷಿತವಾದ ಉಪಾಯಾಂತರ ನೈರಪೇಕ್ಷ್ಯಕ್ಕೆ ವಿರೋಧ ವುಂಟಾಗುವುದು. ಆದುದರಿಂದ ಸರ್ವಶಬ್ದಕ್ಕೆ ಬಿಡಬೇಕೆಂಬದಾಗಿ ಹೇಳಲ್ಪಟ್ಟ ವಿದ್ಯಾನೇಕತ್ವಪರವಾಗಿ ಅರ್ಥವನ್ನು ಹೇಳಿದರೆ ಬಹುವಚನ ಸರ್ವಶಬ್ದಗಳಿಗೆ ಸಾರ್ಥಕ್ಯವೇ ಉಂಟಾಗುವುದೆಂದರಿಯಬೇಕು. ... ... *

ಆದರೂ ಇಲ್ಲಿನ ಧರ್ಮಶಬ್ದವು ಶಾಸ್ತ್ರವಿಹಿತವಾದ ಸಂಧ್ಯಾವಂದನಾದಿ ಸರ್ವ ಧರ್ಮಪರವಾಗುವುದರಿಂದಲೂ ಅಶಕ್ತಿಯಿಂದ ಇಂಥಾ ಸರ್ವಧರ್ಮಪರಿತ್ಯಾಗವು ಕಾಣಲ್ಪಡಲಿಲ್ಲವಾದುದರಿಂದಲೂ ಮುಂದೇ ಹೇಳಲ್ಪಡುವ " ಸರ್ವಧರ್ಮಾನ್ಪರಿತ್ಯಜ್ಯಸ್ಥಿತಸ್ತ್ವಂ ,, ಎಂಬ ಅನುವಾದ ಪಕ್ಷವು ಅಸಂಗತವಾಗಲಾರದೋ? ಎಂದರೆ ಇಲ್ಲಿ ಈಪ್ರಕಾರವಾಗಿ ಸಾಧಾರಣಾ

ಕಾರದಿಂದ ಧರ್ಮಶಬ್ದವನ್ನು ಪ್ರಯೋಗಿಸಿದರೂ ಅದು ಮೋಕ್ಷಪ್ರಕರಣ ವಾಗಿರುವುದರಿಂದ ಮೋಕ್ಷಾರ್ಥವಾಗಿ ಶಾಸ್ತ್ರವಿಹಿತಗಳಾಗಿಯೂ ಸಪರಿಕರಗಳಾಗಿಯೂ ಇರುವ ನಾನಾಪ್ರಕಾರಗಳಾದ ಉಪಾಸನಗಳನ್ನು ಹೇಳುವುದರಲ್ಲಿ ತಾತ್ಪರ್ಯವಿರುವುದರಿಂದಸ್ವತಂತ್ರವಿಧಿಬಲಪ್ರಾಪ್ತವಾದ ಸಂಧ್ಯಾವಿತ್ಯಾಗವು ಇಲ್ಲಿ ಅರ್ಥವೆಂಬದಾಗಿ ಹೇಳಿವಕ್ಷ್ಯಮಾಣವಾದ ಅನುವಾದಪಕ್ಷಕ್ಕೆ ದೌರ್ಬಲ್ಯಕಲ್ಪನವು ಉಚಿತವಲ್ಲವು.

ಆದರೆ “ಯೋಮಾಮೇವಮಸಮ್ಮೂಢೋಜಾನಾತಿಪುರುಷೋತ್ತಮಂ । ಸಸರ್ವವಿದ್ಭಜತಿ ಮಾಂಸರ್ವಭಾವೇನಭಾರತ ॥ ಇತಿಗುಹ್ಯತಮಂಶಾಸ್ತ್ರಮಿದಮುಕ್ತಂಮಯಾನಘ। ಏತದ್ಬುಧ್ವಾಬುದ್ಧಿಮಾನ್ಸ್ಯಾತ್ಕೃತಕೃತ್ಯಶ್ಚಭಾರತ ॥ ಜನ್ಮಕರ್ಮಚಮೇದಿವ್ಯಮೇವಂಯೋವೇತ್ತಿತತ್ತ್ವತಃ।ತ್ಯಕ್ತ್ವಾದೇಹಂ ಪುನರ್ಜನ್ಮನೈತಿಮಾಮೇತಿಸೋಽರ್ಜುನ„ ಇತ್ಯಾದಿ ಗೀತಾವಾಕ್ಯದಿಂದಲೂ “ ಜಾತೋಽಪಾತ್ರವ್ಯತೋವಾಪಿಪಾಪಾನಾಮುತಿಪಾಪಕೃತ್ । ಮಮಲೋಕಮವಾಪ್ನೋತಿನಪುನರ್ಗರ್ಭಮೃಚ್ಛತಿ „ ಇತ್ಯಾದಿಪ್ರಮಾಣಾಂತರಗಳಿಂದಲೂ ಪ್ರತಿಪಾದಿತವಾದ ಅವತಾರ ರಹಸ್ಯಜ್ಞಾನ ದಿವ್ಯ ದೇಶವಾಸಾದಿಗಳಿಗೂ ಕೂಡ ಮೋಕ್ಷಸಾಧನತ್ವವನ್ನು ಹೇಳಿರುವುರಿಂದ ಮೋಕ್ಷಸಾಧನ ವಿದ್ಯಾಪರವಾದ ಬಹುವಚನಕ್ಕೆ ಇವು ಅರ್ಥವಾಗಲಾರವೊ ? ಎಂದರೆ ಪುರುಷೋತ್ತಮ ವಿದ್ಯೆಯಲ್ಲಿ ಪುರುಷೋತ್ತಮ ವೇದನಕ್ಕೆ ಮೋಕ್ಷಸಾಧನತ್ವ ವಚನವು ಪ್ರಾಶಸ್ತ್ಯವೆಂಬದಾಗಿ ಶ್ರೀಭಾಷ್ಯಕಾರರಾಂಗೀಕೃತವಾಗಿರುವುದರಿಂದಲೂ ಅವತಾರ ರಹಸ್ಯ ಜ್ಞಾನಕ್ಕೂ ಭಕ್ತಿದ್ವಾರಾ ಮೋಕ್ಷಪ್ರಾಪ್ತಿಯನ್ನು ಸ್ಥಿರಪಡಿಸಿರುವುದರಿಂದಲೂ “ ದುಷ್ಟೇಂದ್ರಿಯ ವಶಾಚ್ಚಿತ್ತಂ ನೃಣಾಂ ಯತ್ಕಲ್ಮಷೈರ್ವೃತಂ । ತದಂತಕಾಲೇಸಂಶುದ್ಧಿಂ ಯಾತಿ ನಾರಾಯಣಾಲಯೇ॥„ ಇತ್ಯಾದಿ ಪ್ರಮಾಣಗಳಿಂದ ದೇಶವಾಸಕ್ಕೆ ಮನೋನೈರ್ಮಲ್ಯದ್ವಾರಾ ಅಂತಿಮ ಪ್ರತ್ಯಯ ಪರ್ಯಂತವಾದ ಪರಮ ಭಕ್ತಿಹೇತುತ್ವವನ್ನು ಹೇಳಿರುವುದರಿಂದಲೂ ಅವತಾರ ರಹಸ್ಯ ದಿವ್ಯ ಕ್ಷೇತ್ರವಾಸಾದಿ ಧರ್ಮಗಳಿಗೆ ದಹರಾದಿ ವಿದ್ಯೆಗಳಂತೆ ಸಾಕ್ಷಾನ್ಮೋಕ್ಷಸಾಧನತ್ವವಿಲ್ಲವೆಂದು ಸಿದ್ಧಾಂತ ಪಡಿಸಿರುವುದರಿಂದ ಇವು ಬಹುವ

ಚನಾರ್ಥದಲ್ಲಿ ಸೇರಲಾರವೆಂದರಿಯಬೇಕು. ಸಾಕ್ಷಾನ್ಮೋಕ್ಷಸಾಧನ ಗಳಾದ ವಿದ್ಯಾಬಾಹುಳ್ಯದಿಂದಲೆ ಬಹುವಚನಕ್ಕೆ ಸಾರ್ಥಕ್ಯವಿರುವುದ ರಿಂದ ಪರಂಪರಯಾ ಸಾಧನಗಳಾದ ಪುರುಷೋತ್ತಮ ಜ್ಞಾನಾದಿಗ ಳನ್ನು ಇದರಲ್ಲಿ ಸೇರಿಸಬೇಕಾದ ನಿರ್ಬಂಧವು ನಿರ್ಮೂಲವಾಗಿರುವುದು. ಆದುದರಿಂದ ಈ ಬಹುವಚನಕ್ಕೆ ಸಾರ್ಥಕ್ಯವನ್ನು ಹೇಳುವುದಕ್ಕಾಗಿ ದೇಶವಾಸಾದಿಗಳಿಗೆ ಅಂಗಿತ್ವ ಸಮರ್ಥನವನ್ನು ಮಾಡುವುದಕ್ಕಿಂತಲೂ ಅವುಗಳಿಗೆ ಅಂಗತ್ವವನ್ನು ಸ್ವೀಕರಿಸಿ ಧರ್ಮಶಬ್ದದಿಂದ ಅಂಗಾಂಗಿಗಳ ನ್ನು ಹೇಳಿ ಬಹುವಚನದಿಂದ ಅವುಗಳ ಬಹುತ್ವವನ್ನು ಹೇಳುವುದ ರಲ್ಲಿ ಸಂಪ್ರದಾಯ ವಿರೋಧವಿಲ್ಲವೆಂದರಿಯಬೇಕು.

## —ಮೂ ॥ ಪರಿತ್ಯಜ್ಯ.—

ಅನಂತರದಲ್ಲಿ 'ಪರಿತ್ಯಜ್ಯ, ಎಂಬ ಪದಕ್ಕೆ ಅರ್ಥವರ್ಣನವು ಮಾಡಲ್ಪಡುವುದು. ಈ ಶಬ್ದದಲ್ಲಿ ಪರಿ ಎಂಬ ಉಪಸರ್ಗವೂ ಧಾತು ವೂ ಲ್ಯಪ್ ಪ್ರತ್ಯಯವೂ ಸೇರಿರುವುದರಿಂದ ಅವುಗಳಲ್ಲಿ ಮೊದಲು ಧಾ ತ್ವರ್ಥವು ಹೇಳಲ್ಪಡುವುದು. ಇಲ್ಲಿನ ತ್ಯಾಗವು ಯಾವದೆಂದರೆ "ಅನ ಯಾಚ ಪ್ರಪತ್ತ್ಯವಮಾಕಿಂಚನ್ಯೈಕ ಪೂರ್ವಕಂ,, ಇತ್ಯಾದಿ ಗಳಂತೆ ಅಕಿಂಚನನಾದ ತನ್ನ ಸ್ಥಿತಿಯನ್ನು ಕಂಡು ಉಪಾಯಾಂತರ ಗಳಲ್ಲಿ ಹುಟ್ಟಿರುವನೈರಾಶ್ಯವು, ಉಪಾಯಾಂತರವು ನನಿಗೆ ಫಲಸಾಧ ನವಾಗುವುದೆಂಬ ಆಶಾತ್ಯಾಗವೆ ತ್ಯಾಗ ಶಬ್ದಾರ್ಥವೆಂದರಿಯಬೇಕು. ಇ ದರಿಂದ ಅಕಿಂಚನನಾದ ಈ ಅಧಿಕಾರಿಗೆ ನೈರಾಶ್ಯವು ಸ್ವತಸ್ಸಿದ್ಧವಾಗಿ ರುವುದರಿಂದ(ಪರಿತ್ಯಜ್ಯಎಂಬುವುದು,,ಪರಿತ್ಯಜ್ಯಸ್ಥಿತಸ್ತ್ವಂ,,ಎಂಬ) ಅನುವಾದವೆಂತಲೆ ಸಿದ್ಧವಾಗುವುದು. ಆದರೂ ನೈರಾಶ್ಯವು ತ್ಯಾ ಗಶಬ್ದಾರ್ಥವಾಗುವುದೊ ? ಅಥವಾ ಆಶಾಮಾತ್ರವೂ ಕೂಡ ಅಕಿಂ ಚನಾಧಿಕಾರಿಯಲ್ಲಿ ಅಸಂಭಾವಿತವಾಗಿರುವುದರಿಂದ ಅದರ ತ್ಯಾಗವನ್ನು ತ್ಯಾಗ ಶಬ್ದಾರ್ಥವೆಂಬದಾಗಿ ಹೇಳುವುದು ಉಚಿತವಲ್ಲವೆಂದರೆ? ಆಶಾ ವಿಶೇಷದಿಂದ ಉಪಾಯಾಂತರ ಸಂಬಂಧ ವುಂಟಾಗುವ ಸಂದರ್ಭದಲ್ಲಿ ಆಶಾ (ಅಪೇಕ್ಷಾ) ತ್ಯಾಗವನ್ನು ತ್ಯಾಗಶಬ್ದಾರ್ಥವನ್ನಾಗಿ ಹೇಳುವು ದು ಉಚಿತವೆಂತಲೆ ತಿಳಿಯಬೇಕು.

ಈ ಪ್ರಕಾರವಾಗಿ ಉಪಾಯಾಂತರಗಳೇನು ಅವುಗಳ ಅಂಗಗಳೇನು, ಅವುಗಳ ಸಕಲ ನೈರಾಶ್ಯವು ತ್ಯಾಗಶಬ್ದಾರ್ಥವಾದರೆ 'ಪರಿ, ಶಬ್ದಕ್ಕೆ ಅರ್ಥವು ಯಾವುದೆಂದರೆ ನೈರಾಶ್ಯಾತಿಶಯವೇ 'ಪರಿ, ಎಂಬ ಉಪಸರ್ಗಾರ್ಥವೆಂಬದಾಗಿ ವಿವರಿಸಲ್ಪಡುವುದು. "ಅನಾಗತಾನಂತಕಾಲ ಸಮೀಕ್ಷಯಾಪ್ಯದೃಷ್ಟಸಂತಾರೋಪಾಯಃ - ತ್ವತ್ಪಾದಕಮಲಾದನ್ಯನ್ನ ಮೇ ಜನ್ಮಾಂತರೇಷ್ವಪಿ ,, ಇತ್ಯಾದಿಗಳಲ್ಲಿ ಪ್ರತಿಪಾದಿಸಿರುವಂತೆ ಅತ್ಯಂತಾಕಿಂಚನನಾದವನಿಗೆ ಸರ್ವಕಾಲದಲ್ಲಿಯೂ ಸರ್ವಪ್ರಕಾರದಿಂದಲೂ ಯೋಗ್ಯತಾರಾಹಿತ್ಯವನ್ನು ತಿಳಿಯುವುದರಿಂದುಂಟಾದ ನೈರಾಶ್ಯಾತಿಶಯವು ಪರಿಶಬ್ದಾರ್ಥತ್ವೇನ ಹೇಳಲ್ಪಡುವುದೆಂದು ತಾತ್ಪರ್ಯವು. ಆದರೂ ನೈರಾಶ್ಯಾತಿಶಯವು ಪರಿ ಎಂಬ ಉಪಸರ್ಗಾರ್ಥವೆಂಬದಾಗಿ ಹೇಳಬಹುದೋ ? ಆಶಾಭಾವಕ್ಕೆ ಅತಿಶಯವಿಲ್ಲವಷ್ಟೆ ? ಸರ್ವಪ್ರಕಾರದಿಂದಲೂ ತ್ಯಾಗಮಾಡುವಿಕೆಯೆ ನೈರಾಶ್ಯಾತಿಶಯವೆಂದರೆ ಆರೀತಿಯಾಗಿ ಹೇಳುವುದು ಉಚಿತವೋ ? ಎಂದರೆ ಪೂರ್ಣಾನುಷ್ಠಾನ ಶಕ್ತಿ ಇಲ್ಲದಕಾಲದಲ್ಲಿ ಯಥಾಶಕ್ತಿಯಾಗಿ ಅನುಷ್ಠಿಸುವೆವೆಂತಲೂ ಅದಕ್ಕೂ ಯೋಗ್ಯತೆಯಿಲ್ಲದ ದಶೆಯಲ್ಲಿ ಬೇರೆ ಕೆಲವು ಅನುಕಲ್ಪಗಳನ್ನಾದರೂ (ಅನುಕಲ್ಪವೆಂದರೆ ಮುಖ್ಯಕಲ್ಪವನ್ನು ಮಾಡುವುದಕ್ಕೆ ಯೋಗ್ಯತೆ ಇಲ್ಲದೆ ಇದ್ದರೆ ಅದರ ಸ್ಥಾನದಲ್ಲಿ ಅದಕ್ಕಿಂತಲೂ ನ್ಯೂನವಾದವುಗಳನ್ನು ಅನುಷ್ಠಿಸುವಿಕೆಯು) ಉಪಾಯಸಿದ್ಧಿಕಾರಿಯಾದ ಉಪಾಯಗಳನ್ನಾದರೂ ಅನುಷ್ಠಿಸುವೆವೆಂಬ ಇಂಥಾ ದುಷ್ಕರಗಳನ್ನು ವಿಷಯೀಕರಿಸುವ ದುರಾಶಾ ರಾಹಿತ್ಯವೆ ಸರ್ವಪ್ರಕಾರ ತ್ಯಾಗವೆಂಬದಾಗಿ ತಿಳಿದು ಪರಿಶಬ್ದಕ್ಕೆ ನೈರಾಶ್ಯಾತಿಶಯವನ್ನೆ ಅರ್ಥವನ್ನಾಗಿ ಹೇಳಬಹುದು. ಆದರೂಪರಿತ್ಯಜ್ಯವೆಂಬುವುದಕ್ಕೆ ಅಶಕ್ತ್ಯನುಸಂಧಾನಜನಿತ ನೈರಾಶ್ಯವರ್ಥವೆಂಬುವುದು ಉಚಿತವೋ? ಆವಾಗ ಅನುವಾದಮಾತ್ರವಾಗುವುದರಿಂದ ಅದು ನಿಷ್ಪ್ರಯೋಜನವಲ್ಲವೋ ? ಎಂದರೆ ಈ ಅನುವಾದ ಪಕ್ಷಸ್ವೀಕಾರಕ್ಕೆ ಆಕಿಂಚನ್ಯಾದಿ ರೂಪವಾದ ಅಧಿಕಾರವನ್ನು ತೋರಿಸುವಿಕೆಯೇ ಪ್ರಯೋಜನವಾಗಿರುವುದರಿಂದ ನಿಷ್ಪ್ರಯೋಜನತ್ವ ಶಂಕೆಗೆ ಅವಕಾಶವಿಲ್ಲವು. . ಈ ಪ್ರಕಾರವಾಗಿ ಅನುವಾದ

ಕ್ಕೆ ಈ ಅಧಿಕಾರದ್ಯೋತನವು ಪ್ರಯೋಜನವಾದರೆ ತ್ಯಾಗಾನು ವಾದ ಮಾತ್ರದಿಂದಲೆ ಅದು ಸಿದ್ಧವಾಗುವುದರಿಂದ 'ಪರಿ, ಎಂಬ ಉಪ ಸರ್ಗವು ವ್ಯರ್ಥವಲ್ಲವೋ ? ಎಂದರೆ ಅಧಿಕಾರ ಪೌಷ್ಕಲ್ಯವಿವಕ್ಷೆಯಿಂ ದ' ಪರಿ, ಎಂಬಉಪಸರ್ಗವು ಅಪೇಕ್ಷಿತವಾಗಿರುವುದರಿಂದ ವ್ಯರ್ಥವಾಗ ಲಾರದು.

ಆದರೂ " ಸ್ನಾತ್ವಾಭುಂಜೀತ,, ಎಂಬಂತೆ ಲ್ಯಪ್ಪಿಗೆ ವಿಧಾಯಕತ್ವ ವೆ ಅರ್ಥವಾಗಿರುವಲ್ಲಿ ಅನುವಾದ ಪರತ್ವೇನ ಅರ್ಥವರ್ಣನವು ಉಚಿತವೋ? ಎಂದರೆ " ಅನಿತ್ಯಮಸುಖಂ ಲೋಕಮಿಮಂಪ್ರಾಪ್ಯಭಜಸ್ವಮಾಂ,, ಎಂಬ ಸ್ಥಲದಲ್ಲಿ ವಿಧಿಪರವಲ್ಲದೆ ಪ್ರಾಪ್ಯವರ್ತಮಾನಸ್ತ್ವಂ ಎಂಬದಾಗಿ ಅನುವಾದ ರೂಪತ್ವೇನವ್ಯಾಖ್ಯಾನ ಮಾಡಲ್ಪಟ್ಟಂತೆ ಇಲ್ಲಿಯೂ ಪರಿತ್ಯ ಜ್ಯಸ್ಥಿತಸ್ತ್ವಂ, ಎಂಬದಾಗಿ ಅನುವಾದವಾಗಿ ಹೇಳುವುದು ಉಚಿತವೆಂ ತಲೆ ತಿಳಿಯಬೇಕು. ಲ್ಯಪ್ಪು ಅನುವಾದ ವಿಧಿಸಾಧಾರಣವಾಗಿರುವು ದರಿಂದ ಪ್ರಮಾಣಾಂತರ ಸಂವಾದವಿಲ್ಲದ ತ್ವಾಪ್ರಯೋಗಮಾತ್ರದಿಂದ ಸರ್ವಧರ್ಮಸ್ವರೂಪತ್ಯಾಗವು ಪ್ರಪತ್ತ್ಯಂಗತ್ವೇನ ವಿಧಿಸಲ್ಪಡುವುದೆಂ ದುಹೇಳುವುದು ಯುಕ್ತವಲ್ಲವು. ಈ ಪ್ರಕಾರವಾಗಿ ಅನುವಾದ ಪಕ್ಷ ದಲ್ಲಿ ನಿರ್ವಾಹವು ಹೇಳಲ್ಪಟ್ಟಿತು. ವಿಧಿಪರವಾಗಿ ಅರ್ಥವರ್ಣನವನ್ನು ಮಾಡುವ ಪಕ್ಷದಲ್ಲಿಯೂ ಈ ಮುಂದೆ ಹೇಳಲ್ಪಡುವ ನಿರ್ವಾಹವನ್ನ ರಿಯಬೇಕು. ಪರಿತ್ಯಜ್ಯ ಎಂಬುವುದು ವಿಧಿಯಾದಾಗ " ಅನಾದಿ ವಾಸನಾರೋಹಾದನೈಶ್ವರ್ಯಾತ್ಸ್ವಭಾವಜಾತ್ । ಮಲೀಮಕುಂಠಿತತ್ವಾ ಚ್ಚದೃಕ್ಕ್ರಿಯಾವಿಹಿತಿರ್ಹಿಯಾ ॥ ತತ್ಕಾರ್ಪಣ್ಯಂತದುದ್ಬೋಧೋದ್ವಿ ತೀಯಂಹ್ಯಂಗಮೀದೃಶಂ । ನಿಕ್ಷೇಪಪರ್ಯಾಯೋನ್ಯಾಸಃಪಂಚಾಂಗಸಂ ಯುತಃ ,, ಎಂಬೀರೀತಿಯಾಗಿ ಪ್ರಪತ್ತ್ಯಧ್ಯಾಯಾದಿಗಳಲ್ಲಿ ವಿಧಿಸುವ ಪ್ರಕಾರವಾಗಿ ಆ ಕಿಂಚನ್ಯಾನುಸಂಧಾನರೂಪವಾದ ಕಾರ್ಪಣ್ಯಾಂಗ ವನ್ನು ವಿಧಿಸುವುದೆಂದರೆ ಅರ್ಥವಿರೋಧಲ್ಲವು, ವಿಧಿಪಕ್ಷದಲ್ಲಿ ಶಾ ಸ್ತ್ರಾಂತರವಿರುದ್ಧವಾದತ್ಯಾಗ ವಿಧಿಗಿಂತಲೂ ಕಾರ್ಪಣ್ಯರೂಪಾಂಗವಿ

ಥಾನವೇ ಉಚಿತವೆಂದು ಭಾವವು. ಆದರೂ ವಿಧಿಪಕ್ಷದಲ್ಲಿ ಕಾರ್ಪಣ್ಯರೂಪವಾದ ಅಂಗವನ್ನು ಬೋಧಿಸುವ ಶಬ್ದವಿಲ್ಲವಾದುದರಿಂದ ಕಾರ್ಪಣ್ಯರೂಪಾಂಗ ವಿಧಾನೋಕ್ತಿಯು ಉಚಿತವೋ ? ಎಂದರೆ ಈ ಪಕ್ಷದಲ್ಲಿ ವಾಕ್ಯಾರ್ಥವನ್ನು “ ಸರ್ವಧರ್ಮಾನ್ಪರಿತ್ಯಜ್ಯ ,, ಎಂಬುವುದಕ್ಕೆ “ ಅಹಮಸ್ಮ್ಯಪರಾಧಾನಾಂ- ನಧರ್ಮನಿಷ್ಠೋಸ್ಮಿ ,, ಇತ್ಯಾದಿಗಳಂತೆ ಸರ್ವಧರ್ಮಗಳೂ ತನ್ನನ್ನು (ಸ್ವರೂಪಯೋಗ್ಯತಾ ಸಹಕಾರಿಯೋಗ್ಯತಾ ಎಂಬ ದ್ವಿವಿಧವಾದ) ಯೋಗ್ಯತಾ ಪರ್ಯಂತವಾಗಿ ಕಳದುಕೊಂಡಿರುವ ಪ್ರಕಾರವನ್ನು ಪುರಸ್ಕರಿಸಿಕೊಂಡೆಂದು ಅರ್ಥವನ್ನರಿಯಬೇಕು. ಸರ್ವಧರ್ಮಶಬ್ದವು ದ್ವಿತೀಯಾಂತವಾಗಿದ್ದರೂ ಷಷ್ಠೀವಿಭಕ್ತ್ಯರ್ಥವಾಗುವುದು. ಪರಿತ್ಯಜ್ಯಎಂಬುವುದು ತ್ಯಾಗಪುರಸ್ಕಾರವಾಚಿಯಾಗುತ ಸರ್ವಧರ್ಮಗಳಿಂದಲೂ ಮಾಡಲ್ಪಟ್ಟ ಸ್ವವಿಷಯ ತ್ಯಾಗವನ್ನು ಪುರಸ್ಕರಿಸಿಕೊಡೆಂಬದಾಗಿ ಕ್ಲಿಷ್ಟವೃತ್ತಿಯಿಂದ ಈ ನಿರ್ವಾಹವನ್ನರಿಯಬೇಕು. ಆದರೆ ವಿಧಿಪಕ್ಷದಲ್ಲಿ ಇಂಥಾ ಕ್ಲಿಷ್ಟಕಲ್ಪನಕ್ಕಿಂತಲೂ ಸ್ವರೂಪತ್ಯಾಗ ವಿಧಿಯು ಅವಿಲಂಬೇನ ತೋರುವ ಅರ್ಥವಾಗಿವುದರಿಂದ ಅದನ್ನು ತ್ಯಾಗಮಾಡಿ ಇಂಥಾ ಕ್ಲಿಷ್ಟಕಲ್ಪನವು ಉಚಿತವೋ ? ಎಂದರೆ ಇಷ್ಟು ವಿಲಂಬಿತ ಪ್ರತೀತಿಕವಾದ ಅರ್ಥವೂ ಅನೇಕ ಪ್ರಮಾಣಗಳಿಗೆ ಅನುಗುಣವಾಗಿರುವುದರಿಂದ ಶಂಕರಾದ್ಯುಕ್ತವಾದ ಬಹುಪ್ರಮಾಣವಿರುದ್ಧವಾಗಿರುವ ಸ್ವರೂಪತ್ಯಾಗಾದ್ಯರ್ಥಗಳಿಗಿಂತಲೂ ಶ್ರೇಷ್ಠವೆಂದರಿಯಬೇಕು. ತಾನನುಷ್ಠಿಸುವ ಶರಣಾಗತಿ ರೂಪವಾದ ಧರ್ಮಕ್ಕಾಗಿ ಯಾವ ಧರ್ಮಗಳನ್ನೂ ಅನುಷ್ಠಿಸ ಬೇಡವೆಂದು ಈ ಶರಣಾಗತಿಗೆ ಧರ್ಮಾಂತರ ನೈರಪೇಕ್ಷ್ಯವನ್ನು ಹೇಳುವುದರಲ್ಲಿ ವಿಧಿಪಕ್ಷಸ್ವಾರಸ್ಯವುಂಟೆಂದರಿಯಬೇಕು. ಈ ಪಕ್ಷದಲ್ಲಿ ತ್ಯಾಗವಚನದಿಂದಲೇ ನೈರಪೇಕ್ಷ್ಯವು ಸಿದ್ಧಿಸುವುದರಿಂದ ‘ ಪರಿ , ಎಂಬ ಉಪಸರ್ಗವು ವ್ಯರ್ಥವಲ್ಲವೋ ? ಎಂದರೆ ಈ ತ್ಯಾಗವಿಧಿ ಪಕ್ಷದಲ್ಲಿ ‘ ಪರಿ , ಎಂಬ ಉಪಸರ್ಗವು “ ಆಚಾಂತೇನ ಕರ್ತವ್ಯಂ ಶುಚಿನಾಕರ್ತವ್ಯಂ ,, ಇತ್ಯಾದಿಗಳಲ್ಲಿ ಹೇಳುವ ಸರ್ವಸಾಧಾರಣ ಯೋಗ್ಯತಾ ಪಾದಕಗಳಾದವುಗಳು ಕೂ

ಷ ಇದಕ್ಕೆ ಅಂಗತ್ವೇನ ಗ್ರಹಿಸಲ್ಪಡಲಾರವೆಂಬೀ ಅರ್ಥವನ್ನು ಬೋಧಿವುದು. ... ... ... *

ಆದರೂ ಸರ್ವಧರ್ಮ ಸ್ವರೂಪತ್ಯಾಗ ವಿಧಿಪಕ್ಷದಲ್ಲಿ ಶಾಸ್ತ್ರಾಂತರ ವಿರೋಧಗಳುಂಟಾದರೂ ಪ್ರಕರಣವಶದಿಂದ ಧರ್ಮಶಬ್ದವು ಮೋಕ್ಷಸಾಧನತ್ವೇನ ವಿಹಿತಗಳಾದ ಕರ್ಮಯೋಗಜ್ಞಾನಯೋಗ ಭಕ್ತಿಯೋಗಪರವಾಗಿ ಅವುಗಳ ತ್ಯಾಗವು ವಿಧೇಯವಾದರೆ ಶಾಸ್ತ್ರಾಂತರಾ ವಿರೋಧವೂ ಶಬ್ದಸ್ವಾರಸ್ಯವೂ ಪುಷ್ಕಲವಾಗುವುದಲ್ಲವೆ ? ಎಂದರೆ ಕರ್ಮಯೋಗಾದಿಗಳ ಸ್ವರೂಪತ್ಯಾಗವು ಪ್ರಪತ್ತಿಗೆ ಅಂಗವೆಂಬ ಪಕ್ಷದಲ್ಲಿ ಪ್ರಪತ್ತಿಯು ಸರ್ವಾಧಿಕಾರ ವಲ್ಲದೇ ಹೋಗುವುದು. ಧರ್ಮಾನುಷ್ಠಾನ ಶಕ್ತನಿಗಲ್ಲವೆ ಅದರ ತ್ಯಾಗವನ್ನು ವಿಧಿಸಬೇಕು. (ಅಶಕ್ತನಿಗೆ ತ್ಯಾಗವಿಧಿಯೇ ಅನಾವಶ್ಯಕವು.) ಇದನ್ನಂಗೀಕರಿಸುವ ಪಕ್ಷದಲ್ಲಿ ಬಹುಪ್ರಮಾಣ ಸಿದ್ಧವಾದ ಕಾರ್ಪಣ್ಯವೆಂಬ ಅಂಗಕ್ಕೂ "ನಧರ್ಮನಿಷ್ಠೋಸ್ಮಿ" ಇತ್ಯಾದಿಗಳಲ್ಲಿ ಪ್ರಸಿದ್ಧವಾದ ಅಕಿಂಚನಾಧಿಕಾರವೆಂಬ ಸಂಪ್ರದಾಯಕ್ಕೂ ವಿರೋಧವುಂಟಾಗುವುದು.

ಜೀವಾತ್ಮನು ಉಪಾಯಾಂತರಗಳಲ್ಲಿ ಭಗವತ್ಪರ ತಂತ್ರನಾಗಿರುವುದರಿಂದ ನಿತ್ಯಾಶಕ್ತನಾಗಿರುವಕಾರಣ ಅಂತವನನ್ನು ಕುರಿತು ತ್ಯಾಗವಿಧಿಪಕ್ಷದಲ್ಲಿ ಅಕಿಂಚನತ್ವಾಧಿಕಾರ ವಿರೋಧವಿಲ್ಲವೆಂದರೆ ಅದೂ ಯುಕ್ತವಲ್ಲವು. ಈ ರೀತಿಯಾಗಿ ಹೇಳುವುದರಲ್ಲಿ ಸರ್ವಶಾಸ್ತ್ರವಿರೋಧವೂ ಸ್ವವಚನ ವಿರೋಧವೂ ಸ್ವಪ್ರವೃತ್ತ್ಯಾದಿ ವಿರೋಧವೂ ಉಂಟಾಗುವುದು. ಅದು ಹೇಗೆಂದರೆ ? ಸರ್ವಧರ್ಮ ಸ್ವರೂಪ ತ್ಯಾಗವು ವಿಧಿಸಲ್ಪಟ್ಟರೆ ಉತ್ತರ ಕೃತ್ಯಗಳು ಕೂಡ ಸರ್ವಧರ್ಮಗಳಲ್ಲಿ ಅಡಗಿರುವುದರಿಂದ ಅವುಗಳನ್ನು ವಿಧಿಸುವ ಶಾಸ್ತ್ರಗಳಿಗೆ ಆನರ್ಥಕ್ಯ ವುಂಟಾಗುವುದು. ಉಪಾಯಾಂತರಗಳಲ್ಲಿ ಇವನು ನಿತ್ಯಾಶಕ್ತನೆಂಬದಾಗಿ ತೋರಿಸಿ ಅವನಿಗೇನೆ ಉಪಾಯಾಂತರ ತ್ಯಾಗವಿಧಿಯನ್ನು ಅರ್ಥವಾಗಿ ಹೇಳುವುದು ಸ್ವವಚನ ವಿರುದ್ಧವೂ ಆಗುವುದು. ಸ್ನಾನಸೂರ್ಧ್ವಪುಂಡ್ರ ಜಪಾದಿ ರೂಪಗಳಾದ ಸ್ವಪ್ರವೃತ್ತಿ ವಿರೋಧವೂ ಈ ಪಕ್ಷದಲ್ಲುಂಟಾಗುವುದು. ಕಿಂಚಿತ್ಕಿಷ್ಟಾನುಷ್ಠಾನವಿರೋಧವೂ ತುಲ್ಯನ್ಯಾಯದಿಂದ

ದ್ವಿತೀಯಪಾದದಲ್ಲಿ ವಿಧಿಸಲ್ಪಡುವ ವ್ರಜಎಂಬ ವಿಧಿ ವಿರೋಧವೂ ಉಂಟಾಗುವುದು. ಉಪಾಯಾಂತರಗಳಲ್ಲಿ ಜೀವನು ನಿತ್ಯಾಶಕ್ತನೆಂಬುವುದರಿಂದ “ಸರ್ವಧರ್ಮಾನ್ ಪರಿತ್ಯಜ್ಯಸ್ಥಿತಸ್ತ್ವಂ,, ಎಂಬ ಅನುವಾದ ಪಕ್ಷವೇ ಸ್ಥಿರೀಕರಿಸಲ್ಪಟ್ಟಂತೆ ಆಗುವುದು. ಅದು ಹೇಗೆಂದರೆ ? ಅಶಕ್ತನಾಗಿರುವುದರಿಂದಲೆ ತ್ಯಾಗವು ಸ್ವತಃ ಪ್ರಾಪ್ತವಾಗಿರುವ ಸಂದರ್ಭದಲ್ಲಿ ವಿಧಿಯು ಸಂಭವಿಸುವುದಿಲ್ಲವಾದುದರಿಂದ ಅನುವಾದ ಪಕ್ಷವೇ ಸ್ಥಿರೀಕೃತವಾಗುವುದೆಂದು ಭಾವವು.

ಆದರೆ ಶಕ್ತನನ್ನು ಕುರಿತು ತ್ಯಾಗವಿಧಿಯೆಂತಲೂ ಅಶಕ್ತನನ್ನು ಕುರಿತು ತ್ಯಾಗಾನುವಾದವೆಂತಲೂ ಹೇಳುವುದರಲ್ಲಿ ಬಾಧಕವೇನೆಂದು ಸಂದೇಹಿಸಬಹುದು ಏಕವಾಕ್ಯದಲ್ಲಿ ಏಕಪ್ರಯೋಗವು ಶಕ್ತನಿಗೆ ತ್ಯಾಗವಿಧಿಯಾಗಿಯೂ ಅಶಕ್ತನಿಗೆ ತ್ಯಾಗಾನುವಾದವಾಗಿಯೂ ಆಗಲಾರದು. ಈ ಪಕ್ಷದಲ್ಲಿ ಶಕ್ತನಿಗೆ ತ್ಯಾಗವಿಧಿ ಇರುವುದರಿಂದ ಅದರ ತ್ಯಾಗಪೂರ್ವಕವಾದ ಪ್ರಪತ್ತಿ ವಿಧಾನವೂ ಅವನಿಗೇನೆ “ಭಕ್ತ್ಯಾಪರಮಯಾವಾಪಿ ಪ್ರಪತ್ತ್ಯಾವಾ,, ಎಂಬೀರೀತಿಯಿಂದ ವಿಕಲ್ಪದಿಂದ ಉಪಾಯಾಂತರ ವಿಧಿಯೂ ಆಗಬಾರದೋ ? ಎಂದರೆ ಫಲದಲ್ಲಿ ವೈಷಮ್ಯವಿಲ್ಲದೆ ಅಧಿಕಾರಿಯೂ ಒಬ್ಬನೇ ಆಗಿರುವ ಸಂದರ್ಭದಲ್ಲಿ ಗುರುಲಘುವಿಕಲ್ಪವನ್ನು ಹೇಳುವುದು ಯುಕ್ತವಲ್ಲವು. ಅದು ಹೇಗೆಂದರೆ? ಗುರುವಾದ ಉಪಾಯದಲ್ಲಿ ಶಕ್ತನಾದವನಿಗೇನೆ ಅದರತ್ಯಾಗದಿಂದ ಕೂಡಿರುವ ಲಘೂಪಾಯವನ್ನು ವಿಧಿಸಿದರೆ ಗುರೂಪಾಯಾಧಿಕಾರಿಗಳು ಲೋಕದಲ್ಲಿ ಯಾರೂ ಇಲ್ಲದೇ ಹೋಗುವುದು ಮಾತ್ರವಲ್ಲದೆ ಬೇರೊಂದು ರೂಪದಿಂದ (ಜ್ಞಾನಮಾಂದ್ಯದಿಂದಲಾದರೂ ವಿಶ್ವಾಸಮಾಂದ್ಯದಿಂದಲಾದರೂ) ಅಧಿಕಾರ ಭೇದವನ್ನು ಸ್ಥಾಪಿಸುವುದು ಅಶಕ್ಯವಾಗಿಯೂ ಇರುವುದು. ಕಿಂಚಗುರೂಪಾಯ ವಿಧಾಯಕ ಶಾಸ್ತ್ರಗಳಿಗೆ ಅಪ್ರಮಾಣ್ಯವೂ ಉಂಟಾಗುವುದು. ... ... *

ಆದರೆ ಲೋಕದಲ್ಲಿ ರೋಗಿಯಾದ ಬಾಲನಿಗೆ ಒಂದುಔಷಧವನ್ನು ಪ್ರರೋಚನಾರ್ಥವಾಗಿ ವಿಧಿಸಿ ಅದನ್ನು ನಿಷೇಧಿಸಿ ಔಷಧಾಂತರವನ್ನು ಕೊಡುವ ರೀತಿಯಿಂದ ಶಕ್ತನಾದ ಅಧಿಕಾರಿ ವಿಷಯದಲ್ಲಿ ಪ್ರಪತ್ತಿಪ್ರ

ರೋಚನಾರ್ಥವಾಗಿ ಭಕ್ತ್ಯಾದ್ಯುಪಾಯಗಳನ್ನು ವಿಧಿಸಿ ಅವುಗಳನ್ನೇ ನಿಷೇಧಿಸುವೆವೆಂದರೆ ಬಾಧಕವೇನು ? ಎಂದರೆ ವಿರುದ್ಧ ದೃಷ್ಟಾಂತವುಳ್ಳ ಈ ಚೋದ್ಯವೇ ಯುಕ್ತವಲ್ಲವು, ಅದು ಹೇಗೆಂದರೆ ? ಲೋಕ ದೃಷ್ಟಾಂತವನ್ನು ಪರ್ಯಾಲೋಚಿಸಿ ನೋಡಿದರೆ ದುಷ್ಕರವಾದ ಔಷಧದಲ್ಲಿ ಪ್ರವೃತ್ತಿಯನ್ನುಂಟುಮಾಡುವುದಕ್ಕಾಗಿ ಸುಕರವಾದ ಔಷಧವನ್ನು ವಿಧಿಸಿ ಅದರ ನಿಷೇಧವಂ ಕಂಡಿರುವೆವು. ಸುಖಕರವಾದ ಔಷಧವನ್ನು ಭಕ್ಷಿಸುವುದಕ್ಕಾಗಿ ದುಷ್ಕರವಾದ ಔಷಧವನ್ನು ಕೊಡುವುದು ಲೋಕದಲ್ಲಿ ಎಲ್ಲಿಯೂ ತಟಸ್ಥಿಸಲಿಲ್ಲವು. ಆದ್ದರಿಂದ ಲಘೂಪಾಯ ಪ್ರರೋಚನಾರ್ಥವಾಗಿ ಗುರೂಪಾಯವನ್ನು ವಿಧಿಸಿ ಅದನ್ನೇ ನಿಷೇಧಿಸುವಿಕೆಯು ಅತ್ಯಂತಾನುಚಿತವು. ಲೋಕದಲ್ಲಿಯೂ ದುಷ್ಕರವಾದ ಔಷಧದಲ್ಲಿ ಪ್ರವೃತ್ತಿಯನ್ನುಂಟುಮಾಡುವುದಕ್ಕಾಗಿ ಸುಕರೌಷಧವನ್ನು ಕೊಟ್ಟು ಅದನ್ನು ನಿಷೇಧಿಸಿಯೇ ಸುಕರವಾದ ಔಷಧ ಪ್ರಯೋಗವನ್ನು ಕಂಡಿರುವೆವಾದ್ದರಿಂದ ಇಲ್ಲಿ ಗುರೂಪಾಯಪ್ರರೋಚನಾರ್ಥವಾಗಿ ಲಘೂಪಾಯ ವಿಧಿಯೂ ಅದರ ಪ್ರತಿಷೇಧವೂ ಯುಕ್ತವಾಗಿದ್ದರೂ ಲಘೂಪಾಯ ಪ್ರರೋಚನಾರ್ಥವಾಗಿ ಗುರೂಪಾಯವಿಧಿಯೂ ತನ್ನಿಷೇಧವೂ ಅಸಂಗತವೆಂದು ತಿಳಿಯಬೇಕು.

ಇಲ್ಲಿ ಲಘೂಪಾಯ ಪ್ರರೋಚನಾರ್ಥವಾಗಿ ವಸ್ತುತಃ ಉಪಾಯಗಳನ್ನು ಉಪಾಯತ್ವೇನ ವಿಧಿಸಿ ನಿಷೇಧಿಸುವುದೋ? ಲೋಕನ್ಯಾಯದಂತೆ ಉಪಾಯಗಳಲ್ಲದವುಗಳನ್ನು ಉಪಾಯತ್ವೇನವಿಧಿಸಿ ನಿಷೇಧಿಸುವುದೋ ? ಎಂಬೀ ವಿಕಲ್ಪದಲ್ಲಿ ವಸ್ತುತಃ ಉಪಾಯಗಳನ್ನು ಉಪಾಯತ್ವೇನ ವಿಧಿಸಿ ನಿಷೇಧಿಸುವುದೆಂಬ ಪಕ್ಷದಲ್ಲಿ ಇದುವರೆಗೂ ದೂಷಣವನ್ನು ಹೇಳಿ ಇನ್ನುಮುಂದೆ ಅನುಪಾಯಗಳನ್ನು ಉಪಾಯತ್ವೇನ ವಿಧಿಸಿ ನಿಷೇಧಿಸುವುದೆಂದರೆ ಅದೂ ಯುಕ್ತವಲ್ಲವೆಂದರಿಯಬೇಕು. ಅದು ಹೇಗೆಂದರೆ ? ಅನುಪಾಯಗಳನ್ನು ಉಪಾಯಗಳೆಂಬದಾಗಿ ವಿಧಿಸುವ ಸಂದರ್ಭದಲ್ಲಿ ಶ್ರುತಿಸ್ಮೃತಿಗಳು ಮೋಹನಶಾಸ್ತ್ರಗಳಾಗಿ ಪ್ರಸಂಗಿಸುವುವರಿಂದ ಶರಣ್ಯನ ಸ್ವರೂಪಾದಿಗಳೂ ಸಿದ್ಧಿಸಲಾರದೆ ಹೋಗುವುವು. ಶರಣ್ಯಸ್ವರೂಪಾದಿಗಳನ್ನು ಮೋಹನ ಶಾಸ್ತ್ರಗಳು ಯಥಾ

ವತ್ತಾಗಿ ಪ್ರತಿಪಾದಿಸಲಾರವಷ್ಟೆ. ಶರಣ್ಯಸ್ವರೂಪವನ್ನು ಬೋಧಿಸುವ ಶಾಸ್ತ್ರವೇ ಮೋಹನ ಶಾಸ್ತ್ರವಾದರೆ ಇನ್ನು ಯಾವದು ತಾನೆ ಅದನ್ನು ಬೋಧಿಸುವುದೆಂದು ತಾತ್ಪರ್ಯವು.

ಆದರೂ ಲೋಕದಲ್ಲಿ ಧನಾಪೇಕ್ಷೆಯೆಂಬ ಏಕಾಧಿಕಾರವುಳ್ಳ ಒಬ್ಬನಲ್ಲಿಯೇ ಧನಸಂಪಾಧನಕ್ಕೆ ಸಾಧನಗಳಾದ ಗುರುಲಘೂಪಾಯುಗಳಿಗೆ ವಿಕಲ್ಪವಿಲ್ಲವೋ ? ಎಂದರೆ ಅಲ್ಲಿಯೂ ಗುರೂಪಾಯುಗಳಾದ ಕೃಷಿವೊದಲಾದವುಗಳೂ, ಲಘೂಪಾಯುಗಳಾದ ರತ್ನವಣಿಜ್ಯಾದಿಗಗಳೂ ಏಕಾಧಿಕಾರಿ ವಿಷಯದಲ್ಲಿ ವಿಕಲ್ಪಿಸಲಾರವು. ರತ್ನ ಪರೀಕ್ಷಾಶಕ್ತಿರಹಿತರಿಗೆ ಕೃಷ್ಯಾದಿ ವ್ಯಾಪಾರದಲ್ಲಧಿಕಾರ ವೆಂಬದಾಗಿ ಭೇದವೇ ಇರುವುದರಿಂದ ಏಕಾಧಿಕಾರಿ ವಿಷಯದಲ್ಲಿ ವಿಕಲ್ಪವನ್ನು ಹೇಳುವುದು ಉಚಿತವಲ್ಲವು. ಅಧಿಕಾರ ವಿಶೇಷವ್ಯವಸ್ಥೆಯಿಂದಲೆ ವಿಕಲ್ಪವೆಂಬುವುದು ಲೋಕದಲ್ಲಿಯೂ ಪ್ರಸಿದ್ಧವಾದ ಅಂಶವಾಗಿಯೆ ಇರುವುದು. ಶ್ರೀವತ್ಸಾಂಕಮಿಶ್ರ ಚರಮಶ್ಲೋಕ ವ್ಯಾಖ್ಯಾನದಲ್ಲಿಯೂ ಏಕಾಧಿಕಾರಿಗೇನೆ ಗುರುಲಘೂಪಾಯ ವಿಧಾನವನ್ನು ಹೇಳಲಿಲ್ಲವು. ಇಲ್ಲಿ ಹೇಳಿರುವ ಅರ್ಥಗಳೇ ಅಧಿಕಾರ ಭೇದದಿಂದ ವಿಕಲ್ಪವೆ) ಅಲ್ಲಿಯೂ ಅಭಿಪ್ರೇತವಾಗಿರುವುದೆಂದರಿಯಬೇಕು. ... ... *

ಆದರೂ ಸಮಾವರ್ತನದಲ್ಲಿ ಏಕಾಧಿಕಾರಿ ವಿಷಯದಲ್ಲಿ ಗುರುಲಘುವಿಕಲ್ಪವನ್ನು ಕಾಣಲಿಲ್ಲವೋ ? ಎಂದರೆ ಅಲ್ಲಿನ ಗುರುಲಘುವಿಕಲ್ಪವು ಕೆಲವು ಅವಸ್ಥಾವಿಶೇಷಗಳಿಂದ ನಿಯತವೆಂದು ಸ್ವೀಕರಿಸದೆ ಹೋದರೆ ಗುರುವಿಧಾನಕ್ಕೆ ವೈಯರ್ಥ್ಯವೇ ಉಂಟಾಗುವುದರಲ್ಲಿ ಸಂದೇಹವಿಲ್ಲವು. ಅದರಂತೆ ಇಲ್ಲಿ ಅವಸ್ಥಾವಿಶೇಷಗಳ್ಯಾವವೆಂದರೆ ? ಕಾಲವಿಳಂಬವನ್ನು ಸಹಿಸದೆ ಇರುವಿಕೆಯೂ ಆಶಕ್ತ್ಯಾದಿಗಳೂ ಇವೆ.

ಆದರೂ ಮಂದವಾದ ಜ್ಞಾನವಿಶ್ವಾಸವುಳ್ಳವರು ಉಪಾಸನಾಧಿಕಾರಿಗಳು, ಪೂರ್ಣಜ್ಞಾನ ವಿಶ್ವಾಸವುಳ್ಳವರು ಪ್ರಪತ್ತ್ಯಧಿಕಾರಿಗಳಾಗುವರೆಂಬದಾಗಿ ಪ್ರಕೃತದಲ್ಲಿಯೂ ಅಧಿಕಾರಭೇದವಿರುವುದರಿಂದ ಗುರುಲಘೂಪಾಯವಿಕಲ್ಪವು ಯುಕ್ತವಾಗಿಯೆ ಇರುವುದು. ಆದುದರಿಂದ ಶಕ್ತನಿಗೇನೆ ತ್ಯಾಗವಿಶಿಷ್ಟಪ್ರಪತ್ತಿ ವಿಧಾನವು ಪಕ್ಷಕ್ಕೆ ಆಗಬಾರದೆಂದ

ರೆ ? ಈ ಚರಮಶ್ಲೋಕಕ್ಕೆ ಉಪದೇಶಕಾರಿಗಳಾಗಿಯೂ ಪರಮಾಸ್ತಿಕ
ರಾಗಿಯೂ ಇರುವ ಪೂರ್ಣಜ್ಞಾನ ವಿಶ್ವಾಸವುಳ್ಳ ವ್ಯಾಸಾದಿಗಳಿಗೆ ಉಪಾ
ಸನದಲ್ಲಿ ಅಧಿಕಾರವಿಲ್ಲದೇ ಹೋಗುವುದು. ಅವರಲ್ಲಿ ಪೂರ್ಣಜ್ಞಾನವಿಲ್ಲ
ದಿದ್ದರೆ ಉಪದೇಶವು ಭ್ರಾಂತಜಲ್ಪಿತವಾಗುವುದು, ಪರಮಾಸ್ತಿಕರಲ್ಲ
ದೇ ಹೋದರೆ ವಂಚಕನ ಉಪದೇಶ ವಾಗುವುದು. ಆದುದರಿಂದ ಇಂ
ತವರಿಗೆ ಜ್ಞಾನವಿಶ್ವಾಸ ಮಾಂದ್ಯವನ್ನು ಹೇಳುವುದು ಉಚಿತವಲ್ಲವು.
ಆದರೆ ಅವರು ಉಪದೇಶಕಾಲದಲ್ಲಿ ಪೂರ್ಣಜ್ಞಾನವಿಶ್ವಾಸಶಾಲಿಗಳಾಗಿಯೆ
ಇದ್ದರು, ಅನಂತರದಲ್ಲಿ ಮಂದಜ್ಞಾನವಿಶ್ವಾಸರಾದರೆಂಬುವುದಾಗಿ ಹೇಳು
ವುದಕ್ಕೂ ಕೂಡ ಯಾವ ಪ್ರಮಾಣವೂ ಆಧಾರವಾಗಲಾರದು.
ಆದರೂ ತಾವು ಪ್ರಪನ್ನರಾಗಿಯೆ ಲೋಕಸಂಗ್ರಹಾರ್ಥವಾಗಿ ಉಪಾಸ
ನವನ್ನು ಮಾಡಿದರೆಂದರೆ ಅವರವರ ಪ್ರಬಂಧಗಳಲ್ಲಿ ಇಂಥಾ ಅರ್ಥವ
ನ್ನು ಬೋಧಿಸುವ ಒಂದುವಚನವೂ ಇರುವುದಿಲ್ಲವು. ವಚನ ವಿಲ್ಲದಿ
ದ್ದರೂ ಕಾರ್ಯದಿಂದ ಕಲ್ಪಿಸುವೆವೆಂದರೆ ? ಅದರಲ್ಲಿ ಮಹಾ ಬಾಧಕವುಂ
ಟಾಗುವುದು. ತನ್ನ ಅಧಿಕಾರಕ್ಕೆ ನಿಷಿದ್ಧವಾದದ್ದನ್ನು ಲೋಕಸಂ
ಗ್ರಹಾರ್ಥವಾಗಿ ಅನುಷ್ಠಿಸಲಾರಂಭಿಸಿದರೆಸ್ವಾಧಿಕಾರವಿರುದ್ಧಾನುಷ್ಠಾ
ನವು ಇವನಿಗೆಪಾಪವಾಗುವುದುಮಾತ್ರವಲ್ಲದೆವಿರುದ್ಧಾನುಷ್ಠಾನವನ್ನು
ಮಾಡುವುದರಿಂದ ಇದುಲೋಕಸಂಗ್ರಹವನ್ನುಕೂಡ ಮಾಡಿದ್ದಾಗಲಾ
ರದು. ಆದರೆ ಲೋಕಸಂಗ್ರಹವು ಯಾವದೆಂದರೆ ? ಅದನ್ನು ಹೇಳು
ವೆನು ಕೇಳು. ತನಿಗೆ ಮಾರ್ಗ್ಗದ್ವಯವು ಶಾಸ್ತ್ರಾನು ಮತವಾದರೆ
ಅದರಲ್ಲಿಲೋಕರಿಗೆ ಶಕ್ಯವಾಗಿ ಅವರಿಗೆ ಹಿತವಾಗಿರುವದಾದ ಒಂದನ್ನು
ತಾನುಅನುಷ್ಠಿಸಿಲೋಕರನ್ನು ಅದರಲ್ಲಿ ದೃಢವಾಗಿ ಪ್ರತಿಷ್ಠಿಸುವಿಕೆ
ಯೇಲೋಕ ಸಂಗ್ರಹವೆಂಬದಾಗಿ "ಸಕ್ತಾಃಕರ್ಮ್ಮಣ್ಯವಿದ್ವಾಂಸೊ
ಯಥಾಕುರ್ವಂತಿಭಾರತ। ಕುರ್ಯಾದ್ವಿದ್ವಾಂಸ್ತಥಾ ಸಕ್ತಶ್ಚಿಕೀರ್ಷು
ರ್ಲೋಕಸಂಗ್ರಹಂ ,, (೩॥೨೫॥) ಎಂಬದಾಗಿ ಹಿಂದೆ ಅಭಿಪ್ರೇತ
ವಾಗಿರುವುದು. ಅಲ್ಲದೆ ಸನ್ನ್ಯಾಸಿಗೆ ನಿಷಿದ್ಧವಾದ ಗೃಹಸ್ಥಧರ್ಮ್ಮವ
ನ್ನು ಸನ್ನ್ಯಾಸಿಯು ಅನುಷ್ಠಿಸಿತೋರಿಸುವುದು ಲೋಕಸಂಗ್ರಹ
ವಾಗುವುದೊ ? ಇದು ಆಜ್ಞಾತಿಲಂಘನವೇ ಆಗುವುದು. ಈ ಪ್ರಕಾರ

ವಾಗಿಯೆ ಪ್ರಪತ್ತ್ಯಧಿಕಾರಿಯು ತನಿಗೆ ನಿಷಿದ್ಧವಾದವುಗಳನ್ನು ಕೈಂಕರ್ಯಬುದ್ಧಿಯಿಂದ ಅನುಷ್ಠಿಸುವಿಕೆಯೂ ತನ್ನ ಅಧಿಕಾರಕ್ಕೆ ವಿರುದ್ಧವಾಗುವುದು. ಆದರೆ ನಿಮ್ಮ ಪಕ್ಷದಲ್ಲಿ ಯಾವ ಧರ್ಮಗಳನ್ನು ಕೈಂಕರ್ಯಬುದ್ಧಿಯಿಂದ ಅನುಷ್ಠಿಸುತ್ತಾರೆಂದರೆ ಪ್ರಪತ್ತಿಗೆ ಅನಪೇಕ್ಷಿತವಾದ ಶಾಸ್ತ್ರೀಯ ಧರ್ಮಗಳನ್ನು ಕೈಂಕರ್ಯ ಬುದ್ಧಿಯಿಂದ ಅನುಷ್ಠಿಸುವಂತವರಿಗೆ ಯಾವ ವಿರೋಧವೂ ಇರುವುದಿಲ್ಲವೆಂದು ಸಮಾಧಾನವನ್ನರಿಯಬೇಕು. ಪ್ರಪತ್ತಿಗೆ ಅನಪೇಕ್ಷಿತವಾಗಿದ್ದರೂ ವರ್ಣಾಶ್ರಮ ಧರ್ಮಪರಿಪಾಲನವು ಪ್ರಪನ್ನನಿಗೆ ಶಾಸ್ತ್ರವಿಹಿತವಾಗಿರುವುದರಿಂದ ಅದು ಆವಶ್ಯಕರ್ತವ್ಯವೇ ಎಂದರ್ಥವು. ... ... *

ಆದರೆ ಕರ್ಮಯೋಗಾದಿಸರ್ವಧರ್ಮ ತ್ಯಾಗವಿಧಿಯನ್ನು ಹೇಳುವಪಕ್ಷದಲ್ಲಿ ಶರಣಾಗತಿಗೆ ಸರ್ವಾಧಿಕಾರತ್ವ ಭಂಗವು ಪ್ರಾಪ್ತವಾಗುವುದೆಂಬ ನಿಮ್ಮ ಆಕ್ಷೇಪವು ಯುಕ್ತವೇಸರಿ, ಅದಕ್ಕಾಗಿ ತಮ್ಮ ತಮ್ಮ ಜಾತ್ಯಾದಿಗಳಿಗೆ ಅನುರೂಪಗಳಾಗಿಯೂ ತಮ್ಮ ತಮ್ಮಗಳಿಗೆ ಶಕ್ಯಗಳಾಗಿಯೂ ಇರುವ ಸರ್ವಧರ್ಮಗಳ ಸ್ವರೂಪತ್ಯಾಗವು ಪ್ರಪತ್ತ್ಯಂಗತ್ವೇನ ವಿಧಿಸಲ್ಪಡುವುದೆಂದರೆ ಪ್ರಪತ್ತ್ಯುತ್ತರ ಕಾಲದಲ್ಲಿ ತನ್ನ ವರ್ಣಾಶ್ರಮಾದ್ಯಧಿಕಾರೋಚಿತವಾದ ಕೈಂಕರ್ಯಫಲವನ್ನು ಬಿಟ್ಟು ಅಹಿಂಸಾಸತ್ಯ ವಚನಾದಿ ಸಾಮಾನ್ಯ ಧರ್ಮಗಳನ್ನೂ ಆಚಾರ್ಯ ವಂದನಾದಿಗಳನ್ನೂ ಕೂಡ ಬಿಟ್ಟು ಪಶುಮೃಗ ಪಕ್ಷ್ಯಾದಿಗಳಂತೆ ತಿರುಗುತಲಿರಬೇಕಾಗಿ ಬರುವುದು. ಆದುದರಿಂದ ಉಪಾಯಾಂತರ ಶಕ್ತನಿಗೆ ಉಪಾಯಾಂತರ ತ್ಯಾಗವಿಶಿಷ್ಟ ಪ್ರಪತ್ತಿವಿಧಾನದಲ್ಲಿ ದೋಷವು ಪ್ರಸಕ್ತವಾದರೂ ಸ್ವಸ್ವವಿಹಿತವಾದ ತಮ್ಮ ತಮ್ಮಗಳಿಗೆ ಶಕ್ಯವಾಗಿಯೂ ಇರುವ ಯಾವದ್ಧರ್ಮತ್ಯಾಗಾಂಗಕಪ್ರಪತ್ತಿವಿಧಿಪಕ್ಷವು ಉಚಿತವಲ್ಲವೆಂದರಿಯಬೇಕು.

ಆದರೆ ಲೋಕದಲ್ಲಿ ಪ್ರವೃತ್ತಿ ಧರ್ಮವೆಂತಲೂ ನಿವೃತ್ತಿ ಧರ್ಮವೆಂತಲೂ ಎರಡುಧರ್ಮಗಳಿರುವುವು. ಪ್ರವೃತ್ತಿ ಧರ್ಮವೆಂದರೆ ಇದನ್ನು ಮಾಡೆಂದುಶಾಸ್ತ್ರವಿಹಿತವಾದದ್ದು. ನಿವೃತ್ತಿ ಧರ್ಮವೆಂದರೆ ಇದನ್ನು ಮಾಡಬೇಡವೆಂಬದಾಗಿ ಶಾಸ್ತ್ರದಲ್ಲಿ ನಿಷೇಧಿಸಿರುವುದು. ಇದನ್ನು ಮಾಡೆಂದು ವಿಧಿಸಿರುವ ಪ್ರವೃತ್ತಿ ಧರ್ಮವು ಸ್ವರಕ್ಷಣಾರ್ಥವಾದ ವ್ಯಾಪಾರವಾಗಿದ್ದರೂ

ನಿವೃತ್ತಿರೂಪ ಧರ್ಮವು ಸ್ವರಕ್ಷಣಾರ್ಥ ಸ್ವವ್ಯಾಪಾರವಲ್ಲವಾದ್ದುದರಿಂದ (ಎಂಪರೆ ? ನಿವೃತ್ತಿರೂಪವಾಗಿರುವುದರಿಂದ ನಿವೃತ್ತಿರೂಪ ಧರ್ಮಗಗಳಲ್ಲಿ ಸ್ವರಕ್ಷಣಾರ್ಥ ಸ್ವವ್ಯಾಪಾರತ್ವವಿಲ್ಲವು. ಸ್ವರಕ್ಷಣಾರ್ಥವ್ಯಾಪಾರವಿದ್ದರೆ ಯಲ್ಲವೆ ಪ್ರಪತ್ತಿಯೊಡನೆ ವಿರೋಧಿಸುವುದು. ಆದ್ದರಿಂದ) ಪ್ರವೃತ್ತಿರೂಪ ಧರ್ಮತ್ಯಾಗವೇ ವಿವಕ್ಷಿತವಾಗಲಾರದೋ ? ಎಂದರೆ ಅದೂ ಉಚಿತವಲ್ಲವು. ನಿವೃತ್ತಿಯೂ ವ್ಯಾಪಾರ ವಿಶೇಷವೆಂತಲೂ ಅದು ಸ್ವರಕ್ಷಣಾರ್ಥವಾಗುವುದೆಂತಲೂ ಏರ್ಪಟ್ಟ ಅಂಶವು ಲೋಕವೇದ ಸಿದ್ಧಗಳಲ್ಲವೆ. ಅದು ಹೇಗೆಂದರೆ ? ಲೋಕದಲ್ಲಿ ವಿಷಮಿಶ್ರವಾದ ಅನ್ನಭಕ್ಷಣದಲ್ಲಿ ಒಬ್ಬನು ಪ್ರವೃತ್ತಿಸುವನು; ಆದರೆ ಅದನ್ನು ತಿಂದರೆ ಮರಣವಾಗುವುದೆಂದು ತಿಳಿದು ಅದರಿಂದ ನಿವೃತ್ತಿಸಿದರೆ ವಿಷದಿಂದ ಕೂಡಿರುವ ಅನ್ನಭಕ್ಷಣ ನಿವೃತ್ತಿಯು ಸ್ವರಕ್ಷಣಾರ್ಥವ್ಯಾಪಾರವಾಗುವುದರಲ್ಲಿ ಸಂದೇಹವೇನು ? ಕಿಂಚ " ಐಶ್ವರ್ಯಂಸಂತತಿಂವಾಪಿಮುಕ್ತಿಂವಾಯದ್ಯದಿಚ್ಛತಿ । ಏಕಾದಶ್ಯುಪವಾಸೇನತತ್ಸರ್ವಂಲಭತೆನರಃ " ಇತ್ಯಾದಿ ಶಾಸ್ತ್ರದಿಂದ ನಿಷಿದ್ಧವಾದ ಏಕಾದಶ್ಯನ್ನಭಕ್ಷಣನಿವೃತ್ತಿಯಿಂದ ಐಶ್ವರ್ಯವೇನು, ಸಂತಾನವೇನು, ಮೋಕ್ಷವೇನು. ಇನ್ನು ಇವನಿಗೆ ಅಪೇಕ್ಷಿತಗಳ್ಯಾವವೊ ಅವೆಲ್ಲವೂ ಪ್ರಾಪ್ತವಾಗುವುದೆಂದು ಹೇಳಿರುವುದರಿಂದ ಇದುಕೂಡ ಸ್ವರಕ್ಷಣಾರ್ಥಸ್ವವ್ಯಾಪಾರವಲ್ಲವೆ? ಮತ್ತು ರಾಜಾಪರಾಧ ನಿವೃತ್ತಿಯೂ ಸ್ವರಕ್ಷಣಾರ್ಥವ್ಯಾಪಾರವಲ್ಲವೆ ? ಹಿಂಸಾನಿವೃತ್ತಿಯೂ ತನಗೆ ನರಕನಿವೃತ್ತಿಗಾಗಿ ಆಗಲಾರದೆ ? ಆದುದರಿಂದ ನಿವೃತ್ತಿಯೂ ವ್ಯಾಪಾರ ವಿಶೇಷವೆಂತಲೂ ಅದು ಸ್ವರಕ್ಷಣಾರ್ಥವ್ಯಾಪಾರವೆಂತಲೂ ತಿಳಿಯುವುದರಲ್ಲಿ ಯಾವ ಆಕ್ಷೇಪವೂ ಇಲ್ಲವಾದುದರಿಂದ ನಿವೃತ್ತಿ ರೂಪ ಧರ್ಮತ್ಯಾಗವನ್ನು ಹೇಳುವುದೂ ಉಚಿತವಲ್ಲವು.

ಆದರೂ ಅಗ್ನೀಷೋಮೀಯಾದಿ ಯಾಗಗಳಲ್ಲಿ ವಿಧಿಸಿದ್ಧವಾದ ಪಶುಹಿಂಸಾದಿಗಳು ಹೇಗಾದರೆ ಉಪಾದೇಯಗಳೋ ಅದರಂತೆ ಇಲ್ಲಿನ ತ್ಯಾಗವಿಧಿಬಲದಿಂದ ಸರ್ವಧರ್ಮಗಳನ್ನು ಬಿಟ್ಟು ಪಶುಮೃಗಪಕ್ಷ್ಯಾದಿಗಳಂತೆ ತಿರುಗುತಲಿರುವುದೆ ಪ್ರಪನ್ನನಿಗೆ ಶಾಸ್ತ್ರಾರ್ಥವಾಗಲಾರದೊ ? ಎಂ

ದರೆ ಪ್ರಸನ್ನರಾದ ಪೂರ್ವಿಕರೂ ಈಗಿನ ಮಹನೀಯರೆಲ್ಲರೂ ಮಹಾ ಜಾಗರೂಕರಾಗಿ ಮಾಡುವ ಕೈಂಕರ್ಯಗಳೆಲ್ಲವೂ ವಿರುದ್ಧಾನು ಷ್ಠಾನವಾಗುವುದರಿಂದ ನೀವು ಹೇಳಿದ್ದು ಶಾಸ್ತ್ರಾರ್ಥವಾಗಲಾರದು. ಆದರೆ ಪ್ರಸನ್ನರಾದ ಪೂರ್ವಿಕರೂ ಈಗಿನ ಮಹನೀಯರೂ ಭ್ರಮವಿ ಪ್ರಲಂಭಾದಿ(ಭ್ರಮವೆಂದರೆಅಜ್ಞಾನವು ಅಥವಾಅನ್ಯಥಾ ಜ್ಞಾನವು.ವಿಪ್ರ ಲಂಭವೆಂದರೆ ವಂಚನೆಯು.) ಗಳಿಂದ ಸಾವಧಾನರಾಗಿ ಕೈಂಕರ್ಯಾದಿ ಗಳನ್ನು ಮಾಡುತ್ತಾರೆಂದರೆ ಶಾಸ್ತ್ರವಿರುದ್ಧವಾದ ತ್ಯಾಗವನ್ನು ನೀವು ಹೇಳುವುದಕ್ಕಾಗಿ ಶಾಸ್ತ್ರಪ್ರಮಾಣವನ್ನನುಸರಿಸಿ ಪ್ರಪತ್ತಿಸಂ ಪ್ರದಾಯಪ್ರವರ್ತಕರಾಗಿಯೂ ಪರಮಕಾರುಣಿಕರಾಗಿಯೂ ಇರುವಂ ತವರಿಗೆ ಭ್ರಮವಿಪ್ರಲಂಭಾದಿ ದೋಷಗಳನ್ನು ಕಲ್ಪಿಸುವುದು ಉಚಿತ ವಲ್ಲವು. ಪ್ರಮಾಣಾನುಸಾರವಾಗಿ ಪ್ರಪತ್ತಿ ಸಂಪ್ರದಾಯ ಪ್ರವರ್ತಕ ರಾದವರಿಗೆ ಅಜ್ಞಾನವೂ ಇಲ್ಲವು. ಪರಮ ಕಾರುಣಿಕರಾದವರಿಗೆ ಅನ್ಯ ರನ್ನು ವಂಚಿಸುವ ಅಪೇಕ್ಷೆಯೂ ಇಲ್ಲವು. ಆದುದರಿಂದ ಪೂರ್ವಿಕರಾದ ಮಹಾತ್ಮರಿಗೂ ಈಗಿನ ಶಿಷ್ಟಜನರಿಗೂ ಭ್ರಮಾದಿಗಳನ್ನು ಕಲ್ಪಿಸು ವುದು ಯೆಷ್ಟು ಮಾತ್ರವೂ ಉಚಿತವಲ್ಲವು.

ಆದರೂ ಯಾವಜ್ಜೀವವು ಸರ್ವಧರ್ಮ ತ್ಯಾಗವನ್ನು ಹೇಳಿದರೆತಾ ನೆ ಪಶುವೃತ್ತ್ಯಾದಿಗಳು ಬರುವುವು. ಪ್ರಪತ್ತ್ಯನುಷ್ಠಾನಕ್ಷಣದಲ್ಲಿ ಸರ್ವಧರ್ಮತ್ಯಾಗವನ್ನು ಹೇಳುವ ಪಕ್ಷದಲ್ಲಿ ಯಾವ ವಿರೋಧವೂ ಇಲ್ಲ ವೆಂದರೆ ಈ ಪ್ರಕಾರವಾಗಿ ಹೇಳುವಂತವರನ್ನು ಕುರಿತು ಇಲ್ಲಿ ಸ್ವಲ್ಪ ವಿಚಾರಿಸಬೇಕಾಗಿರುವುದು. ಅದು ಯಾವದೆಂದರೆ ? ಪ್ರಪತ್ತಿ ಕಾಲದಲ್ಲಿ ಅಸಂಭಾವಿತಗಳಾದ ಧರ್ಮತ್ಯಾಗವು ನಿಮ್ಮ ಅಭಿಪ್ರಾಯವೋ ? ಅಥ ವಾ ತತ್ಕಾಲದಲ್ಲಿ ಸಂಭಾವಿತಗಳಾದ ಧರ್ಮಗಳ ತ್ಯಾಗವು ನಿಮ್ಮ ಅಭಿ ಪ್ರಾಯವೋ? ಎಂಬ ವಿಕಲ್ಪದಲ್ಲಿ ಆಕಾಲದಲ್ಲಿ ಅಸಂಭಾವಿತ ಧರ್ಮತ್ಯಾ ಗವು ಅಪ್ರಸಕ್ತ ಪ್ರತಿಷೇಧ ರೂಪವಾಗುವುದರಿಂದ ವಿಧಿ ವಿಷಯವಾ ಗಲಾರದು. ಸಂಭಾವಿತ ಧರ್ಮಗಳ ಸ್ವರೂಪ ತ್ಯಾಗವು ವಿಧೇಯವಾಗು ವ ಪಕ್ಷದಲ್ಲಿ ತಾತ್ಕಾಲಿಕವಾದ ಭಗವತ್ಕ್ಷೇತ್ರವಾಸ ಶಿಖಾಯಜ್ಞೋ ಪವೀತ ಊರ್ಧ್ವಪುಂಡ್ರಧಾರಣಾದಿಗಳೆಲ್ಲವೂ ಪ್ರಪತ್ತಿಕಾಲದಲ್ಲಿ ಸಂ

ಭಾವಿತ ಧರ್ಮಗಳಾದುದರಿಂದ ಅವುಗಳನ್ನೆಲ್ಲಾ ತ್ಯಾಗಮಾಡಿಯೇ ಪ್ರಪತ್ತಿಮಾಡಬೇಕಾಗಿ ಬರುವುದು. ಆದುದರಿಂದ ಆ ಕಾಲದಲ್ಲಿ ಸಂಭಾವಿತ ಧರ್ಮಗಳ ಸ್ವರೂಪ ತ್ಯಾಗವು ವಿಧೇಯವೆಂಬುವುದು ಅತ್ಯಂತಾನುಚಿತವಾಗಿರುವುದು.

ಆದರೆ ಯಾವ ಚೋದ್ಯವನ್ನು ಮಾಡಿದರೂ ನೀವು ಖಂಡಿಸುತ ಬರುವುದರಿಂದ ಸತ್ಸಂಪ್ರದಾಯ ಸಿದ್ಧವೆಂಬದಾಗಿ ನೀವು ಹೇಳುವ ತ್ಯಾಗವಿಧಿ ಪಕ್ಷಕ್ಕೆ ಉಚಿತವಾದ ಅರ್ಥವನ್ನು ತಿಳಿಸಬೇಕೆಂದರೆ ? ಅದನ್ನು ವಿವರಿಸುವೆನು. ಸ್ವರೂಪ ತ್ಯಾಗಾದಿ ರೂಪಗಳಾದ ಅರ್ಥಗಳಲ್ಲಿ ಅನುಪಪತ್ತಿಗಳು ಅನೇಕವಾಗಿ ತೋರುವುದರಿಂದ ಉಪಾಸನದಲ್ಲಿ ಪ್ರಾಪ್ತವಾಗುವ ಕರ್ಮಾದ್ಯಂಗಗಳಿಂದ ನಿರಪೇಕ್ಷವಾಗಿರುವ ಶರಣಾಗತಿಗೆ ಅಂಗತ್ವೇನ ಯಾವ ಧರ್ಮಗಳನ್ನು ಆಶ್ರಯಿಸಬೇಡವೆಂಬುವುದೇ ಈ ತ್ಯಾಗ ವಿಧಿಪಕ್ಷಕ್ಕೆ ಉಚಿತವಾದ ಅರ್ಥವು.

ಆದರೂ ಈ ಪ್ರಕಾರವಾಗಿ ವಿಧಿಪಕ್ಷವನ್ನು ನಿರ್ವಹಿಸುವುದಾದರೆ ಅಧಿಕಾರವನ್ನು ಹೇಳದೇ ಇರುವುದರಿಂದ ಸರ್ವಾಧಿಕಾರಾಸಿದ್ಧಿಯು ಪ್ರಸಂಗಿಸಲಾರದೊ ? ವಿಶೇಷೋಕ್ತಿ ಇಲ್ಲವಾದುದರಿಂದ ಸರ್ವಾಧಿಕಾರತ್ವವು ಸಿದ್ಧಿಸುವುದೆಂದರೆ ? ಆವಾಗ ಉಪಾಯಾಂತರ ಸಮರ್ಥನಿಗೂ ಕೂಡ ಪ್ರಪತ್ತ್ಯಧಿಕಾರ ಪ್ರಸಂಗವಿಲ್ಲವೊ ? ಎಂದರೆ ? ಕಾರ್ಪಣ್ಯ ರೂಪಾಂಗ ವಿಧಿಪಕ್ಷದಂತೆ ಈ ನೈರಪೇಕ್ಷ್ಯವಿಧಿ ಪಕ್ಷದಲ್ಲಿಯೂ ಕೂಡಉಪಾಯಾಂತರ ಸಾಮರ್ಥ್ಯವಿಲ್ಲದವರಿಗೂ ಒಂದುವೇಳೇ ಅದು ಇದ್ದರೂ ಕಾಲವಿಳಂಬವನ್ನು ಸಹಿಸಲಶಕ್ತರಿಗೂ ಪ್ರಪತ್ತಿಯಲ್ಲಧಿಕಾರವುಂಟು.

ಆದರೂ ಈರೀತಿಯಾಗಿ ವಿಧಿಪಕ್ಷದಲ್ಲಿ ಸರ್ವಧರ್ಮನೈರಪೇಕ್ಷ್ಯದಲ್ಲಿ ತಾತ್ಪರ್ಯವರ್ಣನ ಮಾಡುವುದಕ್ಕಿಂತಲೂ ಸರ್ವಧರ್ಮ ಸ್ವರೂಪ ತ್ಯಾಗ ವಿಧಿಯಲ್ಲಿಯೇ ಶಬ್ದಸ್ವಾರಸ್ಯವಧಿಕವಾಗಿರುವುದರಿಂದ ನೈರಪೇಕ್ಷ್ಯವಿಧಿ ಪಕ್ಷದಲ್ಲಿ ಶಬ್ದಸ್ವಾರಸ್ಯ ಭಂಗವಿಲ್ಲವೊ ? ಎಂದರೆ ಸ್ವಲ್ಪವಾದ ಶಬ್ದಸ್ವಾರಸ್ಯ ಮಾತ್ರದಿಂದ ಸರ್ವಪ್ರಮಾಣ ವಿರುದ್ಧವಾದ ಅರ್ಥವನ್ನು ಹೇಳುವುದಕ್ಕಿಂತಲೂ ಈ ಪ್ರಕಾರವಾಗಿ ಅರ್ಥವನ್ನು

ಹೇಳುವುದಾದರೆ ಯಾವ ಪ್ರಮಾಣಗಳಿಗೂ ವಿರೋಧವಿಲ್ಲವು. ವಿಳಂಬವನ್ನು ಸಹಿಸುವಂತವರಿಗೆ ಉಪಾಸನಾನುಷ್ಠಾನ ವಿರುವುದರಿಂದ ಉಪಾಸನ ಶಾಸ್ತ್ರಕ್ಕೆ ಅನನುಷ್ಠಾನ ರೂಪವಾದ ಅಪ್ರಾಮಾಣ್ಯವಿಲ್ಲವು. ಶರಣಾಗತಿಗೆ ಅಶಕ್ತಾಧಿಕಾರವನ್ನು ಬೋಧಿಸುವ ಶಾಸ್ತ್ರಕ್ಕೂ ವಿರೋಧವಿಲ್ಲವು. ವಿಕಲ್ಪಾನುಷ್ಠಾನಕ್ಕೆ ಅಧಿಕಾರ ಭೇದವಿರುವುದರಿಂದ ಅನುಪಪತ್ತಿಯೂ ಇಲ್ಲವೆಂದು ತಾತ್ಪರ್ಯವು.

ಆದರೂ ಪೂರ್ವೀಕರಲ್ಲಿ ಕೆಲವರು ಸರ್ವಧರ್ಮಸ್ವರೂಪ ತ್ಯಾಗವು ಪ್ರಪತ್ತ್ಯಂಗವೆಂತಲೂ ಕೆಲವರು ಅದುಅಂಗವಲ್ಲವೆಂತಲೂ ವಿವಾದ ಮಾಡಲಿಲ್ಲವೋ ? ಈ ವಿವಾದವನ್ನು ಶ್ರೀಭಾಷ್ಯಕಾರರು ನಿವಾರಣ ಮಾಡದೆ ಇದ್ದುದ್ದರಿಂದ ಸರ್ವಧರ್ಮಸ್ವರೂಪ ತ್ಯಾಗವು ಶ್ರೀಭಾಷ್ಯಕಾರರಿಗೆ ಸಮ್ಮತವಲ್ಲವೋ? ಎಂದರೆ ಪೂರ್ವಾಚಾರ್ಯರು ಇಂಥಾವಿವಾದವನ್ನು ಮಾಡಲೇ ಇಲ್ಲವು; ಪ್ರಪತ್ತ್ಯಧಿಕಾರವಾದ ಆಕಿಂಚನ್ಯವೂ ಪ್ರಪತ್ತಿಯನ್ನೈರಪೇಕ್ಷ್ಯವೂ ಈ ಶ್ಲೋಕದಲ್ಲಿ ಯಾವ ಪದಗಳಿಂದ ವಿವಕ್ಷಿಸುವಿಕೆಯು ಉಚಿತವೆಂಬದಾಗಿ ವಿಚಾರಿಸಿದರಲ್ಲದೆ ಬೇರೊಂದಿಲ್ಲವು. ಆ ವಿಷಯದಲ್ಲಿ ಕೆಲವರು " ಸರ್ವಧರ್ಮಾನ್ಪರಿತ್ಯಜ್ಯ ,, ಎಂಬ ಸ್ಥಲದಲ್ಲಿ ಅನುವಾದ ಪಕ್ಷವೇ ಯುಕ್ತವಾದುದರಿಂದ ಅಧಿಕಾರವನ್ನು ಮೊದಲು ಹೇಳಿ ಅನಂತರದಲ್ಲಿ ಉಪಾಯದ ನೈರಪೇಕ್ಷ್ಯವನ್ನು ಏಕಶಬ್ದದಿಂದ ಹೇಳುವುದು ಚರಮ ಶ್ಲೋಕವೆಂತಲೂ, ಇನ್ನೂ ಕೆಲವು ಗುರುಗಳು ನೈರಪೇಕ್ಷ್ಯವಿಶಿಷ್ಟವಾದ ಉಪಾಯವನ್ನು ಮೊದಲು ವಿಧಿಸಿ ಅದರ ಅಧಿಕಾರವನ್ನು ' ಮಾಶುಚಃ , ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಶೋಕದಿಂದ ಸೂಚನ ಮಾಡುವುದು ಚರಮಶ್ಲೋಕವೆಂತಲೂ ನಿಷ್ಕರ್ಷಿಸಿದರು. ಈ ಪ್ರಕಾರವಾಗಿ ಅರ್ಥವ್ಯತ್ಯಾಸವಿಲ್ಲದೆ ಕೇವಲ ಯೋಜನಾ ಭೇದಮಾತ್ರವೇ ಅವರ ವಿಚಾರಕ್ಕೆ ಕಾರಣವಾಗಿರುವುದರಿಂದ ಇದನ್ನು ಶ್ರೀಭಾಷ್ಯಕಾರರು ಕೇಳಿ ನಿವಾರಿಸಲಿಲ್ಲವು. ಈ ಎರಡು ವಿಚಾರವೂ ಶ್ರೀಭಾಷ್ಯಕಾರಾಭಿಮತ ವೆಂತಲೇ ತಿಳಿಯಬೇಕು. ಇಂಥಾ ಪೂರ್ವವೃತ್ತಾಂತವನ್ನು ತಿಳಿಯದವರಿಂದ ಚರಮ ಶ್ಲೋಕದಲ್ಲಿಸರ್ವಧರ್ಮಸ್ವರೂಪತ್ಯಾಗ ವಿಷಯವಾದ ಯಾವವಿವಾದವುಉಂಟಾಯಿತೆಂ

ದು. ಆರೋಪಿಸಿ ಹೇಳಲ್ಪಟ್ಟಿತೋ ಆ ವಿವಾದವು ನಿರ್ಮೂಲವೆಂಬದಾಗಿ ಶ್ರೀವಿಷ್ಣುಚಿತ್ತವರದಾಚಾರ್ಯಾದಿಗಳು “ ಸ್ವಸ್ವವರ್ಣಾಶ್ರಮಾಧೀನಂ ಕರ್ಮನತ್ಯಾಜ್ಯಮೇವತತ್ । ಯಾವದ್ದೇಹಂ ಪ್ರಪನ್ನೈಶ್ಚತ್ಯಾಗಹೇತೋರದರ್ಶನಾತ್ ॥ ಶ್ರುತಿಸ್ಮೃತ್ಯಾದಿ ವಿಹಿತಮನುಷ್ಠಾನಂತುನೈತ್ಯಕಂ ,, ಇತ್ಯಾದಿ ನಿಬಂಧನಗ್ರಂಥಗಳಲ್ಲಿ ಪ್ರತಿಪಾದಿಸಿರುತ್ತಾರೆ.

ಆದರೂ ಈರೀತಿಯಾಗಿ ಮಂದವಿಶ್ವಾಸವುಳ್ಳವರು ಭಕ್ತ್ಯಧಿಕಾರಿಗಳೆಂಬದಾಗಿ ಹೇಳಿದ ಪಕ್ಷವನ್ನಾಕ್ಷೇಪಿಸಿರುವುದು ಉಚಿತವೋ? “ಇದಂ ಶರಣ ಮಜ್ಞಾನಾಮಿದಮೇವ ವಿಜಾನತಾಂ । ಇದಂ ತಿತೀರ್ಷತಾಂ ಪಾರಮಿದಮಾನಂತ್ಯಮಿಚ್ಛತಾಂ ,, ಎಂಬ ಭಗವಚ್ಛಾಸ್ತ್ರವಚನದಲ್ಲಿ ಅತ್ಯಂತಾಜ್ಞಾನಿಗಳಿಗೂ ಅಧಿಕ ಜ್ಞಾನವಿಶ್ವಾಸರಿಗೂ ಪ್ರಪತ್ತ್ಯಧಿಕಾರವು ಹೇಳಲ್ಪಟ್ಟಿರುವುದರಿಂದ ಈ ಎರಡರಕ್ಕೂ ಮಧ್ಯಸ್ಥರಾದ ಮಂದವಿಶ್ವಾಸ ಶಾಲಿಗಳಿಗೆ ಭಕ್ತ್ಯಧಿಕಾರವು ಫಲಿತವಾಗಲಿಲ್ಲವೇ? ಆ ವಚನವು ಬೇರೋಬ್ಬರ ವಿಷಯವೆಂದರೆ “ಅವಿದ್ಯಾತೋದೇವೆ ಪರಿಬೃಢತಯಾವಾ ವಿದಿತಯಾ ಸ್ವಭಕ್ತೇರ್ಭೂಮ್ನಾವಾಜಗತಿಗತಿ ಮನ್ಯಾಮವಿದುಷಾಂ ।ಗತಿರ್ಗಮ್ಯಶ್ಚಾಸೌಹರಿ ರಿತಿಜಿತಂತಾ ಹ್ವಯಮನೋರಹಸ್ಯಂವ್ಯಾಜಹ್ರೇಸಖಲು ಭಗವಾನ್ ಶೌನಕಮುನಿಃ ,, ಎಂಬದಾಗಿ ಹಿಂದೆ ವಿವರಿಸಿರುವ ಶ್ಲೋಕಾರ್ಥವನ್ನು ವಿಶದ ಪಡಿಸುವ ಶ್ರೀಮತ್ಪರಾಶರಭಟ್ಟಾರಕ ದಿವ್ಯಸೂಕ್ತಿಯು ವಿರೋಧಿಸಲಾರದೋ ? ಎಂದರೆ ಈ ಶ್ಲೋಕದಿಂದ ಮಂದವಿಶ್ವಾಸರು ಭಕ್ತ್ಯಧಿಕಾರವುಳ್ಳವರೆಂಬ ವಾದಕ್ಕೆ ಅವಕಾಶವಿಲ್ಲವೆಂದು ಬೋಧಿಸುವುದಕ್ಕಾಗಿ ಈ ಶ್ಲೋಕಾರ್ಥವು ಹೇಳಲ್ಪಡುವುದು. ಇದಂ ಶರಣ ಮಜ್ಞಾನಾಂ-ಪ್ರಪತ್ತ್ಯುಪಯುಕ್ತವಾದ ಸಾಮಾನ್ಯ ಜ್ಞಾನವುಂಟಾಗಿ ಉಪಾಯಾಂತರ ಜ್ಞಾನಶೂನ್ಯರಾದವರಿಗೂ ಪ್ರಪತ್ತ್ಯಧಿಕಾರವುಂಟೆಂದರ್ಥವು. ಈ ಅಧಿಕಾರವಿಲ್ಲದಿದ್ದರೂ “ಇದಮೇವ ವಿಜಾನತಾಂ, ಎಂಬುವುದರಿಂದ ಅಧಿಕಾರಾಂತರವು ಹೇಳಲ್ಪಡುವುದು. ಉಪಾಯಾಂತರ ಜ್ಞಾನ ವುಂಟಾದರೂ, ವಿಜಾನತಾಂ-ಪ್ರಪತ್ತ್ಯುಪಯುಕ್ತ ಜ್ಞಾನವುಂಟಾಗಿ ಅಶಕ್ತರಾಗಿದ್ದ ಪಕ್ಷದಲ್ಲಿ ಅಂತವರಿಗೂ ಪ್ರಪತ್ತಿಯುಲ್ಲಧಿಕಾರವು. ಈ ಅಧಿಕಾರವಿಲ್ಲ

ದಿದ್ದರೂ ಉತ್ತರಾರ್ಧದಿಂದ ಅಧಿಕಾರಾಂತರವು ಹೇಳಲ್ಪಡುವುದು. ಉಪಾಯಾಂತರ ಜ್ಞಾನಶಕ್ತಿಗಳುಂಟಾಗಿದ್ದರೂ ಅನಿಷ್ಟನಿವೃತ್ತಿಯೇನು, ಇಷ್ಟಪ್ರಾಪ್ತಿಯೇನು, ಇವುಗಳಲ್ಲಿ ಅತಿಶಯಿತವಾದತ್ವರೆಯುಳ್ಳಪ್ರಪತ್ತ್ಯುಪಯುಕ್ತವಾದಜ್ಞಾನವಂತರೂ ಪ್ರಪತ್ತ್ಯಧಿಕಾರಿಗಳೆಂದರ್ಥವು. ಆದುದರಿಂದ ಅಲ್ಲಿ ಅಜ್ಞಾನಾಂ ಎಂಬ ಪದದಿಂದ ಹೇಳಲ್ಪಟ್ಟ ಅಜ್ಞಾನವು ಪಶ್ವಾದಿಗಳಂತೆ ಶಾಸ್ತ್ರೀಯಗಳಾದ ಯಾವದೊಂದನ್ನು ತಿಳಿಯದೆ ಇರುವಿಕೆಯುಲ್ಲವು. ಉಪಾಸನಾದಿಗಳಲ್ಲಿ ಸ್ವರೂಪ ಜ್ಞಾನವಿಲ್ಲದೆ ಇರುವಿಕೆಯುನ್ನಾದರೂ ಪ್ರಪತ್ತಿವಿಷಯಕವಾದ ಸೂಕ್ಷ್ಮವಿಶೇಷ ಜ್ಞಾನವಿಲ್ಲದಿರುವಿಕೆಯುನ್ನಾದರೂ ಇಲ್ಲಿ ಅಜ್ಞಾನವೆಂದು ಹೇಳಿದರು.

ಆದರೆ ಅನುಷ್ಠಿಸಲ್ಪಡುವ ಭರನ್ಯಾಸ ವಿಷಯದಲ್ಲಿ ವಿಶೇಷವಾದ ಜ್ಞಾನವಿಲ್ಲದಿದ್ದರೆ ಆಭರನ್ಯಾಸಾನುಷ್ಠಾನದಲ್ಲಿ ಹೇಗೆ ಅಧಿಕಾರವೆಂದು ಸಂದೇಹಿಸದೆ ಸಮುದಾಯ ಜ್ಞಾನ ಪೂರ್ವಕವಾಗಿ ದ್ವಯವಚನರೂಪವಾದ ಪ್ರಪದನದಲ್ಲಿ ಅಧಿಕಾರವಿರುವುದೆಂತಲೆ ತಿಳಿಯಬೇಕು.

ಆದರೂ " ವಿಜಾನತಾಂ ,, ಎಂಬುವುದಕ್ಕೆ ಪ್ರಪತ್ತ್ಯುಪಯುಕ್ತ ಶರಣ್ಯಗುಣ ವಿಷಯವಾದ ವಿಶದಜ್ಞಾನಪರವಾಗಿ ಮಾಡಿರುವ ಅರ್ಥವರ್ಣನವು ಅಯುಕ್ತವು, ಅಜ್ಞಾನಕ್ಕೆ ವಿರುದ್ಧವಾಗಿ ಹೇಳಿರುವ ಈ ಪದಕ್ಕೆ ಸಂಕೋಚ ಕಲ್ಪನವು ಅಯುಕ್ತವೆಂದರೆ ? ಈ ಶ್ಲೋಕಕ್ಕೆ ಸಮಾನಾರ್ಥಕವಾಗಿ ಶ್ರೀಪರಾಶರಭಟ್ಟರಿಂದ ಅನುಗ್ರಹಿಸಲ್ಪಟ್ಟಿರುವ " ಅವಿದ್ಯಾತೋದೇವೇ ,, ಎಂಬ ಶ್ಲೋಕದಲ್ಲಿ " ವಿಜಾನತಾಂ, ಎಂಬ ಸ್ಥಾನದಲ್ಲಿ " ದೇವೇ ಪರಿಬೃಢತಯಾವಾ ವಿದಿತಯಾ ,, ಎಂಬದಾಗಿ ಪ್ರಯೋಗಿಸಲ್ಪಟ್ಟಿರುವ ಕಾರಣ ಸಾಮಾನ್ಯ ವಿಶೇಷನ್ಯಾಯದಿಂದ ಪರಿಬೃಢತ್ವ (ಸರ್ವೇಶ್ವರತ್ವ) ದಿಂದುಪಲಕ್ಷಿತವಾದ ಶರಣ್ಯತ್ವೋಪಯುಕ್ತವಾಗಿರುವ ಸರ್ವಗುಣವಿಷಯಕವಾದ ಜ್ಞಾನವೇ ಹೇಳಲ್ಪಡುವುದು. ಆದುದರಿಂದ ಈ ಪ್ರಕರಣದಲ್ಲಿ " ವಿಜಾನತಾಂ , ಎಂತಲೂ " ದೇವೇಪರಿ ಬೃಢತಯಾವಾವಿದಿತಯಾ ,, ಎಂತಲೂ ಹೇಳಿರುವ ಜ್ಞಾನವಿಶೇಷವು ಉಪಾಸನಾದಿ ವಿಷಯವಾದ ಜ್ಞಾನವಾದರೂ ಶರಣ್ಯಗುಣಾದಿ ವಿಷಯವಾದ ಜ್ಞಾನವಾದರೂ ಆಗುವುದೆಂದರಿಯಬೇಕು. ಅ

ಲ್ಲದೆ ಪ್ರಪತ್ತಿಗೆ ಅನಪೇಕ್ಷಿತವಾದ ಸರ್ವವಿಷಯ ಜ್ಞಾನವು ಇಲ್ಲಿ ಹೇಳ ಲ್ಪಡಲಿಲ್ಲವು. ಇಲ್ಲಿ ಪರಿಬೃಢತ್ವರೂಪವಾದ ಶರಣ್ಯಗುಣ ವಿಶೇಷ ಜ್ಞಾನ ವಲ್ಲವೇ ಹೇಳಲ್ಪಟ್ಟಿರುವುದು. ಪರಿಬೃಢತ್ವವೆಂದರೆ ಅತ್ಯಂತ ಸಾಪರಾ ಧಿಯಾಗಿದ್ದರೂ ಉಪಾಯಾಂತರ ಶಕ್ತನಲ್ಲದೆ ಹೋದರೆ ಅಂತವನು ' ಭವಶರಣಂ , ಎಂಬದಾಗಿ ರಕ್ಷಕತ್ವಪ್ರಾರ್ಥನವನ್ನು ಮಾಡಿದ ಮಾತ್ರದಲ್ಲಿಯೇ ರಕ್ಷಣಕ್ಕೆ ಮುಖ್ಯಾಧಾರವಾಗಿರುವ ಅತಿದೃಢವಾದ ಸೌಶೀಲ್ಯವಾತ್ಸಲ್ಯಾದಿ ಕಲ್ಯಾಣ ಗುಣಗಳಿಂದ ಪರಿಪೂರ್ಣವಾಗಿರುವಿಕೆ ಯೇ ಎಂದರಿಯಬೇಕು. ಆದರೆ ಇಂಥಾ ಭಕ್ತ್ಯುಪಯುಕ್ತವಾದ ವಿಶೇಷ ಜ್ಞಾನವುಳ್ಳವರಿಗೆ ಪ್ರಪತ್ತ್ಯಧಿಕಾರ ವರ್ಣನಪರವಾಗಿ ನೀವು ವ್ಯಾಖ್ಯಾನ ಮಾಡಿರುವುದರಿಂದಲೆ ಮಂದಜ್ಞಾನ ವಿಶ್ವಾಸರು ಭಕ್ತ್ಯಧಿ ಕಾರಿಗಳೆಂದು ಸಿದ್ಧವಾಗುವುದಿಲ್ಲವೆ ? ಭಕ್ತಿವಿಶೇಷ ಜ್ಞಾನವು ಭಕ್ತ್ಯ ಧಿಕಾರವೇ ಆಗುವುದರಿಂದ ಅದು ಪ್ರಪತ್ತ್ಯಧಿಕಾರವಾಗಲಾರದಷ್ಟೆ ? ಎಂದರೆ ಈಉಪಯುಕ್ತವಾದ ಜ್ಞಾನವುಂಟಾದರೂ ಉಪಾಯಾಂತರದಲ್ಲಿ ಶಕ್ತಿ ಇಲ್ಲದ ಸ್ಥಿತಿಯಲ್ಲಿ ಆಕಿಂಚನನಾಗಿ ಪ್ರಪತ್ತ್ಯಧಿಕಾರಿಯೇ ಆಗು ವನು. ಇಲ್ಲಿ ಭಕ್ತ್ಯುಪಯುಕ್ತ ಜ್ಞಾನವೆಂತಲೂ ಅರ್ಥವಲ್ಲವು. ಮತ್ತೇ ನೆಂದರೆ ? ಆಕಿಂಚನ್ಯವು ಅಧಿಕಾರವಾದುದರಿಂದ ಇಂಥಾ ಆಕಿಂಚನ್ಯ ವು ಭಕ್ತ್ಯುಪಯುಕ್ತವಾದ ಜ್ಞಾನವುಳ್ಳವರಿಗೂ ಕೂಡ ಸುಲಭವಾದು ದರಿಂದ ಆಕಿಂಚನ್ಯವೇ ಅಸಾಧಾರಣಾಧಿಕಾರವೆಂತಲೂ ಭಕ್ತ್ಯುಪ ಯುಕ್ತ ಜ್ಞಾನವು ಅಂಗಪ್ರಪತ್ತಿ ಜ್ಞಾನಗರ್ಭವಾಗಿರುವುದರಿಂದ ಅದು ಸಾಧಾರಣಾಧಿಕಾರವೆಂತಲೂ ತಿಳಿಯಬೇಕು.

ಆದರೂ “ ಉಪಾಯಾಂತರಾನುಷ್ಠಾನ ಶಕ್ತಿ ಇಲ್ಲದ ಸ್ಥಿತಿಯ ಲ್ಲಿ ಆಕಿಂಚನನಾಗಿ ಪ್ರಪತ್ತ್ಯಧಿಕಾರಿಯಾಗುವನೆಂಬದಾಗಿ ಹೇಳಿರುವು ದುಯುಕ್ತವೊ ? ಶಕ್ತಿ ಯುಕ್ತನಾಗಿದ್ದರೂ ಭಕ್ತಿ ಯೋಗಾದಿಗಳಲ್ಲಿ ಪ್ರವೇಶಿಸುವಿಕೆಯು ಸ್ವರೂಪ ವಿರುದ್ಧವಾಗಿರುವುದರಿಂದ ಭಕ್ತಿಯಲ್ಲಿ ಇಳಿಯ ಬಾರದಷ್ಟೆ ? ಕಿಂಚ ಉಪಾಯಾಂತರ ಶಕ್ತಿ ಇದ್ದರೂ ಕೂ ಡ “ ಶರೈಸ್ತುಸಂಕುಲಾಂಕೃತ್ವಾಲಂಕಾಂಪರಬಲಾರ್ದನಃ । ಮಾಂನ ಯೇದ್ಯದಿಕಾಕುತ್ಸ್ಥಸ್ತತ್ತಸ್ಯ ಸದೃಶಂಭವೇತ್ ,, ಎಂಬೀನ್ಯಾಯ

ದಿಂದ ರಕ್ಷಕನ ಕಟಾಕ್ಷವನ್ನು ಎದುರುನೋಡಿಕೊಂಡು ಸ್ವರಕ್ಷಣ ವ್ಯಾಪಾರದಲ್ಲಿ ತಾನು ನಿವೃತ್ತನಾಗಿರುವುದಲ್ಲವೆ ಉಚಿತವು ? ಆದುದ ರಿಂದ ಉಪಾಯಾಂತರ ಶಕ್ತನು ಕೂಡ ಪ್ರಪತ್ತ್ಯಧಿಕಾರಿಯಲ್ಲವೋ? ಎಂದರೆ ಈ ಸೀತಾವಾಕ್ಯಗತವಾದನ್ಯಾಯವು ಪ್ರಪತ್ತ್ಯನಂತರದಲ್ಲಿ ಪ್ರಪನ್ನನಿಗೆ ಉತ್ತರ ಕೃತ್ಯವಿಶೇಷಕ್ಕೆ ಉದಾಹರಣ ವಾಗುವುದಲ್ಲದೆ (ಪ್ರಪತ್ತ್ಯುತ್ತರಕಾಲದಲ್ಲಿ ಉಪಾಯಾಂತರ ಸಾಮರ್ಥ್ಯವುಂಟಾದರೂ ಸ್ವರಕ್ಷಣ ವ್ಯಾಪಾರಗಳಲ್ಲಿ ಪ್ರಯತ್ನ ಶೂನ್ಯನಾಗಿರಬೇಕೆಂದು ತಿಳಿ ಯಬೇಕಲ್ಲದೆ) ಈಚೋದ್ಯದಿಂದ ಉಪಾಯ ಸಾಮಾನ್ಯಾನುಷ್ಠಾನಕ್ಕೆ ನಿಷೇಧವೇರ್ಪಡುವುದರಿಂದ ಭಕ್ತಿ ಪ್ರಪತ್ತಿ ವಿಧಾಯಕ ಶಾಸ್ತ್ರಗಳೆ ಲ್ಲವೂ ನಿರರ್ಥಕಗಳಾಗುವುವು. " ಇಯಂ ಸೀತಾಮಮಸುತಾ ಸಹ ಧರ್ಮಚರೀತವ ,, ಎಂಬದಾಗಿ ಸೀತಾ ವಿವಾಹಕಾಲದಲ್ಲಿಯೆ ಸೀತಾ ರಕ್ಷಣಭರವು ಜನಕರಿಂದ ಶ್ರೀರಾಮನ ಸನ್ನಿಧಿಯಲ್ಲಿ ಸಮರ್ಪಿಸಲ್ಪಟ್ಟಿ ರುವುದರಿಂದ ಈ ಉತ್ತರ ಕಾಲದಲ್ಲಿ ರಕ್ಷಕನನ್ನು ಎದುರು ನೋಡಿ ಕೊಂಡು ಲಂಕೆಯಲ್ಲಿ ಸೀತಾದೇವಿಯು ತನ್ನ ಬಿಡುಗಡೆಗಾಗಿ ಯಾವ ದೊಂದು ಪ್ರಯತ್ನವನ್ನು ಮಾಡದೆ ಇದ್ದದ್ದು ಉಚಿತವಾಗಿಯೆ ಇರು ವುದು; ಈ ದೃಷ್ಟಾಂತದಿಂದ ಉಪಾಯಾನುಷ್ಠಾನವೇ ಅನಾವಶ್ಯಕ ವೆಂದು ಹೇಳುವುದು ಉಚಿತವಲ್ಲವು. ಭರಸಮರ್ಪಣವನ್ನು ಮಾಡಿದ ವರು ಜಾನಕೀದೇವಿಯಂತೆ ಇರಬೇಕೆಂದು ಹೇಳಿರುವಂತೆ ತಿಳಿಯಬೇಕು. ಆದರೂ ಉಪಾಯಾಂತರಾಶಕ್ತನು ಪ್ರಪತ್ತ್ಯಧಿಕಾರಿ ಎಂಬುವುದು ಉಚಿತ ವಲ್ಲವು! ಆಪ್ರಕಾರವಾಗಿ ಹೇಳುವ ಪಕ್ಷದಲ್ಲಿ ಉಪಾಯಾಂತರ ಶಕ್ತಿಯುಳ್ಳ ಶ್ರೀಮನ್ನಾಥಮುನಿ ಪ್ರಭೃತಿಗಳಿಗೆ ಪ್ರಪತ್ತ್ಯಧಿಕಾರ ಭಂಗವು ಪ್ರಾಪ್ತವಾಗಲಾರದೊ ? ಎಂದರೆ ಉಪಾಯಾಂತರದಲ್ಲಿ ಜ್ಞಾನವುಂಟಾಗಿ ಅದರಲ್ಲಿ ಅನುಷ್ಠಾನಶಕ್ತಿಯಿದ್ದರೂ ಮೋಕ್ಷವನ್ನು ಹೊಂದುವ ವಿಷಯದಲ್ಲಿ ಕಾಲವಿಳಂಬವನ್ನು ತಡೆಯಲಾರದೆ ಇದ್ದರೆ ಅಂ ತವರುಕೂಡಪ್ರಪತ್ತ್ಯಧಿಕಾರಿಗಳಾಗುವುದರಿಂದ ಶ್ರೀಮನ್ನಾಥಾದಿ ವಿ ಷಯದಲ್ಲಿ ಪ್ರಪತ್ತ್ಯನಧಿಕಾರಶಂಕೆಗೆ ಅವಕಾಶವಿಲ್ಲವೆಂದರಿಯಬೇಕು. ಆದುದರಿಂದ ಶೀಘ್ರವಾಗಿ ಫಲವನ್ನು ಕೊಡುವ ಶರಣಾಗತಿಯೆ ನಮಿ

ಗುಚಿತವೆಂದಿರುವಂಥಾ ವಿಲಂಬಾಕ್ಷವುನು ಪ್ರಪತ್ತ್ಯಧಿಕಾರಿಯಾಗು ವುದರಲ್ಲಿ ಸಂಶಯು ವಿಲ್ಲವು. ಇದನ್ನು "ಇದುಂತಿತೀರ್ಷತಾಂಪಾರಂ,, ಎಂಬುವುದರಿಂದ ಹೇಳಿರುತ್ತಾರೆ. ಆದರೆ " ತಿತೀರ್ಷತಾಂ,, ಎಂಬ ಪದದಿಂದ ತ್ವರಾತಿಶಯುವು ಬೋಧಿತವಾಗುವುದು ಹೇಗೆ? ಎಂದರೆ "ತಿತೀರ್ಷತಾಂ ,, ಎಂಬಶಬ್ದಕ್ಕೆ ತ್ವರೆಯಾಗಿ ಮೋಕ್ಷಸಿದ್ಧಿಯನ್ನು ಅಪೇಕ್ಷಿಸುವಂತವರಿಗೆ ಎಂಬ ಅರ್ಥವೇ ಏರ್ಪಡುವುದು. ಅದು ಹೇಗೆಂ ದರೆ? ಈ ಶ್ಲೋಕವು ಪ್ರಪತ್ತ್ಯಧಿಕಾರ ಪ್ರಕರಣದಲ್ಲಿ ಪಠಿತವಾಗಿರುವು ದರಿಂದ ಈ "ತಿತೀರ್ಷತಾಂ,,ಎಂಬುವ ಪದಕ್ಕೆ "ತರ್ತುಮಿಚ್ಛಾ ತಿತೀ ರ್ಷಾ ,, ಎಂಬದಾಗಿ ಅರ್ಥವನ್ನು ಹೇಳುವ ಪಕ್ಷದಲ್ಲಿ ಅದುಸರ್ವಾಧಿ ಕಾರಿ ಸಾಧಾರಣ ವಾಗುವುದರಿಂದಲೂ ಅಲ್ಲಿ ಶೀಘ್ರಪದವನ್ನು ಅಧ್ಯಾ ಹಾರವಾಡಿಕೊಂಡು ತ್ವರೆಯಾಗಿ ಮೋಕ್ಷಸಿದ್ಧಿಯನ್ನು ಅಪೇಕ್ಷಿಸು ವಂತವರಿಗೆ ಎಂಬೀ ಅರ್ಥವನ್ನು ಹೇಳುವುದೆ ಉಚಿತವು.

ಈ ಪ್ರಕಾರವಾಗಿ " ತಿತೀರ್ಷತಾಂ ಎಂಬಪದವು ತ್ವರಾಪರವಾ ದರೆ,, ಆನಂತ್ಯಮಿಚ್ಛತಾಂ, ಎಂಬಪದವು ವ್ಯರ್ಥವಾಗಲಾರದೊ? ಎಂ ದರೆ 'ಆನಂತ್ಯಮಿಚ್ಛತಾಂ, ಎಂಬೀಪದದಿಂದ ಸ್ವರೂಪ ಪ್ರಾಪ್ತವಾದ ಪರಿಪೂರ್ಣ ಭಗವದನುಭವವನ್ನು ಹೊಂದದೆಹೋದರೆಆತ್ಮಧಾರಣವನ್ನು ಮಾಡಲಾರದ ಆರ್ತರಿಗೂ ಎಂಬಅರ್ಥವೇರ್ಪಡುವುದು.(ದೇಹಾವಸಾನದಲ್ಲಿ ಮೋಕ್ಷವನ್ನಪೇಕ್ಷಿಸುವಂತವರು ದೃಪ್ತರೆಂತಲೂ ಆತತ್ಕ್ಷಣವೇ ಮೋ ಕ್ಷಸಿದ್ಧಿಯಾಗಬೇಕೆಂದು ದೃಢಭಕ್ತರಾಗಿ ಶರಣಾಗತಿ ಮಾಡುವಂತವ ರು ಆರ್ತರೆಂತಲೂ ಈ ವಿಭಾಗವು ಶರಣಾಗತಿ ಶಾಸ್ತ್ರಸಿದ್ಧವಾಗಿರು ವುದು.

ಆದರೂ " ಇದಮಾನಂತ್ಯಮಿಚ್ಛತಾಂ ,, ಎಂಬಪದಕ್ಕೆ ಈ ಶ್ಲೋಕವ್ಯಾಖ್ಯಾರೂಪವಾದ ಶ್ರೀಪರಾಶರ ಭಟ್ಟಾರ್ಯದಿವ್ಯಸೂಕ್ತಿ ಯಲ್ಲಿ ಸ್ವೀಕಾರವಿಲ್ಲದೇ ಇರುವುದರಿಂದ ಈ ವಚನ ತಾತ್ಪರ್ಯರೂಪತ್ವ ವು ಶ್ರೀ ಭಟ್ಟಾರ್ಯಸೂಕ್ತಿಗೆ ಸಿದ್ಧಿಸದೇ ಹೋಗಲಾರದೋ ? ಎಂದ ರೆ " ಇದಂತಿತೀರ್ಷತಾಂಪಾರಂ ಇದಮಾನಂತ್ಯಮಿಚ್ಛತಾಂ ,, ಎಂ ಬೀ ಪಾದದ್ವಯುವನ್ನುದ್ದೇಶಿಸಿಯೆ " ಸ್ವಭಕ್ತೇರ್ಭೂಮ್ನಾವಾ ,,

ಎಂಬದಾಗಿ ಹೇಳಿರುವುದರಿಂದ ಯಾವವಿರೋಧವೂ ಇಲ್ಲವು. ಆದರೆ ಇಲ್ಲಿ ಸ್ವಭಕ್ತೇರಭ್ಯಾವಸ್ಥಾ ಎಂಬದಾಗಿ ಭಕ್ತಿಯೋಗವೇ ತೋರುವು ದೆಂದರೆ ಇಲ್ಲಿ ಹೇಳಲ್ಪಟ್ಟ ಭಕ್ತಿಪದದಿಂದ ಭಗವದ್ವಿಷಯವಾದ ಪ್ರೇ ಮ ಮಾತ್ರವಕ್ಯವನ್ನು ಹೇಳಿರುವುದಲ್ಲದೆ ಭಕ್ತಿಯೋಗವನ್ನು ಹೇಳಲಿ ಲ್ಲವು. ಇದರ ಭೂಮಾ ಎಂದರೆ ಅತಿಶಯವು. ಇದರಿಂದ ವಿಲಂಬಾ ಕ್ಷಮತ್ವವು ಫಲಿತವಾಯಿತು. ಆದರೆ ಪರಭಕ್ತಿರೂಪವಾದ ಈ ಅವ ಸ್ಥಾ ವಿಶೇಷವು ಭಕ್ತಿಯೋಗಾನರ್ಹರಿಗೆ ಉಂಟಾಗಬಹುದೋ ? ಎಂದರೆ ಸಾಧನರೂಪದಿಂದ ಶಾಸ್ತ್ರವಿಹಿತವಾದ ಭಕ್ತಿಯೋಗವು ಈ ಪ್ರಪನ್ನಾಧಿಕಾರಿಗಳಿಗೆ ಇಲ್ಲದೆ ಇದ್ದರೂ ಸುಕೃತವಿಶೇಷ ಮೂಲವಾದ ಭಗವತ್ಪ್ರಸಾದದಿಂದ "ಚಿಂತಯಂತೀಜಗತ್ಸೂತಿಂಪರಬ್ರಹ್ಮಸ್ವ ರೂಪಿಣಂ । ನಿರುಚ್ಛ್ವಾಸತಯಾಮುಕ್ತಿಂಗತಾನ್ಯಾಗೋಪಕನ್ಯಕಾ" ಎಂಬೀ ರೀತಿಯಿಂದ ಕೆಲವರಿಗಿದುಂಟಾಗ ಬಹುದೆಂದರಿಯಬೇಕು.

ಆದುದರಿಂದ ಇಂಥಾ ಅವಸ್ಥೆಯುಳ್ಳವನು ತನಗೆ ಅಪೇಕ್ಷಿತವಾದ ಮೋ ಕ್ಷವನ್ನು ಶೀಘ್ರವಾಗಿ ಹೊಂದುವದಕ್ಕೆ ಮಾರ್ಗಾಂತರವನ್ನು ಕಾಣ ವನಲ್ಲವಾದುದರಿಂದ (ಇಂಥಾಅಕಿಂಚನನೂ) ಪ್ರಪತ್ತ್ಯಧಿಕಾರಿ ಯೆಂದು ತಾತ್ಪರ್ಯವು. ಇದರಿಂದ ಫಲಿತವಾದ ಅರ್ಥವ್ಯಾವದೆಂದರೆ ? ಉಪಾಯಾಂತರದಲ್ಲಿ ಅಜ್ಞರಾಗಿ ಈ ಉಪಾಯದಲ್ಲಿ ಸಮುದಾಯ ಜ್ಞಾ ನಮಾತ್ರವುಳ್ಳವರಿಗೂ (ಇದರಿಂದ "ಇದಂಶರಣಮಜ್ಞಾನಾಂ" ಎಂ ಬ ಪ್ರಥಮ ಪಾದಾರ್ಥವು ದರ್ಶಿತವಾಯಿತು. (ಶರಣಾಗತಿಯಲ್ಲಿ ಯೂ ಉಪಾಯಾಂತರದಲ್ಲಿಯೂ ಜ್ಞಾನವುಳ್ಳವರಾಗಿದ್ದರೂ ಉಪಾ ಯಾಂತರದಲ್ಲಿ ಅನುಷ್ಠಾನ ಶಕ್ತಿ ಇಲ್ಲದವರಿಗೂ ("ಇದಮೇವ ವಿಜಾನತಾಂ" ಎಂಬೀ ದ್ವಿತೀಯಪಾದಾರ್ಥವಿದು) ಈ ಯೆರಡೂ ಇದ್ದರೂ ಮೋಕ್ಷವನ್ನು ಹೊಂದುವವಿಷಯದಲ್ಲಿ ವಿಳಂಬವನ್ನು ಸಹಿ ಸದ ಆರ್ತ್ಯತಿಶಯವುಳ್ಳವರೂ ("ಇದಂತಿತೀರ್ಷತಾಂ" ಇತ್ಯಾದಿ ವೃತ್ತರಾರ್ಧಾರ್ಥವು.) ಪ್ರಪತ್ತಿಯಲ್ಲಿಯೇ ಅಧಿಕಾರವು. ಈ ವಿಳಂ ಬವನ್ನು ಸಹಿಸದವನು ಭಕ್ತ್ಯಾದಿ ಶಕ್ತನಾಗಿರುವುದರಿಂದ ಅವನಿಗೆ ಅಕಿಂಚನತ್ವವುಹೇಗೆ ? ಆಕಿಂಚನ್ಯವಿಲ್ಲದಿದ್ದರೆ ಪ್ರಪತ್ತ್ಯಧಿಕಾರಿ

ಯಾಗಲಾರನಷ್ಟೆ ? ಎಂದರೆ ಈ ವಿಳಂಬಾಕ್ಷಮನಾಕೂಡ ತಾನು ನೆನೆಸಿದಕಾಲದಲ್ಲಿ ಫಲವನ್ನು ಹೊಂದುವುದಕ್ಕೆ ಉಪಾಯಾಂತರ ಶೂನ್ಯನಾದುದರಿಂದ ಅಕಿಂಚನನೇ ಆಗಿರುವನು. ಈ ಪ್ರಕಾರವನ್ನು ನೆನಸಿಕೊಂಡು " ಜಗತಿಗತಿಮನ್ಯಾಮವಿದುಷಾಂ ,, ಎಂದು ಹೇಳಿರುತ್ತಾರೆ. " ಅವಿದ್ಯಾತೋದೇವೇ ,, ಎಂಬ ಶ್ಲೋಕಕ್ಕೆ ಇದುಅರ್ಥವು. ಅವಿದ್ಯಾತಃಗತಿ ಮನ್ಯಾಮವಿದುಷಾಂ- ಉಪಾಯಾಂತರ ಜ್ಞಾನಾಭಾವದಿಂದ ಉಪಾಯಾಂತರವನ್ನರಿಯದವರಿಗೆ, ಉಪಾಯಾಂತರವು ನನಗಿಲ್ಲವೆಂಬದಾಗಿ ತಿಳಿಯುವಂತವರಿಗೆಂದರ್ಥವು. ದೇವೇಪರಿಬೃಢತಯಾವಾವಿದಿತಯಾಗತಿಮನ್ಯಾಮವಿದುಷಾಂ-ದೇವನೇಪರಮಶೇಷೀ ಎಂಬ ಜ್ಞಾನದಿಂದ ಅವನಿಗಿಂತಲೂ ಅನ್ಯವಾದ ದೇವತಾಂತರವು ಸಿದ್ಧರೂಪವಾದ ಉಪಾಯ ವಲ್ಲವೆಂಬದಾಗಿ ತಿಳಿದವರಿಗೂ ಎಂದರ್ಥವು. ದೇವನಲ್ಲಿರುವ ಈ ಪರಿಬೃಢತೇಯು ತನ್ನ ಅಶಕ್ತಿಗೂ ಉಪಲಕ್ಷಣವಾಗಿರುವುದು. ತನ್ನ ಅಶಕ್ತಿಯಿಂದ ಸಾಧ್ಯರೂಪವಾದ ಗತ್ಯಂತರವನ್ನು ಕೂಡ ತಿಳಿಯದವರಿಗೂ ಎಂದರ್ಥವು. ಸ್ವಭಕ್ತೇರ್ಭೂಮ್ನಾ ವಾಜಗತಿಗತಿಮನ್ಯಾಮವಿದುಷಾಂ - ವಿಲಂಬವನ್ನ ಸಹಿಸಲಾರದ ಅತಿಶಯಿತವಾದ ತ್ವರೆಯಿಂದ ತನಗೆ ಅಪೇಕ್ಷಿತವಾದ ಕಾಲದಲ್ಲಿ ವಿಳಂಬವಿಲ್ಲದೇನೆ ಇಷ್ಟಪ್ರಾಪ್ತಿಗೆ ಸಾಧನವಾದ ಉಪಾಯಾಂತರವಿಲ್ಲವೆಂಬದಾಗಿ ತಿಳಿದವರಿಗೂಕೂಡ ಪ್ರಪತ್ತಿಯಲ್ಲಧಿಕಾರವೆಂಬದಾಗಿ ಈ ಅರ್ಥಗಳನ್ನರಿಯಬೇಕು.

ಆದರೆ ಇಷ್ಟುವರೆಗೂ ನೀವು ಉಪನ್ಯಾಸ ಮಾಡಿರುವ ಸಂದರ್ಭಗಳನ್ನು ನೋಡಿದರೆ ವ್ಯಾಸಾದಿಗಳಿಗೆ ಜ್ಞಾನವಿಶ್ವಾಸಮಾಂದ್ಯದಿಂದ ಭಕ್ತ್ಯಧಿಕಾರ ಉಂಟಾಯಿತೆಂದು ಹೇಳಲಾಗುವುದಿಲ್ಲವು ಬೇರೆಯಾವ ಕಾರಣದಿಂದ ಅವರು ಭಕ್ತ್ಯಧಿಕಾರಿಗಳಾದರೆಂದರೆ? ಅದಕ್ಕುತ್ತರವು. ವ್ಯಾಸಾದಿಗಳು ಅಧಿಕಾರಿ ಪುರುಷರಾದಕಾರಣ ವಿಳಂಬವನ್ನು ಸಹಿಸುವಂತವರಾಗಿಯೂ ಉಪಾಯಾಂತರ ಶಕ್ತರಾಗಿಯೂ ಇರುವುದರಿಂದ ಉಪಾಸನದಲ್ಲಿ ಪ್ರವರ್ತಿಸಿರುವರು.ಅಂತವರಿಗೆ ಉಪಾಯಾಂತರಾಶಕ್ತಿರೂಪವಾಗಿಯೂವಿಲಂಬಾಕ್ಷಮತ್ವರೂಪವಾಗಿಯೂ ಇರುವ ಪ್ರಪ

ತ್ರ್ಯಧಿಕಾರ ವಿಲ್ಲದೇ ಇರುವುದರಿಂದ ಅವರುಉಪಾಸನಾಧಿಕಾರಿಗಳಾದ ರೆಂದುಭಾವವು. ಅಲ್ಲದೆಜ್ಞಾನಮಾಂದ್ಯದಿಂದಲಾದರೂ ವಿಶ್ವಾಸಮಾಂದ್ಯ ದಿಂದಲಾದರೂ ಉಪಾಸನದಲ್ಲಿ ಪ್ರವರ್ತಿಸಿದರೆಂದರಿಯಕೂಡದು.

ಆದರೆ " ನರಸ್ಯಬುದ್ಧಿದೌರ್ಬಲ್ಯಾದುಪಾಯಾಂತರಮಿಷ್ಯತೆ ,, ಎಂಬ ವಚನದಲ್ಲಿ ಉಪಾಯಾಂತರ ಪ್ರವೃತ್ತಿಯೆಲ್ಲವೂ ಬುದ್ಧಿದೌರ್ಬ ಲ್ಯ ಕೃತವೆಂಬದಾಗಿ ಸ್ಪಷ್ಟವಾಗಿ ಪ್ರತಿಪಾದಿಸಿ ರುವುದರಿಂದವ್ಯಾಸಾ ದಿಗಳೂ ಕೂಡ ಬುದ್ಧಿ ದೌರ್ಬಲ್ಯದಿಂದ ಭಕ್ತಿಯಲ್ಲಿಳಿದಿರಬಾರದೊ ? ಎಂದರೆ ಇದಕ್ಕುತ್ತರವು ಶ್ರೀಮದಾಚಾರ್ಯರಿಂದ " ಅಶಕ್ತಸ್ಯಾತಿಕೃ ಚ್ಛ್ರೇಷುದುರಾಶಾದಾರ್ಢ್ಯಶಾಲಿನಃ । ಕಸ್ಯಚಿದ್ಬುದ್ಧಿದೌರ್ಬಲ್ಯಂ ಲಘುತ್ಯಾಗಸ್ಯಕಾರಣಂ,,ಎಂಬ ಒಂದು ಕಾರಿಕೆಯಿಂದಲೆ ಸಂಗೃಹೀತ ವಾಗಿರುವುದು.ಇಲ್ಲಿನ ನರಶಬ್ದವುಅಶಕ್ತನನ್ನು ಹೇಳುವುದು, ತಾನಶಕ್ತ ನಾಗಿ ತನ್ನ ಅಧಿಕಾರಕ್ಕೆ ಉಚಿತವಲ್ಲದ ಉಪಾಯಾಂತರದಲ್ಲಿ ಒಬ್ಬನು ಪ್ರವೇಶಿಸುವಪಕ್ಷದಲ್ಲಿ ಅದು ಬುದ್ಧಿದೌರ್ಬಲ್ಯಕೃತವೆಂದು ಪೂರ್ವಪಕ್ಷಿ ಗಳ ವಚನಕ್ಕೆ ಅರ್ಥವಲ್ಲದೆ ಬುದ್ಧಿಮಾಂದ್ಯವೆ ಭಕ್ತ್ಯಧಿಕಾರವಾಗಿರು ವುದರಿಂದ ವ್ಯಾಸಾದಿಗಳಿಗೂ ಇದರಿಂದಲೆ ಭಕ್ತ್ಯಧಿಕಾರ ವುಟಾಯಿ ತೆಂದು ಹೇಳುವುದು ಉಚಿತವಲ್ಲವು. ಭಕ್ತ್ಯಾದಿಗಳಿಂದಲೆ ಮುಕ್ತಿ ಯನ್ನು ಸಾಧಿಸುವೆನು ಇದಕ್ಕೆ ಬೇರೆ ಉಪಾಯಾಂತರವಿಲ್ಲ ವೆಂಬ ದಾಗಿ ಅತಿಕಷ್ಟ ಸಾಧ್ಯಗಳಾದ ಉಪಾಯಾಂತರಗಳಲ್ಲಿ ದೃಢವಾದ ದುರಾಶೆಯುಳ್ಳ ಮಂದಬುದ್ಧಿಯುಳ್ಳ ಒಬ್ಬಾನೊಬ್ಬ ಪುರುಷನಿಗೆ ಲಘು ವಾದ ಪ್ರಪತ್ತಿಯನ್ನು ತ್ಯಾಗಮಾಡುವುದಕ್ಕೆ ಜ್ಞಾನವಿಶ್ವಾಸ ಮಾಂದ್ಯ ವೇ ಕಾರಣವಾಗಿರುವುದೆಂದು ಕಾರಿಕಾರ್ಥವು. ಅಶಕ್ತನಾದವನು ಲಘೂಪಾಯತ್ಯಾಗವನ್ನು ಮಾಡುವುದಾದರೆ ಅದಕ್ಕೆ ಬುದ್ಧಿಮಾಂ ದ್ಯವೆ ಕಾರಣವೆಂದುಭಾವವು. ಕಿಂಚ ಉಪಾಯಾಂತರಾಶಕ್ತರಲ್ಲಿ ವಿಶ್ವಾಸಮಾಂದ್ಯದಿಂದಪ್ರಪತ್ತ್ಯನರ್ಹರಾದವರಿಗೆ ಭಗವನ್ನಾಮ ಸಂ ಕೀರ್ತನಾದಿಯಲ್ಲಧಿಕಾರವೆಂತಲೂತಿಳಿಯಲ್ಪಡುವುದಾದುದರಿಂದ ಪರಿ ಪೂರ್ಣಜ್ಞಾನ ವಿಶ್ವಾಸ ಶಾಲಿಗಳಾಗಿರುವುದರಿಂದ ಸರ್ವಸಂಶಯಗಳನ್ನು ನಾಶಪಡಿಸುವ ವ್ಯಾಸಾದಿಗಳ ಭಕ್ತ್ಯಧಿಕಾರವು ಜ್ಞಾನವಿಶ್ವಾಸಮಾಂದ್ಯ

ಪ್ರಯುಕ್ತವೆನ್ನುವುದು ಅತ್ಯಂತನುಚಿತವೆಂದು ಗ್ರಹಿಸಬೇಕು. ಈ ಪ್ರಕಾರದಿಂದ ಉಪಾಸನ ಪ್ರಪದನಗಳಿಗೆ ಶಕ್ತಾಶಕ್ತಾದಿ ಭೇದದಿಂದ ಅಧಿಕಾರವು ವ್ಯವಸ್ಥಿತವಾಗಿರುವುದರಿಂದ ಭಕ್ತಿಪ್ರಪತ್ತಿವಿಧಾಯಕ ಶಾಸ್ತ್ರದ್ವಯವೂ ಪ್ರಯೋಜನ ಯುಕ್ತವಾಗಿರುವುದು. ಆದರೂ ಪ್ರಪನ್ನವಿಷಯದಲ್ಲಿ ವರ್ಣಾಶ್ರಮ ಧರ್ಮವು ಅಂಗವಲ್ಲದೇ ಇರುವುದರಿಂದ ಶಾಸ್ತ್ರವೈಯರ್ಥ್ಯವಿಲ್ಲವೋ ? ಎಂದರೆ ಇಲ್ಲಿ ತ್ಯಾಗವಿಧಿಯಿಲ್ಲದೇ ಇರುವುದರಿಂದ ಒಂದಧಿಕಾರಿಗೆಅಂಗತ್ವಬುದ್ಧಿಯೂ ಒಂದಧಿಕಾರಿಗೆ ಕೈಂಕರ್ಯಬುದ್ಧಿಯೂ ಎಂಬಪ್ರತಿಪತ್ತಿ ವೈಷಮ್ಯವೇ ಇರುವುದರಿಂದ ಶಾಸ್ತ್ರವೈಯರ್ಥ್ಯವಿಲ್ಲವು.

ಆದರೆ ಈರೀತಿಯಾಗಿ ಪ್ರಪನ್ನನಿಗೆ ಸ್ವಧರ್ಮಾನುಷ್ಠಾನವುಂಟಾದರೇ ಉಪಾಯಾಂತರ ಸ್ಪರ್ಶಪ್ರಸಕ್ತಿಯಿಂದ ಬ್ರಹ್ಮಾಸ್ತ್ರನ್ಯಾಯ ವಿರೋಧವಿಲ್ಲವೋ? ನಿತ್ಯನೈಮಿತ್ತಿಕ ಕರ್ಮಗಳಲ್ಲಿ ಉಪಾಯತ್ವ ಬುದ್ಧಿ ಶೂನ್ಯನಾದ ಕಾರಣ ಕೈಂಕರ್ಯಬುದ್ಧಿಯೊಡನೆ ಅನುಷ್ಠೇಯವಾಗಿರುವುದರಿಂದ ವಿರೋಧವಿಲ್ಲವೆಂದರೆ ಆವಾಗ ಕಾಮ್ಯಕರ್ಮವೂ ಕೈಂಕರ್ಯಬುದ್ಧಿಯೊಡನೆ ಅನುಷ್ಠೇಯವಾಗಲಾರದೋ? ಕಾಮ್ಯಕರ್ಮಗಳನ್ನು ಮಾಡದಪಕ್ಷದಲ್ಲಿ ಪ್ರತ್ಯವಾಯವಿಲ್ಲವಾದುದರಿಂದ ಅವುಗಳನ್ನು ಮಾಡುವುದು ಅನಾವಶ್ಯಕವೆಂದರೆ ಆವಾಗ ಭಗವದ್ಭಾಗವತ ಸಮೃದ್ಧಿಯೇ ಮೊದಲಾದವುಗಳಿಗಾಗಿಯೂ ಕರ್ಮವನ್ನು ಮಾಡದಿರುವಿಕೆಯು ಪ್ರಾಪ್ತವಾಗಲಾರದೋ ? ಎಂದರೆ ಸ್ವರ್ಗಾದಿ ಸಾಧನಗಳಾದ ಕಾಮ್ಯವು ಸ್ವರೂಪವಿರುದ್ಧಗಳಾದುದರಿಂದ ಅದಕ್ಕೆ ಪ್ರಸಕ್ತಿ ಇಲ್ಲವು. ಭಗವದ್ಭಾಗವತಸಮೃದ್ಧಿಗಾಗಿ ಮಾಡಲ್ಪಡುವ ಕರ್ಮವು ಸ್ವರೂಪೋಚಿತವಾಗಿರುವುದರಿಂದ ದೋಷವಿಲ್ಲವೆಂದರ್ಥವು. ಆದುದರಿಂದ ಪ್ರಪನ್ನನಿಗೆ ಅಪೇಕ್ಷಿತವಾದ ಫಲಕ್ಕಾಗಿ ಪ್ರಪತ್ತಿಗಿಂತಲೂ ಇತರವಾದ ಬೇರೊಂದನ್ನು ಅನುಷ್ಠಿಸುವಿಕೆಯು ಬ್ರಹ್ಮಾಸ್ತ್ರಬಂಧನ್ಯಾಯದಿಂದ ವಿರುದ್ಧವಾಗಿದ್ದರೂ ಸ್ವಯಂಪ್ರಯೋಜನವಾಗಿಯಾದರೂ ಭಗವದ್ಭಾಗವತಸಮೃದ್ಧ್ಯಾದಿ ರೂಪಗಳಾದಫಲಾಂತರಗಳಿಗಾಗಿಯೂ ಬೇರೊಂದನ್ನನುಷ್ಠಿಸಿದರೆ ವಿರೋಧವಿಲ್ಲವೆಂದರಿಯಬೇಕು.

ಆದರೂ ನಿಮ್ಮಿಂದ ಹೇಳಲ್ಪಟ್ಟದೂಷಣಗಳಿಂದ ಸರ್ವ ಧರ್ಮ ಸ್ವರೂಪ ತ್ಯಾಗವು 'ಪರಿತ್ಯಜ್ಯ, ಎಂಬುವುದಕ್ಕೆ ಅರ್ಥವಾಗದಿದ್ದರೂ ಉಪಾಯತ್ವ ಬುದ್ಧಿತ್ಯಾಗವು ಅರ್ಥವಾಗಬಾರದೋ ? ಎಂದರೆ ಅದೂ ಯುಕ್ತವಲ್ಲವು. ಪ್ರಪನ್ನನಿಗೆ ಉತ್ತರ ಕೃತ್ಯಗೋಚರಗಳಾದ ವಾಕ್ಯಗಳಲ್ಲಿ ಉಪಾಯತ್ವ ಬುದ್ಧಿತ್ಯಾಗ ವಿಧಾನವು ಉಚಿತವಾಗಿರುವುದಲ್ಲದೆ ಇಲ್ಲಿ ಉತ್ತರಕೃತ್ಯಪರವಲ್ಲದೆ ಉಪಾಯವಿಧಾಯಕವಾಗಿರುವ ಈ ವಾಕ್ಯದಲ್ಲಿ ಹೇಳುವುದರಿಂದ ಈ ಬುದ್ಧಿತ್ಯಾಗಪೂರ್ವಕವಾದ ಧರ್ಮಸ್ವರೂಪವು ಪ್ರಪತ್ತಿಗೆ ಅಂಗವೆಂಬ ಆಕಾರದಿಂದ ಅನುಷ್ಠೇಯ ವೆಂಬದಾಗ ಫಲಿತವಾಗುವುದರಿಂದ ಸ್ವಯಂಪ್ರಯೋಜನವಾದ ಕೇವಲ ಕೈಂಕರ್ಯವು ಉತ್ತರ ಕೃತ್ಯವೆಂಬ ಸಿದ್ಧಾಂತಕ್ಕೆ ವಿರೋಧ ವುಂಟಾಗುವುದು. ಉಪಾಯತ್ವ ಬುದ್ಧಿತ್ಯಾಗದಿಂದಕೂಡಿರುವ ತಾತ್ಕಾಲಿಕವಾದ ಧರ್ಮವು ಪ್ರಪತ್ತ್ಯಂಗವಾದರೆ ಬಾಧಕವಿಲ್ಲವೆನ್ನುವ ಪಕ್ಷದಲ್ಲಿ ಪ್ರಪತ್ತಿಗೆ ಹೇಳುವ ಧರ್ಮಾಂತರ ನೈರಪೇಕ್ಷ್ಯಕ್ಕೂ ವಿರೋಧವುಂಟಾಗುವುದು ಈ ವಚನವು ಉಪಾಯಾನುಷ್ಠಾನೋತ್ತರ ಕಾಲೀನವಾದ ಧರ್ಮನೈರಪೇಕ್ಷ್ಯವನ್ನು ಬೋಧಿಸುವುದೆಂದರೆ ಉಪಾಯಾಂತರರಾಹಿತ್ಯರೂಪವಾದ ಆಕಿಂಚನ್ಯಾಧಿಕಾರ ವಿರೋಧವೂ ದುರ್ನಿವಾರವಾಗುವುದು. ಅದು ಹೇಗೆಂದರೆ ? ಉಪಾಯವಲ್ಲದವುಗಳಲ್ಲಿ ಉಪಾಯಬುದ್ಧಿತ್ಯಾಗವು ಇಲ್ಲಿ ವಿಧಿಸಬೇಕಾಗಿಲ್ಲವು. ಅನುಪಾಯಗಳಲ್ಲಿ ಉಪಾಯ ಬುದ್ಧಿತ್ಯಾಗ ವಿಧಿಯು ಅನಪೇಕ್ಷಿತ ವಾಗಿರುವುದರಿಂದ ಬುದ್ಧಿತ್ಯಾಗವು ಅಪ್ರಸಕ್ತವಾಗಿರುವುದು. ಇಂಥಾ ಅಪ್ರಸಕ್ತ ಪ್ರತಿಷೇಧರೂಪವಾದ ದೋಷವುಂಟಾಗುವುದರಿಂದ ಅನುಪಾಯಗಳಲ್ಲಿಉಪಾಯತ್ವ ಬುದ್ಧಿತ್ಯಾಗವು ವಿಧಿಸಲ್ಪಡಬೇಕಾದದ್ದಲ್ಲವು. ಉಪಾಯವಾದ ಕರ್ಮಾದಿಗಳಲ್ಲಿ ಉಪಾಯ ಬುದ್ಧಿತ್ಯಾಗವನ್ನು ಮಾಡಿ ಅನುಷ್ಠಿಸುವಿಕೆಯು ಪೂರ್ವೋಕ್ತವಾದ ಉಪಾಸನಾನುಷ್ಠಾನವೇ ಆಗುವುದು. ಆವಾಗ ಉಪಾಸಕನಿಗೂ ಪ್ರಪನ್ನನಿಗೂ ಅನುಷ್ಠಾನ ಭೇದವೇ ಇಲ್ಲವೆಂದು ಹೇಳಿದಂತೆ ಆಗುವುದು. ಧರ್ಮಾನುಷ್ಠಾನಾರ್ಥವಾಗಿಯೆ ಬುದ್ಧಿತ್ಯಾಗವು ಏರ್ಪಡುವುದರಿಂದ ಹಿಂದೆ ಉಪದೇಶಿಸಲ್ಪಟ್ಟ ಉಪಾಸನಾನುಷ್ಠಾನ ಶಕ್ತಿಯುಳ್ಳವನೆ ಪ್ರಪತ್ತ್ಯಧಿಕಾರಿಎಂಬದಾ

ಗಿ ಹೇಳಿದಂತೆ ಆಗುವುದೆಂದು ಭಾವವು. ಕಿಂಚ ಪ್ರಪತ್ತಿವಿಧಾಯ
ಕವಾದ ಚರಮ ಶ್ಲೋಕದಲ್ಲಿ ಉಪಾಯತ್ವ ಬುದ್ಧಿತ್ಯಾಗವನ್ನೆ ಪರಿತ್ಯ
ಜ್ಯ, ಎಂಬುವುದಕ್ಕೆ ಅರ್ಥವನ್ನಾಗಿ ಹೇಳವಪಕ್ಷದಲ್ಲಿ ತ್ಯಾಗವಿಧಿಗೂ
ಅನುಷ್ಠಾನ ವಿಧಿಗೂ ಅಧಿಕಾರಭೇದದಿಂದ (ಕರ್ಮಾದಿಗಳನ್ನನುಷ್ಠಿ
ಸುವುದರಲ್ಲಿ ಸಾಮರ್ಥ್ಯರಹಿತನಾದ ಅಕಿಂಚನನು ಪ್ರಪತ್ತಿಯನ್ನು
ಮಾಡಬೇಕೆಂತಲೂ ಕರ್ಮಯೋಗಾದಿಗಳನ್ನು ಅನುಷ್ಠಿಸುವುದಕ್ಕೆ
ಸಮರ್ಥನಾದವನು ಉಪಾಸನಾಧಿಕಾರಿಯೆಂತಲೂ ಏರ್ಪಟ್ಟಿರುವ ಅಧಿ
ಕಾರಭೇದದಿಂದ) ವಿರೋಧ ವಿರೋಧಪರಿಹಾರವನ್ನು ಮಾಡಿರುವ ಸಂ
ದರ್ಭವೂಕೂಡ ಅನಪೇಕ್ಷಿತವಾಗಿ ಬರುವುದು. ಈ ಪಕ್ಷದಲ್ಲಿ ಧರ್ಮ
ಗಳಿಗೆ ಸ್ವರೂಪತ್ಯಾಗ ವಿಧಿಇಲ್ಲವಾದುದರಿಂದ ಪ್ರಪನ್ನನು ತ್ಯಾಗಾಧಿ
ಕಾರಿ ಎಂತಲೂ ಇತರನು ಅನುಷ್ಠಾನಾಧಿಕಾರಿ ಎಂತಲೂ ಹೇಳಿರು
ವುದು ಸಂದರ್ಭಿಸಲಾರದೆಂದು ತಾತ್ಪರ್ಯವು. ಕಿಂಚ ಈ ಪಕ್ಷದಲ್ಲಿ
ಭಕ್ತಿಪ್ರಪತ್ತಿಗಳಿಗೆ ಅಂಗಾಂಗಿ ವ್ಯವಹಾರ ವ್ಯತ್ಯಾಸಮಾತ್ರವಲ್ಲದೆ
ಬೇರೊಂದಿಲ್ಲವು. ಎಂದರೆ ಉಪಾಸನದಲ್ಲಿ ಉಪಾಸನವು ಅಂಗಿಯಾಗಿ
ಪ್ರಪತ್ತಿಯು ಅಂಗವಾಗಿರುವುದು. ಪ್ರಪತ್ತಿಯಲ್ಲಿ ಪ್ರಪತ್ತಿಯು
ಅಂಗಿಯಾಗಿ ಭಕ್ತಿಯು ಅಂಗವೆನ್ನಲ್ಪಡುವುದಾಗಿಯೂ ಇರುವ
ಈ ವ್ಯತ್ಯಾಸವಲ್ಲದೇ ಈ ಎರಡು ಉಪಾಯಗಳಲ್ಲಿ ಈ ಯರಡ
ನ್ನು ಅನುಷ್ಠಿಸಬೇಕಾದ ಸಂದರ್ಭದಲ್ಲಿ ನಿವಾರಣ ಮಾಡತಕ್ಕವರಿ
ಲ್ಲವೆಂದು ತಾತ್ಪರ್ಯವು. ಆದರೂ ಪ್ರಪನ್ನನು ಪ್ರಪತ್ತ್ಯಂಗವ
ನ್ನಾಗಿ ಕರ್ಮಾದಿಗಳನ್ನು ಸಂಪೂರ್ಣವಾಗಿ ಅನುಷ್ಠಿಸಬೇಕೆಂದರೆ
ಅಕಿಂಚನಾಧಿಕಾರವಿರೋಧವು ಬರುವುದೆಂಬ ನಿಮ್ಮ ಆಕ್ಷೇಪಕ್ಕೋ
ಸ್ಕರ ಅಂಗತ್ವೇನ ಭಕ್ತಿಯೊಗದಲ್ಲಿ ಪೂರ್ಣಾನುಷ್ಠಾನ ವಿಲ್ಲದಿದ್ದರೂ
ಸ್ವಲ್ಪಾಂಶವನ್ನಾದರೂ ಅನುಷ್ಠಿಸಬೇಕೆಂದು ಹೇಳುವೆವು ? ಎಂ
ದರೆ ಈ ವೈಷಮ್ಯವು ಯುಕ್ತವಲ್ಲವು. "ಸಕಲಾಂಗೋಪಸಂಹಾ
ರೇಕಾಮ್ಯಂಕರ್ಮನಸಿದ್ಧ್ಯತಿ ,, ಎಂಬರೀತಿಯಿಂದ ಪ್ರಪತ್ತಿರೂಪವಾದ
ಕರ್ಮವೂ ಕಾಮ್ಯರೂಪವಾದುದರಿಂದ ಪೂರ್ಣವಾದ ಅಂಗಾನುಷ್ಠಾನವಿ
ಲ್ಲದಿದ್ದರೆ ಯಥಾಕಥಂಚಿದನುಷ್ಠಾನದಿಂದ ಸಿದ್ಧಿಸಲಾರದೆಂದು ತಿಳಿಯು

ಬೇಕು. ಈ ಪ್ರಕಾರವಾಗಿ ಹೇಳಿರುವ ಯುಕ್ತಿಗಳಿಂದ ' ಪರಿತ್ಯಜ್ಯ, ಎಂಬುವುದಕ್ಕೆ ಧರ್ಮಸ್ವರೂಪತ್ಯಾಗವನ್ನು ಅರ್ಥವನ್ನಾಗಿ ಹೇಳುವ ಪಕ್ಷದಲ್ಲಿ ತಾನು ಮಾಡುವ ಭಗವದ್ಭಾಗವತಾದಿ ಕೈಂಕರ್ಯಗಳೆಲ್ಲವೂ ಸ್ವರೂಪತ್ಯಾಗವಿಧಿಯುಲ್ಲಂಘನಗಿರಬೇಕಾಗಿರುವುದರಿಂದ ಅಪಚಾರ ಕೋಟಿಯಲ್ಲಿಯೇ ಸೇರುವುವು. ಇದಕ್ಕೆಉಪಾಯತ್ವಬುದ್ಧಿತ್ಯಾಗವನ್ನು ಅರ್ಥವನ್ನಾಗಿ ಹೇಳುವ ಪಕ್ಷದಲ್ಲಿ ಧರ್ಮಸ್ವರೂಪಾನುಷ್ಠಾನವು ಪ್ರಸಕ್ತ್ಯಂಗವಾಗಿ ಏರ್ಪಡುವುದು. ಈ ಪ್ರಕಾರವಾಗಿ ಹೇಳುವುದರಿಂದನ್ಯರಪೇಕ್ಷ್ಯಬಾಧೆಯೂ ಅಂಕಿಂಚನಾಧಿಕಾರ ಭಾಧೆಯೂ ಬರುವುದು. ಆದುದರಿಂದ ಈ ಎರಡೂ ಅರ್ಥವಲ್ಲವು. ... ... *

ಆದರೂ " ಸಂಗತ್ಯಕ್ತ್ವಾಫಲಂಚೈವ ಸತ್ಯಾಗಸ್ಸಾತ್ವಿಕೋಮತಃ ‖ ಏತಾನ್ಯಪಿಚಕರ್ಮಾಣಿ ಸಂಗಂತ್ಯಕ್ತ್ವಾಫಲಾನಿಚ । ಕರ್ತವ್ಯಾನೀತಿಮೇಪಾರ್ಥನಿಶ್ಚಿತಂಮತಮುತ್ತಮಂ ‖ ( ೧೮‖೬) ಎಂಬದಾಗಿ ಹೇಳಲ್ಪಟ್ಟ ಸಾತ್ವಿಕತ್ಯಾಗದೊಡನೆ ಕೂಡಿರುವ ನಿತ್ಯನೈಮಿತ್ತಿಕಕರ್ಮಮಾತ್ರಕ್ಕೆ ಅಂಗತ್ವವನ್ನಂಗೀಕರಿಸುವೆವು ಎಂದರೆ ಈ ಪ್ರಕಾರವಾಗಿ ಹೇಳುವಂತವರು ಕಾಕಕಾಳೀಯ ದ್ರೌಪದೀ ಮೊದಲಾದವರು ಮಾಡಿರುವ ಭರನ್ಯಾಸದಲ್ಲಿ ಅಂಗತ್ವೇನ ಸಾತ್ವಿಕತ್ಯಾಗ ಪೂರ್ವಕವಾದ ಧರ್ಮಾನುಷ್ಠಾನವನ್ನು ಕಾಣಲಿಲ್ಲವಾದುದರಿಂದ ಅವರವರ ವೃತ್ತಾಂತವನ್ನು ಮರತಿರುವಂತೆ ತೋರುತ್ತದೆ. ... *

ಆದರೆ ಈ ಧರ್ಮಗಳಿಗೆ ಅಂಗತ್ವವನ್ನು ಕಾಕಾದಿಗಳನುಷ್ಠಿಸಿರುವ ಪ್ರಸಕ್ತಿಯಲ್ಲಿ ಕಾಣಲಿಲ್ಲವಾದುದರಿಂದ ಅವರುಮಾಡಿರುವ ಪ್ರಸಕ್ತಿಯು ವ್ಯರ್ಥವಾಗಲಿಲ್ಲವೋ ? ಎಂದರೆ ಭಕ್ತ್ಯಾದಿಗಳನ್ನು ಅಂಗತ್ವೇನ ಸ್ವೀಕರಿಸದ ಸಕೃದನುಷ್ಠೇಯವಾದ ಭರನ್ಯಾಸದಿಂದಲೆ ತತ್‌ಕ್ಷಣದಲ್ಲಿ ಕಾಕವಿಭೀಷಣಾದಿಗಳು ಇಷ್ಟಸಿದ್ಧಿಯನ್ನು ಹೊಂದಿರುತ್ತಾರೆಂಬದಾಗಿ ಶ್ರೀಮದ್ರಾಮಾಯಣಾದಿಗಳಲ್ಲಿ ಕೇಳಿರುವೆವಾದುದರಿಂದ ಅವರು ಮಾಡಿರುವ ಪ್ರಸಕ್ತಿಯು ವ್ಯರ್ಥವಾಯಿತೆಂದು ಹೇಳಲವಕಾಶವಿಲ್ಲವು. ಆದುದರಿಂದ ' ಸರ್ವಧರ್ಮಾನ್‌ಪರಿತ್ಯಜ್ಯ,ಎಂಬಸ್ಥಳದಲ್ಲಿ ಉಪಾಯಾಂತರನ್ಯಾಯದಿಂದ ಪ್ರಸಕ್ತಗಳಾದ ಕರ್ಮಯೋಗಾದಿಗಳಿಗೆ ಪ್ರಸಕ್ತ್ಯಂ

ಗತ್ವಬಾಧೆಯು ಹೇಳಲ್ಪಡುವುದೆನ್ನುವಪಕ್ಷದಲ್ಲಿ ನೈರಪೇಕ್ಷ್ಯರೂಪವಾದ ಉಪಾಯ ಪ್ರಭಾವವೂ ವರ್ಣಾಶ್ರಮ ಧರ್ಮಗಳಿಗೆ ನಿಷೇಧವಿಲ್ಲದೇ ಇರುವುದರಿಂದ ಕೈಂಕರ್ಯಾದಿಗಳೂ ಪ್ರತಿಷ್ಠಾಪಿತವಾಗುವು ವೆಂದರಿಯಬೇಕು. (ಆದಿ ಶಬ್ದದಿಂದ ಅಪರಾಧ ಪರಿಹಾರಾದಿಗಳೂ ಸಿದ್ಧವೆಂದರಿಯಬೇಕು.) ಆದುದರಿಂದ ಈ ಚರಮಶ್ಲೋಕದಲ್ಲಿ ಸರ್ವಧರ್ಮಗಳ ಸ್ವರೂಪತ್ಯಾಗವನ್ನು ಅಂಗವನ್ನಾಗಿ ವಿಧಿಸುವುದೆಂತಲೂ ಅವು ಅಂಗವಾಗುವಂತೆ ಉಪಾಯತ್ವ ಬುದ್ಧಿತ್ಯಾಗ ಮಾತ್ರವೇ ವಿಧಿಸಲ್ಪಡುವುದೆಂತಲೂ ಹೇಳುವಪಕ್ಷಗಳು ಆಜ್ಞಾನುಪಾಲನಾದಿ ಸರ್ವಶಾಸ್ತ್ರಗಳಿಗೂ ಪ್ರಪತ್ತಿಗೆ ನೈರಪೇಕ್ಷ್ಯವನ್ನು ಹೇಳುವ ಶಾಸ್ತ್ರಗಳಿಗೂ ಪೂರ್ವಾಚಾರ್ಯಸಂಪ್ರದಾಯಗಳಿಗೂ ಪ್ರಪನ್ನರಾದ ಪೂರ್ವೀಕರಾಗಿರುವ ಶಿಷ್ಟಜನರ ಆಚಾರಕ್ಕೂ ವಿರುದ್ಧಗಳಾಗಿರುವುವು. ಈ ಪ್ರಕಾರವಾಗಿ ಹೇಳಿರುವ ದೋಷಗಳಿಂದ ಧರ್ಮಗಳ ಸ್ವರೂಪತ್ಯಾಗವೂ ಪ್ರಪತ್ತ್ಯಂಗವಲ್ಲವು. ಪ್ರಪತ್ತಿಗೆ ಹೇಳಿರುವ ನೈರಪೇಕ್ಷ್ಯದಿಂದ ಆ ಧರ್ಮಗಳ ಸ್ವರೂಪವೂ ಅದಕ್ಕಂಗವಲ್ಲವು. ಆದುದರಿಂದ ಬೇರೊಂದು ಧರ್ಮಗಳಿಂದಲೂ ಈ ಪ್ರಪತ್ತಿಗೆ ಅಪೇಕ್ಷೆಯಿಲ್ಲವೆಂಬುವುದರಲ್ಲಿಯೆ ಈ ತ್ಯಾಗವಿಧಿಗೆ ತಾತ್ಪರ್ಯವೆಂದರಿಯಬೇಕು. ... ... *

ಆದರೆ ನೈರಪೇಕ್ಷ್ಯವಿಧಿಪಕ್ಷದಲ್ಲಿಯೂಕೂಡ ಅಪ್ರಸಕ್ತಗಳಾದ ಧರ್ಮಗಳ ನೈರಪೇಕ್ಷ್ಯಬೋಧನವು ಉಚಿತವಲ್ಲವಾದುದರಿಂದ ಇಲ್ಲಿಯಾವ ಧರ್ಮಗಳಿಗೆ ಪ್ರಸಕ್ತಿಯುಂಟಾಗಿ ಅವುಗಳನೈರಪೇಕ್ಷ್ಯವು ವಿಧಿಸಲ್ಪಡುವುದೆಂದರೆ ಅದಕ್ಕುತ್ತರವು. ವೇದಾಂತ ಚೋದಿತಗಳಾದ ವಿದ್ಯೆಗಳ ಪೈಕಿ ಒಂದು ವಿದ್ಯೆಯಲ್ಲಿ ಓದಲ್ಪಟ್ಟು ಅಂಗಗಳಾಗಿ ತೋರುವ ವರ್ಣಾಶ್ರಮ ಧರ್ಮಗಳೂ ಗತಿಚಿಂತನಾದಿಗಳೂ ಬೇರೆ ವಿದ್ಯೆಗಳಲ್ಲಿಬರುವಂತೆ ತುಲ್ಯನ್ಯಾಯದಿಂದ ವೇದಾಂತ ಚೋದಿತವಾದ ಈ ನ್ಯಾಸವಿದ್ಯೆಯಲ್ಲಿಯೂ ಅಂಗತ್ವೇನಬರುವುದೆಂದು ಪ್ರಸಕ್ತವಾಗಲು ಈ ಪ್ರಕಾರದಿಂದಅಂಗತ್ವ ಪ್ರಸಂಗವುಳ್ಳ ಸರ್ವಧರ್ಮಗಳಿಂದಲೂ ಈ ಪ್ರಪತ್ತಿಗೆ ಅಪೇಕ್ಷೆಯಿಲ್ಲವೆಂಬುವುದೆ ಈ ನೈರಪೇಕ್ಷ್ಯ ವಿಧಿಪಕ್ಷಕ್ಕೆ ಉಚಿತವೆಂದರಿಯಬೇಕು. ಆದರೂ ಪ್ರಪನ್ನವಿಷಯ

ದಲ್ಲಿ ವರ್ಣಾಶ್ರಮ ಧರ್ಮಗಳು ಪ್ರಪತ್ತ್ಯಂಗತ್ವೇನ ಅನುಷ್ಠೇಯ ವಲ್ಲವಾದರೇ ಜಲತಾಡನಾದಿಗಳಂತೆ ಅವುಗಳ ಅನುಷ್ಠಾನವೇನಿರರ್ಥಕವಲ್ಲವೋ ? ಎಂದರೆ ಈ ಸಂಧ್ಯಾವಂದನಾದಿ ಧರ್ಮಗಳಿಗೆ ವಿದ್ಯಾಸಹಕಾರಿತ್ವರೂಪವಾದ ಆಕಾರದಿಂದ ಅನುಷ್ಠಾನವಿಲ್ಲದಿದ್ದರೂ " ಅಹರಹಸ್ಸಂಧ್ಯಾಮುಪಾಸೀತ ॥ ಸಂಧ್ಯಾಹೀನೋಶುಚಿರ್ನಿತ್ಯಮ ನರ್ಹಸ್ಸರ್ವಕರ್ಮಸು ॥ ವಿಹಿತತ್ವಾಚ್ಚಾಶ್ರಮಕರ್ಮಾಪಿ ॥ ಮನೀಷೀವೈದಿಕಾಚಾರಂಮನಸಾಪಿನಲಂಘಯೇತ್ " ಇತ್ಯಾದಿ ವಚನಗಳಲ್ಲಿ ಹೇಳಿರುವ ವಿನಿಯೋಗಾಂತರವನ್ನು ಪ್ರಪನ್ನವಿಷಯದಲ್ಲಿ ಯಾರುತಾನೆ ನಿವಾರಣಮಾಡುವರು ? " ಯಾವಜ್ಜೀವಮಗ್ನಿ ಹೋತ್ರಂಜುಹುಯಾತ್ ,, ಇತ್ಯಾದಿ ವಿನಿಯೋಗಾಂತರದಿಂದ ವರ್ಣಾಶ್ರಮಾದಿಗಳಿಗೋಸ್ಕರ ಧರ್ಮಾನುಷ್ಠಾನವು ಅವಶ್ಯಕರ್ತ್ತವ್ಯವೆಂದು ಭಾವವು. ಆದುದರಿಂದ ಈ ಧರ್ಮಗಳ ಅನುಷ್ಠಾನವೂ ಧರ್ಮಗಳ ತ್ಯಾಗವೂ ಪ್ರಪದನಕ್ಕೆ ಅಂಗವಲ್ಲವಾದುದರಿಂದ ತನಿಗೆ ಅಶಕ್ಯಗಳಾದ ಧರ್ಮಗಳನೈರಾಶ್ಯವು (ಆಶಾರಾಹಿತ್ಯವು) ಆಕಿಂಚನ್ಯರೂಪವಾದ ಅಧಿಕಾರದಲ್ಲಿ ಸೇರುವುದು. ಶಕ್ಯಗಳಾದ ಸಂಧ್ಯಾದಿ ಧರ್ಮಗಳ ಅನುಷ್ಠಾನವುಆಜ್ಞಾನುಪಾಲನ ಕೈಂಕರ್ಯವಾಗುವುದೆಂದರಿಯಬೇಕು.

ಆದರೂ ಆನುಕೂಲ್ಯಸಂಕಲ್ಪವು ಪ್ರಪತ್ತ್ಯಂಗವಾಗಿರುವುದರಿಂದಲೂ ಅದುವಿಹಿತವಾದ ಕರ್ಮಗಳ ಆಚರಣ ರೂಪವಾಗಿರುವುದರಿಂದಲೂ ವಿಹಿತವಾದ ಧರ್ಮಗಳ ಆಚರಣಕ್ಕೆ ಪ್ರಪತ್ತ್ಯಂಗತ್ವವಿಲ್ಲವೋ ? ಎಂದರೆ ಪ್ರಪತ್ತಿಯಲ್ಲಿ ಧರ್ಮಗಳ ಆಚರಣ ಸಂಕಲ್ಪಮಾತ್ರವೆ ಅಂಗವೆಂಬದಾಗಿ " ಆನುಕೂಲ್ಯಸ್ಯಸಂಕಲ್ಪಃ,, ಇತ್ಯಾದಿ ವಚನಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದು. ವಿಹಿತಾಚರಣವೋ ಎಂದರೆ ಆಜ್ಞೆಯಿಂದ ಪ್ರಾಪ್ತವಾಗಿರುವುದು. ಸಂಕಲ್ಪ ಪ್ರಯುಕ್ತವಲ್ಲವು. ಆದುದರಿಂದ ವಿಹಿತಾಚರಣವು ಪ್ರಪತ್ತಿಗೆ ಅಂಗವಲ್ಲವು. ಆದರಿಂದ ಆಜ್ಞಾಕೈಂಕರ್ಯಗಳೆಲ್ಲವೂ " ಅಹರಹಸ್ಸಂಧ್ಯಾಮುಪಾಸೀತ ,, ಇತ್ಯಾದಿ ವಿಧಿಬಲಪ್ರಾಪ್ತವೆಂದರಿಯಬೇಕು.

ಆದರೂ ಕೈಂಕರ್ಯಗಳೆಲ್ಲವೂ ಆಜ್ಞಾಸಿದ್ಧವಾದರೆ ನಿತ್ಯನೈಮಿತ್ತಿಕ ಕರ್ಮಗಳಲ್ಲಡಗದ ಅನುಜ್ಞಾಕೈಂಕರ್ಯಗಳಲ್ಲಿ ಪ್ರವೃತ್ತಿಯು ಪ್ರಪನ್ನನಿಗೆ ಇಲ್ಲದೇ ಹೋಗಲಿ ? ಅನುಜ್ಞಾಕೈಂಕರ್ಯಗಳನ್ನು ಮೋಕ್ಷೋಪಾಯವೆಂಬ ಆಕಾರದಿಂದಲಾದರೂ ಮೋಕ್ಷೋಪಾಯಗಳಿಗೆ ಅಂಗವೆಂಬ ಆಕಾರದಿಂದಲಾದರೂ ಆಜ್ಞಾಸಿದ್ಧಗಳೆಂಬ ಆಕಾರದಿಂದಲಾದರೂ ಪ್ರಾಯಶ್ಚಿತ್ತಾರ್ಥವಾದರೂ ಸ್ವರ್ಗಪಶ್ವಾದಿ ಕಾಮ್ಯಾರ್ಥವಾದರೂ ದ್ಯೂತಭೋಜನಾದಿಗಳಂತೆ ಲೋಕಸಿದ್ಧವಾದ ತನ್ನ ಸುಖಕ್ಕಾದರೂ ಅಲ್ಲವೆ ಒಂದನ್ನನುಷ್ಠಿಸ ಬೇಕಾಗಿರುವುದು. ಅದು ಯಾವದೂ ಅಲ್ಲವು. ಮುಕ್ತರಾದವರಂತೆ ಭಗವತ್ಪ್ರೀತ್ಯರ್ಥವಾಗಿಯೂ ಮಾಡುವುದಿಲ್ಲವು. ಅವರಂತೆ ಭಗವತ್ಪ್ರೀತ್ಯರ್ಥವಾದ ಕೈಂಕರ್ಯವಿದೆಂದರಿಯಲು ಇವನಿಗೆ ಶಕ್ತಿ ಇಲ್ಲವಾದುದರಿಂದ ಎಂದರ್ಥವು. ಹೀಗಿರುವುದರಿಂದ ನಿತ್ಯನೈಮಿತ್ತಿಕಗಳಲ್ಲಡಗದ ಗೋಪುರಮಂಟಪ ನಿರ್ಮಾಣಾದಿ ರೂಪವಾದ ಅನುಜ್ಞಾ ಕೈಂಕರ್ಯಗಳಿಗೆ ಪ್ರವರ್ತಕರು ಯಾರೆಂದು ಸಂದೇಹಿಸದೆ ಇವು ಉಪಾಯಾಂತರದಲ್ಲಿ ಸೇರಲಾರವು .ಬೇರೆ ಅಂಗಗಳನ್ನಪೇಕ್ಷಿಸದ ಪ್ರಪತ್ತಿಗೆ ಪರಿಕರಗಳೂ ಆಗಲಾರವು. ಮಾಡದೇ ಇದ್ದರೆ ಭಗವನ್ನಿಗ್ರಹವುಂಟಾಗುವುದೆಂದು ಮಾಡತಕ್ಕವುಗಳೂ ಅಲ್ಲವು. ಪ್ರಯೋಜನಾಂತರವು ನಿಷಿದ್ಧವಾಗಿರುವುದರಿಂದ ಸ್ವರ್ಗಪಶ್ವಾದಿಗಳಿಗಾಗಿಯೂ ಅನುಷ್ಠಿಸುವುದಿಲ್ಲವು. ಪರತಂತ್ರ ಚೇತನನಾಗಿರುವುದರಿಂದ ಲೌಕಿಕ ಜನರದ್ಯೂತಾದಿಗಳಂತೆ ತನ್ನ ಭೋಗಾರ್ಥವಾಗಿಯೂ ಅನುಷ್ಠಿಸುವುದಿಲ್ಲವು. ಮುಕ್ತರಂತೆ ಭಗವದಭಿಪ್ರಾಯವನ್ನು ಪ್ರತ್ಯಕ್ಷವಾಗಿ ಕಂಡು ಭಗವಂತನನ್ನು ಸಂತೋಷ ಪಡಿಸುವುದಕ್ಕೋಸ್ಕರವಾಗಿ ಪ್ರವರ್ತಿಸುವುದೂ ಇಲ್ಲವು. ಇನ್ನು ಏತಕ್ಕೆ ಅನುಜ್ಞಾಕೈಂಕರ್ಯಾನುಷ್ಠಾನವೆಂದರೆ ಈ ಅನುಜ್ಞಾ ಕೈಂಕರ್ಯಕ್ಕೆ ಫಲಾಂತರಗಳಂತೆ ಭಗವತ್ಪ್ರೀತಿಯೂ ಫಲವೆಂಬದಾಗಿ ಶಾಸ್ತ್ರಸಿದ್ಧವಾಗಿರುವುದರಿಂದ ಅವನ ಪ್ರೀಣನದಲ್ಲಿ ಸತ್ವೋತ್ತರನಾದ ತನ್ನ ಪ್ರಕೃತಿ ಸ್ವಭಾವದಿಂದ ರುಚಿ ಯುಂಟಾಗುವುದರಿಂದ ( ರಜೋಗುಣ ಪ್ರಾಬಲ್ಯದಲ್ಲಿ ಹೇಗಾದರೆ ಪುತ್ರ ಮಿತ್ರ ಭಾರ್ಯಾದಿಗಳಲ್ಲಿ ಪ್ರೀತಿಯನ್ನು ಮಾಡಬೇಕೆಂಬ ಅ

ಪೇಕ್ಷೆ ಯುಂಟಾಗುವುದೋ ಆದರಂತೆ ಸತ್ವಗುಣ ಪ್ರಾಬಲ್ಯದಿಂದ ಭಗವದ್ವಿಷಯದಲ್ಲಿ ಪ್ರೀತಿಯುಂಟಾಗಲಿ ಎಂಬ ಅಪೇಕ್ಷೆ ಯುಂಟಾಗುವುದರಿಂದ ) ಸುಹೃತ್ಪುತ್ರಾದ್ಯುಪಲಾಲನಗಳಂತೆ ಸರ್ವವಿಧ ಬಂಧುವಾದವನ ಪ್ರೀಣನದಲ್ಲಿ ಪ್ರವೃತ್ತಿ ಯುಂಟಾದರೂ ಶಾಸ್ತ್ರಮುಖದಿಂದಲೆ ಭಗವತ್ಪ್ರೀತಿಯನ್ನು ತಿಳಿದು ಪ್ರವರ್ತಿಸುವುನೆಂದರಿಯ ಬೇಕು.

ಇಲ್ಲಿಕೆಲವರು ಸರ್ವೇಶ್ವರನಲ್ಲಿ ಸರ್ವಭರಗಳನ್ನು ಸಮರ್ಪಣೆ ಮಾಡಿದ ವಿವೇಕಿಯೊಾದವನಿಗೆ ಇದು ಬಿಡತಕ್ಕದ್ದು, ಇದು ಮಾಡತಕ್ಕದ್ದು, ಎಂಬೀ ವಿಭಾಗ ನಿರ್ಣಯವು ಸ್ವರೂಪ ಜ್ಞಾನಾಧೀನವಾಗಿರುವುದರಿಂದ ಇವನು ಸ್ವರೂಪ ವಶ್ಯನಾಗಿರಬೇಕಲ್ಲದೆ ಶಾಸ್ತ್ರವಶ್ಯನಾಗಿ ಪ್ರವರ್ತಿಸುತ್ತಾನೆಂಬುವುದು ಉಚಿತವೊ ? ಎನ್ನುವರು. ಇದು ಯುಕ್ತವಲ್ಲವು. ಸ್ವರೂಪವು ಈರೀತಿಯಾಗಿರುವುದೆಂದು ಶಾಸ್ತ್ರಮುಖದಿಂದ ತಿಳಿಯಬೇಕಾದ ಸಂದರ್ಭದಲ್ಲಿ ತ್ಯಾಜ್ಯೋಪಾದೇಯ ವಿಭಾಗಾರ್ಥವಾಗಿಯೂ ಶಾಸ್ತ್ರವು ಯೇತಕ್ಕೆ ಅಪೇಕ್ಷಿಸಲ್ಪಡಲಾರದು? ಸ್ವರೂಪ ಪರಿಜ್ಞಾನಕ್ಕೆ ಶಾಸ್ತ್ರವು ಅಪೇಕ್ಷಿತವಾದರೆ ಈ ಸ್ವರೂಪಕ್ಕೆ ಈ ಪುರುಷಾರ್ಥವೂ ಅದಕ್ಕೆತಕ್ಕ ಈ ಉಪಾಯವೂ ತ್ಯಾಜ್ಯವೆಂತಲೂ ಈ ಪುರುಷಾರ್ಥವೂ ಇದಕ್ಕೆ ತಕ್ಕ ಈ ಉಪಾಯವೂ ಪರಿಗ್ರಾಹ್ಯವೆಂತಲೂ ವಿಶದವಾಗಿ ತಿಳಿಯುವುದಕ್ಕೆ ಶಾಸ್ತ್ರವನ್ನು ಬಿಟ್ಟರೆ ಬೇರೆಮಾರ್ಗವಿಲ್ಲವು. ಆದರೆ ಶಾಸ್ತ್ರವು ಅಪೇಕ್ಷಿತವಾಗುವ ಸಂದರ್ಭದಲ್ಲಿ ಸ್ವರೂಪಜ್ಞಾನಕ್ಕೆ ಅನಪೇಕ್ಷಾಪ್ರಸಂಗ ವುಂಟಾಗಲಾರದೊ ? ಎಂದರೆ ಸ್ವರೂಪದಲ್ಲಿ ಶೇಷತ್ವಾದಿಗಳಿಂದ ಕೆಲವು ಔಚಿತ್ಯಗಳನ್ನು ಕಾಣಬಹುದಲ್ಲದೆ ಪರಮಶೇಷಿಯಾದ ಸರ್ವೇಶ್ವರನ ಕೈಂಕರ್ಯ ಪ್ರಕಾರವಿದು, ಈ ಕೈಂಕರ್ಯಗಳಿಗೆ ಉಪಾಯಗಳಿವು ಎಂಬದಾಗಿ ಸ್ವರೂಪ ಜ್ಞಾನವು ವಿಶದವಾಗಿ ತೋರಿಸಲಾರದು. ಆದುದರಿಂದ ಶಾಸ್ತ್ರಗಳನ್ನು ಆದರಿಸದೇ ನಿಷಿದ್ಧವಾದ ದ್ರವ್ಯಗಳಿಂದಲಾದರೂ ವಿಹಿತವಾದವುಗಳಲ್ಲಿ ಅನ್ಯಾಯದಿಂದ ಸಂಪಾದಿಸಲ್ಪಟ್ಟದ ದ್ರವ್ಯಗಳಿಂದಲಾದರೂ ತನ್ನ ಮನಸ್ಸಿಬಂದಂತೆ ಶಾಸ್ತ್ರವಿರುದ್ಧವಾದ ಕ್ರಮದಲ್ಲಿ ಕೈಂಕರ್ಯಗಳನ್ನು ಅನುಷ್ಠಿಸಿ ಈಪ್ರಕಾರದಿಂದ ಶಾಸ್ತ್ರವನ್ನಾದರಿಸಲಾರವೆಂದರೆ

ಇವು ಉಪಚಾರಗಳು ಇವು ಅಪಚಾರಗಳು ಎಂಬದಾಗಿ ವಿಭಾಗಿಸಿ ಹೇಳುವ ಶಾಸ್ತ್ರಗಳೇ ನಿರರ್ಥಕಗಳಾಗುವುವು. ಕಿಂಚಶಾಸ್ತ್ರವನ್ನು ಆದರಿಸದೇ ಕೋದರೆ ಮಾಡಲ್ಪಡುವ ಕೈಂಕರ್ಯಗಳಿಗೆ ತನ್ನ ಅಪೇಕ್ಷೆಯಲ್ಲದೆ ಬೇರೆ ನಿಯಾಮಕವಿಲ್ಲದೆ ಇರುವುದರಿಂದ ಮುಮುಕ್ಷುಗಳಾದವರು ಮಾಡಕೂಡದ ಸರ್ವನಿಷಿದ್ಧ ಕರ್ಮಗಳನ್ನೂ ತನ್ನ ಅಪೇಕ್ಷಾಮಾತ್ರದಿಂದ ಕೈಂಕರ್ಯವೆಂತಲೆ ಅನುಷ್ಠಿಸಬೇಕಾಗಿ ಬರುವುದು. ನಿತ್ಯಗ್ರಂಥದಲ್ಲಿ ಶ್ರೀಭಾಷ್ಯಕಾರರೂ ಕೂಡ "ಶಾಸ್ತ್ರವಿರುದ್ಧಾನಿ ಸಂಭೃತ್ಯ ,, ಎಂಬದಾಗಿ ಹವಿರ್ನಿವೇದನ ಪ್ರಕರಣದಲ್ಲಿ ಶಾಸ್ತ್ರವಿರುದ್ಧಗಳಲ್ಲದ ಪದಾರ್ಥಗಳನ್ನು ತಂದು ಭಗವನ್ನಿವೇದನ ಮಾಡಬೇಕೆಂದು ಹೇಳಿರುತ್ತಾರೆ. ಹದಿನೇಳನೇ ಅಧ್ಯಾಯದಲ್ಲಿ ಶ್ರೀಕೃಷ್ಣನು ಕೂಡ "ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯವ್ಯವಸ್ಥಿತೌ । ಜ್ಞಾತ್ವಾಶಾಸ್ತ್ರವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ,, ಎಂಬದಾಗಿ ಸರ್ವಾಧಿಕಾರಿ ಸಾಧಾರಣವಾಗಿ ಸಕಲ ಕರ್ಮಗಳನ್ನೂ ಶಾಸ್ತ್ರಮುಖದಿಂದಲೆ (ಇದು ಮಾಡತಕ್ಕದ್ದು, ಇದು ಮಾಡತಕ್ಕದ್ದಲ್ಲವು ಎಂಬೀ ವಿಭಾಗವನ್ನು) ತಿಳಿದು ಮಾಡಬೇಕೆಂದು ಹೇಳಿರುತ್ತಾನೆ. ಆದುದರಿಂದ ಶಾಸ್ತ್ರವಶ್ಯನಾಗಿ ತನ್ನ ಅಧಿಕಾರಾನುರೂಪಗಳಾದ ಕೈಂಕರ್ಯಗಳನ್ನೆ ಮಾಡಬೇಕೆಂದು ಸಿದ್ಧವಾಯಿತು. "ನಿಜಕರ್ಮಾದಿ ಭಕ್ತ್ಯಂತಂ ಕುರ್ಯಾತ್ಪ್ರೀತ್ಯೈವಕಾರಿತಃ ,, ಎಂಬ ಗೀತಾರ್ಥಸಂಗ್ರಹ ವಚನದಲ್ಲಿ 'ಪ್ರೀತ್ಯೈವ, ಎಂಬುವುದರಿಂದ ಶಾಸ್ತ್ರವು ಅನಾವಶ್ಯಕವೆಂತಲೂ ತನ್ನ ಪ್ರೀತಿಯೇ ಆವಶ್ಯಕವೆಂತಲೂ ಶ್ರೀಮದ್ಯಾಮುನಾಚಾರ್ಯರು ಹೇಳಲಿಲ್ಲವು. ಶಾಸ್ತ್ರಮುಖದಿಂದಲೆ ತಿಳಿದುಕೊಳ್ಳಬೇಕಾದ ಕೈಂಕರ್ಯಗಳಲ್ಲಿ ಶೇಷಭೂತನಾದ ತನಿಗೆ ಹುಟ್ಟುವ ಪ್ರೀತಿಯುಪ್ರೇರಕತ್ವಾತಿಶಯವನ್ನು ಹೇಳುವುದರಲ್ಲಿ ಮಾತ್ರವೇ ಅವರ ಅಭಿಪ್ರಾಯವಿರುವುದರಿಂದ ಶಾಸ್ತ್ರವು ಅನಾವಶ್ಯಕವೆಂದು ಹೇಳುವುದು ಅಯುಕ್ತವು. ಈ ಪ್ರಕಾರವಾಗಿ ಪ್ರಪನ್ನನುಕೂಡ ಶಾಸ್ತ್ರವಶ್ಯನಾಗಿ ಶಾಸ್ತ್ರೋಕ್ತಗಳಾದ ಕೈಂಕರ್ಯಗಳನ್ನೇ ಮಾಡಬೇಕಾಗಿರುವುದರಿಂದ ವಿಧಿನಿಷೇಧ ಪಕ್ಷವೂ (ವಿಧಿನಿಷೇಧ ಪಕ್ಷವು ಯಥೇಷ್ಟಾ

ಚರಣ ರೂಪವಾಗಿರುವುದು. ಎಂದರೆ ವಿಧಿಯಿಂದ ಪ್ರಾಪ್ತವಾದ ಕೈಂಕರ್ಯಗಳನ್ನು ಲಂಘನ ಮಾಡುವುದೆಂದರೆ ಅತಿಕ್ರಮಿಸುವುದು. ಆದರಿಂದ ಕೃತ್ಯಾಕರಣವು ಹೇಳಲ್ಪಟ್ಟಿತು. ನಿಷೇಧ ಲಂಘನ ಪಕ್ಷವ್ಯಾವದೆಂದರೆ ಶಾಸ್ತ್ರದಲ್ಲಿ ಯಾವದನ್ನು ಮಾಡಬೇಡವೆಂದು ನಿಷೇಧಿಸಿರುರುವುದೊ ಆದನ್ನು ಬಿಡುವುದೆಂದರೆ ನಿಷಿದ್ಧ ಕರ್ಮಗಳನ್ನು (ಅಕೃತ್ಯಗಳನ್ನು ಮಾಡುವಿಕೆಯು.) ವಿಹಿತ ನಿಷಿದ್ಧತ್ಯಾಗಪಕ್ಷವು (ವಿಹಿತವಾದವುಗಳನ್ನು ಬಿಡುವಿಕೆಯು ವಿಹಿತ ತ್ಯಾಗಪಕ್ಷವು, ನಿಷಿದ್ಧಗಳನ್ನು ಬಿಡುವಿಕೆಯು ನಿಷಿದ್ಧ ತ್ಯಾಗಪಕ್ಷವು ಈ ಪಕ್ಷದಲ್ಲಿ ವಿಹಿತವೂ ಬೇಡ, ನಿಷಿದ್ಧವಾದವುಗಳೂ ಮಾಡಬೇಡವೆಂದಿರುವಿಕೆಯು ಫಲಿಸುವುದು. ಮೊದಲಿನ ಪಕ್ಷದಲ್ಲಿ ವಿಹಿತನಿಷಿದ್ಧ ತ್ಯಾಗಗಳೆರಡೂ ಫಲಿತಗಳಾಗುವುದೆಂದರಿಯಬೇಕು, ವರ್ಣಾಶ್ರಮ ಧರ್ಮಗಳು ಔಪಾಧಿಕಗಳಾಗಿರುವುದರಿಂದ ಸ್ವರೂಪಜ್ಞಾವುಳ್ಳವನಿಗೆ ಬಿಡತಕ್ಕವುಗಳು ಆದರೆ ಸತ್ಯವದನಾದಿ ಸಾಮಾನ್ಯ ಧರ್ಮಗಳು ಮಾತ್ರವೆ ಅನುಷ್ಠೇಯಗಳೆಂಬ ಪಕ್ಷವೂ, ಆವುಗಳನ್ನು ಮಾಡಿದರೂ ಮಾಡಬಹುದು ಬಿಟ್ಟರೂ ಬಿಡಬಹುದೆಂಬ ಪಕ್ಷವೂ, ಆವುಗಳನ್ನು ಅನುಷ್ಠಿಸದೇಹೋದರೆ ಲೋಕಸಂಗ್ರಹ ವಿರೋಧಮಾತ್ರವೇ ಪ್ರತ್ಯವಾಯವಲ್ಲದೇ ಬೇರೊಂದು ವಿರೋಧವಿಲ್ಲವೆಂಬ ಪಕ್ಷವೂ ಮತ್ತು ಈ ಪ್ರಕಾರಗಳಾದ ಪಕ್ಷಗಳೆಲ್ಲವೂ ಸಮೀಚೀನವಾದ ನ್ಯಾಯದಿಂದ ಅನುಗ್ರಹಿಸಲ್ಪಟ್ಟ ಶಾಸ್ತ್ರಸಂಪ್ರದಾಯ ವಿರುದ್ಧಗಳಾಗಿರುವುದರಿಂದ ಸತ್ವಗುಣವುಳ್ಳವರಿಗೆ ಪರಿಗ್ರಹ ಯೋಗ್ಯಗಳಾಗಲಾರವು.

ಆದರೂ ಪ್ರಪನ್ನನಿಗೆ ಪ್ರಪತ್ತಿ ಶಾಸ್ತ್ರಗಳಲ್ಲಿ ಕೆಲವು ವೈದಿಕ ಧರ್ಮಗಳನ್ನು ನಿಷೇಧಿಸಿ ಅಪೂರ್ವಗಳಾದ ಕೆಲವು ಅಭಿಗಮನಾದಿ ವಿಧಿಯನ್ನು ಕಂಡಿರುವದಾದುದರಿಂದ ಸರ್ವಧರ್ಮಸ್ವರೂಪ ತ್ಯಾಗವು ಕೂಡದೋ? ಎಂದರೆ ಸನ್ಯಾಸಾಶ್ರಮ ನಿಷ್ಠರಿಗೆ ಗೃಹಸ್ಥಾಶ್ರಮನಿಷ್ಠಗಳಾದ ಕೆಲವು ಧರ್ಮಗಳನ್ನು ನಿಷೇಧಿಸಿ ನೂತನಗಳಾದ ಕೆಲವು ಧರ್ಮಗಳನ್ನು ವಿಧಿಸುವಂತೆ ಭಾಗವತತ್ವವನ್ನೇ ಕಾರಣವಾಗಿಟ್ಟುಕೊಂಡು ಕೆಲವು ಭಾಗವನ್ನು ನಿಷೇಧಿಸಿ ಕೆಲವನ್ನು ಅಪೂರ್ವವಾಗಿ ವಿಧಿಸಿದರೂ

" ಸಂಧ್ಯಾಹೀನೋಽಶುಚಿರ್ನಿತ್ಯ ಮನರ್ಹಸ್ಸರ್ವಕರ್ಮಸು ,, ಇತ್ಯಾದಿಗೆ ಳಿಂದ ಅವಶ್ಯವಾಗಿಮಾಡಬೇಕೆಂಬದಾಗಿಹೇಳಲ್ಪಟ್ಟ ಕರ್ಮಗಳನ್ನು ಬಿಡ ಬಾರದು. ಆದುದರಿಂದ ಸ್ವರೂಪತ್ಯಾಗ ಪ್ರಸಕ್ತಿಗೆ ಅವಕಾಶವಿಲ್ಲವು.

ಆದರೂ ಪ್ರಪನ್ನನಿಗೆ " ಸಾಂಧ್ಯಂಕರ್ಮಾಖಿಲಂ ಯತ್ತತ್ಸ್ನಾನಾಚಮನಪೂರ್ವಕಂ । ಕುರ್ಯಾದಷ್ಟಾಕ್ಷರೇಣೈವನಿತ್ಯಂ ಭಾಗವತೋತ್ತಮಃ ,, ಎಂಬದಾಗಿ ಶ್ರೀಪಾಂಚರಾತ್ರಾದಿ ಶಾಸ್ತ್ರಗಳಲ್ಲಿ ಹೇಳಿರುವ ಸಂಧ್ಯೋಪಾಸನಾದಿಗಳನುಷ್ಠೇಯಗಳಲ್ಲವೋ ? ಎಂದರೆ " ಸ್ವಗೃಹ್ಯೋವಿದ್ಯಮಾನೇಯಃ ಪರಗೃಹ್ಯೋಕ್ತಮಾಚರೇತ್ । ಭ್ರೂಣಹತ್ಯಾಸಮಂತಸ್ಯಸ್ವಗೃಹ್ಯಸ್ಯಾವಮಾನತಃ ,, ಇತ್ಯಾದಿ ವಚನಗಳಿಂದ ಸ್ವಸೂತ್ರೋಕ್ತಗಳಾದ ಧರ್ಮಗಳನ್ನು ಬಿಟ್ಟು ಬೇರೊಂದನ್ನು ಅನುಷ್ಠಿಸಿಕೊಂಡು ಸ್ವಸೂತ್ರೋಕ್ತವಾದವುಗಳನ್ನು ಅವಮಾನ ಪಡಿಸುವುದರಿಂದ ಭ್ರೂಣಹತ್ಯಾದೋಷ ಪ್ರಾಪ್ತಿರೂಪವಾದ ಪ್ರತ್ಯವಾಯವು ಹೇಳಲ್ಪಟ್ಟಿರುವುದರಿಂದ ಶ್ರೀಪಾಂಚರಾತ್ರಾದಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಸಂಧ್ಯಾದಿಭೇದಗಳುಆಯಾಶಾಸ್ತ್ರಾವಲಂಬಿಗಳಿಗಲ್ಲದೆ ಸರ್ವರಿಗೂಅನುಷ್ಠೇಯಗಳಾಗಲಾರವು. ಮನ್ವಾದಿಸ್ಮೃತಿಗಳಲ್ಲಿಯೂ ಆಪಸ್ತಂಬಬೋಧಾಯನಾದಿ ಸೂತ್ರಗಳಲ್ಲಿಯೂ ವಿಹಿತಗಳಾದ ಚೌಳಸಂಸ್ಕಾರಾದಿ ಧರ್ಮಭೇದಗಳನ್ನು ಅಯಾಸೂತ್ರನಿಷ್ಠರು ಅನುಷ್ಠಿಸುವಂತೆ ಭಗವಚ್ಛಾಸ್ತ್ರ ಸಂಹಿತಾ ಭೇದಗಳಲ್ಲಿಯೂ ಇತಿಹಾಸ ಪುರಾಣಾದಿಗಳಲ್ಲಿಯೂ ಹೇಳುವ ಸಂಧ್ಯೋಪಾಸನಾದಿ ಭೇದಗಳು ಆಯಾಶಾಸ್ತ್ರಗಳಲ್ಲಿಳಿದವರಿಗೆ ಅನುಷ್ಠೇಯವಾಗಿರುವುವು.

ಆದರೆ ಪ್ರಪನ್ನನಿಗೆ ಶ್ರುತಿಸ್ಮೃತಿಗಳಿಂದ ಹೇಳಲ್ಪಟ್ಟ ಧರ್ಮಗಳು ಅನುಷ್ಠೇಯಗಳಾದರೆ " ದೈವತಾನ್ಯಭಿಗಚ್ಛೇತ್ತು ,, ಇತ್ಯಾದಿಗಳಲ್ಲಿ ವಿಹಿತಗಳಾದ ದೇವತಾಂತರಭಜನವೂ ಕರ್ತವ್ಯವಾಗಲಾರದೋ ? ಎಂದರೆ " ದೈವತಾನ್ಯಭಿಗಚ್ಛೇತ್ತು ,, ಎಂತಲೂ " ದೇವಸ್ಥಾನಪ್ರಣಾಮನಂ ,, ಎಂಬಿದೇ ಮೊದಲಾದ ರೀತಿಯಿಂದ ಧರ್ಮಶಾಸ್ತ್ರೇತಿಹಾಸಾದಿಗಳಲ್ಲಿ ಹೇಳಲ್ಪಟ್ಟ ಆಚಾರವೂ ಪರಮೈಕಾಂತಿಗಳಿಗೆ ಶಾಸ್ತ್ರಬಲದಿಂದಲೆ (ಏಕಾದಶ್ಯುಪವಾಸ ವಿಧಾನವು ಶ್ರೀವೈಷ್ಣವನಿಗೆ

ಶುದ್ಧೈಕಾದಶೀ ಉಪವಾಸದಲ್ಲಿ ಪರ್ಯವಸಾನವಾಗುವಂತೆ) ಭಗವದ್ವಿಷಯದಲ್ಲಿಯೇ ಪರ್ಯವಸಾನವನ್ನು ಹೊಂದುವುದು.

ಆದರೂ ಪ್ರಪನ್ನನಿಗೆ ಸಂಧ್ಯೋಪಾಸನಾದಿ ಧರ್ಮವಿಧಾನವು ಉಚಿತವೋ ? ಉಚಿತವೆನ್ನುವ ಪಕ್ಷದಲ್ಲಿ " ತಸ್ಮಾದಷ್ಟಾಕ್ಷರಂ ಮಂತ್ರಂವಾಸ್ಪೃಕ್ತೈರ್ವೀತಕಲ್ಮಷೈಃ।ಸಂಧ್ಯಾಕಾಲೇಷು ಜಪ್ತವ್ಯಂಸತತಂಚಾತ್ಮಶುದ್ಧಯೇ॥ ದ್ವಯಮರ್ಥಾನುಸಂಧಾನೇನ ಸಹಸದೈವಂವಕ್ತಾ" ಇತ್ಯಾದಿಗಳಲ್ಲಿ ಆಯಾ ಕಾಲಗಳಲ್ಲಿಯೂ ಸರ್ವಕಾಲಗಳಲ್ಲಿಯೂ ವಿಹಿತವಾಗಿರುವ ಮಂತ್ರಜಪಾದಿ ವಿಧಾನವು ವಿರೋಧಿಸಲಾರದೋ? ಈ ಜಪಾದಿವಿಧಾನಗಳೆಲ್ಲವೂ ಅವಶ್ಯವಾಗಿ ಮಾಡತಕ್ಕವುಗಳಾದ ನಿತ್ಯನೈಮಿತ್ತಿಕ ಕರ್ಮಗಳಿಗೆ ವಿರೋಧವಲ್ಲದ ಸರ್ವಕಾಲಗಳಲ್ಲಿಯೂ ಮಾಡತಕ್ಕವುಗಳೆಂಬುವುದು " ಶ್ರೌತಸ್ಮಾರ್ತಾವಿರುದ್ಧೇಷು ಕಾಲೇಷು ಜಪಮಾಚರೇತ್ " ಎಂಬ ನಾರದಾದಿ ಸೂಕ್ತಿಗಳಿಂದಲೇ ಸ್ಪಷ್ಟವಾಗುವುದರಿಂದ ಪ್ರಪನ್ನ ವಿಷಯದಲ್ಲಿಯೂ ಕೂಡ ಸಂಧ್ಯೋಪಾಸನಾದಿ ವಿಧಾನಕ್ಕೆ ಕೊರತೆಯಿಲ್ಲವು. ಶ್ರೀವಂಗಿವಂಶೇಶ್ವರರೂ ಕೂಡ "ಹುತ್ವಾಗ್ನೀನಗ್ನಿಹೋತ್ರಾದಾವುಕ್ತಂಕಾಲಮಪೇಕ್ಷ್ಯ " ಎಂಬದಾಗಿ ತತ್ತತ್ಕಾಲಗಳಲ್ಲಿ ಅಗ್ನಿಹೋತ್ರಾದಿಗಳನ್ನು ಮಾಡಬೇಕೆಂದು ತಮ್ಮ ನಿತ್ಯಗ್ರಂಥದಲ್ಲಿ ನಿಬಂಧಿಸಿರುತ್ತಾರೆ.

ಆದರೂ ನ್ಯಾಯದಿಂದಲೂ ವಚನದಿಂದಲೂ ಋಷಿಗಳಿಂದ ಹೇಳಲ್ಪಟ್ಟ ವಚನಕ್ಕೆ ವ್ಯವಸ್ಥೆಯು ಯುಕ್ತವಾಗಿದ್ದರೂ ಗದ್ಯದಲ್ಲಿ ಶ್ರೀಭಾಷ್ಯಕಾರರು " ದ್ವಯಮರ್ಥಾನುಸಂಧಾನೇನ ಸಹಸದೈವಂವಕ್ತಾ " ಎಂಬದಾಗಿ ಅನುಗ್ರಹಿಸಿರುವುದರಿಂದ ಸರ್ವಕಾಲದಲ್ಲಿಯೂ ಮಾಡಬೇಕೆಂಬದಾಗಿ ವಿಹಿತವಾಗಿರುವ ದ್ವಯಾರ್ಥಾನುಸಂಧಾನಕ್ಕೆ ಧರ್ಮಶಾಸ್ತ್ರೋಕ್ತವಾದ ಸಂಧ್ಯೋಪಾಸನಾದಿ ವಿಧಾನವು ವಿರೋಧಿಸಲಾರದೋ ? ಕೆಲವು ಸಂಪ್ರದಾಯ ವಿರೋಧವೂ ಅಲ್ಲವೋ ? ಎಂದರೆ ಶ್ರೀಭಾಷ್ಯಕಾರರ ಗದ್ಯವಾಕ್ಯಕ್ಕೂ ಶ್ರೌತಸ್ಮಾರ್ತಾವಿರುದ್ಧವಾದ ಕಾಲದಲ್ಲಿ ಅರ್ಥದೊಡನೆ ದ್ವಯಾನುಸಂಧಾನ ಮಾಡಬೇಕೆಂಬುವುದರಲ್ಲಿಯೇ ತಾತ್ಪರ್ಯವೆಂದರಿಯಬೇಕು. ಅದಕ್ಕೆ ಶ್ರೀಭಾಷ್ಯ

ಕಾರರು ತನ್ನ ಚರಮದಶೆಯಲ್ಲಿಬಹಳವಾದಪ್ರಯಾಸದಿಂದಎದ್ದುನಿಂತುಕೊಂಡು ಸಂಧ್ಯಾಕಾಲದಲ್ಲಿ ಅರ್ಘ್ಯ ಜಲಾಂಜಲಿಯನ್ನು ಸಮರ್ಪಣೆ ಮಾಡಿರುವುದೇ ಗಮಕವಾಗಿರುವುದು. ತನ್ನ ಸೂಕ್ತಿ ಒಂದು ವಿಧವಾಗಿಯೂ ಅನುಷ್ಠಾನವು ಒಂದು ವಿಧವಾಗಿಯೂ ಆಗಲಾರದಷ್ಟೆ. ಶ್ರೀಭಾಷ್ಯಕಾರರಿಗೆ ಅಶಕ್ತಿ ದಶೆಯಾಗಿರುವುದರಿಂದ ತ್ಯಾಗಮಾಡಬೇಕಾದದ್ದು ಅವಶ್ಯವಾಗಿದ್ದರೂ ಪ್ರಯತ್ನದೊಡನೆ ಎದ್ದುನಿಂತುಕೊಂಡುಅರ್ಘ್ಯಜಲವನ್ನು ಸಮರ್ಪಿಸಿದ್ದು ಈಸಂಧ್ಯಾವಂದನಾದಿಗಳನ್ನುತ್ಯಾಗಮಾಡದೆ ಅವಶ್ಯಕವಾಗಿಅನುಷ್ಠಿಸಬೇಕೆಂಬುವುದನ್ನುತೋರಿಸುವುದಕ್ಕೆಂದಲೆತಿಳಿಯಬೇಕು. ಆದುದರಿಂದ ವರ್ಣಾಶ್ರಮ ಧರ್ಮಗಳು ಔಪಾಧಿಕಗಳೆಂಬದಾಗಿ ತ್ಯಾಗಮಾಡುವಿಕೆಯು ಪೂರ್ವಾನುಷ್ಠಾನಗಳಿಗೆ ವಿರುದ್ಧಗಳಾಗಿರುವುವು. ಈಪ್ರಕಾರವಾಗಿ ಔಪಾಧಿಕತ್ವ ರೂಪವಾದ ಆಕಾರದಿಂದ ಅವುಗಳನ್ನು ತ್ಯಾಗಮಾಡುವುದೇ ಯುಕ್ತವೆಂದು ನಿರ್ಬಂಧಪಡಿಸುವ ಪಕ್ಷದಲ್ಲಿ ದೇಹೇಂದ್ರಿಯಾದ್ಯುಪಾಧಿ ಕೃತವಾಗಿರುವುದರಿಂದ ಮಾಲಾಕರಣ ದೀಪಾರೋಪಣ ಸ್ತುತಿ ನಮಸ್ಕಾರಾದಿಗಳಾದ ಭಗವದ್ವಿಷಯಕವಾಗಿರುವ ವಿಶೇಷ ಕೈಂಕರ್ಯಗಳನ್ನುಕೂಡ ಬಿಡಬೇಕಾಗಿ ಬರುವುದು. ಕೈಂಕರ್ಯವಾಗಿರುವುದರಿಂದ ಅವುಗಳನ್ನು ಬಿಡದೇ ಅನುಷ್ಠಿಸಬೇಕೆಂದರೆ " ಸಂಧ್ಯಾಹೀನೋ ಅಶುಚಿರ್ನಿತ್ಯ ಮನರ್ಹಸ್ಸರ್ವಕರ್ಮಸು ,, ಇತ್ಯಾದಿ ಪ್ರಮಾಣಗಳಿಂದ ಆಕೈಂಕರ್ಯಗಳಿಗೆ ಯೋಗ್ಯತೆಯನ್ನುಂಟು ಮಾಡುವ ಶೌಚಾಚಾರ ಸಂಸ್ಕಾರಾದಿಗಳನ್ನು ಕೂಡ ಬಿಡಕೂಡದೆಂದು ಗ್ರಹಿಸಬೇಕು. ಆದುದರಿಂದ ಪ್ರಪನ್ನನು ಆಹಾರಗೃಹಮಂತ್ರಾರ್ಥ ಜಾತ್ಯಾದಿ ನಿಯಮಯುಕ್ತನಾಗಿ ಶ್ರೀಯಃಪತಿಯ ಕೈಂಕರ್ಯವನ್ನು ಪ್ರಯೋಜನಾಂತರವನ್ನಪೇಕ್ಷಿಸದೆ ಯಥಾ ಶಕ್ತಿಯಾಗಿ ಮಾಡುತಲಿರಬೇಕು. (ದೇಶಕಾಲ ಸಂಪರ್ಕಜಾತ್ಯಾದಿ ದುಷ್ಟಗಳಾದ ಅನ್ನವನ್ನು ಪರಿಗ್ರಹಿಸದೆ ಇರುವಿಕೆಯು ಆಹಾರನಿಯಮವೆಂತಲೂ, ಮಹಾಭಾಗವತಾಧಿಷ್ಠಿತ ಪ್ರದೇಶವನ್ನು ತ್ಯಾಗಮಾಡದೆ ಇರುವಿಕೆಯು ಗೃಹನಿಯಮವೆಂತಲೂ, ದೇವತಾಂತರ ಮಂತ್ರಪರಿತ್ಯಾಗವೊ ಅಥವಾ ಯಾವ ಕರ್ಮಗಳನ್ನು ಯಾವಮಂತ್ರೋಚ್ಚಾರಣದಿಂದ ಮಾಡ

ಬೇಕೆಂಬದಾಗಿ ಹೇಳಿರುವುದೋ ಆಪ್ರಕಾರದಿಂದ ಅನುಷ್ಠಿಸುವಿಕೆಯು
ಮನ್ತ್ರನಿಯಮವೆಂತಲೂ, ವ್ಯಭಿಚಾರಿಗಳು ನಪುಂಸಕರು ಪತಿತರು ಶ
ತ್ರುಗಳೇ ಮೊದಲಾದವರಿಂದ ಕೊಡಲ್ಪಟ್ಟ ಪಾಪದ್ರವ್ಯವನ್ನು ಪರಿಗ್ರಹಿ
ಸದೇ ಇರುವಿಕೆಯು ಅರ್ಥನಿಯಮವೆಂತಲೂ ಜಾತ್ಯಂತರಾಚಾರ ಪರಿತ್ಯಾ
ಗವೇ ಜಾತಿನಿಯಮವೆಂತಲೂ ತಿಳಿಯಬೇಕು. ಈ ಪ್ರಕಾರವೆ ಆಶ್ರ
ಮಧರ್ಮಾದಿನಿಯಮಗಳನ್ನೂ ತಿಳಿಯಬೇಕು.) ಯಾವ ಪ್ರಕಾರವಾಗಿ
ಪತಿವ್ರತಾ ಸ್ತ್ರೀಯಾದವಳು ಪತಿ ಪ್ರೀತಿಯೇ ಮುಖ್ಯವಾದ ಪ್ರ
ಯೋಜನವೆಂದು ಭಾವಿಸಿ ತನ್ನ ಮಾಂಗಲ್ಯಸೂತ್ರವಸ್ತ್ರಾದಿಗಳನ್ನು
ಸಂರಕ್ಷಿಸುತ್ತಾಳೆಯೊ ಅದರಂತೆ ಪ್ರಪನ್ನನೂ ಕೂಡ ತನಿಗೆ ಪತಿಯಾದ
ಶ್ರಿಯಃಪತಿಯು ಶಾಸ್ತ್ರೀಯ ಕೈಂಕರ್ಯಪದ್ಧತಿಯನ್ನು ಬಿಡದೆ ಮಾ
ಡುತಲಿರಬೇಕು. ಪತಿವ್ರತಾ ಸ್ತ್ರೀಯಾದವಳು ತನ್ನ ಮಾಂಗಲ್ಯಾದಿ
ಸೂತ್ರಪರಿತ್ಯಾಗದಿಂದ ಹೇಗಾದರೆ ತನ್ನ ಗಂಡನ ಪ್ರೀತಿಗೆ ಪಾತ್ರಳಾ
ಗಲಾರಳೊ ಅದರಂತೆ ಪ್ರಪನ್ನನೂ ವರ್ಣಾಶ್ರಮ ಧರ್ಮಗಳನ್ನು ತ್ಯಾಗ
ಮಾಡಿದರೆ ಭಗವದಪ್ರೀತಿಗೆ ವಿಷಯನಾಗುವನು. ಮಾಂಗಲ್ಯಸೂತ್ರ
ವನ್ನು ಪರಿತ್ಯಾಗಮಾಡಿದ ಸ್ತ್ರೀಯನ್ನ ಹೇಗಾದರೆ ಪತಿಯು ದಂಡನ
ಮಾಡಿ ರಕ್ಷಿಸುವನೊ ಅದನ್ನು ಸಂರಕ್ಷಿಸುವಸ್ತ್ರೀಯನ್ನು ಭೋಗ
ಪ್ರದಾನದಿಂದ ಹೇಗಾದರೆ ರಕ್ಷಿಸುವನೊ ಅದರಂತೆ ಪ್ರಪನ್ನನು ವ
ರ್ಣಾಶ್ರಮ ಧರ್ಮಗಳನ್ನು ತ್ಯಾಗಮಾಡಿದರೆ ಅವನನ್ನು ಶಿಕ್ಷಾಪ್ರದಾನ
ದಿಂದಲೂ ಸಂರಕ್ಷಿಸಿಕೊಂಡು ಬಂದರೆ ಪ್ರೀತಿಪ್ರದಾನಾದಿಗಳಿಂದಲೂ
ಸಂರಕ್ಷಿಸುತ್ತಾನೆಂದರಿಯಬೇಕು.

ಆದರೂ ಜಾತ್ಯಾದಿ ನಿಯಮಗಳಿಂದ ಧರ್ಮಾನುಷ್ಠಾನವನ್ನು
ಮಾಡಬೇಕೆಂಬುವುದು ಉಚಿತವೊ ? " ಯಶ್ಶೂದ್ರಂಭಗವದ್ಭಕ್ತಂ
ನಿಷಾದಂಶ್ವಪಚಂತಥಾ । ವೀಕ್ಷತೇಜಾತಿಸಾಮಾನ್ಯಾತ್ಸಯಾತಿನರಕಂ
ನರಃ ,, ಎಂಬ ವಚನದಲ್ಲಿ ಭಗವದ್ಭಕ್ತನನ್ನು ಜಾತಿಸಾಮಾನ್ಯದಿಂದ
ನೋಡುವಂತವನಿಗೆ ನರಕ ಪತನರೂಪವಾದ ಅನಿಷ್ಟ ಫಲವು ಹೇಳ
ಲ್ಪಡಲಿಲ್ಲವೊ ? ಎಂದರೆ ಸಾಮಾನ್ಯ ಬ್ರಾಹ್ಮಣನಿಗೂ ಸಾಮಾನ್ಯ
ಶೂದ್ರನಿಗೂ ಭೇದವಿರುವಂತೆ ಭಾಗವತ ಬ್ರಾಹ್ಮಣನಿಗೂ ಭಾಗವತ

ಶೂದ್ರನಿಗೂ ಭೇದವಿರುವುದೆಂತಲೂ "ಯಶ್ಶೂದ್ರಂ ,, ಎಂಬ ವಚನವು ಭಾಗವತಶೂದ್ರನನ್ನು ಜಾತಿ ಸಾಮಾನ್ಯದಿಂದ ತಿರಸ್ಕರಿಸುವಂತವನಿಗೆ ನರಕ ಪತನವನ್ನು ಹೇಳುವುದೆಂತಲೂ ಶಾಸ್ತ್ರವ್ಯವಸ್ಥಾಪನಕ್ಕಾಗಿ ಜಾತಿನಿರ್ಣಯವು ಅವಶ್ಯವಾಗಿರುವುದೆಂತಲೂ "ನ ಶೂದ್ರಾಭಗವದ್ಭಕ್ತಾ ವಿಪ್ರಾಭಾಗವತಾಸ್ಮೃತಾಃ। ಸರ್ವವರ್ಣೇಷು ತೇಶೂದ್ರಾಯೇಹ್ಯಭಕ್ತಾಜನಾರ್ದನೇ,, ಎಂಬ ವಚನವೂ ಭಾಗವತ ಶೂದ್ರನ ಪ್ರಶಂಸಾರೂಪವಾಗಿರುವುದೆಂತಲೂ ಇವರನ್ನು ಸರ್ವಸಮರನ್ನಾಗಿ ಹೇಳುವ ಶಾಸ್ತ್ರಕ್ಕೆ ಮುಕ್ತಿ ದಶೆಯಲ್ಲುಂಟಾಗುವ ಸಾಮ್ಯವೆ ಅರ್ಥವಾಗುವುದೆಂತಲೂ ಶಾಸ್ತ್ರವ್ಯವಸ್ಥಾಪನಕ್ಕಾಗಿಯೆ ಧರ್ಮವ್ಯಾಧನೆಂತಲೂ ತುಲಾಧಾರನೆಂತಲೂ ಶಬರೀಯೆಂತಲೂ ವಿದುರನೆಂತಲೂ ಆಯಾಜಾತಿ ಘಟಿತನಾಮಗಳಿಂದ ಇವರಿಗೆ ವ್ಯವಹಾರವಿರುವುದೆಂತಲೂ "ಶೂದ್ರಯೊನಾವಹಂಜಾತೋನಾತೋನ್ಯದ್ವಕ್ತುಮುತ್ಸಹೆ,, ಇತ್ಯಾದಿಗಳಲ್ಲಿ ಹೇಳಲ್ಪಟ್ಟ ವಿದುರಾದ್ಯನುಷ್ಠಾನದಲ್ಲಿ ಶಾಸ್ತ್ರತಿಕ್ರಮವಿಲ್ಲ ವೆಂತಲೂ ವಿದುರರಿಗೆ ನಡೆದಿರುವ ಬ್ರಾಹ್ಮಣಜಾತಿನಿಯತವಾದ ಬ್ರಹ್ಮಮೇಧಸಂಸ್ಕಾರವು ಅಮಂತ್ರಕವಾಗಿಯಾದರೂ ಆಕಾಶವಾಣೀ ಬಲದಿಂದ ವ್ಯಕ್ತಿವಿಶೇಷನಿಯತವಾಗಿಯಾದರೂ ಸ್ವೀಕರಿಸಬೇಕಾಗಿರುವುದೆಂತಲೂಒಂದುದೇಶವಿಶೇಷದಲ್ಲಿಯೂಒಂದುಕಾಲ ವಿಶೇಷದಲ್ಲಿಯೂ ಒಂದಧಿಕಾರಿ ವಿಶೇಷದಲ್ಲಿಯೂ ನಿಯತಗಳಾದ ಧರ್ಮಗಳಿಗೆ ಮತ್ತೊಂದು ದೇಶಕಾಲಾಧಿಕಾರ್ಯಾದಿಗಳಲ್ಲಿ ಪ್ರಾಪ್ತಿ ಇರುವುದಿಲ್ಲವೆಂತಲೂ ಮನುಸ್ಮೃತ್ಯಾದಿಗಳಲ್ಲಿ ಸೊಸೆಗಳನ್ನು ಪೂಜಿಸಬೇಕೆಂಬದಾಗಿ ಹೇಳಿರುವ ವಚನಕ್ಕೆ ವಸ್ತ್ರವನು ರೂಪವಾಗಿ ಆದರಣ ಮಾಡುವುದರಲ್ಲಿ ಹೇಗಾದರೆ ತಾತ್ಪರ್ಯವಿರುವುದೋ ಅದರಂತೆಯೆ "ಭಕ್ತಿರಷ್ಟವಿಧಾಹ್ಯೇಷಾಯಸ್ಮಿನ್ಮ್ಲೇಚ್ಛೇಪಿವರ್ತತೆ। ತಸ್ಮೈದೇಯಂತತೋಗ್ರಾಹ್ಯಂಸಚಪೂಜ್ಯೋಯಥಾಹ್ಯಹಂ॥ ಸವಿಪ್ರೇಂದ್ರೋಮುನಿಶ್ರೀಮಾನ್ಸಯತಿಸ್ಸಚ ಪಂಡಿತಃ ,, ಇತ್ಯಾದಿವಚನಗಳಲ್ಲಿ ಹೇಳಿರುವ ಭಕ್ತಮ್ಲೇಚ್ಛಾದಿಪೂಜೋಕ್ತಿಗೂ ಮಾನಸ ಪ್ರತಿಪತ್ತಿ ಪೂರ್ವಕವಾದ ಆದರವಿಶೇಷದಲ್ಲಿ ತಾತ್ಪರ್ಯವೆಂತಲೂ ಇವರನ್ನೂ ಬ್ರಾಹ್ಮಣಾದಿಶಬ್ದಗಳಿಂದ ಹೇಳಿರುವುದ

ಕ್ಕೆ ಸತ್ವಗುಣಾಧಿಕ್ಯವು ಇವರಲ್ಲಿರುವುದೆಂದುಭಾವಿಸಿಗುಣಕೃತಬ್ರಾಹ್ಮ ಣ್ಯಪರವಾಗಿ ಅರ್ಥ ಹೇಳಬೇಕೆಂತಲೂ ಯಥಾ ಶ್ರುತವಾದ ಅರ್ಥವನ್ನೇ ಹೇಳುವುದಾದರೆ " ನತೇನಸ್ಥವಿರೋಭಾತಿಯೇನಾಸ್ಯಪಲಿತಂಶಿರಃ । ಬಾಲೋಪಿಯಃಪ್ರಜಾನಾತಿತಂ ದೇವಾಸ್ಸ್ಥವಿರಂವಿದುಃ,, ಇತ್ಯಾದಿವ ಚನಗಳಿಗೂ ಯಥಾಶ್ರುತಾರ್ಥವನ್ನು ಹೇಳಬೇಕಾಗಿ ಒರುವುದರಿಂದ ಅಸಾಂಗತ್ಯವು ಪ್ರಾಪ್ತವಾಗುವುದೆಂತಲೂ ತಿಳಿದು ಜಾತ್ಯಾದಿನಿಯಮ ಗಳನ್ನು "ಅನುಸರಿಸಿಯೆ ಭಗವತ್ಕೈಂಕರ್ಯಾದಿಗಳನ್ನು ಮಾಡಬೇ ಕೆಂದು ತಿಳಿಯಬೇಕು. ಕಿಂಚ ಇಂಥಾನಿಯಮಗಳೆಲ್ಲವೂ ಶಿಷ್ಟರೆಂ ಬದಾಗಿ ಸರ್ವರಿಂದಲೂಆದರಿಸಲ್ಪಟ್ಟ ಶ್ರೀಮದ್ಯಾಮುನಾಚಾರ್ಯಶ್ರೀಭಾ ಷ್ಯಕಾರ ಶ್ರೀವತ್ಸಾಂಕಮಿಶ್ರಾದಿಗಳ ಶಿಷ್ಟಜನರ ಅನುಷ್ಠಾನಪರಂಪರೆ ಯಿಂದಲೂ ಸಿದ್ಧಗಳಾಗಿರುವುವು. ಆದುದರಿಂದ ತನ್ನ ವರ್ಣಾಶ್ರಮಗ ಳಿಗೆ ಅನುಗುಣಗಳಾದ ನಿಯಮಗಳೊಡನೆ ಭಗವತ್ಕೈಂಕರ್ಯವನ್ನು ಮಾಡುವಿಕೆಯು ಪ್ರಪನ್ನನಿಗೆ ವಿರುದ್ಧವಾದದ್ದಲ್ಲವೆಂದರಿಯಬೇಕು.

ಆದರೂ ಪ್ರಪನ್ನನು ಶ್ರಿಯಃ ಪತಿಯಕೈಂಕರ್ಯವನ್ನು ಅನನ್ಯ ಪ್ರಯೋಜನನಾಗಿ ಮಾಡಬೇಕೆಂಬದಾಗಿ ಹೇಳಿರುವುದು ಉಚಿತವೊ? ಪ್ರಯೋಜನಾಂತರಕ್ಕಾಗಿ ಮಾಡುವ ಕೈಂಕರ್ಯವೂ ಸ್ವಾಮಿ ಪ್ರೀ ತ್ಯರ್ಥವಾಗಿರುವುದರಿಂದ " ಅನನ್ಯ ಪ್ರಯೋಜನಃ ,, ಎಂಬುವುದಾಗಿ ವಿಶೇಷಿಸಿ ಹೇಳಬಹುದೊ? ಎಂದರೆ ಲಕ್ಷ್ಮೀ ಪತಿಯ ಸನ್ನಿಧಿಯಲ್ಲಿ ಸಾಕ್ಷಾತ್ತಾಗಿ ಮಾಡುವ ಕೈಂಕರ್ಯವು ಸಾರಕಲ್ಕ ವಿಭಾಗದಿಂದ ದ್ವಿವಿಧವಾಗಿರುವುದರಿಂದ ಈ ಚೋದ್ಯಕ್ಕೆ ಅವಕಾಶವಿಲ್ಲವು. ಅವು ಯಾವವೆಂದರೆ? ಕೃತಕೃತ್ಯ ನಾದ ಪ್ರಪನ್ನನು ಅನನ್ಯಪ್ರಯೋಜನನಾಗಿಯಾದರೂ ಆಚಾರ್ಯಾದಿಗ ಳರ ಕ್ಷೇಣರೂಪವಾದ ಪ್ರಯೋಜನವನ್ನು ಉದ್ದೇಶಿಸಿಯಾದರೂ ಯಾ ವಕೈಂಕರ್ಯವನ್ನು ಮಾಡುತ್ತಾನೆಯೊ ಅದು ಸಾರಕೈಂಕರ್ಯವೆನ್ನಲ್ಪಡು ವುದು. ಆಚಾರ್ಯಾದಿಗಳ ರಕ್ಷಣಾರ್ಥವಾಗಿ ಮಾಡುವ ಕೈಂಕರ್ಯವು ಪ್ರಯೋಜನಾಂತರ ಕೋಟಿಯಲ್ಲಿ ಸೇರಲಾರದು. ಸ್ವರೂಪೋಚಿತವಾ ದುದರಿಂದ ಕೈಂಕರ್ಯದಲ್ಲಿಯೆ ಸೇರುವುದು. ಡಂಭಾರ್ಥವಾಗಿಯಾದ

ರೂ ಅನ್ಯರನ್ನು ಪೀಡಿಸುವುದಕ್ಕಾದರೂ ಅನ್ಯರನ್ನು ಸಂಹಾರಮಾಡು ವುದಕ್ಕಾದರೂ ಅಥವಾ ಅನ್ಯರುಮಾಡುವ ಭಗವತ್ಕೈಂಕರ್ಯವನ್ನು ತಡೆಮಾಡುವುದಕ್ಕಾದರೂ ಐಶ್ವರ್ಯಪುತ್ರಲಾಭಾದಿ ಪ್ರಯೋಜನಾಂತ ರಕ್ಕಾದರೂ ಯಾವ ಕೈಂಕರ್ಯವು ಮಾಡಲ್ಪಡುವುದೋ ಅದು ಅಸಾರವಾ ದ ಕಲ್ಕ ಕೈಂಕರ್ಯವೆಂತಲೂ ಹೇಳಲ್ಪಡುವುದು. ಲಕ್ಷ್ಮೀಪತಿಯು ಕೈಂಕರ್ಯಕ್ಕೆ ಸಾರಲ್ಕವಿಭಾಗದಿಂದ ಯರಡು ಆಕಾರವುಂಟು. ದೇವ ತಾಂತರ ಕೈಂಕರ್ಯವು ಸದಾ ಅಸಾರವಾದುದರಿಂದ ಕಲ್ಕವೆಂಬ ಏಕಾ ಕಾರವುಳ್ಳದ್ದಾಗಿಯೆ ಇರುವುದು. ಆದುದರಿಂದ ಅನನ್ಯಪ್ರಯೋಜ ನನಾಗಿ ಮಾಡುವ ಕೈಂಕರ್ಯವು ಸಾರಕೈಂಕರ್ಯವೆಂದು ತಿಳಿಯಬೇಕಾ ಗಿರುವುದರಿಂದ ಈ ವಿಶೇಷವು ಆಕ್ಷೇಪಾರ್ಹವಾಗಲಾರದು. ಪರ ಮೈಕಾಂತಿಗಳಲ್ಲದ (ದೇವತಾಂತರ ಪ್ರಯೋಜನಾಂತರ ಶೂನ್ಯರು ಪರಮೈಕಾಂತಿಗಳು. ) ವರುಮಾಡುವ ಕೈಂಕರ್ಯವನ್ನು ಶ್ರೀಶನು ತನ್ನ ಪಾದದಿಂದ ಪ್ರತಿಗ್ರಹಿಸುವನೆಂತಲೂ ಪರಮೈಕಾಂತಿಗಳು ಮಾಡುವ ಕೈಂಕರ್ಯವನ್ನು ತನ್ನ ಶಿರಸ್ಸಿನಿಂದ ಪ್ರತಿಗ್ರಹಿಸುವನೆಂ ತಲೂ “ ತತ್ಸರ್ವಂದೇವದೇವಸ್ಯ ಚರಣಾವುಪತಿಷ್ಠತೇ ॥ ಯಾಃ ಕ್ರಿಯಾ ಸ್ಸಂಪ್ರಯುಕ್ತಾಸ್ಸ್ಯುರೇಕಾಂತ ಗತಬುದ್ಧಿಭಿಃ । ತಾಸ್ಸರ್ವಾ ಶ್ಶಿರಸಾದೇವಃ ಪ್ರತಿಗೃಹ್ಣಾತಿವೈಸ್ವಯಂ,, ಇತ್ಯಾದಿ ವಚನಗಳಿಂದ ಶ್ರೀ ವೇದವ್ಯಾಸರು ಹೇಳಿರುತ್ತಾರೆ. ಈ ಪ್ರಕಾರವಾಗಿ ಪ್ರಪ ನ್ನನಾದವನು ಭಗವದಾಜ್ಞೆಯಿಂದ ಅನುಷ್ಠಿಸುವ ನಿತ್ಯನೈಮಿತ್ತಿ ಕ ಕರ್ಮಗಳೂ ಭಗವದನುಜ್ಞೆಯಿಂದ ಅವನ ಪ್ರೀತಿಪ್ರಯೋಜ ನಾರ್ಥವಾಗಿ ಅನುಷ್ಠಿಸುವ ನಿತ್ಯನೈಮಿತ್ತಿಕ ವ್ಯತಿರಿಕ್ತವಾದ ಅನುಜ್ಞಾ ಕೈಂಕರ್ಯ ವೆಲ್ಲವೂ ಅನುಷ್ಠಿಸಲ್ಪಡುವ ಪ್ರಪತ್ತಿಯೊಡನೆ ಸಂಬಂಧಿಸದೆ ಇರುವ ಸ್ಥಿತಿಯು “ ಸರ್ವಧರ್ಮಾನ್ಪರಿತ್ಯಜ್ಯ ,, ಎಂಬ ನೈರಪೇಕ್ಷ್ಯ ವಿಧಾನದಿಂದ ಸಿದ್ಧವಾಯಿತು. ಆದುದರಿಂದ ಶಕ್ಯವಾದ ನಿತ್ಯನೈಮಿ ತ್ತಿಕಾದಿ ಕರ್ಮಗಳನ್ನು ಪ್ರಪತ್ತ್ಯರ್ಥವಾಗಿ ಮಾಡಬಾರದು. ಅಕಿಂಚ ನನಾದತಾನು ಅಶಕ್ಯವಾದ ಅನುಷ್ಠಾನಗಳಲ್ಲಿ ವೃಥಾ ಸಾಮರ್ಥ್ಯವನ್ನು ಪ್ರಪತ್ತಿಗೆ ಇವು ಅಂಗವಲ್ಲವಾದುದರಿಂದ ಸಂಪಾದಿಸ ಬಾರದೆಂತಲೂ

ತಿಳಿಯಬೇಕು. ಈ ಅಂಶವು “ ಅತ್ರಶಕ್ಯಸ್ಯಸರ್ವಾಣಿನಪ್ರಪತ್ತ್ಯೈ ರ್ಥಮಾಚರೇತ್ । ಅಶಕ್ಯೇಷುಚಸಾಮರ್ಥ್ಯಂನತದರ್ಥಂಸಮಾರ್ಜಯೇತ್ ,, ಇತ್ಯಾದಿಸೂಕ್ತಿಗಳಿಂದ ಸ್ಫುಟವಾಗಿ ತಿಳಿಯಲ್ಪಡುವುದು.

ಆದರೂ ಈನ್ನೈರಪೇಕ್ಷ್ಯ ವಿಧಿಯಲ್ಲಿ ಆಕಿಂಚನ್ಯಾದಿ ರೂಪವಾದಅಧಿಕಾರ ವಾಚಕ ಶಬ್ದವಿಲ್ಲವಾದುದರಿಂದ ಈ ಶ್ಲೋಕದಲ್ಲಿ ಅಧಿಕಾರವಿಲ್ಲದೇ ಹೋಗುವಿಕೆಯು ಪ್ರಸಂಗಿಸಲಾರದೋ? ಎಂದರೆ ಈಯೋಜನೆಯಲ್ಲಿಅಧಿಕಾರವಾದ ಆಕಿಂಚನ್ಯವು ಉಪಾಯಾಂತರದಲ್ಲಿ ನನಗೆಅಧಿಕಾರವಿಲ್ಲವೆಂದುಸೂಚಿಸದೇ ನನ್ನನ್ನು ಆಶ್ರಯಿ ಸೆಂಬ ಅರ್ಥವನ್ನು ಬೋಧಿಸುವ ‘ಮಾಶುಚಃ, ಎಂಬೀವಾಕ್ಯದಿಂದ ಸೂಚಿತವಾಗುವುದು ಈರೀತಿಯಾಗುವ ಪಕ್ಷದಲ್ಲಿ ಮೊದಲು ಹೇಳಿರುವ ಅನುವಾದ ಪಕ್ಷದಲ್ಲಿ “ ಪರಿತ್ಯಜ್ಯ ,, ಎಂಬ ಪದವು ಅಧಿಕಾರ ಪರವಾದುದರಿಂದ ನೈರಪೇಕ್ಷ್ಯಸಿದ್ಧಿತಾನೇ ಹೇಗೆ? ಅನುವಾದ ಸಾಮರ್ಥ್ಯದಿಂದಲೇ ಅಶಕ್ಯನೈರಪೇಕ್ಷ್ಯವು ಸಿದ್ಧವಾಗುವುದೆಂದರೆ ಆದರೂ ಶಕ್ಯನೈರಪೇಕ್ಷ್ಯವು ಸಿದ್ಧಿಸಲಿಲ್ಲವೇ? ಎಂದರೆ ಅನುವಾದ ಪಕ್ಷದಲ್ಲಿ ತನ್ನ ಅಶಕ್ತಿಯಿಂದ ಕಳದ ಧರ್ಮಗಳಲ್ಲದೆ ತನಗೆ ಶಕ್ಯವಾಗಿರುವ ಸಂಧ್ಯಾವಂದನಾದಿಗಳಾದ ಆಜ್ಞಾಸಿದ್ಧವಾಗಿರುವ ಕರ್ಮಗಳು ಪ್ರಪತ್ತಿಯೊಡನೆ ಸಂಬಂಧಿಸಲಾರವೆಂಬೀ ಅಂಶವೂ ಮುಂದೇ ವ್ಯಾಖ್ಯಾನ ಮಾಡಲ್ಪಡುವ ಏಕ ಶಬ್ದದಿಂದ ವಿವಕ್ಷಿತವಾಗುವುದು. ಈ ಅನುವಾದ ಪಕ್ಷದಲ್ಲಿ ‘ ಪರಿತಜ್ಯ , ಎಂಬ ಪದವು ಅಧಿಕಾರ ಪರವಾಗಿರುವುದರಿಂದಲೂ ‘ಮಾಶುಚಃ, ಎಂಬ ವಾಕ್ಯವು ಅಧಿಕಾರ ಪರವೆಂಬದಾಗಿ ಮೊದಲು ಹೇಳಿರುವುದರಿಂದಲೂ ಪುನರುಕ್ತಿದೋಷವಿಲ್ಲವೋ ? ‘ಮಾಶುಚಃ, ಎಂಬೀಪದವು ‘ಪರಿತ್ಯಜ್ಯ, ಎಂಬ ಪದದಲ್ಲಿ ಹೇಳಿರುವ ಅಧಿಕಾರ ಬೋಧಕವಾದ ಅರ್ಥವನ್ನು ಪ್ರಕಾಶಪಡಿಸುವುದಕ್ಕಾಗಿ ಏರ್ಪಟ್ಟಿರುವುದರಿಂದ ಪುನರುಕ್ತಿ ದೋಷವಿಲ್ಲವೆಂದರೆ? ಈ ರೀತಿಯಾಗಿ ಪ್ರಕಾಶ ಪಡಿಸುವುದರಿಂದ ಪ್ರಯೋಜನಾತಿಶಯವುಂಟೋ ? ಎಂದರೆ ಈ ಪಕ್ಷದಲ್ಲಿ ಅಧಿಕಾರ ಪ್ರಕಾಶನ ಮುಖದಿಂದ ಮಾಶುಚಃ, ಎಂಬ ವಾಕ್ಯವು ಪ್ರಪತ್ತ್ಯುತ್ತರ ಕಾಲದಲ್ಲಿ ನಿರ್ಭರನಾಗಿರಬೇಕೆಂಬುವ ಅರ್ಥಕ್ಕೂ ಉಪಲಕ್ಷಣವಾಗಿರುವುದು. ಈರೀತಿ

ಯಾಗಿ ನೈರಪೇಕ್ಷ್ಯವಿಧಿಪಕ್ಷವನ್ನು ವಿಸ್ತಾರವಾಗಿ ಉಪಪಾದನಮಾಡಿ ತ್ಯಾಗ ವಿಧಿಪಕ್ಷದಲ್ಲಿ ಪ್ರಮಾಣ ವಿರೋಧಗಳಿಲ್ಲದ ಇನ್ನೂ ಕೆಲವು ಅರ್ಥಗಳನ್ನು “ ಆತ್ಮಾಶಕ್ಯವ್ಯರ್ಥಾಯಾಸನಿವಾರಣ ಮಿಹಾಪಿವಾ । ಲಜ್ಜಾಪುರಸ್ಸರ ತ್ಯಾಗವಾದೋಪ್ಯತ್ರನಿಯುಮ್ಯತಾಂ ॥ ಸ್ವದುಷ್ಕರೇಷು ಧರ್ಮೇಷು ಕುಶಕಾಶಾವಲಂಬತಃ । ಆಶಾಲೇಶಾನುವೃತ್ತಿರ್ವಾತ್ಯಾಗೋಕ್ತ್ಯಾನಿವಾರ್ಯತೇ ॥ ಅವಿಶಿಷ್ಟಫಲತ್ವೇನ ವಿಕಲ್ಪೋಯಶ್ಚ ಸೂತ್ರಿತಃ । ತನ್ಮುಖೇನಾಪಿವಾತೇಷ್ಟಂ ಬ್ರಹ್ಮಾಸ್ತ್ರನ್ಯಾಯಸೂಚನಂ,, ಎಂಬೀಪ್ರಕಾರವಾಗಿ ಅನುಗ್ರಹಿಸಿರುವರು. ತನಗೆ ಅಶಕ್ಯಗಳಾದವುಗಳಲ್ಲಿ ವ್ಯರ್ಥವಾಗಿ ಪ್ರಯತ್ನ ಮಾಡುವ ಆಯಾಸವನ್ನು ಬಿಟ್ಟು ಎಂಬದಾಗಿ ಒಂದರ್ಥವು. ಈ ಅರ್ಥದಲ್ಲಿ ‘ ಪರಿ , ಎಂಬ ಉಪಸರ್ಗದಿಂದ ‘ ಅಶಕ್ಯವಾದವುಗಳನ್ನಾರಂಭಿಸಿದರೂ ಸಮಸ್ತವು ವ್ಯರ್ಥವಾಯಿತೆಂಬೀ ಲಜ್ಜಾಚಿಂತಾ ಸಂತಾಪಾದಿ ತ್ಯಾಗವು ವಿವಕ್ಷಿತವಾಗಿರುವುದು. ಆದರಿಂದ ಲಜ್ಜಾ ಸಂತಾಪಾದಿಗಳೊಡನೆ ತನಗೆ ಅಶಕ್ಯಗಳಾದವುಗಳಲ್ಲಿ ವೃಥಾಯಾಸವನ್ನು ಬಿಟ್ಟು ಎಂಬದಾಗಿ ಮೊದಲನೇ ಅರ್ಥವನ್ನು ತ್ಯಾಗ ವಿಧಿ ಪಕ್ಷದಲ್ಲರಿಯಬೇಕು. ॥ ೧ ॥ ತನಗೆ ಅನುಷ್ಠಿಸಲು ಅತ್ಯಂತ ದುಷ್ಕರಗಳಾದ ಧರ್ಮಗಳ ವಿಷಯದಲ್ಲಿ ಪ್ರವಾಹದಿಂದ ಎಳೆಯಲ್ಪಟ್ಟು ಹೋಗುತಲಿರುವಂತನು ಒಂದು ದರ್ಭೆಮೊದಲಾದ ಹುಲ್ಲನ್ನು ಹಿಡಿದುಕೊಂಡರೆ ಅದುತಾನುಪ್ರಾಣದಿಂದ ಉಳದುಕೊಂಡು ಜೀವಿಸಲು ಹೇಗಾದರೆ ಅನುಕೂಲವಾದೀತೆಂದು ಚಿಂತಿಸುವನೊ ಅದರಂತೆ ಯೊಗಾಭ್ಯಾಸ ಪ್ರಾಣಾಯಾಮಾದಿಗಳನ್ನು ಯಥೋಚಿತವಾಗಿ ನಾನು ಸಾಧಿಸುವೆನೆಂಬೀರೀತಿಯಾದ ಆಶಾಲೇಶದ ಅನುವರ್ತನವನ್ನು ಕೂಡ ಬಿಟ್ಟು ಎಂಬದಾಗಿ ಯರಡನೆ ಅರ್ಥವು. ಮಹಾನದೀಪ್ರವಾಹದಲ್ಲಿ ಎಳೆಯಲ್ಪಟ್ಟವನಿಗೆ ಕುಶಕಾಶಾವಲಂಬನವು ಹೇಗಾದರೆ ತನ್ನ ಉತ್ತಾರಣಕ್ಕೆ ಸಾಧನವಾಗಲಾರದೋ ಆ ಪ್ರಕಾರವಾಗಿ ಅಕಿಂಚನಾಧಿಕಾರಿಗೆ ಭಕ್ತಿಯೊಗೋಪಾಯ ಭೂತವಾದ ಕರ್ಮಯೊಗವೇನು, ಅದಕ್ಕೆ ಕಾರಣವೇನು, ಇವುಗಳ ಯಥಾಕಥಂ ಚಿದನುಷ್ಠಾನವು. ಉತ್ತಾರಣಕ್ಕೆ ಸಾಧನವಾಗಲಾರದಾದುರಿಂದ ಅದನ್ನು ಬಿಟ್ಟೆಂದು

ತಾತ್ಪರ್ಯವು. ||೨|| " ವಿಕಲ್ಪೋ ಅವಿಶಿಷ್ಟಫಲತಾತ್ ,. ಎಂಬೀ ಸೂತ್ರದಿಂದ ವಿಕಲ್ಪಿಸಲ್ಪಟ್ಟ ಉಪಾಯಾಂತರಗಳ ಪರಿಗ್ರಹವನ್ನು ಮಾಡುವುದಾದರೆ ಅಂಗಾಂತರ ನಿರಪೇಕ್ಷ ವಾದ ಪ್ರಪತ್ತಿಯು ಬ್ರಹ್ಮಾಸ್ತ್ರನ್ಯಾಯದಿಂದ ಕಾರ್ಯಕರವಾಗಲಾರದೆಂಬೀ ಅರ್ಥಸೂಚಕವು ಮೂರನೇದಾದ ಅರ್ಥವು. ಆಂಜನೇಯ ದೇವರಿಗೆ ಇಂದ್ರಜಿತ್ತು ಬ್ರಹ್ಮಾಸ್ತ್ರ ಪ್ರಯೋಗ ಮಾಡಿದರೂ ಅದು ಸಾಲದೆಂಬ ಭ್ರಾಂತಿಯಿಂದ ಹಗ್ಗವೆ ಮೊದಲಾದವುಗಳಿಂದ ಆಂಜನೇಯರನ್ನು ಕಟ್ಟಲು ಬ್ರಹ್ಮಾಸ್ತ್ರವೇ ಬಿಟ್ಟು ಹೋಯಿತು. ಈ ಪ್ರಕಾರವಾಗಿ ಕ್ಷಣಕಾಲ ಸಾಧ್ಯವಾದ ಪ್ರಪತ್ತಿಯಿಂದ ನಮಗೆ ಮೋಕ್ಷವುಂಟಾಗಲಾರದೆಂದು ಇದರಲ್ಲಿ ಮಹಾವಿಶ್ವಾಸವನ್ನಿಡದೆ ಭಕ್ತಿಯಿಂದಲಾದರೂ ಪುನಃ ಪ್ರಪತ್ತಿಯಿಂದಲಾದರೂ ಮೋಕ್ಷವನ್ನು ಹೊಂದಬಹುದೆಂಬ ವಿಕಲ್ಪವನ್ನು ನೆನಸಿಕೊಂಡು ಪ್ರಪತ್ತಿಗೆ ಸಹಾಯಾರ್ಥವಾಗಿ ಬೇರೊಂದಾದ ಭಕ್ತ್ಯಂಗಗಳನ್ನು ಕೂಟಿಸಿಕೊಂಡರೆ ಅದು ಇಂದ್ರಜಿದ್ಬ್ರಹ್ಮಾಸ್ತ್ರನ್ಯಾಯದಿಂದ ಇವನಿಗೆ ಕಾರ್ಯಕರವಾಗಲಾರದೆಂದರಿಯಬೇಕು. ||೩|| ಆದುದರಿಂದ ಅಶಕ್ಯದಲ್ಲಿ ಪ್ರವೃತ್ತಿಸಿರುವಂತವನನ್ನು ಕುರಿತು ಅದನ್ನು ಬಿಡು ಎಂತಲೂ ತನಗೆ ದುಷ್ಕರಗಳಾದ ಧರ್ಮಗಳಲ್ಲಪೇಕ್ಷೆಯುಳ್ಳವನಿಗೆ ಅದ ಬೇಡವೆಂತಲೂ ವಿಕಲ್ಪಿತಗಳಾದ ಉಪಾಯಾಂತರಗಳಲ್ಲಿ ಒಂದನ್ನು ಇಲ್ಲಿ ಸೇರಿಸಿಕೊಂಡರೆ ಬ್ರಹ್ಮಾಸ್ತ್ರನ್ಯಾಯದಿಂದ ಪ್ರಪತ್ತಿಯು ಗಳಿತವಾಗುವುದು, ಆದುದರಿಂದ ಆರೀತಿಯಾಗಿ ಸೇರಿಸಬೇಡವೆಂತಲೂ ಈ ತ್ಯಾಗವಿಧಿ ಪ್ರಕಾರಗಳನ್ನರಿಯಬೇಕು. ಇದುವರೆಗೂ ವಿಸ್ತಾರವಾಗಿ ಹೇಳಿರುವ ಅರ್ಥಗಳನ್ನು ಸಂಗ್ರಹವಾಗಿ ತಿಳಿದುಕೊಳ್ಳುವುದಕ್ಕಾಗಿ ಶ್ರೀಮದಾಚಾರ್ಯರಿಂದ ಅನುಗ್ರಹೀತಗಳಾದ ಕಾರಿಕಗಳನ್ನು ನೋಡಬಹುದು ಅವು ಯಾವವೆಂದರೆ " ಅತೋಽಶಕ್ತಾಧಿಕಾರತ್ವಮಾಕಿಂಚನ್ಯ ಪುರಸ್ಕ್ರಿಯಾ । ಅನಂಗಭಾವೋ ಧರ್ಮಾಣಾಮಶಕ್ಯಾರಂಭವಾರಣಂ ॥ ತತ್ಪ್ರತ್ಯಾಶಾಪ್ರಶಮನಂ ಬ್ರಹ್ಮಾಸ್ತ್ರನ್ಯಾಯಸೂಚನಂ । ಸರ್ವಧರ್ಮಪರಿತ್ಯಾಗಶಬ್ದಾರ್ಥಾಸ್ಸ್ಯುರಸಮ್ಮತಾಃ ॥ ದೇವತಾಂತರ ಧರ್ಮಾದಿ ತ್ಯಾಗೋಕ್ತಿರವಿರೋಧಿನೀ । ಉಪಾಸಕೇಪಿ

ತುಲ್ಯತ್ವಾದಿಹಸಾನ ವಿಶೇಷಿತಾ ॥ ,, ಇವೆ ಅತಃ-ಈ ಪ್ರಕಾರವಾ
ಗಿ ನಿರ್ಣಯಿಸಿರುವುದರಿಂದ, ಅಶಕ್ತಾಧಿಕಾರತ್ವಂ - ಉಪಾಯಾಂತರಗ
ಳಲ್ಲಿ ಅಶಕ್ತನಾದವನು ಪ್ರಪತ್ತಿಗೆ ಅಧಿಕಾರಿ ಎಂಬದಾಗಿ " ಸರ್ವಧ
ರ್ಮಾನ್ ಪರಿತ್ಯಜ್ಯಸ್ಥಿತಸ್ತ್ವಂ , ಎಂಬಅನುವಾದ ಪಕ್ಷದಅರ್ಥವು ॥೧॥
ವಿಧಿಪಕ್ಷದಲ್ಲಿ ೫ ಅರ್ಥಗಳು, ಅವು ಯಾವವೆಂದರೆ ? ಆಕಿಂಚನ್ಯಪುರ
ಸ್ಕ್ರಿಯಾ-ನೈರಪೇಕ್ಷ್ಯಪುರಸ್ಕಾರವು. ಕಾರ್ಪಣ್ಯವಿಧಿಯೆಂದರ್ಥವು.
ಕಾರ್ಪಣ್ಯಂ ಪುರಸ್ಕೃತ್ಯ ವ್ರಜೇತಿವಿಧಿಃ- "ಸರ್ವಾಧರ್ಮಾನ್‌ಪರಿತ್ಯಜ್ಯ,,
ಎಂಬುವುದರಿಂದ " ಅಕಿಂಚನೋಽನನ್ಯಗತಿಃ ,, ಎಂಬೀಪ್ರಕಾರವಾ
ಗಿ ಆಕಿಂಚನ್ಯಾನು ಸಂಧಾನವನ್ನು ಮಾಡಿಕೊಂಡು ' ಶರಣಂವ್ರಜ ,
ಎಂಬದಾಗಿ ಕಾರ್ಪಣ್ಯರೂಪವಾದ ಅಂಗದೊಡನೆ ಕೂಡಿರುವ ಪ್ರಪತ್ತಿ
ವಿಧಿಯು ಎರಡನೆ ಅರ್ಥವು. ॥ ೨ ॥ ಅನಂಗಭಾವೋಧರ್ಮಾಣಾಂ-ನಿನ್ನ
ವರ್ಣಾಶ್ರಮ ಧರ್ಮಗಳನ್ನು ಪ್ರಪತ್ತಿಗೆ ಅಂಗತ್ವೇನ ಸ್ವೀಕರಿಸದೆ ನನ್ನ
ನ್ನು ಶರಣ ಹೊಂದೆಂಬದಾಗಿ ನೈರಪೇಕ್ಷ್ಯವಿಶಿಷ್ಟವಿಧಿಯು ಮೂರ
ನೇ ಅರ್ಥವು ॥ ೩ ॥ ಅಶಕ್ಯಾರಂಭವಾರಣಂ-ನಿನಗೆ ಅಶಕ್ಯಗಳಾದ ಪ್ರ
ಯತ್ನವನ್ನು ಬಿಟ್ಟು ಎಂಬದಾಗಿ ಅಶಕ್ತಿಯಿಂದ ಯತ್ನತ್ಯಾಗವಿಶಿಷ್ಟ
ವಿಧಿಯು ನಾಲ್ಕನೇ ಅರ್ಥವು. ॥೪॥ ತತ್ಪ್ರತ್ಯಾಶಾಪ್ರಶಮನಂ-ಅಶ
ಕ್ಯಗಳಾಗಿದ್ದರೂ ಅವುಗಳಲ್ಲಿ ಕೆಲವನ್ನು ಮಾತ್ರ ಅನುಷ್ಠಿಸುವುದಕ್ಕೆ
ಹೇಗಾದರೂ ಶಕ್ತಿಯನ್ನು ಸಂಪಾದಿಸುವೆನೆಂಬ ಆಶಾಲೇಶವನ್ನು
ಕೂಡ ಮಾಡಬೇಡವೆಂಬ ಆಶಾಲೇಶ ನಿವೃತ್ತಿ ವಿಶಿಷ್ಟವಿಧಿಯು ೫ ನೇ
ಅರ್ಥವು. ॥ ೫ ॥ ಬ್ರಹ್ಮಾಸ್ತ್ರನ್ಯಾಯ ಸೂಚನಂ-ವಿಕಲ್ಪಿತವಾದ ಉ
ಪಾಯಾಂತರ ಪರಿಗ್ರಹದಲ್ಲಿ ಬ್ರಹ್ಮಾಸ್ತ್ರನ್ಯಾಯದಿಂದ ವಿರೋಧವುಂ
ಟಾಗುವುದರಿಂದ ಅದನ್ನು ಬಿಟ್ಟು ಎಂಬದಾಗಿ ಅದರ ತ್ಯಾಗದೊಡನೆ
ಕೂಡಿದ ವಿಧಿಯು ಆರನೇ ಅರ್ಥವು. ॥ ೬ ॥ ಈ ಪ್ರಕಾರವಾಗಿ ಹೇ
ಳಿರುವ ಸರ್ವಧರ್ಮಪರಿತ್ಯಾಗ ಶಬ್ದಾರ್ಥಗಳು ಸಾಧುಸಮ್ಮತಗಳಾಗಿರು
ವುದರಿಂದ ಇದಕ್ಕೆ ವಿರುದ್ಧಗಳಾಗಿ ಶಂಕರಾದಿಗಳಿಂದ ಹೇಳಿರುವ ಬ
ಹುಪ್ರಮಾಣ ವಿರುದ್ಧಗಳಾದ ಸ್ವರೂಪತ್ಯಾಗಾದ್ಯರ್ಥಗಳನ್ನು ಸತ್ವ
ಸ್ಥರು ಆದರಿಸಬಾರದು.

ಆದರೆ ದೇವತಾಂತರಾಧನವೇನು, ಕಾಮ್ಯಭಗವದಾರಾಧನವೇನು, ಇವುಗಳೆನ್ನು ಪ್ರಪನ್ನನು ಅವಶ್ಯವಾಗಿ ಬಿಡಬೇಕಾಗಿರುವುದರಿಂದ ಇದನ್ನು ಸರ್ವ ಧರ್ಮಪರಿತ್ಯಾಗ ಶಬ್ದಾರ್ಥವನ್ನಾಗಿ ಹೇಳುವುದು ಪ್ರಮಾಣವಿರೋಧ ಕೋಟಿಯಲ್ಲಿ ಸೇರದೆ ಇರುವುದರಿಂದ ಈ ಅರ್ಥವನ್ನು ಯೇತಕ್ಕೆ ಹೇಳಬಾರದೆಂದರೆ ಈ ಅರ್ಥವು " ನಾನ್ಯಂದೇವಂನಮಸ್ಕುರ್ಯಾತ್ ,, ಇತ್ಯಾದಿ ಕ್ರಮದಿಂದ ಉಪಾಸಕನಿಗೂ ಸಾಧಾರಣವಾಗಿರುವುದರಿಂದ ಪ್ರಪನ್ನ ವಿಷಯದಲ್ಲಿ ಹೇಳುವ ಈ ಸಂದರ್ಭದಲ್ಲಿ ಅದು ವಿಶೇಷಿಸಲ್ಪಡಲಿಲ್ಲ ವೆಂದರಿಯ ಬೇಕು.

ಈ ಪ್ರಕಾರವೇ " ಉಪಾಯಾಪಾಯಸಂತ್ಯಾಗೀ,, ಇತ್ಯಾದಿವಚನಗಳಲ್ಲಿ ಹೇಳಲ್ಪಟ್ಟ ಅಪಾಯ ತ್ಯಾಗಕ್ಕೆ ಸ್ವರೂಪತ್ಯಾಗವೆ ಅರ್ಥವಾಗಿದ್ದರೂ ಬಹು ಪ್ರಮಾಣವಿರೋಧ ವುಂಟಾಗುವುದರಿಂದ ಉಪಾಯ ತ್ಯಾಗವಚನಕ್ಕೆ ಸರ್ವಧರ್ಮಪರಿತ್ಯಾಗ ವಚನಾರ್ಥದಂತೆನಿರ್ವಾಹವನ್ನರಿಯಬೇಕು.

—*ಮೂ ॥ ಮಾ ಮೇ ಕಂ*—

ಅನಂತರದಲ್ಲಿ ದ್ವಿತೀಯ ಪಾದವ್ಯಾಖ್ಯಾನವು ಮಾಡಲ್ಪಡುವುದು. ಅಲ್ಲಿ ಯರಡನೇ ಪಾದದಲ್ಲಿರುವ ಮಾಂ, ಎಂಬಪದಕ್ಕೆ ಅವತಾರ ರಹಸ್ಯ ಪ್ರಕರಣದಲ್ಲಿ ಹೇಳುವಂತೆ ಸೌಲಭ್ಯದಲ್ಲಿಯೂ ಮೂರನೇ ಪಾದದಲ್ಲಿ ಹೇಳಿರುವ ಮಾಂ, ಎಂಬ ಪದಕ್ಕೆ " ದ್ವಾವಿಮೌಪುರುಷೌಲೋಕೇಕ್ಷರಶ್ಚಾಕ್ಷರಏವಚ । ಕ್ಷರಸ್ಸರ್ವಾಣಿಭೂತಾನಿ ಕೂಟಸ್ಥೋಽಕ್ಷರಉಚ್ಯತೆ ॥ ಯೋಮಾಮೇವಮಸಮ್ಮೂಢೋಜಾನಾತಿಪುರುಷೋತ್ತಮಂ । ಸಸರ್ವವಿದ್ಭಜತಿಮಾಂಸರ್ವಭಾವೇನ ಭಾರತ ,, ಎಂಬದಾಗಿ ಹದಿನೈದನೇ ಅಧ್ಯಾಯದ ಪುರುಷೋತ್ತಮತ್ವ ಪ್ರಕರಣದಲ್ಲಿ ಪ್ರತಿಪಾದಿತವಾಗಿರುವಂತೆ ಪರತ್ವದಲ್ಲಿಯೂ ( ಸ್ವಾತಂತ್ರ್ಯದಲ್ಲಿಯೂ ) ಪ್ರಾಧಾನ್ಯದಿಂದ ತಾತ್ಪರ್ಯವಿರುವುದು. ಮಾಮೇಕಂ ಎಂಬಪದದಲ್ಲಿ ಭಗವದವತಾರ ಸ್ಥಿತಿಯು ತೋರುವುದರಿಂದ ವಾತ್ಸಲ್ಯಸ್ವಾಮಿತ್ವಸೌಶೀಲ್ಯಾದ್ಯನೇಕಾ ಕಾರಗಳಿಗೆ ಸ್ಫೂರ್ತಿಯುಂಟಾದರೂ ಪೂರ್ವಾರ್ಧದಲ್ಲಿ ಆಶ್ರಯಣಕ್ಕಾಗಿ ಸೌಲಭ್ಯವು ಅಪೇಕ್ಷಿತವಾಗಿರುವುದರಿಂದ ಅಂಥಾಸೌಲಭ್ಯ

ದಲ್ಲಿಯೂ ಉತ್ತರಾರ್ಧದಲ್ಲಿ " ಮೋಕ್ಷಯಿಷ್ಯಾಮಿ ,, ಎಂಬೀ ಸರ್ವ ಪಾಪವಿಮೋಕ್ಷಣ ಪ್ರತಿಜ್ಞೆಯು ರಕ್ಷಣೋಪಯುಕ್ತವಾಗಿರುವುದ ರಿಂದ ಪರತ್ವದಲ್ಲಿಯೂ ಪ್ರಾಧಾನ್ಯೇನ ತಾತ್ಪರ್ಯವೆಂದರಿಯ ಬೇಕು.

ಆದರೂ ಶ್ರೀಗೀತಾಚತುರ್ಥಾಧ್ಯಾಯದಲ್ಲಿ ಹೇಳಲ್ಪಟ್ಟ ಅವತಾರ ರಹಸ್ಯಪ್ರಕರಣದಲ್ಲಿ " ಸಂಭವಾಮ್ಯಾತ್ಮಮಾಯಯಾ ,, ಎಂಬು ವುದರಿಂದ ಅವತಾರಕ್ಕೆ ಮಿಥ್ಯಾತ್ವವೂ ಪ್ರಾಕೃತಜನರಂತೆ ಜನನಮ ರಣಾದಿ ಮತ್ತ್ವವೂತೋರುವುದರಿಂದ ಸೌಲಭ್ಯಸಿದ್ಧಿಯು ಹೇಗೆ? ಒಂದುವೇಳೆ ಸಿದ್ಧಿಸಿದರೂಅಸತ್ಯವಾಗಿರುವುದರಿಂದಲೂ ಪ್ರಾಕೃತದ್ರ ವ್ಯವನ್ನಾಶ್ರಯಿಸಿರುವುದರಿಂದಲೂ ಅದು ಕಾರ್ಯಕಾರಿಯಾಗುವುದೋ? ಎಂದರೆ ಈ ಅವತಾರಗಳು ಮಿಥ್ಯಾಭೂತಗಳಲ್ಲವೆಂತಲೂ ಅವತಾರದ ಶೆಯಲ್ಲಿಯೂ ಸರ್ವಜ್ಞತ್ವವೇ ಮೊದಲಾದ ಸ್ವಸ್ವಭಾವವಗಳು ಬಿಡ ಲ್ಪಡಲಿಲ್ಲವೆಂತಲೂ ಅವತಾರ ಶರೀರವು ಪ್ರಾಕೃತ ದೇಹೇಂದ್ರಿಯಗಳು ಳ್ಳ ಶರೀರದಂತೆ ಇರದೆ ಶುದ್ಧಸತ್ವಮಯವೆಂತಲೂ ಈ ಅವತಾರಕ್ಕೆ ತನ್ನ ಇಚ್ಛೆಯೆ ಕಾರಣವಲ್ಲದೆ ಕರ್ಮಪರಿಣಾಮವು ಕಾರಣವಲ್ಲವೆಂತಲೂ ಧರ್ಮಕ್ಕೆ ಲೋಪಬಂದಕಾಲವೆ ಅವತಾರಕಾಲವೆಂತಲೂ ಸಾಧುಜನರ ಸಂರಕ್ಷಣವೆ ಅವತಾರಕ್ಕೆ ಮುಖ್ಯ ಪ್ರಯೋಜನವೆಂತಲೂ ತಿಳಿಯು ವುದಕ್ಕೆ ಅಸಾಧ್ಯವಾದ ಇಂಥಾ ಜನ್ಮರಹಸ್ಯವನ್ನು ಯಾವನು ತಿಳಿ ಯುತ್ತಾನೆಯೊ ಅಂತವನಿಗೆ ಪುನಶ್ಚ ಹುಟ್ಟುವಿಕೆ ಯಿಲ್ಲವೆಂತಲೂ ಯೇರ್ಪಟ್ಟ ಈ ಅರ್ಥಗಳು ಈ ಗೀತಾ ನಾಲ್ಕನೆ ಅಧ್ಯಾಯದಲ್ಲಿ " ಬ ಹೂನಿಮೇವ್ಯತೀತಾನಿಜನ್ಮಾನಿತವಚಾರ್ಜುನ| ತಾನ್ಯಹಂವೇದಸರ್ವಾಣಿ ನತ್ವಂವೇತ್ಥಪರಂತಪ ॥ ಅಜೋಽಪಿಸನ್ನವ್ಯಯಾತ್ಮಾಭೂತಾನಾಮೀ ಶ್ವರೋಽಪಿಸನ್ | ಪ್ರಕೃತಿಂಸ್ವಾಮಧಿಷ್ಠಾಯಸಂಭವಾಮ್ಯಾತ್ಮಮಾ ಯಯಾ ॥ ಯದಾಯದಾಹಿಧರ್ಮಸ್ಯಗ್ಲಾನಿರ್ಭವತಿಭಾರತ | ಅಭ್ಯು ತ್ಥಾನಮಧರ್ಮಸ್ಯತದಾತ್ಮಾನಂಸೃಜಾಮ್ಯಹಂ ॥ ಪರಿತ್ರಾಣಾಯಸಾ ಧೂನಾಂವಿನಾಶಾಯಚದುಷ್ಕೃತಾಂ | ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿಯುಗೇಯುಗೇ ॥ ಜನ್ಮಕರ್ಮಚಮೇದಿವ್ಯಮೇವಂಯೋವೇ

ತ್ತಿತತ್ವತಃ । ತ್ಯಕ್ತ್ವಾದೇಹಂ ಪುನರ್ಜನ್ಮನೈತಿಮಾಮೇತಿಸೋಽ ರ್ಜುನ ,, ಎಂಬೀ ಶ್ಲೋಕಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವು ದಾದುದ ರಿಂದ ಈ ಅವತಾರಕ್ಕೆ ಮಿಥ್ಯಾತ್ವವೂ ಪ್ರಾಕೃತರಂತೆ ಜನನಮರ ಣಾದಿ ಮತ್ತ್ವವೂ ಹೇಳಿ ಸೌಲಭ್ಯದಲ್ಲಿ ಪ್ರಾಧ್ಯಾನ್ಯದಿಂದ ತಾತ್ಪರ್ಯ ವನ್ನು ದೂಷಿಸುವುದು ಯುಕ್ತವಲ್ಲವು. ಅವತಾರವು ಸತ್ಯವಾಗದೆ ಮಿಥ್ಯಾ ಆಗುವ ಪಕ್ಷದಲ್ಲಿ ಮಿಥ್ಯಾಜ್ಞಾನಕ್ಕೆ ಬಂಧನಿವರ್ತಕತ್ವವು ಉಂಟಾಗಲಾರ ದಾದುದರಿಂದ ಅಲ್ಲಿ ಹೇಳಿರುವ " ಇತಿಜನ್ಮರಹಸ್ಯಂ ಯೋವೇತ್ತಿನಾಸ್ಯಪುನರ್ಭವಃ ,, ಎಂಬ ಮೋಕ್ಷ ವಚನವು ವಿರೋ ಧಿಸುವುದು. " ಪ್ರಕೃತಿಂಸ್ವಾಮಧಿಷ್ಠಾಯ ,, ಎಂಬುವುದರಿಂದ ರಜಸ್ತಮಸ್ಸುಗಳಿಂದ ಕಲೆತಿರದ ಶುದ್ಧಸತ್ವಮಯತ್ವವು ತೋರುವುದ ರಿಂದ " ನತಸ್ಯಪ್ರಾಕೃತಾಮೂರ್ತಿರ್ಮಾಂಸಮೇದೋಸ್ಥಿಸಂಭವಾ,, ಎಂಬ ಪ್ರಕರಣದಲ್ಲಿ ಹೇಳಿರುವಂತೆ ಭಗವತಾರ ಶರೀರಕ್ಕೆ ಪ್ರಾಕೃತ ಶರೀರ ಸಾಮ್ಯವು ನಿಷೇಧಿಸಲ್ಪಡುವುದು. " ಸಂಭವಾಮ್ಯಾತ್ಮಮಾ ಯಯಾ ,, ಎಂಬುವುದರಿಂದ ಅವತಾರಕ್ಕೆತನ್ನ ಸಂಕಲ್ಪವೇ ನಿಯಾ ಮಕವಲ್ಲದೆ ಕರ್ಮಪರಿಪಾಕವು ನಿಯಾಮಕವಲ್ಲವೆಂತಲೂ ಬೋಧಿತವಾ ಗುವುದು. ಸಾಧುಸಂರಕ್ಷಣಾರ್ಥವಾದ ಈ ಅವತಾರಕ್ಕೆ ಧರ್ಮಲೋಪ ಕಾಲವೇ ಕಾಲವೆಂತಲೂ ಯೇರ್ಪಟ್ಟಿರುವುದು. ಇಂಥಾ ಅವತಾರವು ಸೌಲಭ್ಯಗುಣವಿಲ್ಲದಿದ್ದರೆ ಯೇರ್ಪಡಲಾರ ದಾದುದರಿಂದ ಅಲ್ಲಿ ಸೌಲ ಭ್ಯದಲ್ಲಿ ಪ್ರಾಧಾನ್ಯದಿಂದ ತಾತ್ಪರ್ಯವೆಂದು ತಿಳಿಯಬೇಕು. ಈ ಅವ ತಾರ ರಹಸ್ಯಜ್ಞಾನವು ಉಪಾಸಕನಿಗೆ ಉಪಾಯಪೂರ್ತಿಗೆ ಸಾಧನವಾ ಗಿರುವುದೆಂತಲೂ ಸ್ವತಂತ್ರಪ್ರಪತ್ತಿನಿಷ್ಠನಿಗೆ ಸ್ವತಂತ್ರನಾದ ಶರ ಣ್ಯನ ಸೌಲಭ್ಯಪ್ರದರ್ಶನವನ್ನು ಮಾಡುವುದೆಂತಲೂ ತಿಳಿಯಬೇಕು. ಆದರೂ ಈ ಪ್ರಕರಣಗಳಲ್ಲಿ ಹೇಳಿರುವ ಸೌಲಭ್ಯಪರತ್ವಗಳೆಂಬ ಯು ರಡುಗುಣಗಳೂ ಅನುಸಂಧೇಯಗಳಾಗಬೇಕೋ ? ಅವುಗಳಲ್ಲಿ ಯಾ ವದಾದರೊಂದು ಗುಣದ ಅನುಸಂಧಾನವೇ ಪರ್ಯಾಪ್ತವಾಗಲಾರದೋ? ಎಂದರೆ ಅವು ಒಂದಕ್ಕೊಂದು ಸಹಾಯ ಭೂತವಾಗಿರುವುದರಿಂದ ಈ ಯರಡುಗುಣಗಳೂ ಅಪೇಕ್ಷಿತವಾಗಿಯೇ ಇರುವುವು. ಲೋಕದಲ್ಲಿ

ಸ್ವತಂತ್ರನಾದ ಒಬ್ಬನಲ್ಲಿ ಸೌಲಭ್ಯವಿಲ್ಲದಿದ್ದರೆ ಅವನಲ್ಲಿ ಆಶ್ರಯಿಸು ವುದುತಾನೆ ಹೇಗೆ ? ಸೌಲಭ್ಯಮಾತ್ರವಿದ್ದರೂ ಅಂತವನಲ್ಲಿ ಸ್ವಾತಂತ್ರ್ಯವಿಲ್ಲದೆ ಹೋದರೆ ಅಸ್ವತಂತ್ರನಾದವನಿಂದ ಅನಿಷ್ಟನಿವೃತ್ತಿ ಪೂರ್ವಕವಾದ ಇಷ್ಟಪ್ರಾಪ್ತಿತಾನೆ ಹೇಗೆ ಸಿದ್ಧಿಸುವುದು. ಕಿಂಚ,ಅಸ್ವತಂತ್ರನಾದ ಪುರುಷನಲ್ಲಿ ನಮ್ಮಗಳಿಗೆ ಕೈಂಕರ್ಯಸಿದ್ಧಿತಾನೇ ಹೇಗೆ ಉಂಟಾಗುವುದು ? ಸ್ವತಂತ್ರ ಪುರುಷನಾಗಿದ್ದರೆ ಇವನಿಂದ ನಮ್ಮಗಳಿಗೆ ದಂಡನ ವುಂಟಾಗುವುದೆಂದು ಭಯಪಟ್ಟು ಕೈಂಕರ್ಯವನ್ನು ಲೋಕರು ಮಾಡುವರು. ಕೆಲವು ಮೃದುಸ್ವಭಾವವುಳ್ಳವರು ಅಸ್ವತಂತ್ರನಲ್ಲಿ ಕೈಂಕರ್ಯವನ್ನೂ ಮಾಡಿದರೂ ಕಠಿನಸ್ವಭಾವವುಳ್ಳವರು ಅಸ್ವತಂತ್ರನಾದ ಇವನು ನಮ್ಮನ್ನೇನುಮಾಡುವನು, ಇವನಿಗೆ ಕೈಂಕರ್ಯ ಮಾಡಲವಶ್ಯಕವಿಲ್ಲವೆಂದು ಸುಮ್ಮನಿರುವರು. ಆದುದರಿಂದ ಇಲ್ಲಿ ಸೌಲಭ್ಯಸ್ವಾತಂತ್ರ್ಯಗಳೆರಡೂ ಅಪೇಕ್ಷಿತವೆನ್ನುವುದರಲ್ಲಿ ಸಂಶಯುವಿಲ್ಲವು. ಸುಲಭವಾದ ತೃಣಾದಿಗಳಿಂದಲೂ ದುರ್ಲಭವಾದ ಮಹಾಮೇರು ಮೊದಲಾದವುಗಳಿಂದಲೂ ಕೂಡ ಯಾರಿಗೆ ಯೇನುತಾನೆ ಪ್ರಯೋಜನವುಂಟಾಗುವುದು. ಆದುದರಿಂದ ಈ ಯರಡೂ ಅಪೇಕ್ಷಿತವೆಂದರ್ಥವು. ಇಂಥಾ ಸುಲಭನೂ ಸ್ವತಂತ್ರನೂ ಆದ ಪರಮಪುರುಷನೇ ಇಲ್ಲಿ ಆಶ್ರಯಣೀಯನೂ ಫಲದಶೆಯಲ್ಲಿ ಪ್ರಾಪ್ಯನೂ ಆಗಿರುವನು. ಇಲ್ಲಿ ' ಮಾಂ , ಎಂಬ ಪದದಿಂದ ಸರ್ವರಕ್ಷಕತ್ವವೂ ' ಅಹಂ , ಎಂಬ ಪದದಿಂದ ಸರ್ವಶೇಷಿತ್ವವೂ ತನ್ನರಕ್ಷಣಕ್ಕಾಗಿಯೆ ಸಮಯನಿರೀಕ್ಷಣವನ್ನು ಮಾಡುತಲಿರುವ ಸ್ಥಿತಿಯು ಈ ಎರಡುಪದಗಳಿಂದಲೂ ತೋರುವುದು. ಈ ಯರಡು ಪದಗಳಲ್ಲಿ ಯಾವ ಪದದಿಂದ ಎಂಥಾ ರಕ್ಷಾಪೇಕ್ಷಾ ಪ್ರತೀಕ್ಷಣವು ಹೇಳಲ್ಪಡುವುದೆಂದರೆ, ಮಾಂ, ಎಂಬಪದದಿಂದ ಆಶ್ರಯಣಕ್ಕುಚಿತವಾದಅವಸರ ಪ್ರತೀಕ್ಷಣವೆಂಬ ಅಭಿಮುಖ್ಯವೂ ಅಹಂ, ಎಂಬಅಸ್ಮಚ್ಛಬ್ದದಿಂದ ಫಲಪ್ರದಾನಕ್ಕೆ ಸಮಯವನ್ನು ನಿರೀಕ್ಷಿಸಿಕೊಂಡಿರುವ ಆಭಿಮುಖ್ಯವೂ ಸೂಚಿತವಾಗುವುದು.

ಆದರೂ ಮಾಂ, ಎಂಬ ಏಕ ಶಬ್ದವು ನೈರಪೇಕ್ಷ್ಯಪರವಲ್ಲವೋ? ಆದುದರಿಂದ ಇಲ್ಲಿ 'ಶರಣಂವ್ರಜ, ಎಂಬ ಉಪಾಯವಿಧಾನವು ಉಚಿ

ತವ್ರೊ? " ಆತ್ಮಾನಂಮಯಿನಿಕ್ಷಿಪೇತ್ ,, ಇತ್ಯಾದಿ ವಿಧಿಬಲದಿಂದ ಏಕಶಬ್ದವು ಪ್ರಪತ್ತಿವ್ಯತಿರಿಕ್ತವಾದ ಬೇರೊಂದನ್ನು ಅಪೇಕ್ಷಿಸಲಾರ ದೆಂಬ ನೈರಪೇಕ್ಷ್ಯಪರವೆಂದರೆ ಆವಾಗ " ಶರಣಂವ್ರಜಮಾಮೇಕಂ,, ಎಂಬದಾಗಿ ವಿಧಿಯು ಮೊದಲು ಶ್ರುತವಾಗಬೇಡವೊ? ಎಂದರೆ ವಿಧೇಯವಾದ ಶರಣಗತಿಗೂಕೂಡ ವಶೀಕಾರ್ಯನಾದ ಶರಣ್ಯನು ಪ್ರ ಧಾನನಾದುದರಿಂದ ಮಾಮೇಕಂ, ಎಂಬ ಪೂರ್ವಭಾವವು ಯುಕ್ತವೆಂ ತಲೆ ತಿಳಿಯಬೇಕು. ಆದುದರಿಂದ ಈ ಪ್ರಕಾರವಾಗಿ ಅಕಿಂಚನಾಧಿಕಾರಿ ಗೆ ಯಥಾವಿಧಿಯಾಗಿ ರಕ್ಷಾಪೇಕ್ಷಾ ಪೂರ್ವಕವಾದ ಭರನ್ಯಾಸವನ್ನು ಬಿಟ್ಟು ಬೇರೊಂದರಿಂದ ಅಪೇಕ್ಷಾ ರಹಿತವಾದ ಸಿದ್ಧೋಪಾಯವನ್ನು ಮಾಮೇಕಂ ಎಂಬ ಪದದಿಂದತೋರಿಸಿ ಅದರ ವಶೀಕಾರಾರ್ಥವಾಗಿ ಸಾ ಧ್ಯೋಪಾಯವನ್ನು ಶರಣಂವ್ರಜ ಎಂಬದಾಗಿ ವಿಧಿಯಿಂದ ತೋರಿಸು ತ್ತಾನೆಂದರಿಯಬೇಕು.

ಆದರೂ " ಮಾಮೇಕಂಶರಣಂ ,, ಎಂಬದಾಗಿ ಈಶ್ವರನೇ ಉಪಾಯವೆಂದು ತೋರುವುದರಿಂದ ಶರಣಾಗತಿಗೆ ಉಪಾಯತ್ವವೇ ಇಲ್ಲವಾದುದರಿಂದ ಸಾಧ್ಯೋಪಾಯವನ್ನು ಶರಣಂವ್ರಜ ಎಂಬ ವಿಧಿ ಯಿಂದ ತೋರಿಸುವುದೆಂದು ಹೇಳುವುದು ಉಚಿತವೊ? ಭಕ್ತಿಯೋ ಗವಲ್ಲವೇ ಸಾಧ್ಯೋಪಾಯವು? ಎಂದರೆ ಈ ಪ್ರಕಾರದಿಂದ ವಿಧಿಸುವ ಪ್ರಪತ್ತಿರೂಪವಾದ ವಿದ್ಯಾವಿಶೇಷಕ್ಕೆ ಶರಣ್ಯನ ಪ್ರಸಾದ ಜನಕ ತ್ವೇನಬಂದಿರುವ ವಿಧಿಬಲದಿಂದ ಪ್ರಾಪ್ತವಾದ ಉಪಾಯತ್ವವು ಭಕ್ತಿ ಯೋಗದೊಡನೆಸಮಾನವಾಗಿರುವುದರಿಂದಇದನ್ನು ಕೂಡಸಾಧ್ಯೋಪಾ ಯವೆನ್ನಲು ಸಂಶಯ ವಿಲ್ಲವು. ಆದರೆ ಪರಮಾತ್ಮನಿಗೆ ಪ್ರಧಾನೋ ಪಾಯತ್ವ ಭಂಗವುಂಟಾಗಲಾರದೊ? ಎಂದರೆ ಈ ಪ್ರಪತ್ತಿಯಿಂ ದ ಪ್ರಸನ್ನನಾದ ಈಶ್ವರನು ಮೋಕ್ಷಕ್ಕೆ ಸಾಕ್ಷಾದುಪಾಯನೆಂತಲೂ ಶರಣಾಗತಿಯು ಆ ಪರಮಾತ್ಮನ ಪ್ರಸಾದ ಜನಕವೆಂತಲೂ ತಿಳಿಯ ಬೇಕು. ಆದರೆ ಭಕ್ತಿಯೋಗದಂತೆ ಭರನ್ಯಾಸವೂ ವಿದ್ಯಾವಿಶೇಷ ವಾಗಿರುವುದರಿಂದ ಅದಕ್ಕೆ ವಿಶೇಷವಾಗಿ ತಿಳಿಯತಕ್ಕ ಆಕಾರವು ಯಾ ವದೆಂದರೆ ಪರಮಾತ್ಮನಿಗೆ ಪ್ರಪತ್ತಿವ್ಯತಿರಿಕ್ತವಾದ ಉಪಾಯಾಂತರಸ್ಯೆ

ರಪೇಕ್ಷತ್ವವೆ ಈ ವಿದ್ಯೆಗೆ ವಿಶೇಷವಾದ ವೇದ್ಯಾಕಾರವೆಂದರಿಯಬೇಕು. ಭಕ್ತಿಯೋಗವು ತಾನು ಸಿದ್ಧಿಸುವದಕ್ಕಾಗಿ ಪ್ರಪತಿಯನ್ನ ಪೇಕ್ಷಿಸಿದ ರೂ ಪ್ರಪತ್ತಿಯು ತನ್ನ ಸಿದ್ಧಿಗಾಗಿ ಭಕ್ತಿಯನ್ನಾದರೂ ಬೇರೆ ಶರ ಣಾಗತಿಯನ್ನಾದರೂ ಅಪೇಕ್ಷಿಸಲಾರದಷ್ಟೆ. ಆದುದರಿಂದ ನಿರಪೇಕ್ಷೋ ಪಾಯತ್ವವೆ ಈನ್ಯಾಸವಿದ್ಯೆಗೆ ವೇದ್ಯಾಕಾರವಾಗಿರುವುದು. ಈ ಪ್ರ ಪತ್ತಿಗೆ ಉಪಯುಕ್ತಾ ಕಾರವಾದ ಸರ್ವರಕ್ಷಕತ್ವಾದಿಗಳೂ ನಿರಪೇ ಕ್ಷೋಪಾಯತ್ವಾದಿಗಳೂ 'ಮಾಮೇಕಂ' ಎಂಬ ಪದಗಳಲ್ಲಿವಿವಕ್ಷಿತ ಗಳಾಗಿರುವುವು.

ಆದರೂ ಉಪಾಯತೋಪಯುಕ್ತವಾದವಾತ್ಸಲ್ಯಾದ್ಯನೇಕಾಕಾರ ವು,ಮಾಂ ಎಂಬಪದಕ್ಕೆ ಮೂಲಮಂತ್ರಘಟಿತವಾದ ನಾರಾಯಣಶಬ್ದ ದಂತೆ ಹೇಗೆ ಸಿದ್ಧಿಸುವುದು ? ಎಂದರೆ "ಏಷನಾರಾಯಣಶ್ರೀಮಾನ್ ಕ್ಷೀರಾರ್ಣವನಿಕೇತನಃ । ನಾಗಪರ್ಯಂಕಮುತ್ಸೃಜ್ಯಹ್ಯಾಗತೋಮಧು ರಾಂಪುರೀಂ" ಎಂಬದಾಗಿ ಶ್ರೀಮನ್ನಾರಾಯಣತ್ವೇನ ಸಿದ್ಧಿಷ್ಟ ನಾದ ಶ್ರೀಕೃಷ್ಣಾವತಾರ ವಿಷಯವಾಗಿರುವ 'ಮಾಂ' ಎಂಬ ಪದ ದಿಂದ ಮೂಲಮಂತ್ರಾದಿಗಳಲ್ಲಿ ಪ್ರಕಾಶಿತವಾದ ಸರ್ವರಕ್ಷಕತ್ವ ಸರ್ವ ಶೇಷಿತ್ವ ಶ್ರೀಯಃಪತಿತ್ವನಾರಾಯಣತ್ವಗಳೂ, ಆದರಿಂದ ಆಕೃಷ್ಟ ವಾಗಿಯೂ ಪರತ್ವಸೌಲಭ್ಯಗಳಿಗೆ ಉಪಯುಕ್ತವಾಗಿಯೂ ಬರುತಲಿ ರುವ ಸರ್ವಜ್ಞತ್ವಸರ್ವಶಕ್ತಿತ್ವಾದಿಗಳೂ ಪರಮಕಾರುಣಿಕತ್ವ ಸೌಶೀ ಲ್ಯವಾತ್ಸಲ್ಯಾದಿಗಳೂ ದ್ವಯಮಂತ್ರದಲ್ಲಿ ಚರಣೌ ಎಂಬ ದ್ವಿವಚ ನಾಂತ ಪದದಲ್ಲಿ ತೋರುತಲಿರುವ ಶುಭಾಶ್ರಯವಾದ ಪರತ್ವ ಸೌಲ ಭ್ಯಪ್ರಕಾಶಕವಾದ ಶ್ರೀಪಾರ್ಥಸಾರಥಿಯ ದಿವ್ಯಮಂಗಳ ವಿಗ್ರಹವಿ ಶೇಷವೂ ತೋರಿಸಲ್ಪಡುವುದು.

ಕಿಂಚವಾತ್ಸಲ್ಯಸ್ವಾಮಿತ್ವ ಸೌಶೀಲ್ಯ ಸೌಲಭ್ಯ ರೂಪವಾದ ಈ ನಾಲ್ಕು ಗುಣಗಳೂ ಶ್ರೀಕೃಷ್ಣನ ವ್ಯಾಪಾರ ವಿಶೇಷಗಳಿಂದಲೆ ವ್ಯಕ್ತವಾಗುವುವು. ಹಿಂದೆ ಅಸ್ಥಾನ ಸ್ನೇಹಾದಿಗಳಿಂದ ವ್ಯಾಕುಲ ನಾದ ಅರ್ಜುನನ್ನು ಅನಾದರಿಸದೆ ಇರುವುದರಿಂದ ವಾತ್ಸಲ್ಯವೂ "ಮ

ತ್ತಃ ಪರತರಂನಾನ್ಯತ್ - ವೇದೈಶ್ಚ ಸರ್ವೈರಹಮೇವವೇದ್ಯಃ-ಮಯಾತ
ತಮಿದಂಸರ್ವಂ ,, ಎಂಬದಾಗಿ ತಾನೆ ಹೇಳುವುದರಿಂದ ಸ್ವಾಮಿತ್ವವೂ
" ಹೇಕೃಷ್ಣ ಹೇಯಾದವ- ರಥಂಸ್ಥಾಪಯಮೇಚ್ಯುತ ,, ಇತ್ಯಾದಿ
ರೀತಿಯಿಂದ ಅರ್ಜುನನಿಗೆ ಸಾರಥ್ಯಾದಿಗಳನ್ನು ಮಾಡುವ ವ್ಯಾಪಾರ
ವಿಶೇಷಗಳಿಂದ ಸೌಶೀಲ್ಯ ಗುಣವೂ, ಅರ್ಜುನನು ಅಪೇಕ್ಷಿಸಿದ ಕಾಲ
ದಲ್ಲಿ ತನ್ನ ವಿಶ್ವರೂಪ ಸೇವಾಪ್ರದಾನವನ್ನು ಮಾಡಿದ ವೃತ್ತಾಂತದಿಂ
ದಲೂ ಇದನ್ನು ನೋಡಿ ಭಯಪಟ್ಟು ಪೂರ್ವರೂಪವನ್ನೇ ತೋರಿಸೆಂ
ದು ಪ್ರಾರ್ಥಿಸಿದಾಗ ಪರಮ ಸುಲಭನಾಗಿ ಸೌಮ್ಯಾಕಾರವಾದ ತನ್ನ
ಪೂರ್ವರೂಪವನ್ನು ತೋರಿಸಿದ ವೃತ್ತಾಂತದಿಂದಲೂ ಸೌಲಭ್ಯಗುಣ
ವೂ ಪ್ರಕಾಶಿತ ವಾಗಿರುವುದು. ಈಗ ಹೇಳಿರುವ ಶರಣ್ಯನಗುಣಗ
ಳಲ್ಲಿ ಆಶ್ರಿತ ಸಂರಕ್ಷಣಕ್ಕೆ ಪ್ರಧಾನಗಳಾದ ಗುಣಗಳು ಸರ್ವಜ್ಞತ್ವ
ಸರ್ವ ಶಕ್ತಿತ್ವಪರಮ ಕಾರುಣಿಕತ್ವಗಳೆಂದರಿಯಬೇಕು. ಈ ಮೂರು
ಗುಣಗಳಲ್ಲಿ ಜ್ಞಾನಶಕ್ತಿಗಳು ನಿಗ್ರಹಾನುಗ್ರಹ ಸಾಧಾರಣಗಳಾಗಿ
ರುವುವು. ಕಾರುಣ್ಯವೂ ಇದರಶಾಖಾ ಭೇದಗಳಾದ ಸೌಶೀಲ್ಯ
ವಾತ್ಸಲ್ಯಾದಿಗಳೂ ಅನುಗ್ರಹಕ್ಕೆ ಪ್ರಧಾನಗಳೆಂದರಿಯಬೇಕು. ಈ
ಪ್ರಕಾರವಾಗಿ ಕಾರುಣ್ಯದ ವಿಶೇಷವನ್ನು ಕಂಡ ಪೂರ್ವೀಕರು "ಕೃಪಾ
ಮಾತ್ರಮನಸೊಮ್ಯತ್ತಿಃ ಪ್ರಸೀದಮೇ ,, ಇತ್ಯಾದಿ ಪ್ರಮಾಣ ಪ್ರಕಾ
ರವಾಗಿ ಕೃಪಾಗುಣವನ್ನು ಮುಖ್ಯವಾದ ಆಧಾರವನ್ನಾಗಿ ಅನುಸಂಧಿ
ಸಿ ಸ್ವಸ್ವಾಮಿಭಾವ ಸಂಬಂಧವನ್ನೂ ಜ್ಞಾನಶಕ್ತ್ಯಾದಿ ಗುಣಗಳನ್ನೂ
ಕಾರುಣ್ಯಕ್ಕೆ ಸೇವಕರನ್ನಾಗಿ ಮಾಡಿ ತಾವುಗಳೂ ಕಾರುಣ್ಯಗುಣವನ್ನೆ
ಪ್ರಧಾನವನ್ನಾಗಿಭಾವಿಸಿದರು. ಆದರಿಂದ ಕರ್ಮಜ್ಞಾನ ಭಕ್ತಿನಿಷ್ಠರಿಗೂ
ಕೂಡ ಭಗವತ್ಕೃಪೆಯೇ ಮುಖ್ಯಾಧಾರವೆಂದು ತಿಳಿಯಬೇಕು. ಪು
ರಾಣ ವಚನಗಳಲ್ಲಿಯೂ ಪೂರ್ವಾಚಾರ್ಯ ಸೂಕ್ತಿಗಳಲ್ಲಿಯೂ ಈ ಕೃ
ಪಾಗುಣದ ಪ್ರಾಧಾನ್ಯವು ನಾನಾ ಪ್ರಕಾರವಾಗಿ ಪ್ರತಿಪಾದಿಸಲ್ಪಟ್ಟಿ
ರುವುದು. ಈ ಉಪನ್ಯಾಸದಿಂದ ಪ್ರಕೃತವಾದ ' ಮಾಂ , ಎಂಬ ಶ
ಬ್ದಕ್ಕೆ ಯಾವಅರ್ಥವು ಹೇಳಿದಂತೇ ಆಯಿತೆಂದರೆ ? ಅದಕ್ಕುತ್ತರವು.
ಈ ಪ್ರಕಾರವಾಗಿ ಆಶ್ರಿತರ ರಕ್ಷಣಕ್ಕೆ ಪ್ರಧಾನವಾದ ಕೃಪಾಗುಣದಿಂ

ದಲೂ ಅದಕ್ಕೆ ಪರಿಕರಗಳಾದ ಜ್ಞಾನಶಕ್ತ್ಯಾದಿಗಳಿಂದಲೂ ಕೂಡಿರುವ ತನ್ನನ್ನು (ಅಭಿಮುಖಸ್ಥಿತಿಯಲ್ಲಿ) ಮಾಂ ಎಂಬದಾಗಿ ತೋರಿಸಿದನು. (ಇನ್ನು ಮುಂದೇ ಏಕಶಬ್ದಕ್ಕೆ ಕ್ರಮವಾಗಿ ಆರರ್ಥಗಳು ವಿವರಿಸಲ್ಪಡುವುವು) ಇಲ್ಲಿ ಮಾಂ ಎಂಬ ಪದದಲ್ಲಿರುವ ಏಕವಚನದಿಂದಲೆ ಏಕತ್ವವು ತೋರುವುದರಿಂದ ಪುನಶ್ಚ ಏಕಶಬ್ದ ಪ್ರಯೋಗವು ವ್ಯರ್ಥವೆಂದು ಸಂದೇಹಿಸದೆ "ಎನಕ್ಕೆ ತನ್ನೈತ್ತಂದಕರ್ಪಕಂ" ಎಂಬಂತೆ ಫಲದಶೆಯಲ್ಲಿ ಹೊಂದಲ್ಪಡತಕ್ಕವನಾದ ಅವನೆ ಇಲ್ಲಿ ಉಪಾಯಭೂತನಾಗಿರುವುದರಿಂದ (ಪ್ರಾಪ್ಯನಾದವನೆ ಇಲ್ಲಿ ಪ್ರಾಪಕನಾಗಿರುವುದರಿಂದ) ಉಪಾಯ ಫಲಗಳಿಗೆ ಏಕತ್ವವನ್ನು ಹೇಳುವುದೆಂದು ಯೋಜನ ಮಾಡುವುರು. (ಎನಕ್ಕೆ ಎಂಬ ದ್ರಾವಿಡವಾಕ್ಯಕ್ಕೆ ಇದರ್ಥವು. ಎನಕ್ಕೆ-ನನಿಗೇನೆ, ತನ್ನೈ-ತನ್ನನ್ನು, ತಂದ-ಕೊಟ್ಟಿರುವ, ಕರ್ಪಕಂ-ಕಲ್ಪವೃಕ್ಷವು, ಕಲ್ಪವೃಕ್ಷವು ತನ್ನನ್ನು ಯಾಚಿಸಿದವರಿಗೆ ತನಿಗಿಂತಲೂ ಭಿನ್ನವಾದ ಫಲಗಳನ್ನು ಕೊಡುವುದು. ಈ ಕಲ್ಪವೃಕ್ಷವು ತನ್ನನ್ನು ಕೂಡಾ ಕೊಡುವುದು. ಆದುದರಿಂದ ಪ್ರಸಿದ್ಧ ಕಲ್ಪವೃಕ್ಷಕ್ಕಿಂತಲೂ ಈ ವೃಕ್ಷಕ್ಕೆ ವಿಶೇಷವು ಸಿದ್ಧವಾಯಿತು.) ಆದರಿಂದ 'ಪ್ರಾಪ್ಯಸ್ಯೈವಪ್ರಾಪಕತ್ವಂ' ಎಂಬ ಮೊದಲನೇ ಅರ್ಥವು ಸಿದ್ಧವಾಯಿತು ॥೧॥ ಈ ಪ್ರಕಾರವಲ್ಲದೆ "ಮುಖ್ಯಾನ್ಯಕೇವಲೇಷ್ವೇಕಂ" ಎಂಬಂತೆ ಅನೇಕಾರ್ಥಗಳುಳ್ಳ ಏಕಶಬ್ದವು ಇಲ್ಲಿಕೇವಲ ಪರ್ಯಾಯವಾಗಿ "ಮಾಮೇವಯೇ ಪ್ರಪದ್ಯಂತೆ - ತಮೇವಶರಣಂಗಚ್ಛ" ಇತ್ಯಾದಿಗಳಲ್ಲಿ ಹೇಳಿರುವಂತೆ ಅವಧಾರಣಾರ್ಥವಾಗುತ ಶರಣ್ಯನವುಷ್ಕಲಗಳಾದ ಗುಣಗಳಿಂದ ತನ್ನ ಸ್ವಾತಂತ್ರ್ಯಾದಿ ನಿಷೇಧಕವೆಂತಲೂ ಹೇಳುವರು. ಇಲ್ಲಿ ಉಪಾಯವನ್ನನುಷ್ಠಿಸುವಂತವನಿಗೆ ಸ್ವಾತಂತ್ರ್ಯ ಪ್ರಸಕ್ತಿಯೆ ಇಲ್ಲವಾದುದರಿಂದ ಅಪ್ರಸಕ್ತವಾದ ಸ್ವಾತನ್ತ್ರ್ಯನಿಷೇಧಪರವಾದ ಈ ಯೋಜನೆಯು ಉಚಿತವಾದದ್ದೋ? ಎಂದರೆ ತನ್ನ ಸಂರಕ್ಷಣಕ್ಕೆ ಉಪಯೋಗಿಸುವ ಸಾಧನಗಳನ್ನು ಶಾಸ್ತ್ರದಿಂದ ನಿಯಮಿಸಲ್ಪಟ್ಟ ತಾನು ಅನುಷ್ಠಿಸುವುದರಿಂದ ಸ್ವರಕ್ಷಣ ವ್ಯಾಪಾರದಲ್ಲಿ ತನಿಗೂ ಕರ್ತೃತ್ವವು ತೋರಿ ಸಿದ್ಧೋಪಾಯನಾದ ಶರಣ್ಯನೊಡನೆ

ತನ್ನನ್ನು ಕೂಡ ಉಪಾಯನೆಂದು ನೆನೆಸುವಿಕೆಗೆ ಪ್ರಸಕ್ತಿಯುಂಟಾಗಬಹುದು, ಈ ಪ್ರಕಾರವಾಗಿ ಪ್ರಸಕ್ತವಾದ ಉಪಾಯದ್ವಿತ್ವವನ್ನು ಏಕಶಬ್ದವು ನಿವಾರಣ ಮಾಡುವುದೆಂದು. ತಿಳಿಯಬೇಕು. ಆದರೆ “ ಕರ್ತಾಶಾಸ್ತ್ರಾರ್ಥವತ್ವಾತ್ ,, ಎಂಬ ಸೂತ್ರದಿಂದ ಜೀವನಿಗೆ ಕರ್ತೃತ್ವವು ಪ್ರಾಮಾಣಿಕವಾಗಿರುವುದರಿಂದ ಅವನಿಗೆ ಪ್ರಧಾನೋಪಾಯತ್ವ ವಿಲ್ಲದಿದ್ದರೂ, ಉಪಾಯ ಸಂಬಂಧವಾದರೂ ವುಂಟಾಗಲಾರದೋ ? ಎಂದರೆ ಈ ಕರ್ತೃತ್ವವು ಪರಮಾತ್ಮಾಧೀನವಾಗಿರುವುದರಿಂದಲೂ ಅಂಥಾ ಪರಾಧೀನ ಕರ್ತೃತ್ವವು ಕೂಡ ಭಗವದನುಗ್ರಹದಿಂದ ಸಿದ್ಧಿಸುವುದರಿಂದಲೂ ಭಗವತ್ಸಹಾಯ ವಿಲ್ಲದ ಕಾಲದಲ್ಲಿ ತನ್ನ ಕೈಕಾಲುಗಳ ವ್ಯಾಪಾರಗಳಲ್ಲಿಯೂ ಕೂಡ ತನಿಗೆ ಅನ್ವಯವಿಲ್ಲವಾದುದರಿಂದಲೂ ಪರಮಾತ್ಮನಿಂದ ಕೊಡಲ್ಪಟ್ಟ ಕರಣಕಳೇ ಬರಾದಿಗಳಿಂದ ಅವನು ತೋರಿಸಿರುವ ಉಪಾಯವನ್ನು ಅವನ ಸಹಾಯದಿಂದಲೆ ಅನುಷ್ಠಿಸಿ ಅವನು ಕೊಡುವ ಫಲಕ್ಕೆ ಚಾತಕ ಪಕ್ಷಿಯಂತೆ ಯೆದುರು ನೋಡುತಲಿರುವ ಅವನನ್ನು ಸ್ವಾಧೀನವಾಗಿಯೂ ಸರ್ವವಿಷಯವಾಗಿಯೂ ಪ್ರತಿಹತಿರಹಿತವಾಗಿಯೂ ಅರುವ ಕರ್ತೃತ್ವವುಳ್ಳ ಪರಮಾತ್ಮನೊಡನೆ ಯೆರಡನೆ ಸಿದ್ಧೋಪಾಯವೆಂದು ಭಾವಿಸುವಿಕೆಯು ಮುಮುಕ್ಷುವಾದ ಅವನಿಗೆ ಉಚಿತವಲ್ಲವೆಂಬದಾಗಿ ಏಕಶಬ್ದದಿಂದ ಹೇಳಿದಂತೆ ಆಯಿತು. ಆದುದರಿಂದ ಈ ಪಕ್ಷದಲ್ಲಿ ಸ್ವತಂತ್ರವಾದ ಉಪಾಯತ್ವವು ಏಕಶಬ್ದಾರ್ಥತ್ವೇನ ಫಲಿತವಾಗುವುದರಿಂದ ಸ್ವತಂತ್ರೋಪಾಯದ್ವಿತ್ವವನ್ನು ಏಕಶಬ್ದವು ನಿಷೇಧಿಸುವುದೆಂಬ ತಾತ್ಪರ್ಯವನ್ನರಿಯಬೇಕು. ಅದರಿಂದ “ ಸ್ವಪ್ರಾಧಾನ್ಯನಿವಾರಣಂ ,, ಎಂಬ ಯೆರಡನೆ ಅರ್ಥವು ಪ್ರತಿಪಾದಿಸಲ್ಪಟ್ಟಿತು. ||೨||

ಆದರೂ ಈ ರೀತಿಯಾಗಿ ಶರಣಾಗತಿಯನ್ನು ಅನುಷ್ಠಿಸುವಂತವನಿಗೆ ಸಿದ್ಧೋಪಾಯನಾದ ಪರಮ ಪುರುಷ ಸಾಮ್ಯವನ್ನು ಏಕಶಬ್ದವು ನಿಷೇಧಿಸುವುದದೆಂದು ಹೇಳಿದರೂ ಪ್ರಪತ್ತಿಯು ಮೋಕ್ಷಸಾಧನವಾಗಿರುವುದರಿಂದ ಇದಕ್ಕೆ ಸಿದ್ಧೋಪಾಯದಂತೆ ಪ್ರಧಾನೋಪಾಯತ್ವ

ವನ್ನು ಏತಕ್ಕೆ ಹೇಳಕೊಡದೆಂದರೆ ? ಇದಕ್ಕಾಗಿ "ಪ್ರಪತ್ತೇರ್‍ವ್ಯಾಜಮಾತ್ರತ್ವಂ ,, ಎಂಬ ಮೂರನೇ ಅರ್ಥವು ವಿವರಿಸಲ್ಪಡುವುದು. ಎರಡನೆ ಅರ್ಥದಲ್ಲಿ ಪ್ರಪತ್ತ್ಯನುಷ್ಠಾನ ಮಾಡತಕ್ಕವನಿಗೆ ಪ್ರಾಧಾನ್ಯವು ನಿವಾರಿಸಲ್ಪಟ್ಟಿತು. ಈ ಮೂರನೇ ಅರ್ಥದಲ್ಲಿ ಸಾಧ್ಯೋಪಾಯವಾದ ಶರಣಾಗತಿಗೆ ಪ್ರಧಾನೋಪಾಯತ್ವವು ನಿರಾಕರಿಸಲ್ಪಡುವುದೆಂದು ಭೇದವನ್ನರಿಯಬೇಕು. ಮುಖ್ಯಾರ್ಥವನ್ನು ಬೋಧಿಸುವ ಈ ಏಕಶಬ್ದದಿಂದ ಸಾಧ್ಯೋಪಾಯವಾದ ಶರಣಾಗತಿಯನ್ನು ಸಿದ್ಧೋಪಾಯನಾದ ಶ್ರೀಯಃಪತಿ ಶರಣ್ಯನೊಡನೆ ಸಮಾನವನ್ನಾಗಿ ಎಣಿಸದೇ ಇರುವುದಕ್ಕಾಗಿ ಏಕಶಬ್ದವೆಂಬದಾಗಿ ಹೇಳುವರು. ಅದು ಹೇಗೆಂದರೆ ? ಶರಣಾಗತಿಯು ಭಕ್ತಿಯೋಗದಂತೆ ಭಗವತ್ಪ್ರಸಾದ ಜನಕತ್ವೇನ ವಿಧಿಸಲ್ಪಟ್ಟಿದರೂ ಸಹಜ ಕಾರುಣ್ಯಾದಿ ಗುಣಗಳೊಡನೆ ಕೂಡಿಗುವ ಸರ್ವೇಶ್ವರನ ಕಾಲುಷ್ಯಶಮನ ಮಾತ್ರಾರ್ಥವಾಗಿರುವುದು. ಸಾಕ್ಷಾನ್ಮೋಕ್ಷಾದಿ ರೂಪವಾದ ಪುರುಷಾರ್ಥಕ್ಕೆ ಸ್ವಾಭಾವಿಕ ಸಾಮರ್ಥ್ಯಕಾರುಣ್ಯ ವಿಶಿಷ್ಟನಾದ ಆ ಪರಮ ಪುರುಷನ ಸಂಕಲ್ಪವೆ ಪ್ರಧಾನ ಕಾರಣವಾಗಿರುವದು. ಅವನು ಪ್ರಧಾನಕಾರಣನಾಗಿ ಮೋಕ್ಷಪ್ರದಾನವನ್ನು ಮಾಡುವುದು ಹೇಗೆಂದರೆ ? ಆ ಪರಮ ಪುರುಷನು ತಾನೆ ಅತ್ಯಂತವಾಗಿ ಉಪಾಯಾಂತರಾ ಶಕ್ತನಾದ ಪ್ರಪನ್ನನ ವಿಷಯದಲ್ಲಿ ತಾನು ಮಾಡುವ ಭರಸ್ವೀಕಾರದಿಂದ ಭಕ್ತಿಯೋಗಾದಿಗಳಾದ ಗುರುತರಗಳಾಗಿರುವ ಉಪಾಯಾಂತರ ಸ್ಥಾನದಲ್ಲಿ ನಿಂತು ಈ ಆನುಕೂಲ್ಯ ಸಂಕಲ್ಪಾದ್ಯಂಗ ಪಂಚಕಗಳಿಂದ ಕೂಡಿರುವ ಪ್ರಪತ್ತಿಮಾತ್ರವ್ಯಾಜವನ್ನಪೇಕ್ಷಿಸಿ ಬೇರೊಂದು ನನ್ನ ಪ್ರಸಾದಾರ್ಥವಾಗಿ ಬೇಡವೆಂಬದಾಗಿ ನಿರಪೇಕ್ಷನಾಗಿರುವುದರಿಂದ ನಿರಪೇಕ್ಷವಾದ ಉಪಾಯತ್ವವೆ ಈನ್ಯಾಸ ವಿದ್ಯೆಗೆ ವೇದ್ಯಾಕಾರವೆಂದು ತಿಳಿದು "ನೀನೇನನಿಗೆ ಉಪಾಯವಾಗಿರಬೇಕು ,, ಎಂಬದಾಗಿ ಅಪೇಕ್ಷಿಸಬೇಕಾದದ್ದವಶ್ಯವಾಗಿರುವುದರಿಂದ ಮುಖ್ಯೋಪಾಯನುಶರಣ್ಯನೆ. ಅಂಥಾ ಮುಖ್ಯೋಪಾಯಭೂತನಾದ ಶರಣ್ಯನುಮಾಡಿಸುವ ಪ್ರಪತ್ತಿ ರೂಪವಾದ ವ್ಯಾಜಮಾತ್ರವನ್ನು ಅಂಥಾ ಮುಖ್ಯೋಪಾಯ ಭೂತನಾದ ಶರಣ್ಯನಿಗೆ ಸಮಾ

ನವಾಗಿ ತಿಳಿಯುವುದು ಉಚಿತವಲ್ಲವೆಂಬುವುದು ಈ ಪಕ್ಷ, ಶಬ್ದ ತಾತ್ಪರ್ಯವು. ಪ್ರಪತ್ತಿವಾಕ್ಯೋಚ್ಚಾರಣಾದಿ ವ್ಯಾಪಾರಗಳನ್ನು ಮಾಡಿಸುವಿಕೆಯು ಭಗವದಧೀನ ವಾಗಿರುವುದರಿಂದ ಪರಮಾತ್ಮನಿಗೆ ಮೋಕ್ಷಾದಿ ಫಲಗಳನ್ನು ಕೊಡುವುದರಲ್ಲಿ ಪ್ರಧಾನೋಪಾಯತ್ವವಿರುವುದಲ್ಲದೆ ಅವನ ಪ್ರಸಾದ ಜನಕತ್ವೇನ ವ್ಯಾಜಮಾತ್ರವಾದ ಇದಕ್ಕೆ ಪ್ರಧಾನೋಪಾಯತ್ವವಿಲ್ಲವು. ಈ ಪ್ರಕಾರವಾಗಿ ಸಿದ್ಧೋಪಾಯ ಪ್ರಾಧಾನ್ಯವನ್ನೂ ಸಾಧ್ಯೋಪಾಯವಾದ ಪ್ರಪತ್ತಿಯು ಪ್ರಧಾನವಲ್ಲದೆ ವ್ಯಾಜಮಾತ್ರವಾಗಿರುವ ಸ್ಥಿತಿಯನ್ನೂ ಕಂಡು ಕೆಲವರು ಸಂಬಂಧಜ್ಞಾನಾದಿಗಳನ್ನೇ ಮೋಕ್ಷೋಪಾಯವನ್ನಾಗಿ ಹೇಳಿದರು. ಪ್ರಪತ್ತಿಗೆ ವ್ಯಾಜಮಾತ್ರತ್ವದಿಂದ ಅಪ್ರಾಧಾನ್ಯವನ್ನು ಹೇಳುವ ಅಭಿಪ್ರಾಯದಿಂದಲೇ ಸಂಬಂಧ ಜ್ಞಾನಾದಿಗಳನ್ನು ಕೂಡ ಪ್ರಪತ್ತಿರೂಪವಾದ ಉಪಾಯವೆಂದು ಹೇಳಿದರೆಂದು ತಾತ್ಪರ್ಯವು. ಸಿದ್ಧೋಪಾಯ ಪ್ರಾಧಾನ್ಯವಿವಕ್ಷೆಯಿಂದ ಹೇಳಲ್ಪಡುವ "ಸಂಬಂಧಜ್ಞಾನಮಾತ್ರವು, ಸಿದ್ಧೋಪಾಯ ಪ್ರತಿಪತ್ತಿ ಮಾತ್ರವು, ಅನಿವಾರಣ ಮಾತ್ರವು, ಅನುಮತಿ ಮಾತ್ರವು. ಅಚಿದ್ವ್ಯಾವೃತ್ತಿಮಾತ್ರವು, ಚೈತನ್ಯಕೃತ್ಯವು ಚಿತ್ತಸಮಾಧಾನವು, ಅಧಿಕಾರಿ ವಿಶೇಷಣವು,, ಎಂಬೀ ಮೊದಲಾದ ವಾದಗಳನ್ನು ಕಂಡು ಇವೇ ಪ್ರಪತ್ತಿ ಎಂಬದಾಗಿ ಹೇಳಕೂಡದು. ಇವೇ ಮುಖ್ಯಾರ್ಥಗಳೆಂಬುವ ಪಕ್ಷದಲ್ಲಿ "ಶರಣಂವ್ರಜ,, ಎಂಬ ವಿಧಿಗೆ ವಿರುದ್ಧಗಳಾಗುವುವಲ್ಲದೆ ಅತಿಪ್ರಸಂಗಾದಿ ದೋಷಗಳೂ ಉಂಟಾಗುವುವು. ಸಂಬಂಧಜ್ಞಾನಮಾತ್ರವೆಂದರೂ ಸಿದ್ಧೋಪಾಯ ಪ್ರತಿಪತ್ತಿಮಾತ್ರವೆಂದರೂ ಈಜ್ಞಾನವು ವಾಕ್ಯಜನ್ಯವಾಗಿರುವ ಪಕ್ಷದಲ್ಲಿ ವಿಧಿವಿಷಯವಾಗಲಾರದು. ಅವಿಧೇಯವಾದ ಜ್ಞಾನದಿಂದಲೇ ಮೋಕ್ಷವುಂಟಾಗಬಾರದೋ? ಎಂದರೆ ವಿಧಿವಿಷಯವಲ್ಲದ ಜ್ಞಾನದಿಂದ ಮೋಕ್ಷಸಿದ್ಧಿಯನ್ನು ಹೇಳುವಂತವರಿಗೆ ಉಪಾಸನಾದಿ ವಿರೋಧವು ಭಾಷ್ಯಾದಿಗಳಲ್ಲಿ ಸ್ಪಷ್ಟವಾಗಿರುವುದು. ಉಪಾಸನಾದಿಗಳು ವಿಧೇಯ ಜ್ಞಾನವಾಗಿರುವುದರಿಂದ ಅವಿಧೇಯ ಜ್ಞಾನವೇ ಮೋಕ್ಷಹೇತುವೆಂಬುವುದು ಯುಕ್ತವಲ್ಲವು. ವಿಧಿಬಲದಿಂದ ಪುರುಷ ಪ್ರವೃತ್ತಿ ಸಾಧ್ಯವಾದ ಜ್ಞಾನಾಂತರವೆ ಅರ್ಥವೆನ್ನುವ ಪಕ್ಷ

ದಲ್ಲಿ ಅದು ಪ್ರಪತ್ತಿಯೇ ಆಗುವುದರಿಂದ ಯಾವ ವಿರೋಧವೂ ಇಲ್ಲವು. ಆದುದರಿಂದ ತತ್ವಜ್ಞಾನವುಳ್ಳವನಿಗೆ ಕರ್ತವ್ಯವಾದ ಜ್ಞಾನಾಂತರವೆನ್ನುವುದಾದರೆ ಪ್ರಪತ್ತಿಯು ವಿಧಿಲಕ್ಷಣ ಅನುಷ್ಠಾನ ಪ್ರತಿಪಾದಕಗಳಾದ ವಾಕ್ಯಗಳು ಹೇಳುವಂತೆ ಈ ಪ್ರಪತ್ತಿ ಸ್ವರೂಪವನ್ನೇ ಅಂಗೀಕರಿಸಬೇಕೆಂದು ತಿಳಿಯಬೇಕು. ಸಿದ್ಧೋಪಾಯ ಸ್ವೀಕಾರವೆಂದರೆ ಸಿದ್ಧೋಪಾಯನಾದ ಶರಣ್ಯನ ಸ್ವರೂಪವನ್ನು ತಿಳಿದು ಅದು ತನಿಗೆ ಭರನ್ಯಾಸ ರೂಪವಾದ ಕಾರ್ಯಕ್ಕೆ ಉಪಯೋಗಿಸುವಂತೆ ಮಾಡಿಕೊಳ್ಳುವ ವಿಧಿ ಪ್ರೇರಿತವಾದ ಪ್ರಾರ್ಥನಾ ಪೂರ್ವಕ ರಕ್ಷಾಭರನ್ಯಾಸವೆಂಬ ಅಧಿಕಾರಿ ಕೃತ್ಯದಲ್ಲಿಯೇ ತಾತ್ಪರ್ಯವು. ಆದುದರಿಂದ ಸಿದ್ಧೋಪಾಯ ಸ್ವೀಕಾರವೆ ಪ್ರಪತ್ತಿ ಎಂಬುವುದಕ್ಕೂ ಭರನ್ಯಾಸದಲ್ಲಿ ಪರ್ಯವಸಾನವೆಂದರಿಯಬೇಕು. ಅನಿವಾರಣ ಮಾತ್ರವೇ ಪ್ರಪತ್ತಿ ಎಂಬುವುದೂ ಉಚಿತವಲ್ಲವು. ಪರಮ ಪುರುಷನು ಮೋಕ್ಷಪ್ರದಾನವನ್ನು ಮಾಡುತ್ತೇನೆಂದರೆ ಮೋಕ್ಷಪ್ರದಾನವನ್ನು ಮಾಡಬೇಡವೆಂದು ನಿವಾರಣ ಮಾಡದೆ ಇರುವುದೇ ಪ್ರಪತ್ತಿ ಎಂಬದಾಗಿ ಈ ವಾಕ್ಯವನ್ನು ಹೇಳುವವರ ಆಶಯವಾಗಿರಬಹುದು. ಆದುದರಿಂದ ಅವರನ್ನು ಕುರಿತು ಮೊದಲು ಈ ಅಂಶವನ್ನು ಕೇಳಿ ತಿಳಿದುಕೊಳ್ಳಬೇಕಾಗಿರುವುದು. ಮೋಕ್ಷಪ್ರದನಾದ ಪರಮಾತ್ಮನನ್ನು ಇವನು ನಿವಾರಣ ಮಾಡುವುದು ತನ್ನ ಪ್ರಾಬಲ್ಯದಿಂದಲೋ ? ಅಥವಾ ಸ್ವರಕ್ಷಣಾರ್ಥವಾಗಿ ತಾನು ಮಾಡುವ ವ್ಯಾಪಾರದಿಂದಲೊ ? ಅಥವಾ ತಾನು ಮಾಡುವ ಅಪರಾಧದಿಂದಲೊ ? ಎಂಬೀ ವಿಕಲ್ಪದಲ್ಲಿ ತನ್ನ ಪ್ರಾಬಲ್ಯದಿಂದ ನಿವಾರಣ ಮಾಡುತ್ತಾನೆಂದರೆ ಈಶ್ವರನಿಗೆ ಈಶ್ವರತ್ವಕ್ಕೇನೆ ಹಾನಿ ಯುಂಟಾಗುವುದು. ಇವನ ನಿವಾರಣಕ್ಕೆ ವಶಪಟ್ಟವನಿಗೆ ಈಶ್ವರತ್ವವನ್ನು ಹೇಳುವುದು ಉಚಿತವಲ್ಲವಷ್ಟೆ. ಅಕೃತ್ಯಗಳನ್ನು ಮಾಡದೆ ಇರುವಿಕೆಯು ಸ್ವರಕ್ಷಣಾರ್ಥವಾದ ವ್ಯಾಪಾರವು. ಇದರಿಂದ ನಿವಾರವಾರಣ ಮಾಡುತ್ತಾನೆಂದರೆ ವ್ಯಾಪಾರ ವಿಲ್ಲದ ಸುಷುಪ್ತಿ ಪ್ರಳಯಾದಿ ದಶೆಯಲ್ಲಿಯೂ ವ್ಯಾಪಾರವನ್ನು ಮಾಡುವುದಕ್ಕೆ ಯೋಗ್ಯವಾದ ಜಾಗ್ರದ್ದಶೆಯಲ್ಲಿ ನಿವಾರಣ ಮಾಡದೆ ಇರುವ ಸಂದರ್ಭದಲ್ಲಿಯೂ ಅನಿವಾರಣ ಪ್ರಸಕ್ತಿಯುಂ

ಟಾಗಿರುವುದರಿಂದ ಆವಾಗಲೂ ಮೋಕ್ಷಪ್ರದಾನವನ್ನು ಮಾಡಬೇಕಾ ಗಿಬರುವುದು. ಅಪರಾಧಗಳಿಂದ ನಿಗ್ರಹವನ್ನುಂಟುಮಾಡಿಕೊಂಡು ಆದರಿಂದ ನಿವಾರಣ ಮಾಡುತ್ತಾನೆಂದರೆ ಆ ಅಪರಾಧದಿಂದುಂಟಾದ ನಿಗ್ರಹಶಮನಾರ್ಥವಾಗಿ ಅವನು ಮಾಡುವ ಶರಣಾಗತಿಯೇ ಭಗವ ತ್ಪ್ರಸಾದ ಜನಕವಾಗಬೇಕು. ಈ ಪ್ರಕಾರವೇ ಅನುಮತಿ ಮಾತ್ರ ವೆಂಬಿದೇ ಮೊದಲಾದ ವಾಕ್ಯಗಳಿಗೂ ಪೂರ್ವಾಚಾರ್ಯಗ್ರಂಥಗಳಲ್ಲಿ ತಾ ತ್ಪರ್ಯವನ್ನರಿಯಬೇಕು. (ಗ್ರಂಥವಿಸ್ತಾರ ಭಯದಿಂದ ಸಂಗ್ರಹೀತ ವಾಗಿರುವುದು) ಆದುದರಿಂದ ಈ ವಾಕ್ಯಗಳೆಲ್ಲವೂ ಸಿದ್ಧೋಪಾಯ ಪ್ರಾಧಾನ್ಯವಿವಕ್ಷೆಯಿಂದ ಪೂರ್ವಿಕರಿಂದ ಹೇಳಲ್ಪಟ್ಟಿರುವುವಲ್ಲದೆ ವಿ ಧೇಯವಾದ ಶರಣಾಗತಿ ಎಂಬುವುದು ಇಲ್ಲವೆನ್ನುವುದಕ್ಕಾಗಿ ಹೇಳಲ್ಪ ಡಲಿಲ್ಲವು. ಆದರಿಂದ ಪ್ರಸಾದ ಜನಕನಾದ ಈಶ್ವರನು ಪ್ರಧಾನನಾದ ಸಿದ್ಧೋಪಾಯನೆಂತಲೂ ಭಕ್ತಿಪ್ರಪತ್ತಿಗಳು ಅವನ ಅನುಗ್ರಹಸಂಪಾ ದನಾರ್ಥವಾಗಿ ಮಾಡಲ್ಪಡುವ ಪ್ರಧಾನವಲ್ಲದ ಸಾಧ್ಯೋಪಾಯಗಳೆಂ ತಲೂ ತಿಳಿಯಬೇಕು ಈ ಎರಡೂ ಸಾಧ್ಯೋಪಾಯಗಳಾದರೆ ಏಕಾ ಧಿಕಾರಿಗೆ ಯರಡೂ ಅಪೇಕ್ಷೆಯಾಗಲಾರವೋ? ಎಂದರೆ ಶಕ್ತಾಶ ಕ್ತಾದಿ ಹೇತುವಿನಿಂದ ಅಧಿಕಾರ ಭೇದವಿರುವುದರಿಂದ ಶಕ್ತನು ಉಪಾ ಸನವನ್ನೂ ಅಶಕ್ತನು ಉಪಾಯಾಂತರ ನಿರಪೇಕ್ಷವಾದ ಪ್ರಪತ್ತಿ ಯನ್ನೂ ಮಾಡಬೇಕೆಂದು ತಿಳಿಯಬೇಕು. ಆದರಿಂದ "ಪ್ರಪತ್ತೇ ರ್ವ್ಯಾಜಮಾತ್ರತ್ವಂ" ಎಂಬ ಮೂರನೇ ಅರ್ಥವು ವಿವರಿಸಲ್ಪಟ್ಟಿ ತೆಂದರಿಯಬೇಕು. ... ... ॥೩॥

ಭಕ್ತಿಯ ಸಹಾಯವನ್ನು ಅಪೇಕ್ಷಿಸದೆ ಪ್ರಪತ್ತಿಮಾತ್ರವನ್ನೇವ್ಯಾ ಜೀಕರಿಸಿ ರಕ್ಷಣೋಪಯುಕ್ತಗಳಾದಕಲ್ಯಾಣ ಗುಣಗಳಿಂದ ಕೂಡಿರು ವಶರಣ್ಯನು ರಕ್ಷಿಸುತ್ತಾನೆಂಬದಾಗಿ ಉಪಾಯಾಂತರ ನೈರಪೇಕ್ಷ್ಯದಲ್ಲಿ ಏಕಶಬ್ದಾರ್ಥ ವೆಂತಲೂ ಹೇಳುವರು. ಎಂದರೆಅಪೇಕ್ಷಿತವಾದ ಫಲಕ್ಕಾ ಗಿಮಾಡಬೇಕಾದ ಪ್ರಪತ್ತಿರೂಪೋಪಾಯವನ್ನುಅನುಷ್ಠಿಸಿದಮೇಲೆ ಭ ರನ್ಯಾಸವನ್ನು ಮಾಡುವ ಈಶ್ವರನಿಗೆ ಫಲಪ್ರದಾನವಿಷಯದಲ್ಲಿ ಚೇ ತನನ ಬೇರೆ ಸಾಧನಾನುಷ್ಠಾನದ ನೈರಪೇಕ್ಷ್ಯವು ಈ ಏಕಶಬ್ದದಿಂದ

ಬೋಧಿತವಾಗವುದೆಂತಲೂ ಹೇಳುವರೆಂದರ್ಥವು. ಅದು ಹೇಗೆಂದರೆ? ಪ್ರಪತ್ತಿಯನ್ನು ಅಂಗವನ್ನಾಗಿ ಅನುಷ್ಠಿಸಿ ಉಪಾಸನವನ್ನು ಅಂಗಿತ್ವೇನ ಅನುಷ್ಠಿಸುವಭಕ್ತಿಯೋಗನಿಷ್ಠರವಿಷಯದಲ್ಲಿ ಭಕ್ತಿರೂಪವಾದ ಫಲಕ್ಕೆ ಉಪಾಯನಾಗುವ ಶರಣ್ಯನು ಅಕಿಂಚನನಾಗಿ ಫಲಪ್ರಾಪ್ತಿಗೆ ಕಾಲವಿಳಂಬವನ್ನು ತಡೆಯಲಾರದ ಈಪ್ರಪನ್ನನ ವಿಷಯದಲ್ಲಿ ಪ್ರಪತ್ತಿಗೂ ತನಿಗೂ ಮಧ್ಯಸ್ಥವಾಗಿರುವಉಪಾಯಾಂತರಾನುಷ್ಠಾನರೂಪವಾದ ಭಾರವನ್ನು ಇವನುವಹಿಸದಂತೆ ಮಾಡಿ ಇವನ ಭಾರವನ್ನು ತನ್ನ ಗುಣಗಳಮೇಲೆ ಆರೋಪಿಸಿಕೊಂಡು (ಎಂದರೆ ಅಶಕ್ತನಾದ ಇವನು ಭಕ್ತ್ಯುಪಾಯಾನುಷ್ಠಾನವನ್ನು ಮಾಡಬೇಡ, ಭಕ್ತ್ಯುಪಾಯದಿಂದ ಪ್ರಾಪ್ತವಾಗುವ ಫಲವನ್ನು ಇವನಿಗೆ ನಾನೇಕೊಡುವೆನು ಎಂಬದಾಗಿ ತನ್ನ ದಯಾದಿಗುಣಗಳಿಂದ ಸಂಕಲ್ಪಿಸಿಕೊಂಡು ಎಂದು ತಾತ್ಪರ್ಯವು) "ಶರಣಂತ್ವಾಂಪ್ರಪನ್ನಾಯೆ ಧ್ಯಾನಯೋಗವಿವರ್ಜಿತಾಃ। ತೇಪಿಮೃತ್ಯುಮತಿಕ್ರಮ್ಯಯಾಂತಿತದ್ವೈಷ್ಣವಂಪದಂ,, ಎಂಬೀರೀತಿಯಿಂದ (ಧ್ಯಾನಯೋಗದಿಂದ ಬಿಡಲ್ಪಟ್ಟವರುಕೂಡ ಯಾರಾದರೆ ಶ್ರೀಶನನ್ನು ಶರಣುಹೊಂದುವರೊ ಅವರುಕೂಡ ಸಂಸಾರವನ್ನು ಅತಿಕ್ರಮಿಸಿ ಪರಮಪದಪ್ರಾಪ್ತಿ ಎಂಬಮೋಕ್ಷವನ್ನು ಹೊಂದುವರೆಂಬದಾಗಿ ಈ ಪ್ರಮಾಣಾರ್ಥವು.) ದಯಾದಿಗುಣವಿಶಿಷ್ಟನಾದತಾನೆ ಉಪಾಯಾಂತರ ನಿರಪೇಕ್ಷನಾಗಿ ಫಲಪ್ರದನಾಗುವ ಸ್ಥಿತಿಯನ್ನು ಅನುಸಂಧಾನಮಾಡಿಕೊಂಡು ಶರಣಾಗತಿಯನ್ನು ಮಾಡೆಂದೀ ಯೋಜನಾತಾತ್ಪರ್ಯ ವನ್ನರಿಯಬೇಕು. ಈ ಪಕ್ಷದಲ್ಲಿ ನನ್ನನ್ನುಮಾತ್ರವೇ ಉಪಾಯವೆಂದು ಅಧ್ಯವಸಾಯಮಾಡಬೇಕಲ್ಲದೆ ಉಪಾಸನವನ್ನುಕೂಡ ಉಪಾಯವೆಂದರಿಯ ಬೇಡವೆಂದು ವಾಕ್ಯಾರ್ಥವು. "ಮುಖ್ಯಾನ್ಯಕೇವಲೇಷ್ವೇಕಂ,, ಎಂಬ ನಿಘಂಟುವಿನಲ್ಲಿ ಹೇಳಿರುವಂತೆ ಏಕಶಬ್ದವು ಕೇವಲವಾಚಿಯಾದಾಗ, ಮಾಂಕೇವಲಂ - ನನ್ನನ್ನೇಎಂಬೀ ಅರ್ಥವು ಸಿದ್ಧವಾಗುವುದರಿಂದ ಉಪಾಯಾಂತರ ನಿರಪೇಕ್ಷನಾದ ನನ್ನಲ್ಲಿಮಾತ್ರವೆ ಉಪಾಯತ್ವಾಧ್ಯವಸಾಯವನ್ನು ಮಾಡೆಂಬ ತಾತ್ಪರ್ಯವು ಬೋಧಿತವಾಗುವುದು.

ಆದರಿಂದ "ಅನ್ಯೋನ್ಯೋಪಾಯೈರನನ್ವಯಃ,, ಎಂಬ ನಾಲ್ಕನೇ ಅರ್ಥವು ಹೇಳಲ್ಪಟ್ಟಿತು.       ...       ...       ||೪||

ಇನ್ನುಮುಂದೆ "ತದಂಗೈರಪ್ಯಸಂಬಂಧಃ,, ಎಂಬ ಐದನೇ ಅರ್ಥವು ವಿವರಿಸಲ್ಪಡುವುದು. ಈ ಪ್ರಕಾರವಾದ ಉಪಾಯಾಂತರ ನೈರಪೇಕ್ಷ್ಯ ರೀತಿಯಲ್ಲಿ ಶರಣ್ಯನ ಚರಣಾರವಿಂದ ಶರಣಾಗತಿಯನ್ನು ಮಾಡುವಾಗ ಅನುಕೂಲ್ಯಸಂಕಲ್ಪಾದ್ಯಂಗ ಪಂಚಕಗಳಲ್ಲದೆ ಬೇರೊಂದಂಗವನ್ನು ಈ ಪ್ರಪತ್ತಿಯಲ್ಲಿ ವಿದ್ಯಾಂತರಗಳಿಗೆ ಪ್ರಾಪ್ತವಾಗುವ ಗತಿಚಿಂತನಾದಿಗಳಂತೆ ಅಂಗತ್ವೇನ ಸ್ವೀಕರಿಸಿ ಅದುಕೂಡ ಭಗವತ್ಪ್ರಸಾದನವಾದ ಉಪಾಯ ಕೋಟಿಯಲ್ಲಿ ಸಿಲ್ಲುವುದೆಂಬೀ ಅನುಸಂಧಾನವನ್ನು ನಿವೃತ್ತಿಮಾಡುವುದಕ್ಕಾಗಿ ಏಕಶಬ್ದವೆಂತಲೂ ಹೇಳುವರು. ಶರಣಾಗತಿಗೆ ಇತರ ಧರ್ಮಗಳಿಂದಲಾದರೂ ಅದರ ಅಂಗಗಳಿಂದಲಾದರೂ ಸಂಬಧವಿಲ್ಲದೆ ಇರುವಿಕೆಯನ್ನು ಏಕಶಬ್ದಾರ್ಥವನ್ನಾಗಿ ಹೇಳುವ ಪಕ್ಷದಲ್ಲಿ ಸಂಧ್ಯಾವಂದನಾದಿ ಆಜ್ಞಾ ಕೈಂಕರ್ಯಗಳಿಗೆ ಅನನುಷ್ಠಾನವು ಪ್ರಸಂಗಿಸಲಾರದೋ ? ಎಂದರೆ ಆಜ್ಞಾನುಜ್ಞಾದಿ ಸಿದ್ಧಗಳಾದ ಕೈಂಕರ್ಯಗಳೆಲ್ಲವೂ ಶರಣಾಗತಿಗೆ ಸಹಕಾರಿಯಲ್ಲವಾದುದರಿಂದ ಅವುಗಳ ಅನುಷ್ಠಾನಕ್ಕೆ ಹಾನಿ ಇಲ್ಲವು. ಆದರಿಂದ ಪರ್ಪಟ್ಟ ನಿಷ್ಕೃಷ್ಟಾರ್ಥ ವ್ಯಾವದೆಂದರೆ ? ಇಂಥಾ ಪ್ರಪತ್ತಿಯಿಂದ ವಶಪಟ್ಟವನಾಗಿ ಫಲವನ್ನು ಕೊಡಲು ಸಿದ್ಧನಾದ ನಾನೊಬ್ಬನೆ ಈ ಕ್ಷಣ ಕಾಲಸಾಧ್ಯವಾದ ಶರಣಾಗತ್ಯುಪಾಯಕ್ಕೆ ಉತ್ತರವಾದಿಯಾಗಿರುವೆನು, ಈ ಪ್ರಪತ್ತಿಯಿಂದ ಪ್ರಾಪ್ತವಾಗುವ ಫಲಕ್ಕಾಗಿ ಬೇರೊಂದು ಕರ್ತವ್ಯವು ಅಪೇಕ್ಷಿತವಾಗಿರಲಾರದು, ಶರಣಾಗತಿಗೆ ಅಂಗವೆಂಬದಾಗಿ ಶಾಸ್ತ್ರಸಿದ್ಧವಾಗಿರುವ ಆನುಕೂಲ್ಯಸಂಕಲ್ಪಾದ್ಯಾಂಗ ಪಂಚಕಗಳಲ್ಲದೆ ಬೇರೊಂದು ಧರ್ಮಗಳನ್ನಾದರೂ ಅವುಗಳ ಪರಿಕರಗಳನ್ನಾದರೂ ಅದಕ್ಕೆ ಸಹಾಯತ್ವೇನ ಸ್ವೀಕರಿಸಿ ನಾನು ನಿನ್ನನ್ನು ರಕ್ಷಿಸಲು ಪ್ರವೃತ್ತನಾಗಲಾರೆನು ಎಂಬದಾಗಿ ಈ ಯೋಜನಾತಾತ್ಪರ್ಯವು. "ಯೇನಕೇನಾಪಿ ಪ್ರಕಾರೇಣದ್ವಯವಕ್ತಾ ತ್ವಂ-ಪ್ರಪತ್ತಿವಾಚೈವನಿರ್ಕ್ಷಿತ-ವ್ಯಮೆ ,, ಎಂಬೀ ವಾಕ್ಯಗಳಲ್ಲಿರುವ"ಯೇನಕೇನಾಪಿ-ಪವ,,ಎಂಬೀ ಪದಗಳಿಂದ ಪ್ರಪತ್ತಿ

ಗೆ ಅಪೇಕ್ಷಿತವಾದ ವಿಶದಜ್ಞಾನವಿಲ್ಲದಿದ್ದರೂ ಯಥಾಕಥಂಚಿದನುಷ್ಠಾನದಿಂದ ಕಾರ್ಯಕರವಾಗುವ ಉಪಾಯವೆಂದು ಸಿದ್ಧವಾಗುವುದರಿಂದ ಇದಕ್ಕೆ ಬೇರೊಂದು ಪರಿಕರವನ್ನು ಹುಡುಕುವ ವಿಷಯದಲ್ಲಿ ಪ್ರಸಕ್ತಿಯೇ ಇಲ್ಲವೆಂದರಿಯಬೇಕು.

ಆದರೆ ಶ್ರೀರಾಮಾಯಣದಲ್ಲಿ ಶ್ರೀರಾಮನುಮಾಡಿದ ಸಮುದ್ರಶರಣಾಗತಿಯಲ್ಲಿಯು ಶ್ರೀಹರಿವಂಶದಲ್ಲಿ ಬ್ರಹ್ಮದತ್ತನು ಮಾಡಿದ ಶರಣಾಗತಿಯಲ್ಲಿಯೂ ಧರ್ಭಾಸ್ತರಣ ನಿರಾಹಾರತ್ವಾದಿ ರೂಪ ಪರಿಕರಗಳನ್ನು ಕಂಡಿರುವುದರಿಂದ ಶರಣಾಗತಿಗೆ ಬೇರೊಂದು ಅಂಗಗಳಿಂದ ಸಂಬಂಧವಿಲ್ಲವೆಂಬುವುದು ಉಚಿತವೋ ? ಎಂದರೆ ಅಲ್ಲಿ ಪ್ರತಿಶಯನರೂಪವಾದ ಧರ್ಮವು ಹೇಳಲ್ಪಟ್ಟಿರುವುದಲ್ಲದೆ ಅದು ಪ್ರಪತ್ತಿ ಪ್ರಕರಣವೇ ಅಲ್ಲವು. ಸುಕೃತಪ್ರಣಾಮವು ಭರನ್ಯಾಸರೂಪವಾಗಿರುವುದರಿಂದ ಅಲ್ಲಿ ಹೇಳಲ್ಪಟ್ಟ ನಿಯಮಗಳೆಲ್ಲವೂ ಪ್ರಪತ್ತಿಗೆ ಹೇಳಿರುವ ನೈರಪೇಕ್ಷ್ಯಕ್ಕೆ ವಿರುದ್ಧಗಳಲ್ಲವೆ ? ಎಂದರೆ ಭರನ್ಯಾಸಕ್ಕಿಂತಲೂ ಅತಿರಿಕ್ತವೆಂಬದಾಗಿಯೆ ಸುಕೃತ ಪ್ರಣಾಮವೆಂಬುವುದು ಸಿದ್ಧವಾಗಿರುವುದರಿಂದ ಅಲ್ಲಿ ಹೇಳಿರುವ ನಿಯಮಗಳು ಪ್ರಪತ್ತಿಗೆ ಸಹ ಕರರಿಗಳಾಗಲಾರವು. ಆದರೂ " ಯಾಃಕ್ರಿಯಾಃಕುರುತೆಮೊಹಾದನಾಚಮ್ಯೈವನಾಸ್ತಿಕಃ । ಭವಂತಿಹಿವೃಥಾತಸ್ಯ ಕ್ರಿಯಾಸ್ಸರ್ವಾನಸಂಶಯಃ ॥ಉಪವೀತಂ ಶಿಖಾಬಂಧಮೂರ್ಧ್ವಪುಂಡ್ರಂವಿನಾಕೃತಂ। ಅಪವಿತ್ರಕರಸ್ಯೈತದ್ವಿಪ್ರಸ್ಯವಿಫಲಂಭವೇತ್,, ಇತ್ಯಾದಿ ವಚನಗಳಿಂದಸರ್ವಕರ್ಮಗಳಿಗೂ ಆಚಮನಾದಿಗಳನ್ನು ಅಂಗವಾಗಿ ಅವುಗಳನ್ನು ಅನುಷ್ಠಿಸದೆ ಹೋದರೆ ಕರ್ಮ ಸಿದ್ಧಿಯಾಗುವುದಿಲ್ಲವೆಂದು ಹೇಳಿರುವುದರಿಂದ ಭರನ್ಯಾಸಕ್ಕೂ ಅವುಗಳ ಅಪೇಕ್ಷೆಯು ಸಿದ್ಧವಾದ ಮೇಲೆ ನೈರಪೇಕ್ಷ್ಯಕ್ಕೆ ಭಂಗವಿಲ್ಲವೊ ? ಎಂದರೆ ಆಚಮನಾದಿಗಳು ಅನ್ಯಧರ್ಮಗಳಿಗೆ ನಿಯತಗಳಾಗಿದ್ದರೂ ಪ್ರಪತ್ತ್ಯಧ್ಯಾಯದಲ್ಲಿ ಹೇಳಿರುವ ಅನುಕೂಲ್ಯಸಂಕಲ್ಪಾದ್ಯಂಗ ಪಂಚಕಗಳಲ್ಲದೆ ಬೇರೊಂದನ್ನು ಪ್ರಪತ್ತಿಯು ಅಪೇಕ್ಷಿಸಲಾರದೆಂತಲೆ ತಿಳಿಯಬೇಕು. ಪ್ರಪತ್ತ್ಯಧ್ಯಾಯದಲ್ಲಿ ಹೇಳಿರುವಂತೆ ಆನುಕೂಲ್ಯ ಸಂಕಲ್ಪಾದ್ಯಂಗ ಗಳಿಗಿಂತಲೂ ಬೇರೊಂದನ್ನಪೇಕ್ಷಿಸ

ಲಾರದೆಂಬೀ ಅರ್ಥವನ್ನು ಏಕಶಬ್ದಕ್ಕೆ ಹೇಳುವ ಪಕ್ಷದಲ್ಲಿ ಪ್ರಕರಣಾಂತರಗಳಲ್ಲಿ ಬೇರೆ ಪರಿಕರಗಳನ್ನು ಹೇಳಿದ್ದರೆ ಅವುಕೂಡ ಅವಶ್ಯಕಗಳಾಗಲಾರವೊ ? ಎಂದರೆ ಪ್ರಪತ್ತಿಗೆ ಸಹಕಾರಿತ್ವೇನ ಬೇರೊಂದನ್ನನುಷ್ಠಿಸಬೇಕೆಂದು ಪ್ರಕರಣಾಂತರಗಳಲ್ಲಿ ಹೇಳಲಿಲ್ಲವಾದುದರಿಂದಲೂ ಆಕಿಂಚನ್ಯವನ್ನೇ ಮುಖ್ಯಧನವನ್ನಾಗಿ ಸ್ವೀಕರಿಸಿರುವ ದ್ರೌಪದೀ ದಮಯಂತ್ಯಾದಿಗಳು ಈ ಶರಣಾಗತಿಗೆ ಪ್ರಪತ್ತ್ಯಧ್ಯಾಯದಲ್ಲಿ ಹೇಳಿರುವ ಆನುಕೂಲ್ಯ ಸಂಕಲ್ಪಾದ್ಯಂಗ ಪಂಚಕಗಳಲ್ಲದೆ ಬೇರೊಂದನ್ನು ಅನುಷ್ಠಿಸಲಿಲ್ಲವಾದುದರಿಂದಲೂ ಇದಕ್ಕೆ ಸಹಾಯವಾಗಿ ಬೇರೊಂದು ಧರ್ಮಗಳನ್ನು ಕೂಡಿಸಿಕೊಳ್ಳುವುದು ಉಚಿತವಲ್ಲವು. ದ್ರೌಪದೀ ದೇವಿಯು ತಾನು ರಜಸ್ವಲೆಯಾಗಿದ್ದ ಕಾಲದಲ್ಲಿ ಶರಣಾಗತಳಾದಳು, ಆವಾಗ ಆಚಮನಾದಿ ವ್ಯಾಪಾರಗಳನ್ನು ಮಾಡಿದಳೊ ? ದಮಯಂತೀ ದೇವಿಯು ಐದು ದೇವತೆಗಳು ಏಕರೂಪವಾಗಿದ್ದ ಕಾರಣ ತಾನು ಯಾರನ್ನು ವರಿಸಬೇಕೊ ಆ ಗುರುತು ತಿಳಿಯದೆ ಅದಕ್ಕಾಗಿ ದೇವತೆಗಳನ್ನು ಕುರಿತು ಸ್ವಯಂವರ ಸಭಾಮಧ್ಯಲ್ಲಿ ಶರಣಾಗತಿ ಮಾಡಿದಾಗ ಯಾವ ಆಚಮನಾದಿಗಳನ್ನು ಮಾಡಿದಳು ? ತ್ರಿಜಟಾ ಎಂಬ ರಾಕ್ಷಸಿಯು ನಿದ್ರೆಯಿಂದ ಎದ್ದು ಶರಣಾಗತಿ ಮಾಡಿದಾಗ ಯಾವ ಇತರ ಪರಿಕರಗಳನ್ನನುಷ್ಠಿಸಿದಳು ? ಈ ರೀತಿಯಾಗಿಯೆ ವಿಭೀಷಣ ಕ್ಷತ್ರ ಬಂಧು ಮುಚುಕುಂದ ಗಜೇಂದ್ರ ಪಾಂಡವದೇವ ಸುಮುಖ ತ್ರಿಶಂಕು ಶುನಶ್ಶೇಫಕಿರಾತ ಕಾಕಕಪೋತಾದಿಗಳಪ್ರಪತ್ತಿಯಲ್ಲಿಯೂ ಕಾಣಬಹುದು. ಅವರನುಷ್ಠಿಸಿರುವ ಶರಣಾಗತಿಗಳಲ್ಲಿ ಆನುಕೂಲ್ಯ ಸಂಕಲ್ಪಾದಿಗಳಲ್ಲದೆ ಬೇರೊಂದು ಪರಿಕರಗಳೇಅನುಷ್ಠಿಸಲ್ಪಡಲಿಲ್ಲವು. ಈ ಪ್ರಕಾರವಾಗಿ ಕ್ಷಣಕಾಲ ಸಾಧ್ಯವಾದ ನಿರಪೇಕ್ಷ ಪ್ರಪತ್ತಿಮಾತ್ರದಿಂದಲೆ ಪೂರ್ವಕಾಲದಲ್ಲಿ ಶರಣಾಗತರಾದವರಿಗೆ ಅಪೇಕ್ಷಿತ ಸಿದ್ಧಿಯು ಸ್ಪಷ್ಟವಾಗಿರುವುದು. ಆದರೂ ಈ ಲೋಕದಲ್ಲಿ ಪ್ರಾಪ್ತವಾಗಬೇಕಾದ ಸಾಮಾನ್ಯ ಫಲಕ್ಕಾಗಿ ಮಾಡುವ ಶರಣಾಗತಿಗೆ ಒಂದುವೇಳೆ ನೈರಪೇಕ್ಷ್ಯವನ್ನಂಗೀಕರಿಸಿದರೂ ಮಹಾ ಫಲವಾದ ಮೋಕ್ಷಕ್ಕಾಗಿ ಅನುಷ್ಠಿಸುವ ಶರಣಾಗತಿಯಲ್ಲಿ ಯಾವರೂ ವಿಶೇಷ ನಿಯಮಗಳು

ಅಪೇಕ್ಷಿತಗಳಾಗಲಾರವೂ ? ಎಂದರೆ ಈಪ್ರಕಾರವಾಗಿ ಮೋಕ್ಷಾರ್ಥವಾಗಿ ಮಾಡುವ ಪ್ರಪತ್ತಿಯಲ್ಲಿಯೂ ಪರಿಕರಾಂತರ ನೈರಪೇಕ್ಷ್ಯವು ಸಿದ್ಧವಾಗಿರುವುದರಿಂದ ನಿರಪೇಕ್ಷವಾದ ಪ್ರಪತ್ತಿಯನ್ನು ಅನುಷ್ಠಾನ ಮಾಡಿದ ಪೂರ್ವೀಕರು ತಮ್ಮಗಳ ಅಪೇಕ್ಷಿತವಾದ ಕಾಲದಲ್ಲಿ ಮೋಕ್ಷ ಫಲವನ್ನೂ ಕೂಡ ಹೊಂದಿರುವುದು. ಇದು ಮಾಶುಚಃ, ಎಂಬಪದಕ್ಕೆ ತಾತ್ಪರ್ಯವಾಗಿರುವುದು. ಮಾಶುಚಃ ಎಂಬುವುದು ಸರ್ವಪ್ರಕಾರಶೋಕನಿಷೇಧ ಪರವಾಗಿರುವುದರಿಂದ ಪರಿಕರಾಂತರಾಭಾವ ಫಲವಿಳಂಬಾದಿ ಪ್ರಯುಕ್ತ ಶೋಕಕ್ಕೂ ನಿವಾರಕವಾಗಿರುವುದೆಂದು ತಾತ್ಪರ್ಯವು. ಈ ಅರ್ಥವು 'ಪರಿತ್ಯಜ್ಯ, ಎಂಬ ಪದಕ್ಕೆ ಅರ್ಥವರ್ಣನ ಮಾಡುವಾಗಲೆ ಸಿದ್ಧವಾಗಿರುವುದರಿಂದ ಇಲ್ಲಿಯೂ ಅದೇ ಅರ್ಥವರ್ಣನವನ್ನು ಮಾಡಿದರೆ ಪೌನರುಕ್ತ್ಯದೋಷಪ್ರಸಂಗವಿಲ್ಲವೊ? ಎಂದರೆ ಹಿಂದೆಹೇಳಿರುವ ಅರ್ಥವೇ ಈ ಏಕಶಬ್ದದಿಂದಲೂ ದೃಢಪಡಿಸಲ್ಪಟ್ಟಿರುವುದರಿಂದ ಪೌನರುಕ್ತ್ಯದೋಷಕ್ಕೆ ಅವಕಾಶವಿಲ್ಲವು. ಅಥವಾ ಪರಿತ್ಯಜ್ಯ ಎಂಬ ಪದಕ್ಕೂ ಏಕಶಬ್ದಕ್ಕೂ ಅನೇಕಾರ್ಥಗಳು ಯೋಜನಾ ಭೇದದಿಂದ ಹೇಳಿರುವುದರಿಂದ ಪೌನರುಕ್ತ್ಯ ದೋಷಗಳಿಗೆ ಅವಕಾಶವಿಲ್ಲದ ನಿರ್ವಾಹವನ್ನು ಸೂಕ್ಷ್ಮಜ್ಞರು ತಿಳಿಯಬಹುದು. ಆದುದರಿಂದ ಉಪಾಸನಾದಿಗಳಾದ ಅಂಗಿ ಧರ್ಮಗಳಿಂದಲೂ ಇವುಗಳ ಅಂಗಗಳಾದ ಧರ್ಮಾಂತರಗಳಿಂದಲೂ ಇದಕ್ಕೆ ಸಂಬಂಧ ವಿಲ್ಲವೆಂಬುವುದು ಏಕಶಬ್ದಾರ್ಥ ವೆಂದರಿಯಬೇಕು. ಈರೀತಿಯಾಗಿ "ತದಂಗೈರಪ್ಯಸಂಬಂಧಃ,, ಎಂಬ ಐದನೆ ಅರ್ಥವು ದರ್ಶಿತವಾಯಿತು. ‖೫‖

ಇನ್ನು ಮುಂದೆ "ಸರ್ವಸಾಧ್ಯೇಷ್ವಭಿನ್ನತಾ,,ಎಂಬ ಆರನೇಅರ್ಥವು ವಿವರಿಸಲ್ಪಡುವುದು. ಕೆಳಗೆ ಸರ್ವಧರ್ಮಾನ್ ಎಂಬ ವಾಕ್ಯದಲ್ಲಿರುವಸರ್ವ ಶಬ್ದವನ್ನೂ ಉತ್ತರಾರ್ಧದಲ್ಲಿರುವ 'ಸರ್ವಪಾಪೇಭ್ಯಃ, ಎಂಬ ಸರ್ವ ಶಬ್ದವನ್ನೂ ನೋಡಿ ಈ ಏಕ ಶಬ್ದವು ಸರ್ವಶಬ್ದ ಪ್ರತಿ ಸಂಬಂಧಿಯಾಗಿರುವುದೆಂತಲೂ ಹೇಳುವರು. ಸರ್ವಧರ್ಮಗಳಿಂದಲೂ ಆಗುವ ಸರ್ವಪಾಪನಿವೃತ್ತಿಯನ್ನು ಈ ಪ್ರಪತ್ತಿಯಿಂದ ವಶೀಕೃತನಾದ ನಾನೊಬ್ಬನೆ ಮಾಡುವೆನೆಂದು ಈ ಯೋಜನಾ ತಾತ್ಪರ್ಯವನ್ನರಿಯಬೇಕು.

ಈ ಪಕ್ಷದಲ್ಲಿ " ಸುದುಷ್ಕರೇಣ ಶೋಚೇದ್ಯೋಯೇನ ಯೇನೇಷ್ಟ ಹೇತುನಾ | ಸಸತಸ್ಯಾಹಮೇವೇತಿ ಚರಮ ಶ್ಲೋಕ ಸಂಗ್ರಹಃ ,, ಎಂಬ ಕಾರಿಕಾರ್ಥವನ್ನು ತಿಳಿಯಬೇಕು. ಯಾವ ಮನುಷ್ಯನಾದರೆ ತನ್ನಿಂದ ಅನುಷ್ಠಿಸಲಸಾಧ್ಯವಾದ ಆಯಾ ಫಲಸಾಧನಗಳನ್ನು ಕುರಿತು ಶೋಕಿಸುತ್ತಾನೆಯೊ ಅಂತವನಿಗೆ ಆಯಾ ಫಲಸಿದ್ಧಿಗಾಗಿ ಪ್ರಪತ್ತಿವಶೀಕೃತನಾದ ನಾನೆ ಆಯಾ ಫಲಸಾಧಕನೆಂಬದಾಗಿ ಈ ಕಾರಿಕಾರ್ಥವು. ಇದರಿಂದ ಯೇನು ಹೇಳಿದಂತೆ ಆಯಿತೆಂದರೆ, ಅದನ್ನು ವಿವರಿಸುವೆನು. " ಯದ್ಯೇನಕಾಮ ಕಾಮೇನ ನಸಾಧ್ಯಂ ಸಾಧನಾಂತರೈಃ| ಮುಮುಕ್ಷುಣಾಯತ್ಸಾಂಖ್ಯೇನ ಯೋಗೇನ ನಚ ಭಕ್ತಿತಃ || ಪ್ರಾಪ್ಯತೆ ಪರಮಂಧಾಮಯತೋನಾವರ್ತತೆಯತಿಃ | ತೇನತೇನಾಪ್ಯತೆತತ್ತನ್ನ್ಯಾಸೇನೈವ ಮಹಾಮುನೆ | ಪರಮಾತ್ಮಚತೇನೈವಸಾಧ್ಯತೆ ಪುರುಷೋತ್ತಮಃ ,, ಎಂಬೀ ಪ್ರಕಾರವಾಗಿ ತನಿಗೆ ಅಪೇಕ್ಷಿತಗಳಾದ ಯಾವದಾದರೊಂದು ಫಲಗಳನ್ನು ಹೊಂದುವುಕ್ಕಾಗಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ಉಪಾಯಗಳಲ್ಲಿ ಜ್ಞಾನವಿಲ್ಲದೆಇರುವುದರಿಂದಲಾದರೂ ಜ್ಞಾನವಿದ್ದು ಶಕ್ತಿ ಇಲ್ಲದೆ ಇರುವುದರಿಂದಲಾದರೂಜ್ಞಾನಶಕ್ತಿಗಳಿದ್ದು ವಿಳಂಬವನ್ನು ಸಹಿಸದೆ ಇರುವಿಕೆಯಿಂದಲಾದರೂ ಶೋಕಪಡುತಲಿರುವ ಅಧಿಕಾರಿಯನ್ನು ಕುರಿತು ನಿನಿಗೆ ಅಸಾಧ್ಯಗಳಾದ ಆಯಾ ಫಲಸಾಧನಗಳಲ್ಲಿ ನೀನು ಶ್ರಮಪಡಬೇಡಾ, ಅವುಗಳಿಂದ ಪೃಥಕ್ಪೃಥಕ್ಕಾಗಿ ಪ್ರಾಪ್ತವಾಗುವ ಫಲಗಳನ್ನು ಪ್ರಪತ್ತಿ ವಶೀಕೃತನಾದ ನಾನೊಬ್ಬನೆ ಕೊಡುವುದಕ್ಕೆ ಸಮರ್ಥನಾಗಿರುವೆನೆಂದು ಹೇಳಿದಂತೆ ಆಯಿತು. ಆಯಾ ಫಲಗಳನ್ನಪೇಕ್ಷಿಸುವ ಪುರುಷರಿಂದ ಸಾಧನಾಂತರಗಳಿಂದ ಯಾವ ಫಲವು ಅಸಾಧ್ಯವಾಗಿರುವುದೊ, ಮುಮುಕ್ಷುವಾದ ಅಧಿಕಾರಿಯಿಂದ ಜ್ಞಾನಯೋಗದಿಂದಲೂ ಕರ್ಮಯೋಗದಿಂದಲೂ ಈ ಯರಡನ್ನು ಅಂಗವಾಗಿಯುಳ್ಳ ಭಕ್ತಿಯೋಗದಿಂದಲೂ ಯಾವ ಪರಮ ಪದವು (ಮೋಕ್ಷವು) ಹೊಂದಲಸಾಧ್ಯವಾಗಿರುವುದೋ, ಆಯಾ ಫಲಾರ್ಥಿಗಳಿಂದ ಹೊಂದಲಸಾಧ್ಯಗಳಾದ ಫಲಗಳು ಪ್ರಪತ್ತಿವಶೀಕೃತನಾದ ನನ್ನಿಂದಲೆ ಹೊಂದಲ್ಪಡುವುವು. ಮುಮುಕ್ಷುವಾದ ಅಧಿಕಾರಿಯಿಂದ ಪರಮಾತ್ಮನೂ

ನನ್ನ ವಿಷಯವಾಗಿ ಮಾಡಲ್ಪಡುವ ಪ್ರಪತ್ತಿಯಿಂದಲೆ ಹೊಂದಲ್ಪಡು ವನೆಂದು " ಯದ್ಯೇನ ,, ಇತ್ಯಾದಿ ಶ್ಲೋಕಾರ್ಥವು. ಸರ್ವರೋಗ ಪರಿಹಾರಕವಾಗಿ ಒಂದು ಸಿದ್ಧೌಷಧವಿರುವಂತೆ ಸರ್ವಧರ್ಮಗಳಿಂದಲೂ ಸಾಧಿಸಲ್ಪಡುವ ಪುರುಷಾರ್ಥಗಳಿಗೆ ಪ್ರಪತ್ತಿ ವಶೀಕೃತನಾದ ಪರ ಮಾತ್ಮನೊಬ್ಬನೆ ಪ್ರದಾಯಕನೆಂಬದಾಗಿ ತಿಳಿಯಬೇಕು. ಇಲ್ಲಿ ಶರ ಣ್ಯನೆ ಸರ್ವಫಲಗಳಿಗೂ ಪ್ರದಾಯಕನಾದರೆ " ತೇನತೇನಾಪ್ಯತೆ ತತ್ತ ನ್ನ್ಯಾಸೇನೈವ ಮಹಾಮುನೆ ,, ಎಂಬದಾಗಿ ಶರಣಾಗತಿಗೆ ಸರ್ವಧರ್ಮ ಸ್ಥಾನಾಪನ್ನತ್ವ ವಚನವು ವಿರೋಧಿಸಲಾಗದೊ ? ಎಂದರೆ ಇಲ್ಲಿ ಶರ ಣ್ಯನೇ ಸಾಕ್ಷಾತ್ಸರ್ವಧರ್ಮಸ್ಥಾನಾ ಪನ್ನನಾಗಿದ್ದರೂ ಇದು (ಎಂದರೆ ಶರಣ್ಯನ ಸರ್ವಧರ್ಮಸ್ಥಾನಾಪನ್ನತ್ವವು) ನಿರ್ಹೇತುಕವಲ್ಲದೆ ಪ್ರಪತ್ತಿ ಸಾಧ್ಯವಾಗಿರುವುದರಿಂದ ನ್ಯಾಸಕ್ಕೆ ಸರ್ವಧರ್ಮಸ್ಥಾನಾಪನ್ನತ್ವವನ್ನು ಪ್ರಮಾಣವು ಹೇಳವುದು ವಿರುದ್ಧವಲ್ಲವು. ಇದರಿಂದ ಮೋಕ್ಷಕ್ಕಿಂತ ಲೂ ಅನ್ಯಗಳಾದ ಧರ್ಮಾರ್ಥ ಕಾಮಗಳೆಂಬ ಪುರುಷಾರ್ಥಗಳನ್ನು ಅ ಪೇಕ್ಷಿಸುವ ಅಧಿಕಾರಿಗಳು ಕೂಡ ಭಗವಚ್ಛರಣಾರವಿಂದ ಶರಣಾಗತಿ ಯನ್ನು ಮಾಡಬಹುದೆಂದು ಹೇಳಿರುವಂತೆ ತಿಳಿಯಬೇಕು. ಫಲಾಂ ತರಾರ್ಥಿಗಳಿಗೂಕೂಡಭಗವತ್ಪ್ರಪತ್ತಿಯು ಸಿದ್ಧವಾದ ಮೇಲೆ ಅಂತವ ರಿಗೂ ಕೂಡ " ತ್ವಯಾಪಿ ಪ್ರಾಪ್ತಮೈಶ್ವರ್ಯಂ ಯತಸ್ತಂತೋಷ ಯಾನ್ಯಹಂ । ನಾಹಮಾರಾಧಯಾ ಮಿತ್ವಾಂತವ ಬದ್ಧೋಯ ಮಂ ಜಲಿಃ ॥ ಸತ್ವಂ ಪ್ರಹರವಾಮಾವಾಮಯಿ ವಜ್ರಂ ಪುರಂದರ । ನಾಹ ಮುತ್ಸೃಜ್ಯಗೋವಿಂದ ಮನ್ಯವಾರಾಧಯಾಮಿಭೋಃ ,, ಇತ್ಯಾದಿ ಪ್ರಕರಣಗಳಲ್ಲಿ ಹೇಳಿರುವ ರೀತಿಯಿಂದ ನಿತ್ಯನೈಮಿತ್ತಿಕಗಳಲ್ಲಿ ಭಗವ ಚ್ಛರೀರವೆಂಬದಾಗಿ ಪ್ರಾಪ್ತವಾಗುವ ಮರ್ಯಾದೆಯನ್ನು ಬಿಟ್ಟು ಅದ ಕ್ಕಿಂತಲೂ ಅನ್ಯಗಳಾದ ಸರ್ವಾವಸ್ಥೆಗಳಲ್ಲಿಯೂ ದೇವತಾಂತರ ಸಂಬಂ ಧವನ್ನು ಬಿಟ್ಟಿರುವಿಕೆಯು ಉಚಿತವಾಗಿರುವುದು. ಮೋಕ್ಷಕ್ಕೆ ಉ ಪಾಯಾಂತರಗಳನ್ನು ಅಪೇಕ್ಷಿಸಿಕೊಂಡು ಉಪಾಯಾನುಷ್ಠಾನವು ನೆರವೇರುವುದಕ್ಕೆ ವಿರೋಧಿ ವರ್ಗಗಳನ್ನು ಪರಿಹರಿಸಿ ಕೊಳ್ಳುವುದ ಕ್ಕಾಗಿಯೂ ಮೋಕ್ಷ ಪ್ರಾಪ್ತಿಗೆ ವಿರೋಧಿಗಳನ್ನು ಪರಿಹರಿಸಿಕೊಳ್ಳು

ವುದಕ್ಕಾಗಿಯೂ ಪ್ರಪತ್ತಿಯನ್ನು ಮಾಡಬಹುದು. ಆದರಿಂದ ಪ್ರಪತ್ತಿಯು ಸಕಲಾಭಿಮತಸಾಧನತ್ವವು ಈ ಯೋಜನೆಯಲ್ಲಿ ಹೇಳಲ್ಪಟ್ಟಿತೆಂದರಿಯಬೇಕು. ಉಪಾಯ ವಿರೋಧಿ ನಿವರ್ತಕತ್ವವನ್ನು ಶ್ರೀಮದ್ಗೀತಾಭಾಷ್ಯದ್ವಿತೀಯ ಯೋಜನೆಯಲ್ಲಿಯೂ ಪ್ರಾಪ್ತಿವಿರೋಧಿ ನಿವರ್ತಕತ್ವವನ್ನು ಗದ್ಯದಲ್ಲಿಯೂ ಹೇಳಿರುವರು. ಈ ಯರಡಾಕಾರವೂ ಪ್ರಪತ್ತಿಗೆ ಉಂಟೆಂದು ಹೇಳಿರುವುದಾಗಿ ಸಿದ್ಧವಾಗಿರುವುದರಿಂದ ಈ ಎರಡು ಸ್ಥಲಗಳಲ್ಲಿಯೂ ಒಂದನ್ನು ಅನಾದರಿಸಿ ಒಂದನ್ನು ಸ್ಥಾಪಿಸಿರುವುದಾಗಿ ತಿಳಿಯಕೂಡದು. ಈ ಯರಡು ಪ್ರಕರಣವೂ ಸರ್ವಾಭಿಮತ ಸಾಧನವಾದ ಪ್ರಪತ್ತಿ ಪ್ರಭಾವಕ್ಕೆ ಉದಾಹರಣವಾಗಿರುವುದು. ಪ್ರಣವ ಮಂತ್ರವು ಬೇರೊಂದು ಮಂತ್ರಕ್ಕೆ ಅಂಗವಾದಾಗ ಅದಕ್ಕೆ ಪಾರತಂತ್ರ್ಯವೂ ತಾನೆ ಒಂದುಮಂತ್ರವಾದಾಗ ಸ್ವಾತಂತ್ರ್ಯವೂ ಪ್ರಣವಕ್ಕೆ ಹೇಗಾದರೆ ಉಂಟಾಗುವುದೊ ಅದರಂತೆ ಈಶರಣಾಗತಿಯೂ ಒಂದಧಿಕಾರಿಯಲ್ಲಿ ಭಕ್ತ್ಯಂಗವಾಗಿಯೂ ಅಕಿಂಚನಾಧಿ ಕಾರಿಯಲ್ಲಿ ಸ್ವತಂತ್ರವಾಗಿಯೂ ಇರುವ ವಿಷಯವು ವಚನಬಲದಿಂದ ಸಿದ್ಧವಾಗಿರುವುದರಿಂದ ಒಂದಕ್ಕೆ ಅನ್ಯೋನ್ಯವಿರುದ್ಧವಾದ ಸ್ವಾತಂತ್ರ್ಯಪಾರತಂತ್ರ್ಯವೆಂಬ ಆಕಾರದ್ವಯವು ಕೂಡದೆಂಬ ಶಂಕೆಗೆ ಅವಕಾಶವಿಲ್ಲವು. ಈರೀತಿಯಿಂದ ಭಕ್ತಿಪ್ರಪತ್ತಿಗಳು ಅಧಿಕಾರ ಭೇದದಿಂದ ವಿಕಲ್ಪಿಸಿರುವ ಸ್ಥಿತಿಯು “ ಭಕ್ತ್ಯಾಪರಮಯಾವಾಪಿ ಪ್ರಪತ್ತ್ಯಾವಾ „ ಎಂಬಿದೆ ಮೊದಲಾದ ವಚನಗಳಿಂದ ಸಿದ್ಧವಾಗಿರುವುದು.

ಆದರೆ “ ಸಮ್ಯಕ್‌ಜ್ಞಾನೇನವಾ ಮೋಕ್ಷಂಗಂಗಾಯಾಂ ಮರಣೇನವಾ । ಪ್ರಣಾಮಾದ್ವಾಪಿಸುಕೃತಾದ್ಭಕ್ತ್ಯಾವಾಲಭತೇನರಃ „ ಇತ್ಯಾದಿಗಳಲ್ಲಿಮುಖ್ಯೋಪಾಯಗಳೊಡನೆ ಪರಂಪರೋಪಾಯಗಳನ್ನು ಸೇರಿಸಿರುವುದು ಹೇಗಾದರೆ ಅವುಗಳ ಪ್ರಾಶಸ್ತ್ಯಪರವೋಅದರಂತೆ ಭಕ್ತಿಯೊಡನೆ ಪ್ರಪತ್ತಿ ವಿಕಲ್ಪವೂ ಕೂಡ ಪ್ರಪತ್ತಿ ಪ್ರಾಶಸ್ತ್ಯಪರವಾಗಲಾದೋ? ಎಂದರೆ“ ಶರಣಂತ್ವಾಂ ಪ್ರಪನ್ನಾಯೇಧ್ಯಾನಯೋಗವಿವರ್ಜಿತಾಃ । ತೇಪಿಮೃತ್ಯುಮತಿಕ್ರಮ್ಯ ಯಾಂತಿ ತದ್ವೈಷ್ಣವಂಪ

ದಂ,, ಎಂಬಿದೇಮೊದಲಾದ ಪ್ರಮಾಣಗಳಿಂದ ಪ್ರಪತ್ತಿಗೆ ಮುಖ್ಯೋಪಾಯತ್ವವನ್ನು ಹೇಳಿರುವುದರಿಂದಲೂ ಇದಕ್ಕೆ ಬೇರೊಂದು ಪ್ರಮಾಣಗಳಿಂದ ಬಾಧೆಯು ಇಲ್ಲವಾದುದರಿಂದಲೂ ಈ ವಿಕಲ್ಪವು ಪ್ರಪತ್ತಿಪ್ರಶಂಸಾ ಪರವೆನ್ನುವುದು ಉಚಿತವಲ್ಲವು. ಇದುವರೆಗೂ ಹೇಳಲ್ಪಟ್ಟ ಉಪನ್ಯಾಸಗಳಿಂದ " ಸರ್ವಸಾಧ್ಯೇಪ್ವಭಿನ್ನತಾ ,, ಎಂಬ ಆರನೇ ಅರ್ಥವು ಏಕಶಬ್ದಕ್ಕೆ ಹೇಳಲ್ಪಟ್ಟತೆಂದರಿಯಬೇಕು. ॥ ೬ ॥ ಈ ಏಕಶಬ್ದಾರ್ಥಗಳನ್ನು ಶ್ರೀಮದಾಚಾರ್ಯರು " ಪ್ರಾಪ್ಯಸ್ಯೈವಪ್ರಾಪಕತ್ವಂ ಸ್ವಪ್ರಾಧಾನ್ಯನಿವಾರಣಂ।ಪ್ರಪತ್ತೇರವ್ಯಾಜಮಾತ್ರತ್ವಮನ್ಯೋಪಾಯೈರನನ್ವಯಃ ॥ ತದಂಗೈರಪ್ಯ ಸಂಬಂಧಸ್ಸರ್ವಸಾಧ್ಯೇಪ್ವಭಿನ್ನತಾ । ಇತ್ಥಮರ್ಥಾಷ್ಷಡಾಚಾರ್ಯೈರೇಕಶಬ್ದಸ್ಯದರ್ಶಿತಾಃ,, ಎಂಬ ಕಾರಿಕೆಗಳಿಂದ ಸಂಗ್ರಹಿಸಿರುವಂತೆ ತಿಳಿಯಬೇಕು. ಇಲ್ಲಿ ಕೆಲವರು ಏಕಶಬ್ದಾರ್ಥವು ಶ್ರೀವೈಶಿಷ್ಟ್ಯಕ್ಕೆ ಬಾಧಕವಾಗಿರುವುದೆಂದು ಹೇಳುವುರು. ಗುಣವಿಗ್ರಹಾದಿ ವಿಶಿಷ್ಟನಾದ ಶರಣ್ಯನ ಏಕತ್ವವು ಹೇಗೆ ಬಾಧಕವಲ್ಲವೊ ಅದರಂತೆ ಶ್ರೀವಿಶಿಷ್ಟನಾದವನಿಗೆ ಏಕತ್ವವು ಬಾಧಿಸಲಾರದೆಂಬೀ ವಿಷಯಗಳನ್ನು ನ್ಯಾಸಶಾಸ್ತ್ರದಲ್ಲಿಯೇ ವಿಸ್ತಾರವಾಗಿ ತಿಳಿಯಬಹುದು.

—*ಮೂ । ಶರಣಂವ್ರಜ*—

ಇಲ್ಲಿನ ಶರಣ ಶಬ್ದವು " ಉಪಾಯೇಗೃಹರಕ್ಷಿತ್ರೋಶ್ಶಬ್ದಶ್ಶರಣಮಿತ್ಯಯಂ।ವರ್ತತೇಸಾಂಪ್ರತಂತ್ವೇಷಉಪಾಯಾರ್ಥೈಕವಾಚಕಃ,, ಎಂಬೀ ಪ್ರಕಾರವಾಗಿಅನೇಕಾರ್ಥಗಳಿದ್ದರೂ ಉಪಾಯಪರವಾಗಿ ಉಪಾಯಾಂತರಸ್ಥಾನಾಪತ್ತಿ.ಪ್ರಕಾಶಮುಖೇನ ಭರನ್ಯಾಸ ದ್ಯೋತಕವಾಗಿರುವುದು. ಅದುಹೇಗೆಂದರೆ ; ಇಲ್ಲಿನ ಶರಣ ಶಬ್ದಕ್ಕೆ ಪ್ರಕೃತೋಪಯೋಗವಿಲ್ಲದ ಅರ್ಥಗಳನ್ನು ಸ್ವೀಕರಿಸದೆ "ಉಪಾಯಾರ್ಥೈಕವಾಚಕಃ ,, ಎಂಬದಾಗಿ ವಿಶೇಷಿಸಿ ಹೇಳಿರುವುದರಿಂದ ಉಪಾಯಪರವಾಗಿಯೆ ಅರ್ಥವನ್ನು ಹೇಳಬೇಕು. ಅಕಿಂಚನಾಧಿಕಾರಿಯಾದ ತಾನು ಮಾಡುವ ರಕ್ಷಾಭರಸಮರ್ಪಣ ಬಲದಿಂದ ಹೇಗಾದರೆ ಆವಿಷಯದಲ್ಲಿ ತನ್ನ ಯತ್ನಕ್ಕೆ ನಿವೃತ್ತಿಯು ಸಿದ್ಧಿಸುವುದೊ ಅದಕ್ಕಾಗಿ ಭಕ್ತ್ಯಾ

ದ್ಯುಪಾಯಾಂತರಸ್ಥಾನದಲ್ಲಿ ರಕ್ಷಕನಾದ ಶರಣ್ಯನು ಇಡಲ್ಪಟ್ಟಿರುವ ನೆಂದು ಇಲ್ಲಿನ ಶರಣ ಶಬ್ದದಿಂದ ಸಿದ್ಧಿಸುವುದು. ಸರ್ವಾಧಿಕಾರಿಗಳಿ ಗೂ ಆಯಾಶಾಸ್ತ್ರಗಳಿಂದ ಆರಾಧಿಸಲ್ಪಡುವ ಸರ್ವೇಶ್ವರನು ಫ ಲೋಪಾಯವಾಗಿದ್ದರೂ ಉಪಾಯಾಂತರಸ್ಥಾನದಲ್ಲಿ ಸಹಜಕಾರುಣ್ಯಾ ದಿವಿಶಿಷ್ಟನಾದ ಶರಣ್ಯನನ್ನು ನಿಲ್ಲಿಸುವ ಪ್ರಪತ್ತಿ ಪ್ರಕಾರವನ್ನು ಪ್ರಕಾ ಶಪಡಿಸುವುದಕ್ಕಾಗಿ ಇಲ್ಲಿ ವಿಶೇಷಿಸಿ ಉಪಾಯುವೆಂದು ಹೇಳಿತು. ಭ ಕ್ತಿರೂಪವಾದ ಉಪಾಯುವನ್ನು ಅನುಷ್ಠಿಸಿದರೆ ರಕ್ಷಿಸುವ ಈಶ್ವರನು ಆಕಿಂಚನವಿಷಯದಲ್ಲಿ ಭಕ್ತ್ಯನುಷ್ಠಾನ ವಿಲ್ಲದಿದ್ದರೂಕೂಡ ರಕ್ಷಿಸು ವಿಕೆಯು ಉಪಾಯಾಂತರಸ್ಥಾನ ನಿವೇಶವೆಂದು ಭಾವವು. ಇಲ್ಲಿಭಕ್ತಿ ಯೋಗಸ್ಥಾನದಲ್ಲಿ ಪ್ರಪತ್ತಿನಿಂತಿರುವುದರಿಂದ ಪ್ರಪತ್ತಿಯೇ ಉಪಾ ಯಾಂತರಸ್ಥಾನದಲ್ಲಿರಬೇಕಾಗಿಬಂದಾಗ ಉಪಾಯಾಂತರ ಸ್ಥಾನದಲ್ಲಿ ಶರಣ್ಯನಿರುವಿಕೆಯು ಉಚಿತವೋ? ಎಂದುಸಂದೇಹಿಸದೆ ಅಂಗತ್ವೇನಪ್ರ ಪತ್ತಿಯನ್ನುಮಾಡಿ ಉಪಾಯತ್ವೇನ ಉಪಾಸನವನ್ನನುಷ್ಠಿಸಿ ಹೊಂ ದಬೇಕಾದ ಫಲವನ್ನು ಆ ಉಪಾಸನಾನುಷ್ಠಾನವಿಲ್ಲದೆ ಕೇವಲ ಪ್ರಪ ತ್ತಿ ಮಾತ್ರದಿಂದಲೆ ಹೊಂದುವುದಕ್ಕೆ ಕಾರಣವು ಈಶ್ವರನ ಸಹಜ ಕಾರುಣ್ಯಾದಿ ಸ್ವಭಾವ ವಿಶೇಷವಾದುದರಿಂದ ಆಕಿಂಚನನಿಗೆ ಈಶ್ವರನೆ ಉಪಾಯಾಂತರಸ್ಥಾನದಲ್ಲಿ ನಿಂತಿರುವನೆಂದು ತಾತ್ಪರ್ಯವು. ಅಲ್ಪವಾದ ಪ್ರಪತ್ತಿರೂಪ ವ್ಯಾಪಾರದಿಂದ ಭಕ್ತಿಸ್ಥಾನದಲ್ಲಿ ಈಶ್ವರನು ನಿಲ್ಲುವು ದು ಉಚಿತವೋ? ಎಂದರೆ ಸಹಜ ಕಾರುಣ್ಯಾದಿ ಗುಣಗಳುಳ್ಳವನಾದುದ ರಿಂದ ಕಾರುಣ್ಯಾದಿ ಪರವಶನಾಗಿ ಆಪ್ರಕಾರವಾಗಿ ನಿಲ್ಲುವುದರಲ್ಲಿ ಬಾಧ ಕವಿಲ್ಲವು. (ಆದುದರಿಂದ ಇಲ್ಲಿನ ಶರಣಶಬ್ದವು ರಕ್ಷಕತ್ವರೂಪವಾದ ಅರ್ಥವನ್ನು ಹೇಳುವ ಪಕ್ಷದಲ್ಲಿ ಅದು ಸರ್ವಾಧಿಕಾರಿ ಸಾಧಾರಣವಾಗು ವುದರಿಂದಲೂ ಗೃಹಪರವಾದ ಅರ್ಥವು ಪ್ರಕರಣ ವಿರುದ್ಧವಾಗಿರುವುದ ರಿಂದಲೂ ಉಪಾಯ ವಾಚಿಯಾಗಿ ನಿಷ್ಕರ್ಷಿ ಸಲ್ಪಟ್ಟಿರುವುದು. ಇಲ್ಲಿ ಇನ್ನೂ ವಿವರಿಸಬೇಕಾದ ಅನೇಕ ರಹಸ್ಯಾರ್ಥಗಳು ಉಪದೇಶ ಗ ಮ್ಯವಾಗಿರುವುದರಿಂದ ವಿವರಿಸಲ್ಪಡಲಿಲ್ಲವು. ) ಇಂಥಾ ಉಪಾಯಾಂತ ರಸ್ಥಾನದಲ್ಲಿ ಈಶ್ವರನನ್ನಿಟ್ಟಮೇಲೆ ತಾನು ನಿರ್ಭರನಾಗಿರಬೇಕೆಂಬ

ನಿಷ್ಕರ್ಷವನ್ನು ನೆನಸಿಕೊಂಡೆ "ಸಾಂಪ್ರತಂತ್ವೇಷ ಉಪಾಯಾರ್ಥೈಕ ವಾಚಕಃ,, ಎಂಬದಾಗಿಯೂ ಹೇಳಲ್ಪಟ್ಟಿತೆಂದರಿಯಬೇಕು. ಅಲ್ಲಿನ ಶರಣ ವರಣವು ಅರ್ಜುನನನ್ನು ಕುರಿತು ಉಪದೇಶಿಸಲ್ಪಟ್ಟಿದ್ದರೂ ಪ್ರಮಾಣಾಂತರ ಬಲದಿಂದ ಎಲ್ಲರಿಗೂ ಶರಣಾಗತಿಯನ್ನು ಉಪದೇಶಿರುವಂತೆಯೆ ತಿಳಿಯಬೇಕು. ಶ್ವೇತಾಶ್ವತರ ಶ್ರುತಿಯಲ್ಲಿಯು "ಸರ್ವಸ್ಯ ಶರಣಂಸುಹೃತ್ ,, ಎಂಬದಾಗಿ ಇಲ್ಲಿ ಪ್ರಕೃತವಾದ ಶರಣಾಗತಿಯು ಸರ್ವವಿಷಯವಾಗಿರುವುದೆಂದು ಪ್ರಸಿದ್ಧವಾಗಿರುವುದು. ವೇದಾಂತದಲ್ಲಿ ಸದ್ವಿದ್ಯಾಗಳು ಶ್ವೇತಕೇತುವನ್ನು ಕುರಿತು ಉಪದೇಶಿಸಲ್ಪಟ್ಟಿದ್ದರೂ ಅದರಲ್ಲಿ ಇತರರಿಗೂ ಅಧಿಕಾರ ವುಂಟಾಗಿರುವಂತೆ ಇಲ್ಲಿಯೂ ಅರ್ಜುನನನ್ನು ಕುರಿತು ಶರಣಾಗತಿಯು ಉಪದೇಶಿಸಲ್ಪಟ್ಟಿದ್ದರೂ ಸರ್ವವಿಷಯವಾಗಿರಲು ಸಂಶಯ ವಿಲ್ಲವು. ಅರ್ಜುನನನ್ನು ನಿಮಿತ್ತೀಕರಿಸಿ ಸರ್ವಲೋಕ ರಕ್ಷಣಾರ್ಥವಲ್ಲವೇ ಈ ಉಪದೇಶವು. ಇದು ಸರ್ವವಿಷಯವಾದರೆ ಅನ್ಯ ಶರಣನು ಕೂಡ (ದೇವತಾಂತರ ಭಕ್ತನುಕೂಡ) ಇದಕ್ಕೆ ವಿಷಯನಾಗಲಾರನೊ ? ಎಂದರೆ ಶರಣ್ಯನಲ್ಲಿ ಶರಣಾಗತಿ ಮಾಡಬೇಕಾದಾಗ ಇವನು ತನಿಗೆ ಬೇರೊಂದು ರಕ್ಷಕ ವಸ್ತುವಿಲ್ಲವೆಂಬದಾಗಿ ತಿಳಿದು ಅನನ್ಯಶರಣನಾಗಿರಬೇಕು. ಆಕಿಂಚನ್ಯಾನನ್ಯಗತಿತ್ವರೂಪವಾದ ಅಧಿಕಾರವುಳ್ಳ ಸರ್ವರೂ ಶರಣಾಗತಿ ಮಾಡಬಹುದೆಂದು ಫಲಿತಾರ್ಥವು.

ಇಲ್ಲಿ ವ್ರಜ ಎಂಬ ಶಬ್ದವು ಸಪರಿಕರವಾದ ಆತ್ಮನಿಕ್ಷೇಪವನ್ನೆ (ಶರಣಾಗತಿಯನ್ನೆ) ಹೇಳುವುದು. "ಆವೃತ್ತಿರಸಕೃದುಪದೇಶಾತ್,, ಎಂಬದಾಗಿ ಉಪಾಸನಕ್ಕೆ ಆವೃತ್ತಿಯುಂಟಾಗಿರುವಂತೆ ಈ ಶರಣಾಗತಿಗೆ ಆವೃತ್ತಿ ಯಿಲ್ಲವು. "ಸಕೃದೇವಹಿಶಾಸ್ತ್ರಾರ್ಥಃ ಕೃತೋಯಂತಾರಯೇನ್ನರಂ । ಸಕೃದೇವಪ್ರಪನ್ನಾಯ ,, ಇತ್ಯಾದಿ ಪ್ರಮಾಣಗಳಿಂದ ಈ ಶರಣಾಗತಿಗೆ ಸಕೃದನುಷ್ಠಾನವೆ ಸಿದ್ಧವಾಗಿರುವುದು. ಆದರೆ ಸ್ವಲ್ಪಕಾಲಾನುಷ್ಠೇಯವಾದ ಪ್ರಪತ್ತಿಯೆ ಮೋಕ್ಷಹೇತುವಾದರೆ ಅಲ್ಪಕಾಲದಲ್ಲಿಯೆ ಉಪಾಯ ಸಿದ್ಧಿಯಾಗುವುದರಿಂದ ಉತ್ತರಕ್ಷಣದಲ್ಲಿಯೆ ಮೋಕ್ಷಸಿದ್ಧಿ ಯಾಗಬೇಡವೊ ? ಎಂದರೆ ದೇಹಾ

ವಸಾನದಲ್ಲಿ ಮೋಕ್ಷವನ್ನು ಅಪೇಕ್ಷಿಸುವ ಜೀವಾತ್ಮನ ಅಪೇಕ್ಷೆಯೆ ಕಾಲವಿಳಂಬಕ್ಕೆ ಕಾರಣವಾಗಿರುವುದರಿಂದ ಪ್ರಪತ್ತ್ಯುತ್ತರ ಕ್ಷಣದಲ್ಲಿಯೆ ಮೋಕ್ಷಪ್ರಾಪ್ತಿಗೆ ಪ್ರಸಕ್ತಿ ಇಲ್ಲವು. ಪ್ರಪತ್ತ್ಯನುಷ್ಠಾನ ವನ್ನು ಮಾಡತಕ್ಕವನ ಅಪೇಕ್ಷೆಯಲ್ಲದೆ ಬೇರೊಂದು ವಿಳಂಬಕಾರಣವಿಲ್ಲವಾದುದರಿಂದ ಈ ನ್ಯಾಸವಿದ್ಯೆಗೆ ಪ್ರಾರಬ್ಧ ಕರ್ಮಗಳನ್ನು ನಾಶಪಡಿಸುವಿಕೆಯು "ಸಾಧ್ಯಭಕ್ತಿಸ್ತು ಸಾಹಂತ್ರೀ ಪ್ರಾರಬ್ಧಸ್ಯಾಪಿಭೂಯಸೀ,, ಎಂಬಂತೆ ಉಪಾಸನಕ್ಕಿಂತಲೂ ವಿಶೇಷವಾಗಿರುವುದು.

ಇಲ್ಲಿ ಕೆಲವರು ಸ್ವತಂತ್ರನಾದ ಪುರುಷನನ್ನು ಕುರಿತಲ್ಲವೊ ಒಂದನ್ನು ಮಾಡೆಂದು ವಿಧಿಸಬಹುದು. ಅತ್ಯಂತ ಪರತಂತ್ರಚೇತನನಾದ ಅಧಿಕಾರಿಯನ್ನು ಕುರಿತು ಶರಣಂವ್ರಜ ಎಂಬದಾಗಿ ವಿಧಿಸುವಿಕೆಯು ವಿರುದ್ಧವಲ್ಲವೊ ? ಎನ್ನುವರು. ಅದುಉಚಿತವಲ್ಲವು. "ಕರ್ತಾ ಶಾಸ್ತ್ರಾರ್ಥವತ್ವಾತ್-ಪರಾತ್ತು ತಚ್ಛ್ರುತೇಃ ,, ಎಂಬ ವೇದಾಂತಸೂತ್ರಗಳಲ್ಲಿ ಭಗವದಧೀನವಾದ ಕರ್ತೃತ್ವವು ಇವನಿಗುಂಟೆಂಬದಾಗಿ ನಿರ್ಣಯಿಸಲ್ಪಟ್ಟಿರುವುದರಿಂದ ಇವನನ್ನು ಕುರಿತು ವ್ರಜ ಇತ್ಯಾದಿವಿಧಿಯು ಯುಕ್ತವಾಗಿಯೆ ಇರುವುದು. ಆಕಾಶಾದಿ ಭೂತಗಳು ಶಬ್ದಾದಿಗುಣಗಳನ್ನು ಭಗವದಧೀನವಾಗಿ ವಹಿಸುವಂತೆ ಇಷ್ಟುಮಟ್ಟಿಗೆ ಸ್ವಾತಂತ್ರ್ಯವನ್ನಾಶ್ರಯಿಸಿ ಭಗವದಧೀನವಾದ ಕರ್ತೃತ್ವವನ್ನು ವಹಿಸುವಿಕೆಯು ಆವನಿಗೆ ಭಗತ್ಪಾರತಂತ್ರ್ಯದಲ್ಲಿಯೆ ಸೇರುವುದು. ಸರ್ವಪ್ರಕಾರದಿಂದಲೂ ಕರ್ತೃತ್ವವಿಲ್ಲವೆಂದರೆ ಪ್ರಕೃತ್ಯವಿದ್ಯಾದಿಗಳಿಗೆ ಕರ್ತೃತ್ವವನ್ನು ಹೇಳುವ ಸಿದ್ಧಾಂತಿಗಳಲ್ಲಿ ಸೇರಬೇಕಾಗಿಬರುವುದು. ಆದರೆ ಹಿಂದೆ "ನೈವಕುರ್ವ ನ್ನಕಾರಯನ್ (೫ ॥ ೧೩ ॥) ಇತ್ಯಾದಿಗಳಲ್ಲಿ ಕರ್ತೃತ್ವನಿಷೇಧವನ್ನು ಮಾಡಲಿಲ್ಲವೊ ? ಎಂದರೆ ಅವು ಕರ್ತೃತ್ವದಲ್ಲಿ ಬಂಧ ಹೇತುವಾದಆಕಾರವನ್ನು ಮಾತ್ರವೆ ನಿಷೇಧಿಸುವುವಾದುದರಿಂದ ಯಾವವಿರೋಧವೂ ಇಲ್ಲವು. ಪ್ರಯೋಜನಾಂತರಪರನಲ್ಲದ ಅಧಿಕಾರಿಗೆ ಮೋಕ್ಷದಶೆಯಲ್ಲಿ ಹೇಗಾದರೆ ಕೈಂಕರ್ಯ ಕರ್ತೃತ್ವಉಂಟೊ ಆದರಂತೆ ಉಪಾಯದಶೆಯಲ್ಲಿ ಯೂ ಕರ್ತೃತ್ವವು ಬಾಧಿತವಾಗಲಾರದು. ಆದರೆ ಫಲದಶೆಯಲ್ಲಿ ನಾನಾವಿಧವಾಗಿರುವ ವಿಚಿ

ತ್ರ್ಯೈಂಕರ್ತ್ಯಕರ್ತೃತ್ವವು ಈಶ್ವರೇಚ್ಛಾವಿಶೇಷದಿಂದ ಕೂಡಿರುವ ತನ್ನ ಇಚ್ಛೆಯಿಂದುಂಟಾಗಿರುವುದು. ಸಂಸಾರದಶೆಯಲ್ಲಿ ಪ್ರಾಪ್ತವಾಗುವ ಕರ್ತೃತ್ವವು ಕರ್ಮಾನುರೂಪವಾಗಿ ಈಶ್ವರ ನುಂಟುಮಾಡಿದ ಸತ್ವರಜಸ್ತಮಸ್ಸುಗಳನ್ನು ಉಪಾಧಿಯಾಗಿ ಮಾಡಿಕೊಂಡು ನಾನಾ ಪ್ರಕಾರವಾಗಿರುವುದು. ಈ ಕರ್ತೃತ್ವಗಳಲ್ಲಿ ಬಂಧಕಗಳ್ಯಾವವೆಂದರೆ? ರಜೋ ಗುಣದಿಂದಲೂ ತಮೋಗುಣದಿಂದಲೂ ಪ್ರಯೋಜನಾಂತರ ಸಂಬಂಧಕ್ಕೆ ಕಾರಣವಾದ ಸತ್ವಗುಣದಿಂದಲೂ ಉಂಟಾಗುವಕರ್ತೃತ್ವವು ಬಂಧಕವಾಗಿರುವುದು. ಭಗವತ್ಪ್ರಾಪ್ತಿಯಲ್ಲಿ ಸಂಬಂಧವನ್ನುಂಟುಮಾಡುವ ಅಧಿಕವಾದ ಸತ್ವಗುಣ ವಿಶೇಷಮೂಲಕವಾಗಿ ಬಂದ ಕರ್ತೃವು ಮೋಕ್ಷಕಾರಣವಾಗಿರುವುದು. ಮುಕ್ತಿದಶೆಯಲ್ಲುಂಟಾಗುವ ಕರ್ತೃತ್ವವು ಗುಣತ್ರಯ ಸಂಬಂಧಶೂನ್ಯವಾಗಿರುವುದು. ಆದರೂ ಕೆಲವು ವಾಕ್ಯಗಳಲ್ಲಿ ಆತ್ಮನಿಗೆ ಕರ್ತೃತ್ವವಿಲ್ಲವೆಂತಲೂ ಕೆಲವು ವಾಕ್ಯಗಳಲ್ಲಿ ಕರ್ತೃತ್ವವುಂಟೆಂತಲೂ ಹೇಳುವುದು ವಿರುದ್ಧವಲ್ಲವೊ? ಎಂದರೆ ಕರ್ತೃತ್ವವನ್ನು ನಿಷೇಧಿಸುವ ವಾಕ್ಯಗಳು ಈಶ್ವರನಿರಪೇಕ್ಷ ಕರ್ತೃತ್ವವಿಲ್ಲವೆಂತಲೂ ಕರ್ತೃತ್ವವನ್ನು ಹೇಳುವ ವಾಕ್ಯಗಳು ಈಶ್ವರಾಧೀನ ಕರ್ತೃತ್ವವುಂಟೆಂತಲೂ ಹೇಳುವು ವಾದುದರಿಂದ ಯಾವ ವಿರೋಧವೂ ಇಲ್ಲವು. ಈನಿಷ್ಕರ್ಷಪ್ರಕಾರಂಗಳನ್ನು ಈ ಅಧ್ಯಾಯದಲ್ಲಿ ಹಿಂದಿನ "ಶರೀರವಾಙ್ಮನೋಭಿರ್ಯತ್" (೧೫ನೇಶ್ಲೋ॥) ಇತ್ಯಾದಿ ಶ್ಲೋಕಗಳಿಂದ ಶ್ರೀಮದ್ಗೀತಾಚಾರ್ಯನೇ ಹೇಳಿರುವುನು. ಈ ಪ್ರಕಾರವಾಗಿ ಇಲ್ಲಿ ವ್ರಜ ಎಂಬದಾಗಿ ವಿಧಿಸಲು ಯಾವ ಆಕ್ಷೇಪವೂ ಇರುವುದಿಲ್ಲವು.

ಆದರೂ ಇಲ್ಲಿ ವ್ರಜ ಎಂಬದಾಗಿ ಉಪಾಯವಿಧಿಯು ವ್ಯರ್ಥವಲ್ಲವೊ? ಶಾಸ್ತ್ರಜನ್ಯಸಂಬಂಧಜ್ಞಾನವೆ ಮೋಕ್ಷಸಾಧನವಲ್ಲವೊ? ಎಂದರೆ ಇದು ಭಕ್ತಿಪ್ರಪತ್ತ್ಯಾದಿ ವಿಧಿಸ್ವಾರಸ್ಯವಿರುದ್ಧವಾಗಿರುವುದರಿಂದ ಈ ಚೋದ್ಯವು ಉಚಿತವಾದದ್ದಲ್ಲವು. ಈ ಶಾಸ್ತ್ರಜನ್ಯಸಂಬಂಧಜ್ಞಾನವೇ ವಿಧಿವಿಷಯವಾಗಕೂಡದೊ? ಎಂದರೆ ರಾಗಪ್ರಾಪ್ತವಾದ ಶ್ರವಣಾದಿಗಳಿಂದ ಸಿದ್ಧವಾದ ಶಾಸ್ತ್ರಜನ್ಯಜ್ಞಾನವು ವಿಧಿವಿಷ

ಯುವಾಗಲಾರದು. ಆದರೆ ಅವಿಧೇಯಜ್ಞಾನವೇ ಮೋಕ್ಷಹೇತುವಾಗ ಬಾರದೋ ? ಎನ್ನುವ ಪಕ್ಷದಲ್ಲಿ ವಿಧಿವಿರೋಧಾದಿ ದೋಷಗಳುಂಟಾಗು ವುವು. ಆದುದರಿಂದ ಸರ್ವವಿದ್ಯಾನಿಷ್ಠರಾದ ಮುಮುಕ್ಷುಗಳಿಗೂಕೂಡ ಸಾಧಾರಣವಾದಪರಂಪರೆಯಿಂದ ಮೋಕ್ಷೋಪಕಾರಕವಾಗಿರುವ ಜೀವ ಪರಮಾತ್ಮಸಂಬಂಧ ಜ್ಞಾನವು ಶಾಸ್ತ್ರಮುಖದಿಂದ ಯಾವನಿಗಾದರೆ ಉಂಟಾಗುವುದೋ ಅಂತವನಿಗೆ ನಮ್ಮಸ್ವಾಮಿಯಾದ ಪರಮಭೋ ಗ್ಯನಾದ ಶ್ರಿಯಃಪತಿಯನ್ನು ಹೊಂದುವುದಕ್ಕೆ ಯಾವದು ಉಪಾಯ ವೆಂಬವಿಚಾರ ವುಂಟಾಗುವುದು. ಇಂಥಾ ವಿಚಾರವುಂಟಾದಮೇಲೆ ಅಂತವನಿಗೆ ಅಧಿಕಾರಾನು ಗುಣವಾಗಿ ವಿಧಿಸಲ್ಪಡುವ ಜ್ಞಾನಾಂತರಗ ಳು ಭಕ್ತಿಪ್ರಪತ್ತಿಗಳೆಂದು ತಿಳಿಯಬೇಕು. ಅವುಗಳಲ್ಲಿ ಪ್ರಪತ್ತಿ ಎಂಬುವುದು " ಯತ್ಸಂರಕ್ಷ್ಯೇತಯಾರ್ಪ್ಯತೆ ,, ಇತ್ಯಾದಿಗಳಲ್ಲಿ ಹೇಳಿ ರುವಂತೆ ಸಪರಿಕರವಾದರಕ್ಷಾ ಭರಸಮರ್ಪಣವೆ. ಅದು ಜೀವಪರಮಾ ತ್ಮ ಸಂಬಂಧಾನುಸಂಧಾನಗರ್ಭವಾಗಿರಬೇಕೆಂಬುವುದಕ್ಕಾಗಿ ಸಂಬಂ ಧಜ್ಞಾನವನ್ನೇ ಪ್ರಪತ್ತಿ ಎಂಬದಾಗಿ ಪೂರ್ವಾಚಾರ್ಯರು ಹೇಳಿರುವರು. ಈ ಶರಣಾಗತಿಯ ಸ್ವರೂಪ ಪರಿಕರಾದಿಗಳನ್ನು ಗುರುಮುಖವಾಗಿಯೆ ತಿಳಿಯಬೇಕು. ಇಲ್ಲಿ ವಿಸ್ತರಿಸುವುದು ಉಚಿತವಾಗಿರಲಿಲ್ಲವು. ಈಭ ರನ್ಯಾಸವನ್ನು ಅನುಷ್ಠಿಸುವಂತವನಿಗೆ ತತ್ವಜ್ಞಾನಾದಿ ಸಂಪಾದನವು ಭರನ್ಯಾಸಕ್ಕಿಂತಲೂ ಮೊದಲು ಮಾದತಕ್ಕ (ಪೂರ್ವ) ಕೃತ್ಯವೆಂತಲೂ ಆನುಕೂಲ್ಯ ಸಂಕಲ್ಪಾದಿಗಳು ಶರಣಾಗತ್ಯನುಷ್ಠಾನ ಕಾಲೀನವಾದ ತತ್ಕಾಲಕೃತ್ಯವೆಂತಲೂ ನಿರಪರಾಧ ಕೈಂಕರ್ಯವು ಉತ್ತರಕೃತ್ಯವೆಂ ತಲೂ ಪೂರ್ವಕೃತ್ಯಗಳನ್ನು ಮಾಡದವನು ಅಧಿಕಾರಿಯಾಗಲಾರನೆಂ ತಲೂ ತತ್ಕಾಲ ಕೃತ್ಯರಹಿತನು ಕೃತಕೃತ್ಯನಲ್ಲವೆಂತಲೂ ಉತ್ತರ ಕೃತ್ಯರಹಿತನು ಕೃತಾರ್ಥನಲ್ಲವೆಂತಲೂ ತಿಳಿಯಬೇಕು. ಇಂಥಾ ವಿಕಲರಾದ ಅಧಿಕಾರಿಗಳೂ ಕೂಡ " ಕಥಂಚಿದುಪಕಾರೇಣ ಕೃತೇ ನೈಕೇನತುಷ್ಯತಿ ,, ಎಂಬಂತೆ ಕೃತಜ್ಞನಾದ ಶರಣ್ಯನ ಕೃಪಾವಿಶೇ ಷದಿಂದ ಪೂರ್ಣೋಪಾಯ ನಿಷ್ಠರಾಗಿ ಮೋಕ್ಷವನ್ನು ಹೊಂದುವರೆಂ ದರಿಯಬೇಕು.

* ಮೂ॥ ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ. *

ಈ ಪ್ರಕಾರವಾಗಿ ಪೂರ್ವಾರ್ಧದಿಂದ ಅಕಿಂಚನಾಧಿಕಾರಿಗೆ ಸಕೃತ್ಕರ್ತವ್ಯವಾದ ಉಪಾಯ ವಿಶೇಷವನ್ನು ಅಧಿಕಾರಿಯೇನು ಉಪಾಯನೈರಪೇಕ್ಷ್ಯವೇನು, ಅವುಗಳ ವಿವರಣ ಪೂರ್ವಕವಾಗಿ ವಿಧಿಸಿ ಉತ್ತರಾರ್ಧದಿಂದ ಅನಿಷ್ಟನಿವೃತ್ತಿಯ ವಿವರಣಮುಖವಾಗಿ ಫಲವನ್ನು ಉಪದೇಶಿಸುತ್ತಾನೆ. ಕಿಂಚಪೂರ್ವಾರ್ಧದಿಂದ ಉಪಾಯಾನುಷ್ಠಾನವನ್ನು ಮಾಡತಕ್ಕ ಅಕಿಂಚನಾಧಿಕಾರಿಕೃತ್ಯವೂ ಉತ್ತರಾರ್ಧದಿಂದ ಶರಣ್ಯನಾಗಿಯೂ ಸ್ವೀಕೃತಭರನಾಗಿಯೂ ಇರುವ ತನ್ನ ಕೃತ್ಯವೂ ಶ್ರೀಪಾರ್ಥಸಾರಥಿಯಿಂದಅರ್ಜುನನಿಗೆ ಉಪದೇಶಿಸಲ್ಪಡುವುದೆಂದರಿಯಬೇಕು. ಅಲ್ಲಿಮೋಕ್ಷಯಿಷ್ಯಾಮಿ ಎಂಬ ಉತ್ತಮ ಪುರುಷ ಪ್ರಯೋಗದಿಂದಲೆ ನಾನೆಂಬ ಅರ್ಥವು ಸಿದ್ಧಿಸುವಾಗ ಅಹಂ ಎಂಬದಾಗಿ ಅಧಿಕಪ್ರಯೋಗವು ವ್ಯರ್ಥವೆಂದು ಸಂದೇಹಿಸದೆ ಮುಂದೆ ಹೇಳಲ್ಪಡುವ ಸರ್ವಪಾಪವಿಮೋಚನೆಕ್ಕೆ ಸಹ ಕಾರಿಯಾದ ಅಘಟಿತಘಟನಾಶಕ್ತ್ಯಾದಿಗಳನ್ನು ವಿವಕ್ಷಿಸುವುದರಿಂದ ಸಪ್ರಯೋಜನವೆಂತಲೆ ತಿಳಿಯಬೇಕು. ಅಪರಾಧಿಯನ್ನು ಬಂಧಿಸಿರುವ ಸಮಾಧಿಕ ದರಿದ್ರನಾದ ನಾನು ಪ್ರಪತ್ತಿರೂಪವಾದ ಒಂದುವ್ಯಾಜದಿಂದ ಅತಿಶಯಿತ ಕರುಣಾಳುವಾಗಿ ಅಪರಾಧವನ್ನು ಕ್ಷಮಿಸುವಾಗ ನಿವಾರಿಸತಕ್ಕವರು ಯಾರೂ ಇಲ್ಲವು. ಬೇರೊಬ್ಬನಿಂದ ಇವನನ್ನು ಮುಕ್ತನನ್ನಾಗಿ ಮಾಡಲು ಆಗುವುದು ಇಲ್ಲವೆಂಬದಾಗಿ ಈ ಅಹಂಶಬ್ದತಾತ್ಪರ್ಯವನ್ನರಿಯಬೇಕು. ಈ ಅರ್ಥವು ''ಮೋಕ್ಷದೋ ಭಗವಾನ್ವಿಷ್ಣುಃ-ಪಶವಃಪಾಶಿತಾಃಪೂರ್ವಂಪರಮೇಣಸ್ವಲೀಲಯಾ।ತೇನೈವಮೋಚನೀಯಾಸ್ತೇನಾನ್ಯೈರ್ಮೋಚಯಿತುಂಕ್ಷಮಾಃ ॥ ಸರ್ವಸ್ಮಾತ್ಪರೋವಿಷ್ಣುರ್ನಸಮೋನೇತಿಕಶ್ಚನ। ಮೋಕ್ಷದೋಪ್ಯೇಕಏವಾಸೌಭೃತ್ಯಕೃತ್ಯಸ್ಯಮೋಕ್ಷದಃ ,, ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಗಿರುವುದು. '' ಮೋಕ್ಷದೋಪ್ಯೇಕಏವಾಸೌ ,, ಎಂಬ ಪ್ರಮಾಣಾನುಸಾರವಾಗಿ ಇಲ್ಲಿಯೂ 'ಅಹಮೇಕಏವ, ಎಂಬಅರ್ಥವನ್ನು ಸ್ವೀಕರಿಸಬೇಕು. ವಿಷ್ಣುರೇವಮೋಕ್ಷದಃ ಎಂಬದಾಗಿ ಅವಧಾರಣವು ವಿವಕ್ಷಿತವಾಗಿರುವುದಷ್ಟೆ. ಕಿಂಚ ಈ ಅಹಂ ಎಂಬಪದಕ್ಕೆ

ನಿರಂಕುಶಸ್ವಾತಂತ್ರ್ಯವು ಸರ್ವವಿರೋಧಿ ನಿರಾಕರಣಕ್ಕೋಸ್ಕರ ಪ್ರಧಾನವಾಗಿ ಮುಂದೆ ನಿಲ್ಲುವುದು. ಆವಾಗ ಸಹಜಕಾರುಣ್ಯಾದಿಗುಣಗಳು ಪ್ರಬಲಸಹ ಕಾರಿಗಳೆಂತಲೂ ಪ್ರಪತ್ತಿಮೂಲಕವಾಗಿ ಒಂದಿರುವ ಪ್ರಸಾದವಿಶೇಷವು ಆಗಂತುಕಸಹಕಾರಿಯೆಂತಲೂ ತಿಳಿಯಬೇಕು. ಅದುಹೇಗೆಂದರೆ ? ಸಹಜಕಾರುಣ್ಯವು ಅಲ್ಪವಾದ ವ್ಯಾಜವನ್ನು ಪುರಸ್ಕರಿಸಿಕೊಂಡು ಅನಂತಗಳಾದ ಅಪರಾಧಗಳನ್ನು ಅನಾದರಿಸುವಂಥಾ ಅನುಗ್ರಹವನ್ನುಂಟುಮಾಡುವುದು. ಅಂಥಾ ಅನುಗ್ರಹ ವಿಶೇಷವು ಕಾರುಣ್ಯದೊಡನೆ ಸಂಬಂಧಿಸಿಕೊಂಡು ನಿರಂಕುಶ ಸ್ವಾತಂತ್ರ್ಯವನ್ನು ಆಶ್ರಿತ ಜನರ ವಿರೋಧಿ ನಿರಾಕರಣದಲ್ಲಿ ಉಪಯೋಗಿಸುವುದು. ಈ ಪ್ರಕಾರವಾಗಿ ಸರ್ವಪಾಪ ವಿಮೋಚನಕ್ಕಪೇಕ್ಷಿತವಾದ ಸರ್ವಾಕಾರದಿಂದಲೂ ಕೂಡಿರುವ ಶರಣ್ಯನ ನಿರಪೇಕ್ಷಕರ್ತೃತ್ವಪರವಾದ ಅಹಂ ಶಬ್ದದಲ್ಲಿ ' ಏವ , ಎಂಬ ಅವಧಾರಣವು ಫಲಿತವಾಗುವುದು. ಸರ್ವಪಾಪವಿಮೋಚನಕ್ಕೆ ಬೇಕಾದ ಸರ್ವಾಕಾರಗಳು ಶರಣ್ಯನಲ್ಲಿರ್ಪಿತವಾಗಿರವುದರಿಂದ ಅದಕ್ಕಿಂತಲೂ ಬೇರೆ ಅಪೇಕ್ಷಣೀಯವಾದದೊಂದಿಲ್ಲವಾದುದರಿಂದ ' ಅಹಮೇವ-ನಾನೇ , ಎಂಬದಾಗಿ ಅವಧಾರಣಾರ್ಥವು ಫಲಿತವಾಗುವುದೆಂದು ತಾತ್ಪರ್ಯವು.

'ತ್ವಾ, ಎಂಬುವುದಕ್ಕೆ " ನತ್ವೇವಾಹಂಜಾತುನಾಸಂ ,, ಎಂಬಿದೇ ಮೊದಲಾದ ಉಪದೇಶ ಪರಂಪರೆಯಿಂದ ಚಿತ್ತು ಅಚಿತ್ತು ಈಶ್ವರನೆಂಬ ತತ್ವತ್ರಯ ವಿವೇಕವುಂಟಾಗಿ ಐಶ್ವರ್ಯಾದಿ ಪುರುಷಾರ್ಥಗಳಲ್ಲಿರುವ ಅಲ್ಪತ್ವಅಸ್ಥಿರತ್ವಾದಿ ದೋಷಗಳನ್ನು ಕಂಡು ಅವುಗಳನ್ನುಉಪೇಕ್ಷಿಸಿದವನಾಗಿ ನನ್ನನ್ನು ಹೊಂದುವುದೆಂಬ ಮಹಾಫಲವನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳವನಾಗಿಯೂ, ಅದಕ್ಕೆ ಸಾಧನವಾಗಿರುವ ಕಷ್ಟಸಾಧ್ಯವಾದ ಉಪಾಯಾಂತರ ಗಳಲ್ಲಿ ಆಕಿಂಚನಾಧಿಕಾರಿಯಾಗಿರುವುದರಿಂದ ಸಂಬಂಧವನ್ನು ಬಿಟ್ಟು ಪ್ರಾಪ್ಯ ( ಹೊಂದಲ್ಪಡತಕ್ಕವ ) ನಾಗಿಯೂ ಸಮಸ್ತವಿರೋಧಿಗಳನ್ನು ಹೋಗಲಾಡಿಸುವುದಕ್ಕೆ ಸಮರ್ಥನಾಗಿಯೂ ಇರುವ ನನ್ನಲ್ಲಿ ಭರನ್ಯಾಸವಂಮಾಡಿರುವುದರಿಂದ ಕೃತಕೃತ್ಯನಾಗಿಯೂ, ಅಪೇಕ್ಷಿತ ಫಲಲಾಭಕ್ಕಾಗಿ ಬೇರೊಂದು ಕರ್ತವ್ಯಾಂ

ತರದಲ್ಲಿ ಸಂಬಂಧವಿಲ್ಲದವನಾಗಿಯೂ ಇರುವ ನಿನ್ನನ್ನು ಎಂದರ್ಥವು. ಇವರಿಂದ ಉಪಾಯಾಂತರ ದೌಷ್ಕರ್ಯಾದಿಗಳನ್ನು ಕಂಡು ಅವುಗಳಲ್ಲಿ ಸಂಬಂಧವನ್ನು ಬಿಟ್ಟು ಅತ್ಯಂತಶೋಕದೊಡನೆ ಕೂಡಿರುವುವನಾಗಿರುವುದರಿಂದ ನಿರುಪಾಧಿಕ ಶೇಷಿಯಾಗಿಯೂ ನಿರಪೇಕ್ಷಸ್ವಾತಂತ್ರ್ಯನಾಗಿಯೂ ಸರ್ವರಕ್ಷಣದೀಕ್ಷಿತನಾಗಿಯೂ ಇರುವ ನನ್ನಲ್ಲಿ ಭರಸಮರ್ಪಣವನ್ನು ಮಾಡಿ ಅಪೇಕ್ಷಿತಫಲಕ್ಕೆ ಕರ್ತವ್ಯಾಂತರದಲ್ಲಿ ಪ್ರಾಪ್ತಿ ಇಲ್ಲದಚಾತಕವೃತ್ತಿಯಾದನಿನ್ನನ್ನು ಎಂದು ಫಲಿತವಾಗುವುದು. (ಸರ್ವಪಾಪೇಭ್ಯಃ) ಈಪ್ರಕಾರವಾಗಿ ಬಂಧ ಮೋಕ್ಷಶಕ್ತನಾದ ಮೋಕ್ಷಪ್ರದನನ್ನೂ ಅಶಕ್ತನಾಗಿ ಅವನ ಚರಣಾರವಿಂದಗಳಲ್ಲಿ ಭರನ್ಯಾಸವನ್ನು ಮಾಡಿರುವ ಮುಮುಕ್ಷುವನ್ನೂ ಹೇಳಿ ಮುಂದೆ ಸರ್ವಪಾಪೇಭ್ಯಃ ಎಂಬದಾಗಿ ಬಂಧಕವನ್ನೂ ಹೇಳುವನು. ಇಲ್ಲಿ ಪಾಪವೆಂದರೆ ಶಾಸ್ತ್ರಗಳಿಂದ ತಿಳಿಯತಕ್ಕ ಅನರ್ಥಸಾಧನವು. ಪ್ರತಿಕೂಲ ಪ್ರಾಪ್ತಿಯೂ ಅನುಕೂಲ ನಿವೃತ್ತಿಯೂ ಅನರ್ಥ ವೆನ್ನಲ್ಪಡುವುದು. "ಏತೇವೈನಿರಯಾಸ್ತಾತ ಸ್ಥಾನಸ್ಯಪರಮಾತ್ಮನಃ" ಎಂಬದಾಗಿ ಸ್ವರ್ಗಾದಿಗಳುಕೂಡ ಮುಮುಕ್ಷುವಿಗೆ ನರಕವಾಗಿರುವುದರಿಂದ ಇಲ್ಲಿ ಸ್ವರ್ಗಾದಿ ಕಾರಣವಾದ ಪುಣ್ಯಕರ್ಮವೂ ನರಕ ಕಾರಣವಾದ ಪಾಪಕರ್ಮವೂ ಬಂಧಕತ್ವರೂಪವಾದ ಆಕಾರದಿಂದ ಪಾಪವೆಂತಲೆ ಹೇಳಲ್ಪಡುವುದು. ಪುಣ್ಯಕರ್ಮಗಳಿಗೂ ಪಾಪರೂಪತ್ವವಿರುವುದರಿಂದಲೆ ಯಲ್ಲವೆ ಮುಮುಕ್ಷುವಾದ ಅಧಿಕಾರಿಗೆ ಪಾಪಗಳನ್ನು ಮಾಡಬೇಡವೆಂದು ವಿಧಿಸಿರುವಂತೆ "ತ್ರೈವರ್ಗಿಕಾಂಸ್ತ್ಯಜೇದ್ಧರ್ಮಾನ್" ಎಂಬದಾಗಿ ಕಾಮ್ಯಕರ್ಮಗಳನ್ನೂ ನಿಷೇಧಿಸಿರುವುದು.

ಈ ಪ್ರಕಾರವಾಗಿ ಪುಣ್ಯಪಾಪ ರೂಪವಾದ ಬಂಧ ಕಾರಣವನ್ನು ಪಾಪಶಬ್ದದಿಂದ ಹೇಳಿ ಪಾಪೇಭ್ಯಃ ಎಂಬ ಬಹುವಚನದಿಂದ ಅವುಗಳ ಅನೇಕತ್ವವನ್ನು ಹೇಳುತ್ತಾನೆ. ಬಹುವಚನದಿಂದಲೆ ಅನೇಕತ್ವವು ವಿವಕ್ಷಿತವಾದರೆ ಸರ್ವಶಬ್ದವು ವ್ಯರ್ಥವಾಗಲಾರದೋ? ಎಂದರೆ ಭಗವತ್ಪ್ರಾಪ್ತಿವಿರೋಧಿಯಾದ ಕರ್ಮಕ್ಕೆ ಕಾರಣವಾಗಿಯೂ ಕಾರ್ಯವಾಗಿಯೂ ಬರುವ (ಅವಿದ್ಯೆಯಿಂದ ಕರ್ಮವು, ಕರ್ಮದಿಂದ ಪುನ

ಕ್ಕೆ ಅವಿದ್ಯೆಯೆಂಬುದಾಗಿ ಕರ್ಮಕ್ಕೆ ಕಾರಣವಾಗಿಯೂ ಕಾರ್ಯವಾಗಿಯೂ ಅವಿದ್ಯೆ ಇರುವುದು. ಅಥವಾ ಕ್ರಮಾನ್ವಯವನ್ನೂ ಮಾಡಿಕೊಳ್ಳಬಹುದು. ಅವಿದ್ಯೆಯು ಕರ್ಮಕ್ಕೆ ಕಾರಣವೆಂತಲೂ ವಾಸನಾದಿಗಳು ಕಾರ್ಯವೆಂತಲೂ ತಿಳಿಯ ಬಹುದು. ) ಅವಿದ್ಯೆಯನ್ನೂ ವಿಪರೀತವಾದ ಶಬ್ದಾದಿವಿಷಯವಾಸನೆಯನ್ನೂ ಅಶಬ್ದಾದಿವಿಷಯವಾದ ವಿಪರೀತರುಚಿಯನ್ನೂ ಸ್ಥೂಲಸೂಕ್ಷ್ಮರೂಪಗಳಾದ ಶರೀರಗಳ (ಪ್ರಕೃತಿ) ಸಂಬಂಧವನ್ನೂ ಪಾಪರಾಶಿಯಲ್ಲಿ ಸೇರಿಸುವುದಕ್ಕಾಗಿ ಸರ್ವಶಬ್ದವನ್ನು ಪ್ರಯೋಗಿಸಿರುವುದರಿಂದ ಸರ್ವಶಬ್ದಪ್ರಯೋಗವು ವ್ಯರ್ಥವಾಗಲಾರದು. ಈ ಪ್ರಕಾರವಾಗಿ ಸರ್ವಪಾಪೇಭ್ಯಃ ಎಂಬ ವಿರೋಧಿವರ್ಗಗಳೆಲ್ಲವನ್ನು ಶ್ರೀಭಾಷ್ಯಕಾರರು “ಮನೋವಾಕ್ಕಾಯೈರನಾದಿಕಾಲಪ್ರವೃತ್ತಾನಂತಾ ಕೃತ್ಯಕರಣಕೃತ್ಯಾಕರಣ ಭಗವದಪಚಾರಭಾಗವತಾಪಚಾರಾಸಹ್ಯಾಪಚಾರರೂಪ ನಾನಾವಿಧಾನಂತಾಪಚಾರಾನ್ ಆರಬ್ಧಕಾರ್ಯಾನನಾರಬ್ಧಕಾರ್ಯಾನ್ ಕೃತಾನ್ ಕ್ರಿಯಮಾಣಾನ್ ಕರಿಷ್ಯಮಾಣಾಂಶ್ಚ ಸರ್ವಾನಶೇಷತಃ ಕ್ಷಮಸ್ವ -ಅನಾದಿಕಾಲ ಪ್ರವೃತ್ತ ವಿಪರೀತ ಜ್ಞಾನಮಾತ್ಮವಿಷಯಂ ಕೃತ್ಸ್ನಂ ಜಗದ್ವಿಷಯಂ ವಿಪರೀತ ವೃತ್ತಂಚಾಶೇಷ ವಿಷಯಮದ್ಯಾಪಿ ವರ್ತಮಾನಂ ವರ್ತಿಷ್ಯಮಾಣಂ ಚ ಸರ್ವಂ ಕ್ಷಮಸ್ವ-ಮದೀಯಾನಾದಿಕರ್ಮಪ್ರವಾಹ ಪ್ರವೃತ್ತಾಂ ಭಗವತ್ಸ್ವರೂಪತಿರೋಧಾನಕರೀಂ ವಿಪರೀತ ಜ್ಞಾನಜನನೀಂ ಸ್ವವಿಷಯಾಯಾಶ್ಚ ಭೋಗ್ಯಬುದ್ಧೇರ್ಜನನೀಂ ದೇಹೇಂದ್ರಿಯತ್ವೇನ ಭೋಗ್ಯತ್ವೇನ ಸೂಕ್ಷ್ಮರೂಪೇಣ ಚಾವಸ್ಥಿತಾಂ,, ಎಂಬ ಮೂರು ಚೂರ್ಣಿಕೆಗಳಿಂದ ಶಬ್ದವಾಗಿಯೂ ಅರ್ಥವಾಗಿಯೂ ಸಂಗ್ರಹಿಸಿರುತ್ತಾರೆ

ಆದರೆ ಇಲ್ಲಿ ಉದಹರಿಸಿರುವ ಗದ್ಯವಾಕ್ಯಗಳಲ್ಲಿ ಆರಬ್ಧಕಾರ್ಯಾನ್ ಎಂಬುದಾಗಿ ಪ್ರಾರಬ್ಧಪಾಪ ಕರ್ಮಕ್ಕೆ ಕ್ಷಮೆಯನ್ನು ಪ್ರಾರ್ಥಿಸಿರುವುದು ಉಚಿತವೋ? ಸರ್ವಾಧಿಕಾರಿಗಳಿಗೂ ಪ್ರಾರಬ್ಧ ಕರ್ಮವು ಅನುಭವಿಂದಲೆ ಯಲ್ಲವೆ ನಾಶವಾಗಬೇಕು? ಎಂದರೆ ಬ್ರಹ್ಮೋದಾಗಗಳಾದ ಅಧಿಕಾರಿ ಪುರುಷರಿಗೆ ಅಧಿಕಾರಾವಸಾನದಲ್ಲಿ ಮೋಕ್ಷವಾಗುವುದರಿಂದಲೂ ಅಧಿಕಾರಿಗಳಲ್ಲದವರಿಗೂ ಪ್ರಾರಬ್ಧ ಕರ್ಮಗಳನ್ನು ಅನುಭವಿಸಿದ

ನಂತರವೇ ಮೋಕ್ಷವಾಗುವುದರಿಂದಲೂ ಇಂತವರ ವಿಷಯದಲ್ಲಿ ಪ್ರಾರಬ್ಧ ಪಾಪಗಳಿಗೆ ಕ್ಷಮೆಯನ್ನು ಪ್ರಾರ್ಥಿಸುವಿಕೆಯು ಉಚಿತವಾಗಿಯೇ ಇರುವುದು. ಸ್ವತಂತ್ರ ಪ್ರಪತ್ತಿ ನಿಷ್ಠನ ವಿಷಯದಲ್ಲಿ ಫಲಪ್ರದಾನವನ್ನು ಮಾಡುವುದಕ್ಕೆ ಪ್ರಯತ್ನಿಸಿರುವ ಕರ್ಮಗಳಲ್ಲಿ ಜನ್ಮಾಂತರ ದಿವಸಾಂತರಾದಿಗಳಲ್ಲಿ ದೇಹಸ್ಥಿತಿಯನ್ನುಂಟುಮಾಡುವುದಕ್ಕೆ ಅನುಕೂಲವಾದ ಅಂಶವು ಈ ಸ್ವತಂತ್ರ ಪ್ರಪತ್ತಿ ನಿಷ್ಠನಿಗೆ ಅನಿಷ್ಟವಾಗಿರುವುದರಿಂದ. ಅದಕ್ಕಾಗಿ ಇವನು ಶೋಕಪಡಬಹುದಷ್ಟೆ. ಇಂಥಾ ಅಂಶವನ್ನು ಕೂಡ ಈಶ್ವರನು ಕ್ಷಮಿಸಬಹುದು. “ಸಾಧ್ಯಾಭಕ್ತಿಸ್ತು ಸಾಹಂತ್ರೀ ಪ್ರಾರಬ್ಧಸ್ಯಾಪಿಭೂಯಸೀ,, ಎಂಬದಾಗಿ ಪ್ರಪತ್ತಿಗೆ ಪ್ರಾರಬ್ಧನಾಶಕತ್ವವು ಸ್ವತಸ್ಸಿದ್ಧವಾಗಿರುವುದರಿಂದ ತತ್ಕ್ಷಣದಲ್ಲಿ ಮೋಕ್ಷವನ್ನು ಹೊಂದದೆ ಹೋದರೆ ಆತ್ಮಧಾರಣವಂ ಮಾಡಲಾರದ ಆರ್ತಿವಿಶೇಷವುಳ್ಳವರಿಗೆ ಆಕ್ಷಣದಲ್ಲಿಯೇ ಪ್ರಾರಬ್ಧಕಾರ್ಯವಾದ ಕರ್ಮವನ್ನು ಆತ್ಯಂತವಾಗಿ ಶರಣ್ಯಾನು ಕ್ಷಮಿಸುತ್ತಾನಾದುದರಿಂದ ಗದ್ಯದಲ್ಲಿ ಆರಬ್ಧಕಾರ್ಯವಾದ ಕರ್ಮಗಳನ್ನು ಕ್ಷಮಿಸಬೇಕೆಂಬದಾಗಿ ಪ್ರಾರ್ಥಿಸಿರುವುದು ಉಚಿತವೆಂತಲೇ ಗ್ರಹಿಸಬೇಕು. ಇಲ್ಲಿ ಕೃತಾನ್ ಎಂಬುವುದರಿಂದ ಪ್ರಪತ್ತಿಗೆ ಪೂರ್ವಕಾಲೀನವಾದ ಕರ್ಮಗಳನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿ ಕರಿಷ್ಯಮಾಣಾನ್ ಎಂಬುವುದರಿಂದ ಪ್ರಪತ್ತ್ಯುತ್ತರಕಾಲೀನಗಳಾದ ಕರ್ಮಗಳನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿರುವುದು ಉಚಿತವಾಗಿದ್ದರೂ ಕ್ಷಣಕಾಲ ಸಾಧ್ಯೆಯಾದ ಪ್ರಪತ್ತಿ ಕಾಲದಲ್ಲಿ ಯಾವ ಕರ್ಮಗಳನ್ನು ಮಾಡುವುದಕ್ಕೆ ತಕ್ಕ ಅನುಕೂಲವಿಲ್ಲವಾದುದರಿಂದ ಅವುಗಳನ್ನು ಕ್ರಿಯಮಾಣಾನ್ ಎಂಬದಾಗಿ ಹೇಳಿ ಅವುಗಳಿಗೂ ಕೂಡ ಕ್ಷಮಾಪ್ರಾರ್ಥನವನ್ನು ಮಾಡಿರುವುದು ಉಚಿತವೊ ? ಎಂದರೆ ಪ್ರಪತ್ತ್ಯನುಷ್ಠಾನಕ್ಕೆ ಪೂರ್ವವೇ ಉಪಕ್ರಮಿಸಲ್ಪಟ್ಟು ಪ್ರಪತ್ತ್ಯನುಷ್ಠಾನಾನಂತರದಲ್ಲಿ ಪೂರೈಸಬೇಕಾಗಿರುವ ಕೆಲವು ಕರ್ಮಗಳನ್ನೂ ಪ್ರಪತ್ತ್ಯನುಷ್ಠಾನಕ್ಷಣದಲ್ಲಿ ಸಂಭವಿಸಬಹುದಾದ ಪ್ರಮಾದದಿಂದುಂಟಾಗುವ ಕೆಲವು ಪಾಪಕರ್ಮಗಳನ್ನೂ ಕ್ರಿಯಮಾಣಾನ್ ಎಂಬದಾಗಿ ಹೇಳಿರುವುದರಿಂದ ಯಾವ ವಿರೋಧವೂ ಇಲ್ಲವು. ಪ್ರಪತ್ತ್ಯನುಷ್ಠಾನಕ್ಕೆ ಪೂರ್ವಕಾಲದಲ್ಲಿ

ಆರಂಭಿಸಲ್ಪಟ್ಟ ಕ್ರಿಯಮಾಣಗಳಾದಪಾಪಗಳಲ್ಲಿ ಸೇರಿರುವ ಒಂದುಭಾಗವು ಪೂರ್ವಾಘವಾಗಿರುವುದರಿಂದ ವಿದ್ಯಾಮಾಹಾತ್ಮ್ಯದಿಂದ ಅದಕ್ಕೆ ನಾಶವೇ ಸಿದ್ಧವಾಗಿರುವುದು. ಉತ್ತರಾಘದಲ್ಲಿ ಬುದ್ಧಿಪೂರ್ವಕವಾಗಿ ಮಾಡಲ್ಪಡದ ಪ್ರಾಮಾದಿಕಗಳಾದ ಕರ್ಮಗಳನ್ನು ಶರಣ್ಯನು ಕ್ಷಮಿಸುತ್ತಾನಾದುದರಿಂದ ಅವು ಇವನನ್ನಂಟಲಾರವು. ಉತ್ತರಾಘಗಳಲ್ಲಿ ಬುದ್ಧಿಪೂರ್ವಕವಾಗಿ ಅನುಷ್ಠಿಸಲ್ಪಟ್ಟವುಗಳು ಪುನಃ ಪ್ರಪತ್ತ್ಯಾದಿ ಪ್ರಾಯಶ್ಚಿತ್ತ ವಿಶೇಷದಿಂದ ಶಮನವಾಗುವುವು. ಈ ಅರ್ಥವು "ಅಪಾಯಸಂಪ್ಲವೇ ಸದ್ಯಃಪ್ರಾಯಶ್ಚಿತ್ತಂ ಸಮಾಚರೇತ್ । ಪ್ರಾಯಶ್ಚಿತ್ತಿರಿಯಂ ಸಾತ್ರಯತ್ಪುನಶ್ಶರಣಂ ವ್ರಜೇತ್ " ಎಂಬ ಪ್ರಮಾಣದಿಂದ ಸಿದ್ಧವಾಗಿರುವುದು.

ಆದರೂ ಈಶ್ವರನು ರಕ್ಷಿಸುವಾಗ ಪಾತಕಗಳು ಪ್ರತಿಬಂಧಕಗಳಾಗಲಾರವೆಂಬದಾಗಿ ಪೂರ್ವೀಕರು ಹೇಳಿರುವಲ್ಲಿ ಉತ್ತರಾಘಗಳಿಗೆ ಪ್ರಾಯಶ್ಚಿತ್ತ ವಿಶೇಷದಿಂದ ನಾಶವನ್ನು ಹೇಳಿರುವುದು ಉಚಿತವೋ? ಎಂದರೆ ಈ ಪೂರ್ವಿಕರವಾಕ್ಯಕ್ಕೆ ಬುದ್ಧಿಪೂರ್ವಕವಾದ ಉತ್ತರಾಘದಲ್ಲಿ ಭಗವನ್ನಿಗ್ರಹವುಂಟಾಗುವುದಿಲ್ಲವೆಂತಲೂ ಅದಕ್ಕೆ ಪ್ರಾಯಶ್ಚಿತ್ತಾದಿಗಳನಪೇಕ್ಷಿತಗಳೆಂತಲೂ ತಿಳಿಯದೆ ಸರ್ವೇಶ್ವರನ ಅನುಗ್ರಹಜನಕವಾದ ಉಪಾಯ ವಿಶೇಷದಿಂದ ಅವನು ಪ್ರಸನ್ನನಾದರೆ ಮೋಕ್ಷವು ಅವಶ್ಯವಾಗಿ ಪ್ರಾಪ್ತವಾಗುವುದೆಂದು ಹೇಳುವುದರಲ್ಲಿ ತಾತ್ಪರ್ಯವೆಂದು ತಿಳಿಯಬೇಕು. ಲಘುವಾದ ಶಿಕ್ಷಾದಿಗಳಿಂದ ಆಪಾಪಗಳಿಗೆ ಪರಿಹಾರವನ್ನುಂಟುಮಾಡಿ ಪ್ರಪನ್ನನ ಅಪೇಕ್ಷಿತಕಾಲದಲ್ಲಿ ಮೋಕ್ಷವನ್ನು ಅವಶ್ಯವಾಗಿ ಶರಣ್ಯನು ಕೊಡುತ್ತಾನೆಂದು ತಾತ್ಪರ್ಯವು. ಆದರೆ ಬುದ್ಧಿಪೂರ್ವೋತ್ತರಾಘದಲ್ಲಿ ಭಗವನ್ನಿಗ್ರಹವುಂಟಾಗುವ ಪಕ್ಷದಲ್ಲಿ "ಕರಿಷ್ಯಮಾಣಂ ಸರ್ವಂ ಕ್ಷಮಸ್ವ " ಎಂಬದಾಗಿ ಗದ್ಯದಲ್ಲಿ ಉತ್ತರಾಘಗಳಿಗೆ ಕ್ಷಮಾಪ್ರಾರ್ಥನವಂ ಮಾಡಿರುವುದು ಉಚಿತವೋ ? ಎಂದರೆ ಬುದ್ಧಿಪೂರ್ವೋತ್ತರಾಘಕ್ಕೆ ಈ ಪ್ರಕಾರವಾಗಿ ಪುನಃ ಪ್ರಪತ್ತ್ಯಾದಿಗಳಾದ ಪ್ರಾಯಶ್ಚಿತ್ತ ವಿಶೇಷಗಳಲ್ಲಿ ಇವನನ್ನು ಪ್ರವರ್ತಿಸುವಂತೆ ಮಾಡುವಿಕೆಯೂ ಕ್ಷಮಾಫಲವೆಂತಲೆ ತಿಳಿಯಬೇಕು. ಈ ಪ್ರಕಾರ

ವಾಗಿಯೆ ತನ್ನ ಪ್ರಿಯಕಾಂತೆಯ ದೇಹದಲ್ಲಿರುವ ಮಾಲಿನ್ಯಾದಿಗಳಂತೆ ಪ್ರಪನ್ನನ ದೋಷಗಳು ಪರಮ ಪುರುಷನಿಗೆ ಭೋಗ್ಯವಾಗಿರುವುದ ರಿಂದ ಉತ್ತರಾಘಗಳಿಗೆ ಪ್ರಾಯಶ್ಚಿತ್ತಾಪೇಕ್ಷೆಯಿಲ್ಲವೆಂದರೆ ಈ ಪ್ರಕಾ ರವಾಗಿ ಹೇಳುವ ವಾಕ್ಯಕ್ಕೆ ದುಷ್ಟರೂ ಶರಣಾಗತರಾದರೆ ಈಶ್ವರ ನು ಕೈಬಿಡದೆ ರಕ್ಷಿಸುವನೆಂಬುವುದರಲ್ಲಿ ತಾತ್ಪರ್ಯವನ್ನು ಹೇಳಬೇಕ ಲ್ಲದೆ ಬುದ್ಧಿಪೂರ್ವೋತ್ತರಾಘಗಳು ಈಶ್ವರನಿಗೆಭೋಗ್ಯವೆಂಬದಾಗಿಯೇ ಅರ್ಥವನ್ನು ಹೇಳುವುದಾದರೆ ಭೋಗ್ಯಭೂತಗಳಾದ ಪಾಪಗಳ ನಿವೃ ತ್ತಿಯು ಅನಿಷ್ಟವಾಗಿರುವುದರಿಂದ ಪ್ರಪನ್ನನಿಗೆ ಅಂಥಾ ಬುದ್ಧಿಪೂ ರ್ವೋತ್ತರಾಘಗಳೇ ಯಥಾ ಶಕ್ತಿಯಾಗಿ ಸಂಪಾದಿಸಬೇಕಾಗಿ ಬರು ವುದು. ಆದುದರಿಂದ ಈರೀತಿಯಾಗಿ ಹೇಳುವುದು ಯುಕ್ತವಲ್ಲವು.

ಈ ಪ್ರಕಾರವಾಗಿ ಬುದ್ಧಿಪೂರ್ವಾಘದಲ್ಲಿ ಪ್ರಾಯಶ್ಚಿತ್ತವ ನ್ನು ಮಾಡಿಕೊಂಡವನಿಗೆ ಮೋಕ್ಷ ಪ್ರತಿಬಂಧವಿಲ್ಲದಿದ್ದರೂ ಪ್ರಾ ಯಶ್ಚಿತ್ತವನ್ನು ಮಾಡಿಕೊಳ್ಳದ ಪ್ರಪನ್ನನಿಗೆ ನರಕ ಪ್ರಾಪ್ತಿ ಯುಂಟಾಗಿ ಆದರಿಂದ ಮೋಕ್ಷಕ್ಕೆ ಹಾನಿಯಿಲ್ಲವೋ ? ಇಲ್ಲಿಯೆ ಕೆಲವು ಕಷ್ಟಗಳನ್ನುಂಟುಮಾಡಿ ಅದರಿಂದ ಬುದ್ಧಿಪೂರ್ವೋತ್ತರಾಘಗಳು ನಿ ವೃತ್ತವಾಗುವುದರಿಂದ ನರಕಪಾತವೂ ಮೋಕ್ಷಹಾನಿಯೂ ಇಲ್ಲವೆಂದ ರೆ ಆವಾಗ ಗದ್ಯದಲ್ಲಿ ಬುದ್ಧಿಪೂರ್ವೋತ್ತರಾಘಗಳಿಗೆ ಕ್ಷಮೆಯನ್ನು ಬೇ ಡಿರುವುದು ಉಚಿತವೋ ? ಎಂದರೆ ಪ್ರಕೃತಿ ಸ್ವಭಾವದಿಂದ ಅಪರಾಧ ಗಳು ಬುದ್ಧಿಪೂರ್ವಕವಾಗಿ ಬಂದರೂ ಪುನಃ ಪ್ರಸತ್ತಿಯನ್ನು ಮಾಡ ದೆಹೋದರೆ ಅಂತವರಿಗೆ "ದೇವಂಶಾಂರ್ಙ್ಗಧರಂವಿಷ್ಣುಂಯೇಪ್ರಪನ್ನಾಃ ಪರಾಯಣಂ । ನತೇಷಾಂಯಮಸಾಲೋಕ್ಯಂನಚತೆ ನರಕೌಕಸಃ ॥ ಯಸ್ಮಿನ್ಕಸ್ಮಿನ್ಕುಲೇಜಾತಾಯತ್ರಕುತ್ರನಿವಾಸಿನಃ । ವಾಸುದೇವರತಾ ನಿತ್ಯಂಯಮಲೋಕಂನಯಾಂತಿತೆ ,, ಇತ್ಯಾದಿ ಪ್ರಮಾಣಗಳಲ್ಲಿ ಹೇಳಿ ರುವಂತೆ ನರಕಾದಿಗಳು ಬಾರದಂತೆ ಮಾಡಿ ರಾಜಪುತ್ರಾದಿಗಳ ಅಪರಾ ಧಗಳಿಗುಂಟಾಗುವ ಲಘುದಂಡನಾದಿಗಳಿಂದಆವನಪಾಪಗಳನ್ನು ಹೋ ಗಲಾಡಿಸುವಿಕೆಯುಕ್ಷಮಾಫಲವಿಶೇಷವಾಗಿರುವುದರಿಂದಗದ್ಯದಲ್ಲಿ ಕ್ಷಮೆ ಯನ್ನು ಬೇಡಿರುವುದು ಉಚಿತವಾಗಿಯೆ ಇರುವುದು.

ಆದರೂ ಶಾಸ್ತ್ರಗಳಲ್ಲಿ ಪಾಪಗಳನ್ನು ಮಾಡಿದವನಿಗೆ ನರಕಪಾತವು ಫಲತ್ವೇನ ಹೇಳಿರುವಾಗ ಪ್ರಪನ್ನನಿಗೆ ನರಕಪಾತವಿಲ್ಲವೆಂದರೆ ಪಾಪಾನುಷ್ಠಾನಕ್ಕೆ ಫಲವಿಲ್ಲವೆಂದು ಹೇಳಿದಂತೆ ಆಗಲಿಲ್ಲವೆ ? ಎಂದರೆ ನರಕಪಾತಾದಿರೂಪವಾದ ಪ್ರತ್ಯವಾಯಗಳಿಲ್ಲದಿದ್ದರೂ ಇಲ್ಲಿಯೆ ಉಂಟಾಗುವ ದುಃಖಾನುಭವಾದಿರೂಪಗಳಾಗಿ ಬರುವ ಪಾಪಫಲಗಳಿಗೆ ಯಾರುತಾನೆ ಬಾಧಕರಾಗುವರು. ನರಕವಿಲ್ಲವೆಂದುಹೇಳಿದ ನ್ಯಾಯದಿಂದಲೆ ಈಪಾಪ ಫಲಗಳೂ ಇಲ್ಲದೇ ಹೋಗಲಿ ಎಂದರೆ "ಕಾಣಾಭವಂತಿಕಂಜಾಭವಂತಿ ,, ಇತ್ಯಾದಿ ಪಾಪ ಫಲಗಳನ್ನು ಪ್ರತಿಪಾದಿಸುವ ವಚನಗಳಿಗೆವಿರೋಧವಾದನಿಮ್ಮ ನ್ಯಾಯಪ್ರದರ್ಶನವು ಉಚಿತವಲ್ಲ ವಾದುದರಿಂದ ಆರೀತಿಯಾದ ನ್ಯಾಯವನ್ನು ತೋರಿಸಬಾರದು.

ಆದರೂ ಪ್ರಪನ್ನರಿಗೆ ಬುದ್ಧಿಪೂರ್ವೋತ್ತರಾಘಗಳುಂಟಾಗಿ ತಾನು ಮಾಡಿರುವ ಪಾಪಗಳಿಗೆ ಅನುತಾಪವೂಕೂಡ ಉಂಟಾಗದೆ ಇರುವುದರಿಂದ ಪುನಃ ಪ್ರಪತ್ತ್ಯಾದಿ ಪ್ರಾಯಶ್ಚಿತ್ತಗಳನ್ನುಕೂಡ ಮಾಡಿಕೊಳ್ಳದವರಿಗೆ ಇಲ್ಲಿಯೆದುಃಖಾನುಭವಾದಿ ರೂಪವಾದದೃಷ್ಟಪ್ರತ್ಯವಾಯಗಳನ್ನು ಕೂಡ ಕಾಣಲಿಲ್ಲವೆಂದರೆ ಅಂತವರಿಗೂಕೂಡ ಅವರವರ ಅಪರಾಧಾದಿ ತಾರತಮ್ಯವನ್ನನುಸರಿಸಿ ನಾನಾಪ್ರಕಾರಗಳಾದ ತಾಪತ್ರಯಾನು ಭವವೂ ಉಪಯುಕ್ತ ಜ್ಞಾನಮಾಂದ್ಯವೂ ಇಲ್ಲುಂಟಾಗುವ ಭಗವದನುಭವಸಂಕೋಚವಿಚ್ಛೇದಗಳೂ ಭಗವದ್ಭಾಗವತಾದಿ ಕೈಂಕರ್ಯವಿಚ್ಛೇದವೂ ಭಗವದಪಚಾರಭಾಗವತಾಪಚಾರಾದಿಗಳೂ ಶಿಷ್ಟಜನರಿಂದುಂಟಾಗುವ ನಿಂದಾಬಹಿಷ್ಕಾರಾದಿಗಳೂ ಸುಕೃತವಿಶೇಷನಾಶವೂ ಸಾತ್ವಿಕಾನಾದರವೂ ಮನೋರಥ ಭಂಗಕ್ಲೇಶವೂ ಎಂಬಿದೇಮೊದಲಾದ ಯಾವದಾದರೊಂದು ರೂಪವಾದ ದೃಷ್ಟಪ್ರತ್ಯವಾಯಗಳು ಕಾಣಲ್ಪಡುವು ವೆಂತಲೆ ತಿಳಿಯಬೇಕು. ಅಕೃತ್ಯಕರಣಕೃತ್ಯಾಕರಣಾದಿ ರೂಪಗಳಾದ ನಾನಾವಿಧ ಪಾಪಗಳಿಗೆ ನಾನಾವಿಧಗಳಾದ ದೃಷ್ಟಪ್ರತ್ಯವಾಯಗಳು ಶ್ರುತಿಸ್ಮೃತೀತಿಹಾಸಪುರಾಣ ಭಗವಚ್ಛಾಸ್ತ್ರಾದಿಗಳಲ್ಲಿ ಪ್ರಸಿದ್ಧವಾಗಿರುವುದರಿಂದ "ಕಂಜಾಭವಂತಿಕಾಣಾಭವಂತಿ ,, ಎಂಬಿದೇ ಮೊದಲಾದ ಉಪ ಕ್ಲೇಶಗಳನ್ನು ತೋರಿಸಿರುವಿಕೆಯು ನಾ

ನಾ ದೃಷ್ಟಪ್ರತ್ಯವಾಯಗಳಿಗೆ ಉಪಲಕ್ಷಣವೆಂಬದಾಗಿ ಈ ಉಪಕ್ಲೇಶ ವನ್ನು ಹೇಳುವ ವಾಕ್ಯಾರಂಭದಲ್ಲಿ “ ಆಹ್ಯೈವೇಷಾಂಕೇಚಿದುಪಪ್ಲವಾ ಭವಂತಿ ,, ಎಂದು ಸಾಮಾನ್ಯವಾಗಿ ನಿರ್ದೇಶಿಸಿರುವುದರಿಂದಲೆ ಸಿದ್ಧ ವಾಗಿರುವುದೆಂದರಿಯ ಬೇಕು.

ಆದರೂ ಬುದ್ಧಿಪೂರ್ವೋತ್ತರಾಘಗಳಿಗೆ ಫಲತ್ವೇನ ನಿಮ್ಮಿಂದ ಹೇಳಲ್ಪಟ್ಟದೃಷ್ಟಪ್ರತ್ಯವಾಯಗಳು ಪ್ರಾರಬ್ಧಕರ್ಮಫಲತ್ವೇನ ಪ್ರಾ ಪ್ತಗಳಾಗಿರಬಹುದೆಂದು ಯೇತಕ್ಕೆ ಹೇಳಬಾರದು ? ಎಂದರೆ ಬುದ್ಧಿ ಪೂರ್ವೋತ್ತರಾಘ ಫಲವೆಂಬದಾಗಿ ಇಂಥಾ ಉಪಕ್ಲೇಶಸಮೂಹವು ವ ಚನಬಲದಿಂದ ಸಿದ್ಧವಾಗಿರುವುದರಿಂದ ಅದನ್ನು ಪ್ರಾರಬ್ಧಫಲತ್ವೇನ ಹೇಳುವುದಕ್ಕೆ ತಕ್ಕ ಸಾಧನವಿಲ್ಲವು. ಆದರೆ ಪ್ರಾರಬ್ಧಕರ್ಮಕ್ಕೆ ಫಲ ವಿಲ್ಲವೋ ? ಎಂದರೆ ದೃಷ್ಟಪ್ರತ್ಯವಾಯಾದಿಗಳು ಪ್ರಪನ್ನನಿಗೆ ಬುದ್ಧಿ ಪೂರ್ವೋತ್ತರಾಘ ಫಲವಾಗಿಯೂ ಪ್ರಾರಬ್ಧಕರ್ಮಫಲವಾಗಿಯೂ ಉಂ ಟಾಗಬಹುದಾದುದರಿಂದ ಪ್ರಾರಬ್ಧಕರ್ಮಕ್ಕೆ ಫಲವಿಲ್ಲವೆಂತಲೂ ಹೇಳ ಕೂಡದು. ಆದುದರಿಂದಲೆ ಬುದ್ಧಿಪೂರ್ವೋತ್ತರಾಘಕ್ಕೆ ಸಾತ್ವಿಕರು ಭಯಪಟ್ಟು ದೂರದಲ್ಲಿರುವರು. ಈಗ ಹೇಳಿರುವ ಅಂಶವನ್ನು ಸಮ್ಮ ತಿಸದೆ ಹೋದರೆ ಪುನಃಪ್ರಪತ್ತಿವಿಧಾಯಕಶಾಸ್ತ್ರವೂ ಆಪ್ರಕಾರವಾ ಗಿ ಪುನಃ ಪ್ರಪತ್ತಿಯನ್ನು ಅನುಷ್ಠಿಸುವ ಶಿಷ್ಟಜನರ ಆಚಾರವೂ ಪೂ ರ್ವಸಂಪ್ರದಾಯವೂ ವಿರೋಧಿಸುವುದು. ಆದರೂ “ ಅಪಚಾರಾನಂ ತರದಲ್ಲಿ ಅನುತಾಪವುಂಟಾಗದೆ ಹೋದರೆ ಜ್ಞಾನವುಂಟಾಗಲಿಲ್ಲವೆಂದಾ ಗುವುದು ,, ಎಂಬ (ನಂಜೀಯರ್, ) ವೇದಾಂತಿಮುನಿಗಳ ವಾಕ್ಯದಲ್ಲಿ ಅನುತಾಪವಿಲ್ಲದವನು ಪ್ರಪನ್ನನೇ ಅಲ್ಲವು, ಅಂತವನಿಗೆ ಭಗವಚ್ಛೇಷ ತ್ವಾದಿಜ್ಞಾನವೂ ಇಲ್ಲವು ಎಂಬದಾಗಿ ತೋರುವುದರಿಂದ ಪ್ರಪನ್ನನಾದ ಕರಿನ ಪ್ರಕೃತಿಯುಳ್ಳವನಿಗೆ ಕಾಣತ್ವಾದಿ ದೃಷ್ಟಪ್ರತ್ಯವಾಯ ವಿಲ್ಲವೆಂ ದರೆ ಇವರ ವಾಕ್ಯಕ್ಕೆ ಅಪಚಾರನಿವೃತ್ತಿಗೂ ಅದಕ್ಕೆ ತಕ್ಕಪ್ರಾಯ ಶ್ಚಿತ್ತ ಪ್ರವೃತ್ತಿಗೂ ಅಪೇಕ್ಷಿತವಾಗಿರುವ ಸಂಪೂರ್ಣವಾದ ಜ್ಞಾನವಿಲ್ಲ ವೆಂಬುವುದರಲ್ಲಿ ತಾತ್ಪರ್ಯವಲ್ಲದೆ ದೃಷ್ಟಪ್ರತ್ಯವಾಯ ವಿಲ್ಲವೆಂಬುವುದ ರಲ್ಲಿ ತಾತ್ಪರ್ಯವನ್ನು ಹೇಳಬಾರದು. ಪ್ರಾರಬ್ಧಕರ್ಮೋಪಾಧಿಕವಾದ ಭಗ

ವದಭಿಪ್ರಾಯ ಭೇದಾನುಗುಣವಾಗಿ ಬರುವ ಬುದ್ಧಿಪೂರ್ವಾಪಚಾರವು ಕೆಲವರಿಗುಂಟಾಗಲಾರದು. ಕೆಲವರಿಗುಂಟಾಗಿ ಅನುತಾಪಾದಿಗಳಿಂದಪ ರಿಹಾರವಾಗುವುದು. ಕಠಿನ ಪ್ರಕೃತಿಗಳಿಗೆ ಅನುತಾಪವೇಉಂಟಾಗಲಾ ರದು, ಆದುದರಿಂದ ಬುದ್ಧಿಪೂರ್ವೋತ್ತರಾಘಗಳುಂಟಾದರೆ ಅದಕ್ಕೆಅನು ತಾಪ ಯುಕ್ತನಾಗಿ ಪುನಃ ಪ್ರಪತ್ತಿಯನ್ನು ಮಾಡದೆ ಹೋದರೆ ಅಂತ ವರ ವಿಷಯದಲ್ಲಿ ಉಪಕ್ಲೇಶಗಳನ್ನು ಹೇಳುವ ಶ್ರುತ್ಯಾದಿಗಳಿರುವುದ ರಿಂದ ಇಂಥಾ ಲಘುವಾದ ಶಿಕ್ಷಾವಿಶೇಷದಿಂದ ಬುದ್ಧಿ ಪೂರ್ವೋತ್ತರಾ ಘವು ಪರಿಹಾರವಾಗುವುದು. ಆದುದರಿಂದ ವಿವೇಕಿಗಳಾದ ಪ್ರಪನ್ನ ರಿಗೆ ಬುದ್ಧಿಪೂರ್ವೋತ್ತರಾಘದಲ್ಲಿ ಪ್ರಯತ್ನವೆ ಉಂಟಾಗಲಾರದೆಂತ ಲೂ ಬುದ್ಧಿಪೂರ್ವೋತ್ತರಾಘವುಳ್ಳ ಮಧ್ಯಮಾಧಿಕಾರಿಗಳಿಗೆ ಅನುತಾ ಪಾದಿಗಳುಂಟಾಗುವುವೆಂತಲೂ (ಈ ಮಧ್ಯಮಾಧಿಕಾರಿಗಳು ವಿವೇಕಿ ಗಳಂತೆ ಬುದ್ಧಿಪೂರ್ವೋತ್ತರಾಘಗಳಿಲ್ಲದವರೂ ಅಲ್ಲವು. ಕಠಿನ ಮನ ಸ್ಸುಳ್ಳವರಂತೆ ಪುನಃ ಪ್ರಪತ್ತ್ಯಾದಿ ಪ್ರಾಯಶ್ಚಿತ್ತ ರಹಿತರೂ ಅಲ್ಲವು. ಆದುದರಿಂದ ಅವರು ಮಧ್ಯಮರಾದರು.) ಬುದ್ಧಿಪೂರ್ವೋತ್ತರಾಘ ವುಂಟಾಗಿರುವ ಕಠಿನ ಚೇತಸ್ಕರು ಪುನಃ ಪ್ರಪತ್ತ್ಯಾದಿ ಪ್ರಾಯಶ್ಚಿ ತ್ತಗಳಲ್ಲಿ ಅಭಿಮುಖರಾಗದೆ ಇರುವುದರಿಂದ ಇಂತವರಿಗೆ ರಾಜಪುತ್ರಾ ಪರಾಧದಂತೆ ಲಘುವಾದ ದಂಡನ ವುಂಟಾಗುವುದೆಂತಲೂ ತಿಳಿಯಬೇ ಕು. ಆದುದರಿಂದ ಯಾವ ವಿಧದಲ್ಲಿಯೂ ಭಗವನ್ನಿಗ್ರಹವುಂಟಾ ಗದೆ ಇರುವುದಕ್ಕಾಗಿ ಬುದ್ಧಿಪೂರ್ವೋತ್ತರಾಘವು ಅವಶ್ಯವಾಗಿ ಪರಿ ಹರಿಸತಕ್ಕದ್ದೆಂದರಿಯಬೇಕು.

ಆದರೂ ಈ ಪ್ರಕಾರವಾಗಿ ಆಜ್ಞಾನುಪಾಲನಕ್ಕೆ ಭಗವನ್ನಿಗ್ರಹ ನಿವೃತ್ತಿಯೇ ಫಲವೆಂಬದಾಗಿ ಹಿಂದೇ ಹೇಳಿರುವುದು ಉಚಿತವೋ? ಭಗವತ್ಪ್ರೀತಿಯೇ ಫಲವಲ್ಲವೋ? ಎಂದರೆ ಭಗವತ್ಪ್ರಯನ್ನುದ್ದೇ ಶಿಸಿ ನಿತ್ಯನೈಮಿತ್ತಿಕ ಕರ್ಮಾನುಷ್ಠಾನವನ್ನು ಮಾಡುವುದಗಲ್ಲಿ ಭಗವ ನ್ನಿಗ್ರಹ ನಿವೃತ್ತಿಯೂ ಕೂಡ ಅವಾಂತರ ಫಲವಾಗಿ ಸಿದ್ಧವಾಗುವುದ ರಿಂದ ಭಗವತ್ಪ್ರೀತಿಯನ್ನುದ್ದೇಶಿಸಿಯೇ ನಿತ್ಯನೈಮಿತ್ತಿಕಾದಿ ಕೈಂಕ ರ್ಯಗಳನ್ನು ಅನುಷ್ಠಿಸುವಿಕೆಯು ಉಚಿತವೆಂತಲೆ ತಿಳಿಯಬೇಕು.

ಆದರೂ ಈಪ್ರಕಾರವಾಗಿ ಅಪರಾಧ ಸಾಮಾನ್ಯಕ್ಕೆ ತ್ಯಾಗವುವಿಹಿತವಾದಮೇಲೆ ಗದ್ಯದಲ್ಲಿ ಭಾಗವತಾಪಚಾರಕ್ಷಮಾಪಣವನ್ನು ಪ್ರತ್ಯೇಕವಾಗಿ ಪ್ರಾರ್ಥಿಸಬೇಕೆಕೊ? ಎಂದರೆ ಭಾಗವತಾಪಚಾರವು ಅತಿಕ್ರೂರವಾದುದರಿಂದ ಪರಿಹರಿಸತಕ್ಕವುಗಳಲ್ಲಿ ಪ್ರಧಾನವೆಂದು ತೋರಿಸುದಕ್ಕಾಗಿ ಅದನ್ನು ಪ್ರತ್ಯೇಕವಾಗಿ ಪ್ರಾರ್ಥಿಸಿರುವುದು ಯುಕ್ತವೆಂತಲೆ ತಿಳಿಯಬೇಕು. ಭಾಗವತಾಪಚಾರ ಪರಿಹಾರವನ್ನು ಯೇತಕ್ಕೆ ಅಪೇಕ್ಷಿಸಬೇಕೆಂದರೆ ಅದಕ್ಕುತ್ತರವು. “ಚಂಡಾಳಮಪಿ ಮದ್ಭಕ್ತಂನಾವಮನ್ಯೇತಬುದ್ಧಿಮಾನ್। ಅವಮಾನಾತ್ಪತತ್ಯೇವ ರೌರವೇನರಕೇನರಃ ,, ಇತ್ಯಾದಿಗಳಲ್ಲಿ ಹೇಳಿರುವ ಪ್ರಕಾರದಿಂದ ಬ್ರಹ್ಮಹತ್ಯಾಸುರಾಪಾನಾದಿಗಳಿಗೆ ಹೇಗಾದರೆ ಸ್ವಯಮೇವನರಕ ಹೇತುತ್ವವುಂಟೊ ಅದರಂತೆ ಭಾಗವತಾಪಚಾರಕ್ಕೂ ನರಕಹೇತುತ್ವ ವಿರುವುದು ಮಾತ್ರವಲ್ಲದೆ ಬ್ರಹ್ಮಜ್ಞಾನಿಗಳ ಪುಣ್ಯಪಾಪಗಳಿಗೆ ಅವರ ಪ್ರಿಯಾಪ್ರಿಯವರ್ಗದಲ್ಲಿ ಸಂಕ್ರಮವು “ಪ್ರಿಯೇಷುಸ್ವೇಷುಸುಕೃತ ಮಪ್ರಿಯೇಷುಚದುಷ್ಕೃತಂ। ವಿಸೃಜ್ಯಧ್ಯಾನಯೋಗೇನ ಬ್ರಹ್ಮಾಪ್ಯೇಪಿ ಸನಾತನಂ,, ಎಂಬಿವೇ ಮೊದಲಾದ ಪ್ರಮಾಣಗಳಲ್ಲಿ ಹೇಳಲ್ಪಟ್ಟಿರುವುದರಿಂದಲೂ ಕೂಡ ಅಂಥಾ ಮಹಾಭಾಗವತಾಪಚಾರಗಳ ದಶೆಯಿಂದ ಅತ್ಯಂತವಾಗಿ ಭಯಪಟ್ಟು ಅವುಗಳನ್ನು ಬಿಡಬೇಕೆಂದು ತಿಳಿಯಬೇಕು.

ಇಲ್ಲಿ ಮಹಾಭಾಗವತಾಪಚಾರಮಾತ್ರವೇ ತ್ಯಾಗಾರ್ಹವಾಗಿರಲಾರದೆಂತಲೂ ಇಂಥಾ ಬ್ರಹ್ಮವಿದ ಪರಾಧಿಗಳ ಸಂಸರ್ಗವೂಕೂಡ ತ್ಯಾಗಾರ್ಹವಾಗಿರುವುದೆಂತಲೂ ತಿಳಿಯಬೇಕು. ಆದರೆ ಅಪರಾಧಿಗಳ ಸಂಸರ್ಗದಲ್ಲಿ ದೋಷವ್ಯಾವದೆಂದರೆ ? ಬ್ರಹ್ಮಜ್ಞಾನಿಗಳ ಅಪರಾಧಿಸಂಸರ್ಗವನ್ನು ಮಾಡಿದರೆ ಇವನಿಗೂ ಅವರ ಪಾಪಕರ್ಮಸಂಕ್ರಮ ವುಂಟಾಗುವುದರಿಂದ ಇವನೂ ಅಪರಾಧಿಯಾಗುತ್ತಾನೆ. “ನತೇಷಾಂ ಪುಣ್ಯತೀರ್ಥೇಷುಗತಿಸ್ಸಂಸರ್ಗಿಣಾಮಪಿ ,, ಎಂಬದಾಗಿ ಇಂತವರಿಗೆ ಪರಲೋಕ ಹಾನಿಯೂವುಂಟು. ಆದುದರಿಂದಲೇ ಅಪರಾಧಿಗಳ ಸಂಸರ್ಗವನ್ನು ಕೂಡ ವಿವೇಕಿಯಾದವನು ತ್ಯಾಗಮಾಡಬೇಕು. ಕಿಂಚ ಇಂಥಾ ಬ್ರಹ್ಮವಿದ ಪರಾಧಿ ಸಂಸರ್ಗವುಳ್ಳವನು ಬ್ರಹ್ಮಜ್ಞಾನಿಗಳ

ವಿರೋಧವನ್ನುಂಟುಮಾಡಿಕೊಳ್ಳುವುದರಿಂದ ಈಶ್ವರನಿಂದ ಕೊಡಲ್ಪಡುವ ಶಿಕ್ಷಾದಿಗಳಿಗೆ ಗುರಿಯಾಗುತ್ತಾನೆಂತಲೂ ತಿಳಿಯಬೇಕು. ಅಥವಾ ಬ್ರಹ್ಮಜ್ಞಾನಿಗಳಲ್ಲಿ ಯಾರಾದರೆ ಅಪರಾಧಗಳನ್ನು ಮಾಡುತ್ತಾರೆಯೊ ಅಂತವರಲ್ಲಿ ಇವನಿಗೆ ವಿರೋಧವುಂಟಾದರೆ ಅಂಥಾ ವಿರೋಧಪ್ರಯುಕ್ತವಾಗಿ ಈಶ್ವರನುಅಪರಾಧಿಗಳಿಗೆ ಕೊಡುವ ಶಿಕ್ಷಾದಿಗಳನ್ನು ಇವನೆ ಕೊಡುತ್ತಾನಾದುದರಿಂದ ಈಶ್ವರಸ್ವಾತಂತ್ರ್ಯವನ್ನಪಹರಿಸಿದ ದೋಷಕ್ಕೂ ಗುರಿಯಾಗುವನು. ಆದರಿಂದ ಬ್ರಹ್ಮವಿದಪರಾಧಿಸಂಸರ್ಗದಂತೆ ಅಂತವರ ವಿರೋಧವೂ ತ್ಯಾಗ ವಿಷಯವಾಗಿರುವುದೆಂದರಿಯಬೇಕು.

ಪ್ರಪನ್ನವಿಷಯದಲ್ಲಿ “ ಮೋಕ್ಷಯಿಷ್ಯಾಮಿ ,, ಎಂಬ ಭವಿಷ್ಯನ್ನಿರ್ದೇಶವು ಉಚಿತವೋ ? ಭಕ್ತಜನ ವಿಷಯದಲ್ಲಿ ಉಪಾಯಪೂರ್ತಿಗೆ ಕಾಲವಿಳಂಬವು ಅಪೇಕ್ಷಿತವಾಗಿರುವುದರಿಂದ ಭವಿಷ್ಯನ್ನಿರ್ದೇಶವು ಅಲ್ಲಿ ಯುಕ್ತವಾಗಿದ್ದರೂ ಪ್ರಪನ್ನನಿಗೆ ತತ್ಕ್ಷಣದಲ್ಲಿಯೇ ಉಪಾಯ ಸಿದ್ಧಿಯಾಗುವುದರಿಂದ ಈ ಕ್ಷಣದಲ್ಲಿಯೇ ಮೋಕ್ಷಸಿದ್ಧಿಯಾಗಬೇಡವೋ ? ಎಂದರೆ “ ಏತದ್ದೇಹಾವಸಾನೇ ಮಾಂತ್ವತ್ಪಾದಂ ಪ್ರಾಪಯಸ್ವಯಂ ,, ಎಂಬೀ ಪ್ರಕಾರವಾಗಿ ನಿನಿಗೆ ಇಷ್ಟವಾದ ಕಾಲದಲ್ಲಿ ನಿನ್ನನ್ನು ಮುಕ್ತನನ್ನಾಗಿ ಮಾಡುವೆನೆಂದು ಗ್ರಹಿಸಬೇಕು. ದೇಹಾವಸಾನಕಾಲವು ಭವಿಷ್ಯತ್ಕಾಲವಾಗಿರುವುದರಿಂದ ಅಲ್ಲಿ ಮೋಕ್ಷಯಿಷ್ಯಾಮಿ ಎಂಬ ಭವಿಷ್ಯನ್ನಿರ್ದೇಶವು ಯುಕ್ತವಾಗಿಯೇ ಇರುವುದು. ಆರ್ತಪ್ರಪನ್ನನಿಗೂ ಉಪಾಯಾನುಷ್ಠಾನೋತ್ತರ ಕಾಲದಲ್ಲಿ ಮೋಕ್ಷವಾಗುವುದರಿಂದ ಭವಿಷ್ಯನ್ನಿರ್ದೇಶವು ಸಾರ್ಥಕವಾಗಿಯೇ ಇರುವುದು. ಆದರಿಂದ ಮೋಕ್ಷಯಿಷ್ಯಾಮಿ ಎಂಬುವುದಕ್ಕೆ ನಿನಿಗಿಷ್ಟವಾದ ಕಾಲದಲ್ಲಿ ಮುಕ್ತನಾಗುವಂತೆ ಮಾಡುವೆನೆಂಬ ಅರ್ಥವನ್ನು ಹೇಳಿದಂತೆ ಆಯಿತು.

ಆದರೆ “ ಪದ್ಮಪತ್ರಶತೇನಾಪಿನಕ್ಷಮಾಮಿವಸುಂಧರೆ । ತಾನಹಂದ್ವಿಷತಃಕ್ರೂರಾನ್ಸಂಸಾರೇಷುನರಾಧಮಾನ್ । ಕ್ಷಿಪಾಮ್ಯಜಸ್ರ

ಮಾಶುಭಾನಾಸುರೀಷ್ವೇವಯೋನಿಷು ॥ ಆಸುರೀಂಯೋನಿಮಾಪನ್ನಾಮೂಢಾ ಜನ್ಮನಿಜನ್ಮನಿ । ಮಾಮಪ್ರಾಪ್ಯೈವಕೌಂತೇಯತತೋಯಾಂತ್ಯಧಮಾಂಗತಿಂ ,, ಎಂಬೀ ಪ್ರಕಾರವಾಗಿ ಕೆಲವು ಪಾಪಗಳನ್ನು ಕ್ಷಮಿಸಲಾರೆನೆಂಬುವುದೂ ಇಲ್ಲಿ “ ಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ ,, ಎಂಬದಾಗಿ ಸರ್ವಪಾಪ ವಿಮೋಕ್ಷಣವನ್ನು ಮಾಡಿಸುವೆನೆಂಬುವುದೂ ಪರಸ್ಪರ ವಿರುದ್ಧವಾಗಿರುವುದರಿಂದ ಆರೋಪಿತವಲ್ಲವೊ ? ಎಂದರೆ ‘ ನಕ್ಷಮಾಮಿ , ಎಂಬುವುದಕ್ಕೆ ಪ್ರಪತ್ತಿಗಿಂತಲೂ ಅನ್ಯಗಳಾದ ಪ್ರಾಯಶ್ಚಿತ್ತಗಳಿಂದ ಕ್ಷಮಿಸಲಾರೆನೆಂತಲೂ ಮೋಕ್ಷಯಿಷ್ಯಾಮಿ ಎಂಬುವದಕ್ಕೆ ಸರ್ವಪಾಪಪ್ರಾಯಶ್ಚಿತ್ತ ವಾಗಿರುವ ಮಹಾಪ್ರಭಾವವುಳ್ಳ ಪ್ರಪತ್ತಿರೂಪವಾದ ಉಪಾಯವಿಶೇಷದಿಂದ ಕ್ಷಮಿಸಿಬಿಡುಗಡೆ ಮಾಡುವೆನೆಂತಲೂ ವಿಷಯಭೇದವಿರುವುದರಿಂದ ಯಾವವಿರೋಧವೂ ಇಲ್ಲವು. ಸೀತಾದೇವೀ ವಿಷಯದಲ್ಲಿ ದ್ರೋಹಿಯಾದ ರಾವಣನು ಬಂದುಶರಣಾಗತನಾದರೂ ಕೂಡ ರಕ್ಷಿಸುವೆನೆಂತಲೆಅಲ್ಲವೆ ಭಗವದಭಿಪ್ರಾಯವಿರುವುದು. ಆದುದರಿಂದ ಇದುಆರೋಪಿತವಲ್ಲವೆಂದರಿಯಬೇಕು. ಇಲ್ಲಿ ಪಾಪಗಳ ದಶೆಯಿಂದ ಬಿಡಿಸುವುದೆಂದರೆಅನಾದಿ ಕಾಲದ ಮೊದಲು ನಮ್ಮಗಳ ವಿಪರೀತಾನುಷ್ಠಾನದಿಂದ ಹುಟ್ಟಿರುವ ನಿಗ್ರಹಾಭಿಪ್ರಾಯವನ್ನು ಈಶ್ವರನು ತಾನೇ ಬಿಡುವಿಕೆಯು. ಈ ನಿಗ್ರಹ ನಿವೃತ್ತಿಯಿಂದ ನಿಗ್ರಹ ಕಾರ್ಯಗಳಾದ ಅವಿದ್ಯಾದಿಗಳೆಲ್ಲವೂ ನಿವೃತ್ತಗಳಾಗುವುವು. ಈಶ್ವರನನಿಗ್ರಹ ನಿವೃತ್ತಿಯು ಯಾವದೆಂದರೆ ಮತ್ಪ್ರಸಾದಾತ್ ಎಂಬ ಅಭಿಪ್ರಾಯ ವಿಶೇಷವೆ “ ತತ್ಪ್ರಸಾದಾತ್ಪರಾಂ ಶಾಂತಿಂಸ್ಥಾನಂಪ್ರಾಪ್ಸ್ಯಸಿಶಾಶ್ವತಂ,, (೧೮ ॥ ೬೨ ) ಎಂಬ ರೀತಿಯಿಂದ ಅವಿದ್ಯಾ ನಿವೃತ್ತಿರೂಪವಾದ ಶಾಂತಿಗೆ ಹೇತುವಾದ (ಶರೀರಾವಸಾನಕಾಲದಲ್ಲಿ ನಿಗ್ರಹಾಭಿ ಸಂಧಿಯನ್ನು ಬಿಡುವೆನೆಂಬ) ಅಭಿಪ್ರಾಯವಿಶೇಷವೇ ಎಂದು ತಾತ್ಪರ್ಯವು. ಜ್ಞಾನವಿಕಾಸಾದಿಗಳೆ ಜೀವನಿಗುಂಟಾಗುವ ಅವಿದ್ಯಾದಿಗಳ ನಿವೃತ್ತಿಯು.

ಆದರೆ ನಿನಗಿಷ್ಟವಾದ ಕಾಲದಲ್ಲಿ ಸಂಸಾರ ಬಂಧದಿಂದ ಬಿಡಿಸುವೆನೆಂದರೆ ವಿದ್ಯಾಪ್ರಾರಂಭದಲ್ಲಿಯೇ ಸರ್ವಪಾಪವಿನಾಶವನ್ನು ಹೇಳು

ಪ್ರುದು ವಿರೋಧಿಸಲಾರದೋ ? ಅದು ಕೆಲವು ಪಾಪನಾಶವನ್ನು ಮಾತ್ರ ಹೇಳುವುದೆಂದರೆ ಆವಾಗ ವಿದ್ಯೆಗೆ ಸರ್ವಪಾಪನಾಶಕತ್ವವಿಲ್ಲವಾದುದ ರಿಂದ ಸಂಸಾರ ಬಂಧವೆ ತಟಸ್ಥಿಸಲಾರದೋ ? ಬಂದುವೇಳೆ ವಿದ್ಯಾ ಪ್ರಾರಂಭದಲ್ಲಿಯೇ ಸರ್ವಪಾಪವಿನಾಶವನ್ನು ಹೇಳುವ ಪಕ್ಷದಲ್ಲಿ ತತ್ಕ್ಷ ಣದಲ್ಲಿಯೇ ಸರ್ವಪ್ರಪನ್ನರಿಗೂ ಶರೀರಪಾತ ಪ್ರಸಂಗ ವುಂಟಾಗಲಾ ರದೋ ? ಇತ್ಯಾದಿ ಚೋದ್ಯಗಳಿಗೆ ಕ್ರಮೇಣ ಉತ್ತರವನ್ನು ಕೊಡು ವ ‘ ಮೋಕ್ಷಯಿಷ್ಯಾಮಿ , ಎಂಬ ವಾಕ್ಯದ ಅರ್ಥವಿಶೇಷವನ್ನು ಮುಂದೆ ವಿವರಿಸುವೆವು. ಈ ಪಾಪ ಪರಿಹಾರಕ್ರಮವನ್ನು “ಪ್ರಾರಬ್ಧೇ ತರಪೂರ್ವಪಾಪಮಖಿಲಂ ಪ್ರಾಮಾದಿಕಂ ಚೋತ್ತರಂ ನ್ಯಾಸೇನ ಕ್ಷಪ ಯನ್ನನಭ್ಯುಪಗತಪ್ರಾರಬ್ಧ ಖಂಡಂಚನಃ । ಧೀಪೂರ್ವೋತ್ತರ ಪಾ ಪ್ಮನಾಮುಜನನಾಜ್ಞಾತೇಪಿತನ್ನಿಷ್ಕೃತೇಃ ಕೌಟಿಲ್ಯೇಸತಿ ಶಿಕ್ಷಯಾ ಪ್ಯನಘಯನ್ಸೋಕ್ರೀಕರೋತಿಪ್ರಭುಃ ,, ಎಂಬ ಬಂದು ಶ್ಲೋ ಕದಿಂದ ಶ್ರೀವೇದಮೌಲಿ ದೇಶಿಕರು ಸಂಗ್ರಹಿಸಿರುತ್ತಾರೆ. ಪಾ ಪಗಳುಉಪಾಯ ವಿರೋಧಿಗಳೆಂತಲೂ ಪ್ರಾಪ್ತಿ ವಿರೋಧಿಗಳೆಂ ತಲೂ ದ್ವಿವಿಧ ಗಳಾಗಿರುವುವು. ಉಪಾಯ ವಿರೋಧಿಗಳಾದ ಪಾಪಗಳು ಸುಕೃತ ವಿಶೇಷ ಪೂರ್ವಕವಾದ ಭಗವನ್ನಿಗ್ರಹ ನಿವೃ ತ್ತಿಯಿಂದ ಕಳದು ಹೋದರೆ ಪ್ರಾಪ್ತಿ ವಿರೋಧಿಗಳಾದಪೂರ್ವ ಪು ಣ್ಯಪಾಪಗಳು ಉಪಾಯಾನುಷ್ಠಾನಾರಂಭದಲ್ಲಿ ನಿಶ್ಶೇಷವಾಗಿನಾಶವಾಗ ವುವು. ( ಇಲ್ಲಿ ಮೊದಲು ಉಪಾಯ ವಿರೋಧಿಯೆಂತಲೂ ಪ್ರಾ ಪ್ತಿವಿರೋಧಿ ಎಂತಲೂ ಕೈಂಕರ್ಯ ರೂಪವೆಂತಲೂ ಕರ್ಮವು ತ್ರಿವಿಧವಾಗಿರುವುದೆಂದರಿಯಬೇಕು. ಪ್ರಾಪ್ತಿ ವಿರೋಧಿಯಾದ ಪಾ ಪವೂ ಪೂರ್ವಾಘವೆಂತಲೂ ಉತ್ತರಾಘವೆಂತಲೂ ದ್ವಿವಿಧವು. ಪೂರ್ವಾ ಘವೂಕೂಡ ಪುಣ್ಯವೆಂತಲೂ ಪಾಪವೆಂತೂ ದ್ವಿವಿಧವಾಗಿರುವುದು. ಪುಣ್ಯಪಾಪಗಳು ಪ್ರಾರಬ್ಧವೆಂತಲೂ ಅಪ್ರಾರಬ್ಧವೆಂತಲೂ ಯೆ ರಡು ಬಗೆಯಾಗಿರುವುವು. ಈ ಯೆರಡು ಪ್ರಾರಬ್ಧವೂ ಪ್ರತ್ಯೇಕವಾಗಿ ಅಭ್ಯುಪಗತವೆಂತಲೂ ಅನಭ್ಯುಪಗತವೆಂತಲೂ ಯೆರಡು ಬಗೆಯಾಗಿರು ವುದು. ಉತ್ತರ ಕರ್ಮವೂಕೂಡ ಪಾಪವೆಂತಲೂ ಪುಣ್ಯವೆಂತಲೂ

ಮೋಕ್ಷಕಕ್ಕಾಗಿ ಮಾಡಲ್ಪಡುವ ಕರ್ಮವೆಂತಲೂ ಮೂರುಬಗೆಯಾಗಿರುವುದು. ಇಂಥಾಪಾಪವೂ ಬುದ್ಧಿಪೂರ್ವಕವೆಂತಲೂ ಅಬುದ್ಧಿಪೂರ್ವಕವೆಂತಲೂ ದ್ವಿವಿಧವು. ಬುದ್ಧಿಪೂರ್ವಕವೂ ಕೂಡ ಆಪತ್ಕೃತವೆಂತಲೂ ಅನಾಪತ್ಕೃತವೆಂತಲೂ ದ್ವಿವಿಧವಾಗಿರುವುದು. ಉತ್ತ ಪುಣ್ಯವೂ ಕೂಡ ಬುದ್ಧಿಪೂರ್ವಕವೆಂತಲೂ ಅಬುದ್ಧಿಪೂರ್ವಕವೆಂತಲೂ ದ್ವಿವಿಧವಾಗಿರುವುದು. ಇಂಥಾ ಬುದ್ಧಿಪೂರ್ವಕವಾದ ಪುಣ್ಯವೂಕೈಂಕರ್ಯರೂಪವೆಂತಲೂ ಫಲಾರ್ಥವೆಂತಲೂ ದ್ವಿವಿಧವಾಗಿರುವುದು. ಫಲಾರ್ಥವಾದ ಪುಣ್ಯವೂ ವಿದ್ಯಾನುಗುಣವೆಂತಲೂ ವಿದ್ಯಾನುಪಯುಕ್ತವೆಂತಲೂ ದ್ವಿವಿಧ ವಾಗಿರುವುದು. ಈ ಯರಡೂ ಪ್ರತಿಬದ್ಧಫಲವೆಂತಲೂ ಅಪ್ರತಿ ಬದ್ಧಫಲವೆಂತಲೂ ದ್ವಿವಿಧವಾಗಿರುವುದು. ಬುದ್ಧಿಪೂರ್ವೋತ್ತರಪುಣ್ಯವೂ ಪ್ರಪತ್ತಿರೂಪವೆಂತಲೂ ಅನ್ಯಗಳಾದ ಪುಣ್ಯರೂಪವೆಂತಲೂ ದ್ವಿವಿಧವು. ಮೋಕ್ಷಾರ್ಥವಾಗಿಮಾಡುವ ಉತ್ತರಕರ್ಮವೂ ಪ್ರಪತ್ತಿರೂಪವೆಂತಲೂ ಉಪಾಯಾಂತರವೆಂತಲೂ ದ್ವಿವಿಧವು. ಕೈಂಕರ್ಯರೂಪವೂ ಸಾತ್ವಿಕತ್ಯಾಗಯುಕ್ತವೆಂತಲೂ ಸಾತ್ವಿಕತ್ಯಾಗರಹಿತವೆಂತಲೂ ದ್ವಿವಿಧವು. ಸಾತ್ವಿಕತ್ಯಾಗಯುಕ್ತವೂಕೂಡ ಕೈಂಕರ್ಯಾರ್ಥವೆಂತಲೂ ಲೋಕಸಂಗ್ರಹ ವಿಧಿಪ್ರಯುಕ್ತವೆಂತಲೂ ದ್ವಿವಿಧವಾಗಿರುವುದು. ಇದರಲ್ಲಿ ಸಾತ್ವಿಕತ್ಯಾಗರಹಿತಾಂಶವು ಪ್ರಾಪ್ತಿವಿರೋಧಿಗಳಲ್ಲಿ ಅಡಗಿರುವುದು. ಪ್ರಾಪ್ತಿವಿರೋಧಿಯಾದ ಸರ್ವವೂ ಪಾಪಶಬ್ದಾರ್ಥವೆಂತಲೆ ತಿಳಿಯಬೇಕು. ಮುಂದಿನ ವಾಕ್ಯಗಳಿಂದ ಇವುಗಳ ರಿಪಹಾರ ಪ್ರಕಾರವನ್ನು ಕ್ರಮವಾಗಿ ತಿಳಿಯಬಹುದು.

ಉಪಾಯಾರಂಭದಲ್ಲಿ ದೇಶಕಾಲವೈಗುಣ್ಯಾದಿಗಳಿಂದ ಬುದ್ಧಿಪೂರ್ವಕವಾಗಿಬರುವಪಾಪಾಂಶವುವಿದ್ಯಾಮಾಹಾತ್ಮ್ಯದಿಂದಇವನಿಗಂಟಲಾರದು. ಅನಾಪದ್ದಶೆಯಲ್ಲಿ (ಆಪತ್ಕಾಲವಲ್ಲದದಶೆಯಲ್ಲಿ) ಮೃದುಪ್ರಕೃತಿಯಾದವನಿಗೆ ಬುದ್ಧಿಪೂರ್ವೋತ್ತರಾಘಗಳು ಬಂದರೂ ಅವು ತನ್ನ ಅಧಿಕಾರಾನುಗುಣವಾದ(ಪ್ರಾಯಶ್ಚಿತ್ತವೂಕೂಡ ಪ್ರಪನ್ನವಿಷಯದಲ್ಲಿ ಶಕ್ತನಾಗಿದ್ದರೆ ಪ್ರತಿಪ್ರದೋಕ್ತವೆಂತಲೆ ತಿಳಿಯಬೇಕು. ಅದು ದೇವತಾತರ ಸಂಬಂಧಿಯೆಂತಲೂ ಭಗವತ್ಸಂಬಂಧಿಯೆಂತಲೂ ಯರಡು ಬಗೆ

ಯಾಗಿರುವುದು. ಪ್ರಪನ್ನನಿಗೆ ಭಗವದ್ವಿಷಯವಾದ ಪ್ರಾಯಶ್ಚಿತ್ತ ವೆಂತಲೆ ತಿಳಿಯಬೇಕು ) ಪ್ರಾಯಶ್ಚಿತ್ತ ವಿಶೇಷದಿಂದಲಾದರೂ, ಕ ಠಿನಪ್ರಕೃತಿಯಾದವನಿಗೆ ಅವು ಪ್ರಾಪ್ತವಾದರೆ ಶಿಕ್ಷಾರ್ಥವಾದ ಲಘು ದಂಡನಾದಿಗಳಿಂದಲಾದರೂ ತೀರುವುವು. ಪ್ರಪನ್ನನಿಗೆ ಅಭ್ಯುಪಗತ ಪ್ರಾರಬ್ಧಕರ್ಮದಲ್ಲಿ ಇವನ ಇಚ್ಛಾವಿಷಯವಾದ ಕಾಲದೊಳಗೆಫಲಪ್ರ ದಾನವನ್ನು ಮಾಡುವುದಕ್ಕಾಗಿ ಪರಮಾತ್ಮನಿಂದ ನಿಮಿತ್ತೀಕರಿಸಲ್ಪ ಟ್ಟ ಪುಣ್ಯಪಾಪಗಳು ಆಯಾಕರ್ಮಗಳ ಅನುಭವದಿಂದಲೂ ಆಪುಣ್ಯಪಾ ಪಗಳುಕೂಡ ನಾಶವಾಗಬೇಕೆಂಬದಾಗಿ ಸಂಕಲ್ಪಿಸಿ ಮಾಡಲ್ಪಡುವವು ನಃ ಪ್ರಪತ್ತ್ಯಾದಿಗಳಾದ ಅವಾಂತರಪ್ರಾಯಶ್ಚಿತ್ತಗಳಿಂದಲೂ ನಶಿಸಿ ಹೋಗುವುವು.ಅನಂತರಜನ್ಮಾದಿಗಳಲ್ಲಿ ಅನುಭಾವ್ಯವಾದ ಅನಭ್ಯುಪಗ ತಪ್ರಾರಬ್ಧಾಂಶವೂ ಉಪಾಯಮಾಹಾತ್ಮ್ಯದಿಂದನಾಶವನ್ನುಹೊಂದು ವುದು. ಫಲಾಂತರಾರ್ಥವಾಗಿ ಮಾಡಲ್ಪಡುವ ಬುದ್ಧಿಪೂರ್ವೋತ್ತರ ಪುಣ್ಯಕರ್ಮಗಳಲ್ಲಿ ಪ್ರಬಲ ಪ್ರಾರಬ್ಧಗಳಾದ ಪುಣ್ಯಪಾಪಗಳಿಂದ ಕಟ್ಟ ಲ್ಪಡದ ಅಂಶವೂ ( ಎಂದರೆ ಮೋಕ್ಷಕ್ಕೆ ಪ್ರತಿಬಂಧಕವಲ್ಲದ ಅಂಶ ವೂ ) ಉಪಾಸಕನಿಗೆ ವಿದ್ಯಾನಿಷ್ಪತ್ತಿಗೆ ಕಾರಣವಾದ ಪೂರ್ವೋತ್ತರ ಪುಣ್ಯಾಂಶವೂ ಆವಾಗಲೆ ಫಲಪ್ರದಾನದಿಂದ ನಾಶವನ್ನು ಹೊಂದು ವುದು.ವಿದ್ಯಾನುಪಯುಕ್ತವಾದ ಬುದ್ಧಿಪೂರ್ವೋತ್ತರ ಪುಣ್ಯಗಳಲ್ಲಿಫಲ ಪ್ರದಗಳಲ್ಲದವುಗಳೂ ವಿದ್ಯೋಪಯುಕ್ತ ಪೂರ್ವೋತ್ತರ ಪುಣ್ಯಗಳಲ್ಲಿ ಅನುಕೂಲಪ್ರತಿಕೂಲಗಳಾದ ಪ್ರಬಲಕರ್ಮಾಂತರಫಲಗಳಿಂದಅವಕಾಶ ವನ್ನುಹೊಂದದೆಇರುವುದರಿಂದ(ವಿದ್ಯೋತ್ಪತ್ತಿಗಾಗಿಈಗಕರ್ಮಾನುಷ್ಠಾ ನವನ್ನು ಮಾಡಿದರೂ ಜನ್ಮಾಂತರಗಳಲ್ಲಿ ಅನುಷ್ಠಿಸಲ್ಪಡುವ ಪುಣ್ಯಗ ಳಿಂದಲೆ ವಿದ್ಯಾಸಿದ್ಧಿಯಾಗುವುದರಿಂದಲೂ ಈಗ ಅದಕ್ಕಾಗಿ ಅನುಷ್ಠಿ ಸಲ್ಪಡುವಪುಣ್ಯಗಳ ಫಲಸಿದ್ಧಿಗೆ ಅವಕಾಶವಿಲ್ಲವಾದುದರಿಂದಲೂಅವುನಿ ಷ್ಫಲಗಳಾಗುವುವೆಂದರ್ಥವು)ಫಲಪ್ರದಾನವನ್ನು ಮಾಡುವುದಕ್ಕೆ ಯೋ ಗ್ಯಗಳಾಗದೆಅಧಿಕವಾಗಿರುವಂತವುಗಳೂಇವನ ಮರಣಕಾಲದಲ್ಲಿ ನಾಶವ ನ್ನು ಹೊಂದುವುವು. ಈಅರ್ಥವು "ಇತರಸ್ಯಾಪ್ಯೇವಮಸಂಶ್ಲೇಷಃಪಾ ತೇತು,, ಎಂಬೀ ಸೂತ್ರದಲ್ಲಿ ಅಭಿಪ್ರೇತವಾಗಿರುವುದು. ಭಗವತ್ಪ್ರೀ

ತಿಮಾತ್ರವನ್ನೇ ಫಲವನ್ನಾಗಿ ಉದ್ದೇಶಿಸಿ (ಸಾತ್ವಿಕತ್ಯಾಗಪೂರ್ವಕವಾಗಿ) ಅನುಷ್ಠಿಸಲ್ಪಡುವ ಕೇವಲ ಕೈಂಕರ್ಯರೂಪಗಳಾದ ಸುಕೃತಗಳು ಆವಾಗಲೆ ಭಗವತ್ಪ್ರೀತಿರೂಪವಾದ ಫಲವನ್ನು ಕೊಡುವು ವಾದುದರಿಂದ ದತ್ತಫಲಗಳಾದ ಅವುಗಳಿಗೆ ಅಶ್ಲೇಷ (ಅಸಂಬಂಧ) ವನ್ನು ಹೇಳಬೇಡವು. ಲೋಕಸಂಗ್ರಹಾರ್ಥವಾದ ವಿಧಿಯಿಂದ ಅನುಷ್ಠಿಸಲ್ಪಡುವ ತನ್ನ ಅಧಿಕಾರಕ್ಕೆ ಅವಿರುದ್ಧಗಳಾದ ನಿತ್ಯಕರ್ಮಗಳೂ ತನಿಗೆ ಆ ಪ್ರಕಾರವಾಗಿಯೆ ಭಗವದಾಜ್ಞಾಸಿದ್ಧಗಳಾಗಿರುವುವಾದುದರಿಂದ ಅವೂ ಇವನಿಗೆ ಕೇವಲ ಕೈಂಕರ್ಯಗಳಾಗುತ ಭಗವತ್ಪ್ರೀತಿಮಾತ್ರ ಪ್ರಯೋಜಕಗಳಾಗಿರುವುದರಿಂದ ದತ್ತಫಲಗಳಾಗಿಯೆ ಇರುವುವು. ಪೂರ್ವೋಕ್ತಸುಕೃತ ಕರ್ಮಗಳಲ್ಲಿ ಅಬುದ್ಧಿಪೂರ್ವಕವಾಗಿ ಸಾತ್ವಿಕತ್ಯಾಗವಿಲ್ಲದೆ ಅನುಷ್ಠಿಸಲ್ಪಟ್ಟವುಗಳುಂಟಾದರೆ ಅವೆಲ್ಲವೂ (ನಾನೇಕರ್ತಾ ಎಂಬ ಅಹಂಕಾರಯುಕ್ತವಾಗಿರುವುದರಿಂದ) ಪಾಪಸಮಾನಗಳಾಗಿ ಇಲ್ಲಿನ ಮೋಕ್ಷಯಿಷ್ಯಾಮಿ ಎಂಬ ಪ್ರತಿಜ್ಞೆಗೆ ವಿಷಯವಾಗುವುವು. ಬೇರೆ ಫಲಗಳಿಗಾಗಿ ಮಾಡಿರುವ ಬೇರೆಶರಣಾಗತಿಗಳೂ ಕೂಡ ಆಯಾಫಲಗಳನ್ನು ಕೊಟ್ಟು ನಾಶ ಹೊಂದುವುವು. ಮೋಕ್ಷಾರ್ಥವಾಗಿ ಪೂರ್ವದಲ್ಲನುಷ್ಠಿತವಾದ ಸಕೃತ್ಪ್ರಪದನದಿಂದಲೆ ಮೋಕ್ಷವು ಸಿದ್ಧವಾಗಿರುವುದರಿಂದ ಅದಕ್ಕಾಗಿ ಪುನಃಪ್ರಪತ್ತಿಯನ್ನು ಮಾಡಿದರೆ ಮಹಾವಿಶ್ವಾಸಕ್ಕೆ ಭಂಗವುಂಟಾಗುವುದರಿಂದ ಹಿಂದೆ ಅನುಷ್ಠಿಸಲ್ಪಟ್ಟ ಪ್ರಪತ್ತಿಯು ನಿಷ್ಫಲವಾಗುವುದು. ಅನೇಕಶರಣಾಗತಿಗಳು ಕೂಡ ಏಕಫಲಸಾಧನವಾಗಲಿ ಎಂಬ ಉದ್ದೇಶ್ಯದಿಂದ ಅನುಷ್ಠಿಸಲ್ಪಟ್ಟರೆ ಅವು ಕೂಡ ಉಪಾಯಾಂತರವನ್ನು ಅನುಷ್ಠಿಸಿದಂತೆಯೆ ಆಗುವುದು. ಯಾವಫಲಕ್ಕಾಗಿ ಮೊದಲು ಪ್ರಪತ್ತಿಯನ್ನು ಮಾಡಿರುತ್ತಾನೆಯೊ ಆ ದಕ್ಕಾಗಿಯೆ ಪುನಃ ಪ್ರಪತ್ತಿಯನ್ನು ಮಾಡಿದರೆ “ ಉಪಾಯಾನಾಮುಪಾಯತ್ವಸ್ವೀಕಾರೇಪ್ಯೇತದೇವಹಿ ” ಎಂಬೀ ಪ್ರಕಾರವಾಗಿ ಪ್ರಪದನರೂಪವಾದ ಪ್ರಾಯಶ್ಚಿತ್ತವನ್ನೆ ಇದರ ಪರಿಹಾರಾರ್ಥವಾಗಿ ಮಾಡಬೇಕೆಂದು ತಿಳಿಯಬೇಕು.

ಆದರೆ ಇಲ್ಲಿಸುಕೃತಗಳಾದಅಶ್ಲೇಷವಿನಾಶಶಬ್ದಗಳಿಗೆ ಅರ್ಥವ್ಯಾವದಿಲ್ಲಿ

ಎಂದರೆ ಅದಕ್ಕುತ್ತರವು. ವಿದ್ಯಾಮಾಹಾತ್ಮ್ಯದಿಂದ ಕರ್ಮಗಳಿಗೆ ವಿನಾಶವೆಂದರೆ ಈಶ್ವರನು ಇವುಗಳಿಗೆ ಪ್ರಾಪ್ತವಾದ ಫಲಪ್ರದಾನವನ್ನು ಮಾಡುವೆನೆಂಬ ಅಭಿಪ್ರಾಯವನ್ನು ಬಿಡುವಿಕೆಯು. ಅಶ್ಲೇಷವೆಂದರೆ ಈ ಆಶ್ರಿತವರ್ಗದಲ್ಲಿ ಇಂಥಾಕರ್ಮಫಲವನ್ನು ಕೊಡಬೇಕೆಂಬ ಸಂಕಲ್ಪವು ಹುಟ್ಟದೆ ಇರುವಿಕೆಯು. ಆದರೆ ಈ ರೀತಿಯಾಗಿ ಸರ್ವಕರ್ಮಗಳೂ ಕಳದುಹೋದಮೇಲೆ ಇವನ ಶತ್ರುಮಿತ್ರರಲ್ಲಿ ವಿನಿಯೋಗಿಸಲ್ಪಡುವ ಕರ್ಮಗಳ್ಯಾವವು? ಎಂದರೆ ಅಶ್ಲೇಷವಿನಾಶಗಳಿಗೆ ಅರ್ಹಗಳಾದವುಗಳೂ ಬುದ್ಧಿಪೂರ್ವೋತ್ತರ ಪುಣ್ಯಗಳಲ್ಲಿ ಕರ್ಮಾಂತರಫಲವನ್ನು ಅನುಭವಿಸುತಲಿರುವುದರಿಂದ ಯಾವಕರ್ಮಫಲಗಳು ಅನುಭವಿಸುವುದಕ್ಕೆ ಸಮಯವನ್ನು ಹೊಂದದೆ ಇರುವುವೊ ಅವುಗಳೂ ಇವನದ್ವೇಷಿಗಳಲ್ಲಿಯೂ ಇವನ ಮಿತ್ರರಲ್ಲಿಯೂ ಸಂಕ್ರಮಿಸುವುವು.

ಆದರೆ ಇಂಥಾ ಪುಣ್ಯಪಾಪಗಳನ್ನು ಉಪಾಯಾರಂಭದಲ್ಲಿಯೆ ಇವನ ಪ್ರಿಯಾಪ್ರಿಯ ವರ್ಗದಲ್ಲಿ ವಿನಿಯೋಗಿಸದೆ ಮರಣದಶೆವರೆಗೂ ನಿರೀಕ್ಷಿಸಬೇಕೂ? ಎಂದರೆ ಮೊದಲು ಇವನ ವಿಷಯದಲ್ಲಿ ಅನುಕೂಲನಾಗಿದ್ದುಕೊಂಡು ಅನಂತರದಲ್ಲಿ ಪ್ರತಿಕೂಲನಾಗಿದ್ದರೆ ಅಂತವನಲ್ಲಿ ಪುಣ್ಯಸಂಕ್ರಮಣವನ್ನು ಮಾಡದೇ ಇರುವುದಕ್ಕಾಗಿಯೂ ಮೊದಲು ಪ್ರತಿಕೂಲನಾಗಿ ಅನಂತರದಲ್ಲಿ ಅಪರಾಧಪರಿಹಾರವನ್ನು ಮಾಡಿಕೊಂಡು ಅನುಕೂಲನಾಗಿರುವವನ ವಿಷಯದಲ್ಲಿ ಪಾಪಾಂಶವನ್ನು ಸಂಬಂಧಿಸದೆ ಮಾಡುವುದಕ್ಕಾಗಿಯೂ ಇಷ್ಟುಕಾಲವಿಳಂಬವನ್ನು ಯೆದುರುನೋಡುವುದಲ್ಲದೆ ಬೇರೊಂದು ಕಾರಣವಿಲ್ಲವೆಂದರಿಯಬೇಕು. ಸ್ವರ್ಗಾದಿಲೋಕಗಳಿಗಾಗಿ ಮಾಡಲ್ಪಟ್ಟಿರುವ ಸುಕೃತವೂ ಮುಮುಕ್ಷುವಾದವನಿಗೆ ಪಾಪರೂಪವೇ ಆಗಿರುವುದರಿಂದ ಅದುಕೂಡ ಮುಮುಕ್ಷುವಾದ ಮಿತ್ರನಲ್ಲಿಸಂಕ್ರಮಿಸಲಾರದು. ಮುಮುಕ್ಷುವಲ್ಲದ ಸುಹೃತ್ತಿನಲ್ಲಿ ಪಾಪಪುಣ್ಯಗಳು ಸಂಕ್ರಮಿಸುವುವೆಂದು ಸಿದ್ಧವಾಗಿರುವುದರಿಂದ ಮುಮುಕ್ಷುವಾದ ಸುಹೃತ್ತಿನಲ್ಲಿ ಪುಣ್ಯಪಾಪ ಸಂಕ್ರಮಣವಿಲ್ಲವೆಂದರಿಯಬೇಕು. ಯಾರೋಒಬ್ಬರು ಮಾಡಿರುವ ಪುಣ್ಯಪಾಪಗಳಿಗೆ ಯಾವನೋಒಬ್ಬನಲ್ಲಿ ಸಂಕ್ರಮವನ್ನು ಹೇಳಿದರೆ ಅತಿಪ್ರಸಂಗವಿಲ್ಲವೊ? (ಎಂದ

ರೆ ಯಾವನು ಪುಣ್ಯಪಾಪಗಳನ್ನು ಮಾಡುತ್ತಾನೆಯೊ ಅವನಿಗೆಪು ಣ್ಯಪಾಪಫಲಗಳ ಸಂಬಂಧವೆಂಬೀ ವ್ಯವಸ್ಥೆ ಭಂಗವಿಲ್ಲವೊ ? ) ಎಂದರೆ ಆದೂ ಮುಮುಕ್ಷುವಿಷಯದಲ್ಲಿ ಅನುಕೂಲರಿಗೂ ಪ್ರತಿಕೂಲರಿಗೂ ಉಪಚಾರಾಪಚಾರ ರೂಪಗಳಾದ ಕರ್ಮಮೂಲಕವಾಗಿ ಪ್ರಾಪ್ತವಾಗುವುದರಿಂದ ವ್ಯವಸ್ಥಾಭಂಗವಿಲ್ಲವು. ಆದರೂ ಬೇರೊಬ್ಬನಿಂದಮಾಡಲ್ಪಟ್ಟ ಕರ್ಮಗಳಿಗೆ ಬೇರೆ ಒಬ್ಬನಲ್ಲಿ ಸಂಕ್ರಮಣವೆಂಬುವುದು ಯಾವದು ? ಎಂದರೆ ಪಾಪಪುಣ್ಯಗಳನ್ನು ಮಾಡಿದವನವಿಷಯದಲ್ಲಿ ಈಶ್ವರನಿಗುಂಟಾಗುವನಿಗ್ರಹಾನುಗ್ರಹಗಳನ್ನು ಇವನ ಶತ್ರುಮಿತ್ರರಲ್ಲುಂಟಾಗುವಂತೆಮಾಡುವಿಕೆಯೇ. ಆದುದರಿಂದಲೆಯಲ್ಲವೆ ಉದಾಸೀನರಲ್ಲಿ ಸುಕೃತದುಷ್ಕೃತಗಳಿಗೆ ಸಂಕಮವಿಲ್ಲವೆನ್ನುವುದು. ಇದರಿಂದ ಕೃತಕೃತ್ಯನಾದ ಅಧಿಕಾರಿಗೆ ಯಾವದಾದರೊಂದು ಉಪಾಯದಿಂದ ಸರ್ವಪಾಪಗಳನ್ನು ಬಿಡಿಸಿ ವೈಕುಂಠಲೋಕನಿವಾಸಿಗಳಾದವರಿಂದ ತರಲ್ಪಟ್ಟವುಹಾರಥದಿಂದ ತನ್ನನ್ನುಹೊಂದುವಂತೆ ಮಾಡಿಕೊಂಡು ಸರ್ವದೇಶಸರ್ವಕಾಲಗಳಿಗೂ ಉಚಿತಗಳಾದ ಕೈಂಕರ್ಯಪ್ರದಾನವನ್ನು ಶ್ರೀಯಃಪತಿಯು ಕೊಡುವನೆಂದು ಹೇಳಿದಂತೆ ಆಯಿತು. ಇಲ್ಲಿನ ಮೋಕ್ಷಯಿಷ್ಯಾಮಿ ಎಂಬಅನಿಷ್ಟನಿವೃತ್ತಿಯು ಇಷ್ಟಪ್ರಾಪ್ತಿಯಲ್ಲಿ ಪರ್ಯವಸಾನವನ್ನು ಹೊಂದುವದರಿಂದ ಮೋಕ್ಷಯಿಷ್ಯಾಮಿ ಎಂಬುವುದಕ್ಕೆ ಅನಿಷ್ಟ ನಿವೃತ್ತಿಪೂರ್ವಕವಾದ ಇಷ್ಟಪ್ರಾಪ್ತಿಯಲ್ಲಿಯೆ ಅರ್ಥವೆಂದರಿಯಬೇಕು.

ಈ ಪ್ರಕಾರದಿಂದ " ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ " ಎಂಬದಾಗಿ ಕಾರ್ಯಕಾರಣ ರೂಪವಾಗಿರುವ ಅವಿದ್ಯಾಕರ್ಮಾದಿಗಳೆಂಬ ಸಮಸ್ತ ಪ್ರತಿಬಂಧಕ ನಿವೃತ್ತಿಯನ್ನು ಹೇಳುವುದರಿಂದಲೆ ಪರಿಪೂರ್ಣವಾದ ಭಗವದನುಭವಾವಿರ್ಭಾವವೂ ಹೇಳಲ್ಪಟ್ಟತೆಂದು ತಿಳಿಯಬೇಕು. ಈ ಅರ್ಥದಲ್ಲಿ " ಯಥಾನಕ್ರಿಯತೆ ಜ್ಯೋತ್ಸ್ನಾಮಲಪ್ರಕ್ಷಾಳನಾನ್ಮಣೇಃ । ದೋಷಪ್ರಹಾಣಾನ್ನಜ್ಞಾನಮಾತ್ಮನಃ ಕ್ರಿಯತೆ ತಥಾ ॥ ಯಥೋದಪಾನಕರಣಾತ್ಕ್ರಿಯತೆನಜಲಾಂಬರಂ । ಸದೇವನೀಯತೆವ್ಯಕ್ತಿಮಸತಸ್ಸಂಭವಃಕುತಃ ॥ ತಥಾಹೇಯಗುಣಧ್ವಂಸಾದವ

ಬೋಧಾದಯೋಗುಣಾಃ। ಪ್ರಕಾಶ್ಯಂತೇನಜನ್ಯಂತೇನಿತ್ಯಾಏವಾತ್ಮನೋ ಹಿತೇ ,, ಎಂಬದಾಗಿ ಶ್ರೀಶೌನಕರು ಕೂಡ ಪ್ರಮಾಣ ವಚನಗಳನ್ನು ಹೇಳುತ್ತಾರೆ. ರತ್ನಕ್ಕೆ ಮೇಲೆಮುಚ್ಚಿಕೊಂಡಿರುವ ಮಾಲಿನ್ಯವನ್ನು ತೊಳದರೆ ಒಳಗೆ ಇರುವ ಪ್ರಭೆಯು ಹೇಗಾದರೆ ತಾನಾಗಿಯೆ ಪ್ರಕಾಶಿ ಸುವುದೊ ಅದರಂತೆ ಅವಿದ್ಯಾ ಕರ್ಮವಾಸನಾದಿಗಳೆಂಬ ದೋಷನಿವೃತ್ತಿ ಯೋ ಮಾಡಲ್ಪಡುವುದಲ್ಲದೆ ಜ್ಞಾನವು ಸ್ವಭಾವ ಸಿದ್ಧವಾಗಿರುವುದರಿಂದ ಅದು ಮಾಡಲ್ಪಡುವುದಿಲ್ಲವು. ಭಾವಿಗಳ ವಿಷಯದಲ್ಲಿ ಕೂಪಖನನ ಮಾತ್ರವೇ ಮಾಡಲ್ಪಡುವುದಲ್ಲದೆ ಅದರಲ್ಲಿ ಜಲವೂ ಆಕಾಶವೂ ಮಾ ಡಲ್ಪಡುವುದೋ ? ಸ್ವತಸಿದ್ಧವಾಗಿರುವ ಜಲವೂ ಆಕಾಶವೂ ಮಾ ಡಲ್ಪಡಲಾರದಷ್ಟೆ, ಇರುವಂಥಾ ಜಲಾದಿಗಳಿಗೆ ಅಭಿವ್ಯಕ್ತಿಯಲ್ಲದೆ ಇ ಲ್ಲದವಸ್ತುವಿಗೆ ಉತ್ಪತ್ತಿಯನ್ನು ಯೆಲ್ಲಿಯೂ ಕಾಣಲಿಲ್ಲವು. ಈ ಪ್ರ ಕಾರವಾಗಿಯೇ ಆತ್ಮವಿಷಯದಲ್ಲಿ ಅವಿದ್ಯಾದಿಗಳ ನಿರಾಸಮಾತ್ರವೆ ಮಾಡಲ್ಪಡುವುದಲ್ಲದೆ ಜ್ಞಾನಾದಿ ಗುಣಗಳು ಪೂರ್ವಸಿದ್ಧಗಳಾಗಿರುವುದ ರಿಂದಲೆ ಪ್ರಕಾಶಿಸಲ್ಪಡುವುವು; ಹೊಸದಾಗಿ ಉಂಟುಮಾಲ್ಪಡಲಾರವು. ಅಂಥಾಜ್ಞಾನಾದಿ ಗುಣಗಳು ಆತ್ಮನಿಗೆ ನಿತ್ಯಗಳಾಗಿಯೇಅಲ್ಲವೇ ಇರುವು ವೆಂದರಿಯಬೇಕು. ಆದರೂ ಜ್ಞಾನವಿಕಾಸಾದಿಗಳು ಆಗಂತುಕಗಳಾಗಿರು ವುದರಿಂದ ಇರುವಂತವುಗಳೇ ಪ್ರಕಾಶಿಸಲ್ಪಡುವುವೆಂದು ಹೇಳಬಹು ದೊ ? ಎಂದರೆ ಜ್ಞಾನದ್ರವ್ಯವೂ ಇದರ ಸರ್ವವಿಷಯ ವಿಕಾಸಕ್ಕೆ ಸ್ವ ರೂಪಯೋಗ್ಯತಾ ರೂಪವಾದ ಶಕ್ತಿಯೂ (ವಿಷಯ ಪ್ರಕಾಶನ ಶಕ್ತಿ ಯೂ) ನಿತ್ಯಗಳಾಗಿರುವುದರಿಂದ ಅವುಗಳಲ್ಲಿ ಆವಿರ್ಭಾವ ಶಬ್ದವು ಮುಖ್ಯವೆಂದರಿಯಬೇಕು. ಆದರೆ ಸರ್ವವಿಷಯ ವಿಕಾಸವೂ ದುಃಖನಿ ವೃತ್ತ್ಯಾದಿಗಳೂ ಮುಕ್ತಿದಶೆಯಲ್ಲುಂಟಾಗುವ “ ಸಂಕಲ್ಪಾದೇವಾ ಸ್ಯ ,, ಎಂಬ ಕೈಂಕರ್ಯ ವಿಷಯವಾದ ಸಂಕಲ್ಪವೂ ಕೈಂಕರ್ಯಗಳೂ ಆಗಂತುಕಗಳಾಗಿರುವಾಗ ಇವುಗಳಲ್ಲಿ “ ಆವಿಸ್ಸ್ಯಾತ್ಮಮ ಸಹಜ ಕೈಂಕ ರ್ಯವಿಧಯಃ ,, ಎಂಬದಾಗಿ ಶ್ರೀಪರಾಶರ ಭಟ್ಟರು ಆವಿರ್ಭಾವ ಶಬ್ದ ಪ್ರಯೋಗವನ್ನು ಮಾಡಿರುವುದು ಉಚಿತವೋ ? ಎಂದರೆ ಸರ್ವಬಂಧ ವಿನಿರ್ಮುಕ್ತವಾದ ಸ್ವರೂಪವೇ ಉಪಾಧಿಯಾಗಿರುವುದರಿಂದ ಕಾಲತತ್ವ

ವಿರುವವರೆಗೂ ಸಂಭಾವಿತವೆಂದು ನೆನಸಿ ನಿತ್ಯತುಲ್ಯತ್ವೇನ ಅಲ್ಲಿ ಆವಿರ್ಭಾವ ಶಬ್ದವು ಔಪಚಾರಿಕವೆಂದು ತಿಳಿಯಬೇಕು.

ಆದರೂ ಸರ್ವಪಾಪನಿವೃತ್ತಿಯಿಂದ ಮೋಕ್ಷವನ್ನು ಹೊಂದದೆ ಕೆಲವರು ಭಗವತ್ಪ್ರಾಪ್ತಿಗಿಂತಲೂ ಅನ್ಯವಾಗಿರುವ ಸ್ವಾತ್ಮಮಾತ್ರಾನುಭವರೂಪವಾದ ಕೈವಲ್ಯವನ್ನು ಹೊಂದಲಿಲ್ಲವೋ ? ಆದುದರಿಂದ ಸರ್ವಪಾಪ ವಿಮೋಕ್ಷಣ ರೂಪವಾದ ಅನಿಷ್ಟ ನಿವೃತ್ತಿಯಿಂದಲೆ ಭಗವತ್ಪ್ರಾಪ್ತಿ ರೂಪವಾದ ಇಷ್ಟಪ್ರಾಪ್ತಿಯು ಹೇಗೆ ಸಿದ್ಧಿಸುವುದು ? ಎಂದರೆ ಸರ್ವಪಾಪಗಳೂ ನಿವೃತ್ತವಾದರೆ ಸ್ವತಃಪ್ರಾಪ್ತವಾದ ಭಗವದನುಭವವನ್ನು ಹೊಂದದೆ ಇರುವುದಕ್ಕೆ ಕಾರಣವಿಲ್ಲವಾದುದರಿಂದ ಆ ದಶೆಯಲ್ಲಿ ಭಗವದನುಭವವಿಲ್ಲದ ಆತ್ಮಮಾತ್ರಾನುಭವವು ಘಟಿಸಲಾರದು. ಆದುದರಿಂದ ಆ ಅವಸ್ಥೆಯಲ್ಲಿ ಐಶ್ವರ್ಯವೂ ಜರಾಮರಣಾದಿ ದುಃಖಗಳೂ ಬರುವುದಕ್ಕೆ ಕಾರಣಗಳಾದ ಕರ್ಮಗಳು ನಾಶಹೊಂದಿ ಭಗವದನುಭವಕ್ಕೆ ಪ್ರತಿಬಂಧಕಗಳಾದ ಕರ್ಮಗಳು ನಾಶವನ್ನು ಹೊಂದಲಿಲ್ಲವೆಂದರಿಯಬೇಕು. ಆದುದರಿಂದಲೆ ಕೇವಲರಿಗೆ ಸರ್ವಕರ್ಮ ನಿವೃತ್ತಿಯಾಗಲಿಲ್ಲವು. (ಈ ವಿಷಯಗಳನ್ನು ಈಗೀತಾ ೮ ನೇ ಅಧ್ಯಾಯದ ೨೩ನೇ ಶ್ಲೋಕದಲ್ಲಿ ವಿಸ್ತಾರವಾಗಿ ನೋಡಬಹುದು) ಇದಕ್ಕನುಗುಣವಾಗಿ " ಮಾಮೇವೈಷ್ಯಸಿ ,, ಎಂಬದಾಗಿ ಹಿಂದಿನ ಶ್ಲೋಕದಲ್ಲಿ ಭಗವತ್ಪ್ರಾಪ್ತಿ ರೂಪವಾದ ಇಷ್ಟಪ್ರಾಪ್ತಿಯನ್ನು ಪ್ರತಿಪಾದಿಸಿರುವನು. (ಇನ್ನೂ ಈ ವಿಷಯದಲ್ಲಿ ವಿಸ್ತಾರವಾಗಿ ತಿಳಿಯಬೇಕಾದ ಅಂಶಗಳನ್ನು ನ್ಯಾಸಶಾಸ್ತ್ರದಲ್ಲಿಯೇ ತಿಳಿಯಬೇಕು.)

— ಮೂ॥ ಮಾಶುಚಃ —

ಈ ಪ್ರಕಾರವಾಗಿ ಪ್ರಪನ್ನನಿಗೆ ಸರ್ವಪಾಪಗಳೂ ನಿವೃತ್ತವಾಗುವುದರಿಂದ ಪಾಪಗಳಿಗೆ ಭಯಪಟ್ಟು ಸಂತಾಪ ಪಡಬೇಡವೆಂಬದಾಗಿ ಶ್ರುತಿಯು ಹೇಳಿರುವುದರಿಂದಲೂ ದುಷ್ಕರಗಳಾದ ಉಪಾಯಾಂತರಗಳಿಂದ ಶ್ರಮಪಡಬೇಕಾದದ್ದು ಅನಾವಶ್ಯಕ ವಾಗಿರುವುದರಿಂದಲೂ ಅಕಿಂಚನಾಧಿಕಾರಿಗೆ ವಿಲಕ್ಷಣವಾದ ಉಪಾಯ ವಿಶೇಷವು ಸಿದ್ಧಿಸುವುದರಿಂದಲೂ ಭರನ್ಯಾಸವನ್ನು ಮಾಡಿದವನಿಗೆ ಆ ವಿಷಯದಲ್ಲಿ ಮಾಡ

ತಕ್ಕ ಬೇರೊಂದು ಕಾರ್ಯವಿಲ್ಲವಾದುದರಿಂದಲೂ ಪ್ರಪತ್ತ್ಯನುಷ್ಠಾನಾನಂತರದಲ್ಲಿ ವಿವೇಕಿಯಾದವನಿಗೆ ಬುದ್ಧಿಪೂರ್ವಾಪರಾಧಗಳು ಪ್ರಾಪ್ತವಾಗಲಾರದಾದುದರಿಂದಲೂ ಒಂದುವೇಳೆ ಕಾಲದೇಶ ವೈಗುಣ್ಯಾದಿಗಳಿಂದ ಅವು ಪ್ರಾಪ್ತವಾದರೂ ಉಚಿತವಾದ ಪುನಃ ಪ್ರಪತ್ತ್ಯಾದಿ ಪ್ರಾಯಶ್ಚಿತ್ತಗಳಿಂದ ಉಪಶಾಂತಿ ಯುಂಟಾಗುವುದರಿಂದಲೂ ನಿನ್ನನ್ನು ರಕ್ಷಿಸದೆ ಹೋದರೆ ಶಿಷ್ಟಜನರಿಂದ ನಿಂದೆಯೂ ಅಪಕೀರ್ತಿಯೂ ಗುಣಗಳಿಗೆ ಹಾನಿಯೂ “ ಅಭಯಂ ಸರ್ವಭೂತೇಭ್ಯೋದದಾಮ್ಯೇತದ್ವ್ರತಂಮಮ ,, ಎಂಬ ನನ್ನ ವ್ರತಕ್ಕೆ ಭಂಗವೂ ಬರುವುದರಿಂದಲೂ ಭರಸ್ವೀಕಾರವನ್ನು ಮಾಡಿರುವ ನಾನು ಅನಾದಿರಕ್ಷಣನ್ಯಾಯದಿಂದ ನನಿಗೋಸ್ಕರವಾಗಿಯೇ ನಿನ್ನನ್ನುರಕ್ಷಿಸಬೇಕೆಂದುನೆನೆಸಿರುವುದರಿಂದಲೂ ಇನ್ನುಮುಂದೆ ನಿನಿಗೆ ಹರ್ಷಸ್ಥಾನವಾಗಿರುವಲ್ಲಿ ಶೋಕಪಡುವುದಕ್ಕೆ ಪ್ರಾಪ್ತಿಯಿಲ್ಲವೆಂದು “ ಮಾಶುಚಃ ,, ಎಂಬ ವಾಕ್ಯದಿಂದ ಶ್ರೀಪಾರ್ಥಸಾರಥಿಯು ಅರ್ಜುನನನ್ನು ಕುರಿತು ಹೇಳುತ್ತಾನೆ.

ಮೊದಲು ನಿನಿಗುಂಟಾಗಿರುವ ಶೋಕವು ಅಧಿಕಾರ ಕೋಟಿಯಲ್ಲಿ ಸೇರಿರುವುದರಿಂದ ಗುಣಕೋಟಿಯಲ್ಲಿಯೆ ಸೇರುವುದು. ಈಗ ಸರ್ವಜ್ಞನಾಗಿಯೂ ಪರಮ ಕಾರುಣಿಕನಾಗಿಯೂ ಸತ್ಯ ಸಂಕಲ್ಪನಾಗಿಯೂ ಇರುವ ನಾನು ನಿನ್ನ ರಕ್ಷಣಭರವನ್ನು ಸ್ವೀಕರಿಸಿರುವಾಗ ಪುನಶ್ಚ ನೀನು ಶೋಕಪಟ್ಟದ್ದೇ ಆದರೆ ನೀನು ಮಾಡಿರುವ ಶರಣಾಗತಿಯು ಅನಭಿಜ್ಞ ಕೃತ್ಯವಾಗಿಯೇ ಆಗುವುದು. ಇಲ್ಲಿ ಪ್ರಕೃತವಾದಶೋಕವು ಬಂಧುವಧಾದಿಗಳನ್ನೇ ನಿಮಿತ್ತವಾಗಿವುಳ್ಳ ಹಳೆ ಶೋಕವಲ್ಲವು. ಅವೆಲ್ಲವೂ “ ಅಶೋಚ್ಯಾನನ್ವಶೋಚಸ್ತ್ವಂ-ನತ್ವಂಶೋಚಿತು ಮರ್ಹಸಿ ,, ಇತ್ಯಾದಿ ಉಪದೇಶಗಳಿಂದ ಹಿಂದೆಯೇ ನಿವರ್ತಿಸಲ್ಪಟ್ಟಿರುವುವು. ಆದರೆ ಇಲ್ಲಿ ಪ್ರಕೃತವಾದ ಶೋಕವು ಯಾವದೆಂದರೆ ಅದನ್ನು ವಿವರಿಸುವೆನು. ಹಿಂದೆ ಉಪದೇಶಿಸಲ್ಪಟ್ಟ ಕರ್ಮಯೋಗಾದಿಗಳು ಅನುಷ್ಠಿಸಲಿಕ್ಕೆ ಅಶಕ್ಯಗಳಾಗಿರುವುದರಿಂದಲೂ ಅವುಗಳ ವಿರೋಧಿವರ್ಗವು ಅಪಾರವಾಗಿರುವುದರಿಂದಲೂ ಫಲಪ್ರಾಪ್ತಿಗೆ ವಿಳಂಬ ವುಂಟಾಗುವುದರಿಂದಲೂ ಇಲ್ಲಿ ಅರ್ಜುನನಿಗೆ ಶೋಕವುಂಟಾಯಿತು. ಅದನ್ನು ನು

ಕರವಾಗಿಯೂ ಸಕೃತ್ಕರ್ತವ್ಯವಾಗಿಯೂ ಫಲವಿಳಂಬರಹಿತವಾಗಿಯೂ ಇರುವ ಉಪಾಯ ವಿಶೇಷವನ್ನು ಉಪದೇಶಿಸಿ ನಿವರ್ತಿಸಿದನು ಪರಮ ಪುರುಷನಾದ ಶ್ರೀಪಾರ್ಥಸಾರಥಿಯು ಯೆಂದರಿಯಬೇಕು. ಇದರಿಂದ ಶೋಕವಿಶೇಷದಿಂದ ಕೂಡಿರುವನು ಪ್ರಪತ್ತ್ಯಧಿಕಾರಿಯೆಂಬದಾಗಿ ಸಿದ್ಧವಾಗುವುದರಿಂದ “ ಅಹಂಭೀತೋಽಸ್ಮಿ „ ಇತ್ಯಾದಿ ಪ್ರಕರಣಗಳಲ್ಲಿ ಹೇಳಿರುವ ಭಯವನ್ನು ಪ್ರಪತ್ತ್ಯಧಿಕಾರವನ್ನಾಗಿ ಹೇಳಬಹುದೋ ? ಎಂದರೆ ಹಿಂದೆ ಅಭಿಮತವು ಸಿದ್ಧಿಸದೆ ಇರುವ ಸ್ಥಿತಿಯನ್ನು ಕಂಡು ಶೋಕವೂ ಮುಂದೆ ಅಭಿಮತ ಸಿದ್ಧಿಗೆ ಪ್ರತಿ ಬಂಧಕಗಳಾದ ಪ್ರಬಲ ವಿರೋಧಿಗಳನ್ನು ನೋಡಿ ಭಯವೂ ವುಂಟಾಗುವುದರಿಂದ ಮುಮುಕ್ಷುವಾದವನಿಗೆ ಅನಿಷ್ಟ ನಿವೃತ್ತಿಯಲ್ಲಿಯೂ ಇಷ್ಟಪ್ರಾಪ್ತಿಯಲ್ಲಿಯೂ ಒಂದನ್ನು ಹೇಳಿದರೆ ಯೆರಡೂ ಸಿದ್ಧಿಸುವಂತೆ ಇಲ್ಲಿ ಶೋಕವನ್ನು ಅಧಿಕಾರವನ್ನಾಗಿ ಹೇಳಿದರೂ ಭಯವನ್ನು ಕೂಡ ಅಧಿಕಾರವನ್ನಾಗಿ ಹೇಳಿರುವಂತೆ ತಿಳಿಯಬೇಕು. ಇಲ್ಲಿಯೂ ಕೂಡ ಶರಣಾಗತಿ ಮಂತ್ರದಂತೆ ಮೂರು ಅವಾಂತರ ವಾಕ್ಯಗಳು ಏಕವಾಕ್ಯತೆಯನ್ನು ಹೊಂದಿರುವುವು. ಅಂಥಾವಾಕ್ಯಾರ್ಥಗಳ್ಯಾವವೆಂದರೆ? ಉಪಾಯಾಂತರಗಳಲ್ಲಿ ಅಧಿಕಾರವಿಲ್ಲದನೀನು ಸರ್ವಸುಲಭನಾಗಿಯೂ ಸತ್ಯಸಂಕಲ್ಪನಾಗಿಯೂ ಸರ್ವಫಲಪ್ರದನಾಗಿಯೂ ಆಶ್ರಿತರಕ್ಷಣಕ್ಕೆ ಪ್ರಧಾನವಾದ ಕಾರುಣ್ಯಾದಿಗುಣಗಳಿಂದ ಪರಿಷ್ಕೃತನಾಗಿಯೂ ಇರುವ ನನ್ನನ್ನೇ ಉಪಾಯವೆಂಬದಾಗಿ ಅಧ್ಯವಸಾಯವನ್ನು ಮಾಡಿ ಆನುಕೂಲ್ಯ ಸಂಕಲ್ಪಾದಿ ಪರಿಕರ ಪಂಚಕ ಯುಕ್ತವಾದ ಆತ್ಮರಕ್ಷಾಭರನ್ಯಾಸವನ್ನು ಮಾಡು. ಸರ್ವಶಕ್ತನಾಗಿಯೂ ಪರಮಕಾರುಣಿಕತ್ವವೇ ಮೊದಲಾದ ಗುಣಗಳಿಂದೊಪ್ಪಿದವನಾಗಿಯೂ ಇರುವ ನಾನೆ ನನ್ನಲ್ಲಿ ಭರಸಮರ್ಪಣವನ್ನು ಮಾಡಿರುವ ನಿನ್ನನ್ನು ಸರ್ವಪಾಪಗಳಿಂದಲೂ ಬಿಡಿಸುವೆನು. ಭರಸ್ವೀಕಾರವನ್ನು ಮಾಡಿರುವ ನಾನಿರುವಲ್ಲಿ ನೀನು ನಿರ್ಭರನಾಗಿಯೂ ಫಲಸಿದ್ಧಿಯಲ್ಲಿಸಂಶಯರಹಿತನಾಗಿಯೂಶೋಕಪಡದೆಸುಖವಾಗಿರು.ಇದು ಅನುವಾದಾರ್ಥವು. ಸರ್ವಪಾಪ ನಿವೃತ್ತಿಪೂರ್ವಕವಾಗಿಪರಮಾತ್ಮ ಪ್ರಾಪ್ತಿಯನ್ನು ಅಪೇಕ್ಷಿಸುವ ಅಕಿಂಚನಾಧಿಕಾರಿಯು ಅಂಥಾ ಭಗವಚ್ಛ

ಬ್ದವಾಚ್ಯನಾದ ಶ್ರೀಪಾರ್ಥಸಾರಥಿಯನ್ನೆ ಶರಣ ಹೊಂದಬೇಕೆಂಬ ದಾಗಿ ವಿಧಿಪಕ್ಷದಲ್ಲಿಯೂ ಅರ್ಥವನ್ನರಿಯಬೇಕು. (ಇಲ್ಲಿ ಇನ್ನೂ ಅನೇಕ ಸಂದರ್ಭಗಳು ಬರಿಯಬೇಕಾಗಿದ್ದರೂ ಅವುಗಳು ದುರ್ಗ್ರಹ ವಾಗಿಯೂ ರಹಸ್ಯ ತಮವಾಗಿಯೂ "ಮಂತ್ರಂಯತ್ನೇನಗೋಪ ಯೇತ್ ,, ಎಂಬುವುದಕ್ಕೆ ವಿಷಯವಾಗಿಯೂ ಇರುವುದರಿಂದ ಸ್ವಲ್ಪ ಮಟ್ಟಿಗೆ ಈ ಶ್ಲೋಕಾರ್ಥವನ್ನು ವ್ಯಕ್ತಪಡಿಸಿರುವೆನು. ಪ್ರಾಜ್ಞ ರು ಗುರುಮುಖವಾಗಿ ಇದರ ವಿಶೇಷಾರ್ಥಗಳನ್ನು ತಿಳಿದುಕೊಂಡು ಸ್ವಾಧಿಕಾರಾನುಗುಣವಾದ ಉಪಾಯಾನುಷ್ಠಾನದಿಂದ ಮೋಕ್ಷಾದಿಸಿ ದ್ಧಿಯನ್ನು ಹೊಂದಬಹುದು.) ಇದುವರೆಗೂ ಉಪನ್ಯಾಸ ಮಾಡಿರುವ ಅನ್ವಿಗಳ ಸುಖಬೋಧಕ್ಕಾಗಿ ಪದಾರ್ಥಗಳು ವಿವರಿಸಲ್ಪಡುವ್ವದು. ಸ ರ್ವಧರ್ಮಾ ಪರಿತ್ಯಜ್ಯ ಸ್ಥಿತಸ್ತ್ವಂ-ಇದುವರೆಗೂ ನಿನಗೆ ನಾನು ಹೇ ಳಿರುವ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನು ಯಥಾವ ತ್ತಾಗಿ ತಿಳಿಯುವುದಕ್ಕೂ ಅನುಷ್ಠಿಸುವುದಕ್ಕೂ ಶಕ್ತಿಇಲ್ಲವಾದುದ ರಿಂದ ಅವುಗಳನ್ನು ಸವಾಸನವಾಗಿಬಿಟ್ಟು ಶೋಕಪಡುತಲಿರುವ ನೀನು, ಮಾಮೇಕಂ-ಪ್ರಾಪ್ಯನಾಗಿಯೇ ಪ್ರಾಪಕನಾಗಿರುವ ನನ್ನನ್ನು,ಶರಣಂ ವ್ರಜ-ಆ ಭಕ್ತಿಸ್ಥಾನದಲ್ಲಿ ನಿಂತುಇದನ್ನು ಅನುಷ್ಠಿಸಿದರೆ ಪ್ರಾಪ್ತವಾ ಗುವ ಫಲವನ್ನುಕೊಡುವ ನಿರಪೇಕ್ಷರಕ್ಷಕನೆಂಬ ಅಧ್ಯವಸಾಯವನ್ನು ಮಾಡು, ಅಹಂ-ಅನಾದಿ ಕಾಲದಿಂದ ಸರ್ವಚೇತನರಲ್ಲಿಯೂ ಹಿತಪರನಾ ಗಿಯೂ ಈಗ ನೀನು ಅನುಷ್ಠಿಸಿರುವ ಪ್ರಪತ್ತಿಯಿಂದ ನಿನ್ನ ವಿಷಯ ದಲ್ಲುಂಟಾಗಿದ್ದ ನಿಗ್ರಹ ಸಂಕಲ್ಪವನ್ನು ಬಿಟ್ಟವನಾಗಿಯೂ ಒಬ್ಬನ ನ್ನು ರಕ್ಷಿಸುವುದಕ್ಕೆ ನಾನಪೇಕ್ಷಿಸಿದರೆ ಆ ವಿಷಯದಲ್ಲಿ ಯಾರುತಡೆ ಮಾಡಿದರೂ ಅದನ್ನು ಲಕ್ಷ್ಯವಿಡದ ಸರ್ವಶಕ್ತನಾದ ಪರಮ ಸ್ವಾ ತಂತ್ರ್ಯವುಳ್ಳ ನಾನು, ತ್ವಾ-ನನ್ನಲ್ಲಿ ಭರನ್ಯಾಸವನ್ನು ಮಾಡಿ ಫಲ ಕ್ಕಾಗಿ ಮೇಘವನ್ನೇ ನಿರೀಕ್ಷಿಸುತಲಿರುವ ಚಾತಕ ಪಕ್ಷಿಯಂತೆ ನನ್ನ ನ್ನೆ ಯೆದುರು ನೋಡುತಲಿರುವ ನಿನ್ನನ್ನು, ಸರ್ವಪಾಪೇಭ್ಯಃ - ನನ್ನ ಪ್ರಾಪ್ತಿಗೆ ವಿರೋಧಿಗಳಾದ ಸಮಸ್ತ ಪಾಪಗಳ ದಳೆಯಿಂದಲೂ, ಮೋ ಕ್ಷಯಿಷ್ಯಾಮಿ-ಬಿಡಿಸುವೆನು. ಮಾಶುಚಃ-ಶೋಚಿಸಬೇಡ, ಮೋಕ್ಷ ಕ್ಕೆ ಸಾಧನಗಳಾದ ಉಪಾಯಾಂತರಗಳಲ್ಲಿ ಅನ್ವಯ ಶೂನ್ಯನಾದ

ನೀನು ಶರಣಾಗತ ವತ್ಸಲತ್ವಾದಿ ಗುಣವಿಶಿಷ್ಟನಾದ ನನ್ನಲ್ಲಿ ಭರನ್ಯಾ ಸವನ್ನು ಮಾಡು ಸರ್ವಶಕ್ತಿತ್ವಾದಿ ಗುಣವಿಶಿಷ್ಟನಾದ ನಾನು ಸಮರ್ಪಿ ಸಲ್ಪಟ್ಟ ಆತ್ಮರಕ್ಷಾಭರವುಳ್ಳ ನಿನ್ನನ್ನು ಸಮಸ್ತ ಪ್ರತಿ ಬಂಧಕನಿವೃತ್ತಿ ಪೂರ್ವಕವಾದ ನನ್ನ ಪ್ರಾಪ್ತಿಯಿಂದ ಕೃತಾರ್ಥನನ್ನಾಗಿ ಮಾಡುವೆನು. ಇನ್ನು ಮುಂದೆ ಶೋಕಪಡಬೇಡವೆಂಬುವುದು ಈ ಶ್ಲೋಕದ ನಿಷ್ಕೃ ಷ್ಟವಾದ ತಾತ್ಪರ್ಯವು. ॥೬೬॥

( ತಾ ॥ ಚಂ ) "ಮನ್ಮನಾಭವ,, (೧೮ ॥೬೫) ಎಂಬಶ್ಲೋ ಕದಲ್ಲಿ ಸಕಲವಾದ ಕರ್ಮಯೋಗನಿಷ್ಠೆಗಳಿಗೂ ವಾಸ್ತವವಾದ ಅರ್ಥ ವು ಭಗವಚ್ಛರಣಾಗತಿ ಎಂಬದಾಗಿ ಹೇಳಿ ಕರ್ಮಯೋಗನಿಷ್ಠೆಯನ್ನು ಪೂರೈಸಿ ಈಶ್ಲೋಕದಲ್ಲಿ ಕರ್ಮಯೋಗನಿಷ್ಠೆಗೆ ವೇದಾಂತಗಳಲ್ಲಿ ಹೇಳಿ ರುವ ಫಲವು ಹೇಳಲ್ಪಡುವುದು ? (ಸರ್ವಧರ್ಮಾನಿತಿ ) ಎಂಬ ಶಂಕರಾ ಚಾರ್ಯರ ವ್ಯಾಖ್ಯಾನವು ಅಯುಕ್ತವಾದದ್ದು. ಈರೀತಿಯಾಗಿ ಹೇಳಿ ರುವುದು ("ಸರ್ವಾರ್ಥಾ ವಿಪರೀತಾಂಶ್ಚ ಬುದ್ಧಿಸ್ಸಾಪಾರ್ಥತಾಮಸೀ,, (೧೮॥೩೨)ಒಂದು ವಿಧವಾಗಿರುವ ಅರ್ಥಗಳನ್ನು ಬೇರೊಂದು ವಿಧವಾಗಿ ಗ್ರಹಿಸುವ ತಾಮಸಬುದ್ಧಿಯಸ್ವಭಾವಕ್ಕೆ ಉದಾಹರಣವಾಗಿರುವುದು. ಆಶ್ಲೋಕವುಕರ್ಮಯೋಗಾದಿನಿಷ್ಠೆಗಿಂತಲೂ ಬೇರೆಯಾದಭಕ್ತಿಯೋ ಗನಿಷ್ಠೆಯನ್ನು ಹೇಳಿತು.ಕರ್ಮಯೋಗನಿಷ್ಠೆಯ ತತ್ವಾರ್ಥವಾದ ಭಗ ವಚ್ಛರಣಾಗತಿಗೆ ವಾಚಕವಾದ ಶಬ್ದವು ಈ ಶ್ಲೋಕದಲ್ಲಿಯೇ ಕಾಣ ಲ್ಪಡುವುದು. ಆದುದರಿಂದ ಆನಿಷ್ಠೆಗೆ ಪೂರ್ವಶ್ಲೋಕದಲ್ಲಿಯೇ ಉಪ ಸಂಹಾರವಾಯಿತೆಂಬುವುದು ಅಸಂಗತವು. ಈ ಶ್ಲೋಕದಲ್ಲಿ " ಮಾ ಮೇಕಂಶರಣಂವ್ರಜ ,, ಎಂಬುವುದಕ್ಕೆ ಸಕಲ ವಸ್ತುಸ್ವರೂಪಿಯಾಗಿ ಯೂ ಸಮಷ್ಟಿಯಾಗಿಯೂ ಸಕಲವ್ಯಾಪಿಯಾಗಿಯೂ ಇರುವ ಈ ಶ್ವರನುನಾನೆ , ನನಗಿಂತಲೂ ಬೇರೊಂದು ವಸ್ತುವಿಲ್ಲವೆಂದು ನಿಶ್ಚಯಿ ಸಿಕೊಳ್ಳೆಂಬತಾತ್ಪರ್ಯಸಿದ್ಧಿಯಾಗುವಂತೆ ಮಾಡಿರುವಅರ್ಥವರ್ಣನವೂ ಅಸಂಗತವು. ಈ ಶಬ್ದವು ಈ ಅರ್ಥವನ್ನು ಅಭಿಧಾನವೃತ್ತಿಯಿಂದ ( ಶಬ್ದಶಕ್ತಿಯಿಂದ ) ಹೇಳುವುದಿಲ್ಲವು. ಅಭಿಧಾನ ವೃತ್ತಿಯಿಂದ ಇಲ್ಲದಿದ್ದರೂ ಲಕ್ಷಣಾವೃತ್ತಿಯಿಂದ ಈ ಅರ್ಥವನ್ನು ಹೇಳುವುದೆಂದರೆ

ಯಥಾಶ್ರುತವಾದ ಅರ್ಥದಲ್ಲಿ ಬಾಧೆಯಿಲ್ಲವಾದುದರಿಂದ ಲಕ್ಷಣಾಕಲ್ಪನವೂ ಉಚಿತವಲ್ಲವು. ನಾನು ನಿನ್ನನ್ನು ಸರ್ವಪಾಪಗಳ ದಶೆಯಿಂದಲೂ ಬಿಡುಗಡೆಮಾಡುವೆನೆಂಬ ಶಬ್ದಸ್ವಾರಸ್ಯವನ್ನು ನೋಡಿದರೆ ಒಬ್ಬನು ರಕ್ಷಕನೆಂತಲೂ ಒಬ್ಬನು ರಕ್ಷ್ಯನೆಂತಲೂ ಇರುವ ಭೇದನಿರ್ದೇಶಕ್ಕೆ ಹೇತುವಾಗಿಯೂಪರಸ್ಪರವಿರುದ್ಧಗಳಾಗಿಯೂಇರುವ ರಕ್ಷರಕ್ಷ್ಯಭಾವವು "ಸರ್ವಲೋಕಶರಣ್ಯಾಯ,, ಎಂಬ ಶ್ರೀಮದ್ರಾಮಾಯಣ ಶ್ಲೋಕದಲ್ಲಿಶ್ರೀರಾಮಚಂದ್ರಸ್ವಾಮಿಗೂಶ್ರೀವಿಭೀಷಣನಿಗೂ ತೋರುವಂತೆ ತೋರುವುದರಿಂದಲೂ ಇಲ್ಲಿ ಅಭೇದಬೋಧನವು ಆಗಲಾರದು. ಭೇದಬೋಧಕವಾದ ಅರ್ಥವನ್ನು ಮೇಲೆ ಮೇಲೆ ತಿಳಿಯಪಡಿಸುವ ವಚನಾಂತರಗಳೂ ಆಯಾಸ್ಥಲಗಳಲ್ಲಿ ನ್ಯಾಯಸಂಚಾರ ಪೂರ್ವಕವಾಗಿ ಸ್ಥಾಪಿತಗಳಾಗಿರುವುವು. ಇದಲ್ಲದೆ ' ಸರ್ವಧರ್ಮಾನ್ಪರಿತ್ಯಜ್ಯ , ಎಂಬದಾಗಿ ಸಕಲ ಕರ್ಮಗಳ ಸ್ವರೂಪತ್ಯಾಗವು ವಿಧಿಸಲ್ಪಡುವುದೆಂದು ಶಂಕರಭಾಷ್ಯದಲ್ಲಿ ಹೇಳಲ್ಪಟ್ಟಿರುವುದು. ಈವ್ಯಾಖ್ಯಾನವು ಸಾಕ್ಷಾದ್ಭಗವದಭಿಪ್ರಾಯವಿರುದ್ಧವಾಗಿಯೇ ಇರುವುದು. ಸನ್ಯಾಸದ ತತ್ವಸ್ವರೂಪವನ್ನು ಕೇಳಲುದ್ದೇಶಿಸಿ ಪ್ರಶ್ನೆಮಾಡಿದ ಅರ್ಜುನನಿಗೆ " ಕಾಮ್ಯಾನಾಂಕರ್ಮಣಾಂನ್ಯಾಸಂ ಸನ್ಯಾಸಂ ಕವಯೋವಿದುಃ । ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂವಿಚಕ್ಷಣಾಃ ,, ( ೧೮ ॥ ೨ ॥ ) ಎಂಬ ಪ್ರತ್ಯುತ್ತರ ಶ್ಲೋಕದಲ್ಲಿ ಸನ್ಯಾಸತ್ಯಾಗಶಬ್ದಗಳಿಗೆ ಸರ್ವಧರ್ಮಸ್ವರೂಪತ್ಯಾಗಕ್ಕೆ ವಿರುದ್ಧವಾಗಿ ಕಾಮ್ಯಧರ್ಮತ್ಯಾಗಪರವಾಗಿಯೂ ಸರ್ವಕರ್ಮಫಲತ್ಯಾಗ ಪರವಾಗಿಯೂ ಅರ್ಥವನ್ನು ಹೇಳಿ ಅಜ್ಞಾನದಿಂದ ಧರ್ಮಗಳನ್ನಾಚರಿಸದೆ ಬಿಡುವಿಕೆಯು ತಾಮಸತ್ಯಾಗವೆಂತಲೂ ಹೇಳಿದನು. ಸರ್ವಕರ್ಮಸ್ವರೂಪತ್ಯಾಗಾರ್ಥದ ನಿರಾಕರಣಕ್ಕೋಸ್ಕರ ವಾಗಿಯೇ ಈ ಅಧ್ಯಾಯಾರಂಭದಲ್ಲಿ ಸಾತ್ವಿಕತ್ಯಾಗವೂ ಹೇಳಲ್ಪಟ್ಟಿರುವುದು. ಕರ್ಮಾಧಿಕಾರವುಳ್ಳ ಇವರಿಗೇನೆ ಸಾತ್ವಿಕತ್ಯಾಗವೆಂತಲೂ ರಾಜಸತ್ಯಾಗವೆಂತಲೂ ತಾಮಸತ್ಯಾಗವೆಂತಲೂ ತ್ಯಾಗದಲ್ಲಿ ಭೇದವು ಹೇಳಲ್ಪಟ್ಟಿರುವುದು."ಅದರೆಬ್ರಹ್ಮಜ್ಞಾನಿಯಾಗಿಕರ್ಮಗಳನ್ನು ಬಿಟ್ಟವನಿಗೆ ಅಜ್ಞಾನಮೂಲವಾಗಿಯೂ ಕ್ಲೇಶಮೂಲವಾಗಿಯೂ ಇರುವ ತಾಮಸ

ತ್ಯಾಗವು ಸಂಭವಿಸಲಾರದು ; ಸಾತ್ವಿಕತ್ಯಾಗವೂಕೂಡ ಕರ್ಮಾಧಿಕಾ ರಿಗೇನೆ ಹೇಳಲ್ಪಟ್ಟಿದೆಂದು ಮೊದಲೆ ನಾವು ವ್ಯಾಖ್ಯಾನಮಾಡಿರುವೆ ,, ಎಂದರೆ ಇಲ್ಲಿ ತ್ಯಾಗಸ್ವರೂಪವು ಯೆಂಥಾದ್ದೆಂಬದಾಗಿ ಅರ್ಜುನನು ಸಾಮಾನ್ಯವಾಗಿ ಪ್ರಶ್ನೆಮಾಡಿರುವುದಕ್ಕೆ ಉತ್ತರವೂ ತ್ಯಾಗಸಾಮಾ ನ್ಯವಿಷಯವಾಗಿಯೆ ಇರುವುದು. ಕರ್ಮಾಧಿಕಾರಿ ಎಂತಲೂ ಜ್ಞಾನಾ ಧಿಕಾರಿ ಎಂತಲೂ ಭೇದವನ್ನಂಗೀಕರಿಸಿ ಅದರಿಂದ ಇಲ್ಲಿ ತ್ಯಾಗವಿಷ ಯವಾದ ಭೇದವನ್ನು ಹೇಳುವುದು ಉಚಿತವಲ್ಲವು. ಜ್ಞಾನಿಗಳಿಗೂ ಕೂಡ ನಿತ್ಯ ನೈಮಿತ್ತಿಕ ಕರ್ಮಸ್ವರೂಪತ್ಯಾಗವು ಉಚಿತವಲ್ಲವೆಂತಲೆ ಹಿಂದೆ ವಿವರಿಸಿರುವೆವು. “ ತ್ಯಜಧರ್ಮಮಧರ್ಮಂಚ-ತಸ್ಮಾತ್ತ್ವಮು ದ್ಧವೋತ್ಸೃಜ್ಯಚೋದನಾಂಪ್ರತಿಚೋದನಾಂ ,, ಇತ್ಯಾದಿ ಅನುಗೀ ತಾಶ್ರೀಮದ್ಭಾಗವತಾದಿಗ್ರಂಥಗಳಲ್ಲಿರುವ ವಚನಗಳಿಗೂಕೂಡ ಸಾತ್ವಿ ಕತ್ಯಾಗಪ್ರಕರಣದಲ್ಲಿ ಹೇಳಿರುವ ಅರ್ಥವನ್ನೇ ತಿಳಿಯಬೇಕು. ಮಾ ಮೇಕಂ ಎಂಬವಾಕ್ಯವು ನಿರ್ವಿಶೇಷಚಿನ್ಮಾತ್ರಾದ್ವೈತವನ್ನು ಬೋ ಧಿಸುವುದೆ ದರೆ ಇದನ್ನು ಕೇಳಿದ ಬಾಲರೂಕೂಡ ಪರಿಹಾಸ್ಯಮಾಡು ವರು. ಏಕಶಬ್ದಕ್ಕೆ ಶ್ರೀಮದ್ರಾಮಾನುಜ ಭಾಷ್ಯದಲ್ಲಿ ಹೇಳಿರುವ ಅರ್ಥವೆ ವಚನಸ್ವಾರಸ್ಯಕ್ಕೂ ಪೂರ್ವಾಪರ ಗ್ರಂಥಗಳಿಗೂ ಸಂಗತವಾ ಗಿರುವುದು. ಕಿಂಚ ಏಕಶಬ್ದವು ಅಭೇದವನ್ನೇಬೋಧಿಸುದೆಂಬ ನಿ ಯಮವೂ ಇಲ್ಲವು. ಭಿನ್ನವಸ್ತುವಿನಲ್ಲಿಯೂ ಏಕಶಬ್ದಪ್ರಯೋಗ ವುಂಟು. “ ಕ್ಷಮಂಮುಮುಚಾನೇನನ್ಯೈಕತ್ವಮನಯೋಸಹ ॥ ರಾ ಮಸುಗ್ರೀವಯೋರೈಕ್ಯಂದೇವ್ಯೇವಂಸಮಜಾಯತ ,, ಇತ್ಯಾದಿವಚ ನಗಳಲ್ಲಿ ಏಕಶಬ್ದಕ್ಕೆ ಭೇದಬೋಧನವೂ ಸ್ಫುಟವಾಗಿ ಪ್ರತಿಪಾದಿಸಲ್ಪ ಟ್ಟಿರುವುದು. ‘ಸರ್ವಧರ್ಮಾನ್ಪರಿತ್ಯಜ್ಯ , ಎಂಬುವುದಕ್ಕೆ ಭಕ್ತಿವಿ ರೋಧಿ ಧರ್ಮತ್ಯಾಗವು ಅರ್ಥವೆಂಬ ಯಾದವ ಪ್ರಕಾಶರ ಯೋಜನೆ ಯಲ್ಲಿ ನಮಿಗೆ ಯಾವವಿವಾದವೂ ಇಲ್ಲವು. ಅವಶ್ಯಕರ್ತ್ತವ್ಯಗಳಾದ ನಿ ತ್ಯನೈಮಿತ್ತಿಕಾದಿ ಕರ್ಮಗಳನ್ನು ಬಿಟ್ಟೆಂಬ ಯಾದವಪ್ರಕಾಶರ ಯ ರಡನೆದಾದ ಸ್ತುತಿರೂಪವಾದ ಅರ್ಥದಲ್ಲಿ ಶ್ಲೋಕದಲ್ಲಿ ಇಲ್ಲದ ಅಪಿಶ ಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗಿರುವುದರಿಂದ ಆಯೋಜ

ನೆಯು ಸರಿಯಾದದ್ದಲ್ಲವು. "ನಿಯತಸ್ಯತುಸನ್ನ್ಯಾಸಃಕರ್ಮಣೋ ನೋಪಪದ್ಯತೆ ,, (೧೮॥೭) ಎಂಬದಾಗಿ ಭಗವದಭಿಪ್ರಾಯವಿರುವುದ ರಿಂದ ಅನಿಯತಧರ್ಮಪರಿತ್ಯಾಗವು ಇಲ್ಲಿ ವಿವಕ್ಷಿತವಾಗಿರುವುದೆಂಬ ನಾ ರಾಯಣಾರ್ಯವ್ಯಾಖ್ಯಾನದಲ್ಲಿಯೂ ನಮ್ಮಗಳಿಗೆ ಅನುಷ್ಠಾನವಿರೋಧ ವಿಲ್ಲವು. ಆದುದರಿಂದ ಸರ್ವಧರ್ಮಸ್ವರೂಪತ್ಯಾಗವನ್ನು ಇಲ್ಲಿ ಅರ್ಥವ ನ್ನಾಗಿ ಹೇಳಕೂಡದು.

( ಶ್ರೀಶಂಕರಾಚಾರ್ಯರಿಂದ ಅಲ್ಲಲ್ಲಿ ನಿಬಂಧಿಸಲ್ಪಟ್ಟ ಸರ್ವಕರ್ಮಸನ್ನ್ಯಾ ಸ ಪರವಾದ ಅರ್ಥವನ್ನು ಶ್ರೀಮತ್ತಾತ್ಪರ್ಯಚಂದ್ರಿಕೆಯಲ್ಲಿ ಸಂಪೂರ್ಣ ವಾಗಿ ಸರ್ವಪ್ರಕಾರದಿಂದಲೂ ಖಂಡಿಸಿರುತ್ತಾರೆ. ವಿಸ್ತಾರಭಯದಿಂದ ಇಲ್ಲಿ ಸಂಗ್ರಹವಾಗಿ ಬರೆದಿರುತ್ತೇನೆ. ) ॥೬೬॥

(ಶಂ॥ ಭಾ) ಸಾರಾರ್ಥಃ-ಈ ಗೀತಾಶಾಸ್ತ್ರದಲ್ಲಿ ಮುಖ್ಯವಾಗಿ ಪ್ರತಿಪಾದಿಸಲ್ಪಡುವುದು ಕರ್ಮವೊ ? ಜ್ಞಾನವೊ ? ಅಥವಾ ಈ ಎರ ಡೂ ಮುಖ್ಯವಾಗಿ ಪ್ರತಿಪಾದಿಸಲ್ಪಡುವುದೊ ? ಎಂಬ ವಿಕಲ್ಪದಲ್ಲಿ "ಯಜ್ಜ್ಞಾತ್ವಾಽಮೃತಮಶ್ನುತೆ,, (೧೩॥೧೨॥) "ತತೋಮಾಂ ತತ್ವತೋ ಜ್ಞಾತ್ವಾವಿಶತೆ ತದನಂತರಂ ,, (೬॥ ೫೫) ಎಂಬೀ ಶ್ಲೋಕ ಗಳಲ್ಲಿ ಜ್ಞಾನಕ್ಕೆ ಮೋಕ್ಷಸಾಧನತ್ವವು ಹೇಳಲ್ಪಡುವುದು "ಕರ್ಮ ಣ್ಯೇವಾಧಿಕಾರಸ್ತೇ ,, (೨॥ ೪೭) "ಕುರುಕರ್ಮೈವತಸ್ಮಾತ್ತ್ವಂ ,, (೪॥ ೧೫) ಇತ್ಯಾದಿಗಳಲ್ಲಿ ಕರ್ಮಾನುಷ್ಠಾನಕ್ಕೆ ಪ್ರಾಧಾನ್ಯವು ತೋ ರುವುದು. ಈ ಪ್ರಕಾರವಾಗಿ ಜ್ಞಾನಕರ್ಮಗಳೆರಡನ್ನೂ ಉಪದೇಶಿಸಿರು ವುದರಿಂದ ಯಾವದು ಮೋಕ್ಷಹೇತುವೆಂಬೀ ಸಂಶಯು ವುಂಟಾಗುವು ದು. ಆದುದರಿಂದ ಅನುಷ್ಠಿಸುವಂತವನು ಇದನ್ನು ತಾನೆ ಅನುಷ್ಠಿ ಸಬೇಕೆಂಬುವುದನ್ನು ತಿಳಿದುಕೊಳ್ಳುವುದಕ್ಕಾಗಿ ಒಂದು ನಿಷ್ಕರ್ಷ ವು ಅಪೇಕ್ಷಿತವಾಗಿರುವುದು. ಜ್ಞಾನವು ಸಕಲ ಭೇದಬುದ್ಧಿಯನ್ನು ನಿವೃತ್ತಿಮಾಡಿ ಮೋಕ್ಷವನ್ನು ಕೊಡುವಂಥಾದ್ದಾಗಿರುವುದು. ಕರ್ಮ ವೊ, ಕ್ರಿಯೆಯು ಕಾರಣವಾದ ವಸ್ತುಗಳು ಫಲವು ಎಂಬಿವುಗಳಭೇದ ಬುದ್ಧಿಯನ್ನು ಮೂಲವಾಗಿ ಇಟ್ಟುಕೊಂಡಿರುವುದು ನಾನು ನನ್ನ ದು ನಾನು ಕರ್ತಾ ನಾನು ಭೋಕ್ತಾ ನಾನು ಬ್ರಾಹ್ಮಣನು ನಾನು ಗೃ

ಹಸ್ಥನು ಎಂಬಿದೇ ಮೊದಲಾದ ಭೇದಬುದ್ಧಿಗಳು ಅವಿದ್ಯೆಯಿಂದ ಆ
ತ್ಮನಲ್ಲಿ ಅನಾದಿ ಕಾಲದಿಂದ ವ್ಯಾಪಿಸಿರುವುವು. ನಾನು ಮಾಯಾರಹಿ
ತನು ಕರ್ತಾ ಅಲ್ಲವು ಕ್ರಿಯಾಶೂನ್ಯನು ಹೊಂದತಕ್ಕ ಯಾವಫಲವೂ
ಇಲ್ಲದವನು ನನಿಗಿಂತಲೂ ಬೇರೆ ಯಾವ ವಸ್ತುವೂ ಇಲ್ಲವು ಎಂಬೀ
ಜ್ಞಾನವು ಹಿಂದೇ ಹೇಳಿರುವ ಕರ್ಮದಲ್ಲಿ ಪ್ರವರ್ತಿಸುವುದಕ್ಕೆ ಕಾರಣ
ವಾದ ಭೇದ ಬುದ್ಧಿಯನ್ನೂ ಅದಕ್ಕೆ ಕಾರಣವಾದ ಅವಿದ್ಯೆಯನ್ನೂ
ಹೋಗಲಾಡಿಸುವುದು. ಕೇವಲ ಕರ್ಮವು ಒಂದು ಅಂಧಕಾರವನ್ನು ಮ
ತ್ತೊಂದು ಅಂಧಕಾರವು ನಾಶಪಡಿಸಲಾರದಂತೆ ಭೇದ ಬುದ್ಧಿಯನ್ನೂ
ಅವಿದ್ಯೆಯನ್ನೂ ನಿವೃತ್ತಿ ಪಡಿಸಲಾರದು. ಜ್ಞಾನವುಂಟಾದ ಮೇಲೆ
(ಸೂರ್ಯೋದಯವಾದ ಮೇಲೆ ಅಂಧಕಾರ ನಿರಾಸದಂತೆ) ಕರ್ಮಕ್ಕೆ ಕಾ
ರಣವಾದ ಭೇದಬುದ್ಧಿಯೂ ಅದಕ್ಕೆ ಕಾರಣವಾದ ಅವಿದ್ಯೆಯೂ
ತೊಲಗುವುದು. ಆದುದರಿಂದ ಜ್ಞಾನಕ್ಕೆ ಕರ್ಮದೊಡನೆ ಸಂಬಂಧ
ವಿರುವುದೆಂಬುವುದೆ ಉಚಿತವಲ್ಲವು. ಆದುದರಿಂದ ಜ್ಞಾನಮಾತ್ರವೆ
ಮೋಕ್ಷಕ್ಕೆ ಕಾರಣವೆಂಬದಾಗಿ ಈ ಗೀತಾ ಶಾಸ್ತ್ರಸಾರಾರ್ಥವೆಂ
ದರಿಯಬೇಕು.

(ಗೀ॥ ೨) ನನ್ನಲ್ಲಿ ಮನಸ್ಸನ್ನಿಡುವಿಕೆ ಮೊದಲಾದದ್ದು ಹೇ
ಗೆ ಎಂದರೆ ? ಈ ಪೂರ್ವಶ್ಲೋಕೋಕ್ತವಾದ ಅರ್ಥವನ್ನೆ ಪರಮಕೃ
ಪಾಳುವಾಗಿ ವಿಶದಪಡಿಸುತ್ತಾನೆ. ಸರ್ವಧರ್ಮಾ-ಸಾಧನಚತುಷ್ಟಯ
ಗಳಲ್ಲದೆ ಇತರಗಳಾದ ಸರ್ವಧರ್ಮಗಳನ್ನು, ಅಥವಾ ಸರ್ವಧರ್ಮಗಳ ಫ
ಲಾಪೇಕ್ಷೆಯನ್ನು, ಅಥವಾ ವಿಷ್ಣುಸಂಬಂಧಿಗಳಾಗದ ಸರ್ವಧರ್ಮಗಳ
ನ್ನು, ಪರಿತ್ಯಜ್ಯ-ಬಿಟ್ಟು, ಏಕಂ-ಮುಖ್ಯನಾದ, ಮಾಂ-ನನ್ನನ್ನು, ಶರ
ಣಂವ್ರಜ-ಶರಣವನ್ನಾಗಿಹೊಂದು, ಇಲ್ಲಿ ಸರ್ವಕರ್ಮಗಳಸ್ವರೂಪತ್ಯಾಗ
ವು ವಿಧಿಸಲ್ಪಡಲಾರದು. ಸ್ವರೂಪತ್ಯಾಗವು ಪರಮಾರ್ಥವಾಗಿದ್ದರೆ ಅ
ರ್ಜುನನನ್ನು ಕುರಿತು ವಿಹಿತವಾದ ಯುದ್ಧ ಪ್ರೇರಣವೆ ಅಸಂಗತ
ವಾಗುವುದು. ಆದರೆ ತ್ಯಾಗಶಬ್ದಕ್ಕೆ ಅರ್ಥವೇನೆಂದು ಸಂದೇಹಿಸದೆ
ಸಾಕ್ಷಾತ್ಪರಮಾತ್ಮನಾದ “ ಯಸ್ತು ಕರ್ಮಫಲತ್ಯಾಗೀಸತ್ಯಾಗೀತ್ಯಭಿ
ಧೀಯತೆ „ ಎಂಬದಾಗಿ ಹೇಳಲ್ಪಟ್ಟ ವಾಕ್ಯಗಳನ್ನು ಪರ್ಯಾಲೋಚಿಸಿ

ದರೆ ಫಲತ್ಯಾಗವೆ ತ್ಯಾಗ ಶಬ್ದಾರ್ಥವೆಂದು ಬೋಧಿತವಾಗುವುದು. ಅಹಂ-ನಾನು, ತ್ವಾ-ನಿನ್ನನ್ನು, ಸರ್ವಪಾಪೇಭ್ಯಃ -ಅನಾದಿಜನ್ಮಗಳಿಂದಲೂ ಮಾಡಲ್ಪಟ್ಟ ಸಮಸ್ತಪಾಪಗಳ ದೆಶೆಯಿಂದ, ಮೋಕ್ಷಯಿಷ್ಯಾಮಿ-ಬಿಡಲ್ಪಟ್ಟವನನ್ನಾಗಿ ಮಾಡುವೆನು, ಮಾಶುಚಃ - ಸಂಸಾರಭಯದ್ದೆಶೆಯಿಂದ ಶೋಕವನ್ನು ಮಾಡಬೇಡ. ಕೆಲವರು ಯುದ್ಧಪ್ರಯುಕ್ತವಾಗಿ ಬಂದ ಸಮಸ್ತಪಾಪಗಳಿಂದಲೂ ಬಿಡಿಸುವೆನು ದುಃಖಿಸಬೇಡವೆಂದು ಅರ್ಥವನ್ನು ಮಾಡುತ್ತಾರೆ, ಅದುಯುಕ್ತವಲ್ಲವು. ಅದು ಹೇಗೆಂದರೆ ? ಸರ್ವಧರ್ಮಾನ್ಪರಿತ್ಯಜ್ಯ ಎಂಬುವುದರಿಂದ ಕಾಮ್ಯಧರ್ಮಪರಿತ್ಯಾಗವನ್ನು ಹೇಳಿದಾಗ್ಯ ಪಾಪಪರಿತ್ಯಾಗವೂ ಕೈಮುತ್ಯನ್ಯಾಯಸಿದ್ಧವಾಗಿರುವುದು. ಕಿಂಚ ಕ್ಷತ್ರಿಯನಿಗೆ ಸ್ವಧರ್ಮವೆ ಅವಶ್ಯಾನುಷ್ಠೇಯವೆಂಬದಾಗಿ ಯುದ್ಧದಲ್ಲಿ ಪ್ರೇರಣೆಯು ಮಾಡಲ್ಪಡುವುದರಿಂದ ಪಾಪಪ್ರಸಕ್ತಿಯೇ ಇಲ್ಲವು. ಆದ್ದರಿಂದ ಇಂಥಾ ಅಪ್ರಕೃತವಾದ ಅರ್ಥವು ಯುಕ್ತವಲ್ಲವು. ... ‖೬೬‖

ಶ್ಲೋ ॥ ಇದಂತೇನಾತಪಸ್ಕಾಯನಾಭಕ್ತಾಯಕದಾಚನ । ನಚಾಶುಶ್ರೂಷವೇವಾಚ್ಯಂನಚಮಾಂಯೋಽಭ್ಯಸೂಯತಿ ... ‖೬೭‖

ಪ॥ ಇದಂ-ತೇ-ನ-ಅತಪಸ್ಕಾಯ-ನ-ಅಭಕ್ತಾಯ-ಕದಾಚನ। ನ-ಚ-ಅಶುಶ್ರೂಷವೇ-ವಾಚ್ಯಂ-ನ-ಚ-ಮಾಂ-ಯಃ-ಅಭ್ಯಸೂಯತಿ॥

( ಅ ॥ ರಾ॥ ಭಾ ) ಈಪ್ರಕಾರವಾಗಿ ತನ್ನ ಉಪದೇಶದಿಂದ ಸ್ಥಿರಪಡಿಸಲ್ಪಟ್ಟ ತತ್ವಹಿತಜ್ಞಾನವುಳ್ಳ ಅರ್ಜುನನಿಗೆ ಮಾಡತಕ್ಕ ಕಾರ್ಯವಿಶೇಷವನ್ನು ಉಪದೇಶಿಸುವ ವ್ಯಾಜದಿಂದ ಸಂಪ್ರದಾಯ ವಿಧಿಸಿದ್ಧ್ಯರ್ಥವಾಗಿ ಈ ಗೀತಾಶಾಸ್ತ್ರದಲ್ಲಿ ಅಧಿಕಾರ ವಿಲ್ಲದವರನ್ನು ವ್ಯಕ್ತಪಡಿಸುತ್ತಾನೆ. ...

ತೆ-ನಿನಿಗೆ,(ಮಯಾಆಖ್ಯಾತಂಎಂಬದಾಗಿ ಸೇರಿಸಿಕೊಳ್ಳಬೇಕು) ಮಯಾ-ನನ್ನಿಂದ, ಆಖ್ಯಾತಂ-ಉಪದೇಶಿಸಲ್ಪಟ್ಟ, ಇದಂ-ಪರಮಗುಹ್ಯವಾದ ಈ ಶಾಸ್ತ್ರವು, ಅತಪಸ್ಕಾಯ-ತಪಸ್ಸನ್ನು ಮಾಡದವನಿಗೊಸ್ಕರ, ನವಾಚ್ಯಂ-ಉಪದೇಶಮಾಡತಕ್ಕದ್ದಲ್ಲವು, ಅಭಕ್ತಾಯ-ಉಪ

ದೇಷ್ಟಾಆದ ನಿಮ್ಮಲ್ಲಿಯೂ ಈಶಾಸ್ತ್ರಕ್ಕೆ ಪ್ರಧಾನಪ್ರಮೇಯಭೂತನಾಗಿಯೂ ಪರಮಾಚಾರ್ಯನಾಗಿಯೂ ಇರು ನಮ್ಮಲ್ಲಿಯೂ ಏಕರೂಪವಾದ ಭಕ್ತಿರಹಿತನಿಗೋಸ್ಕರವು, ಕದಾಚನನವಾಚ್ಯಂ - ಒಂದುಕಾಲದಲ್ಲಿಯೂ ಉಪದೇಶಿಸತಕ್ಕದಲ್ಲವು, ಅಶುಶ್ರೂಷವೇಚ-ಭಕ್ತನಾಗಿದ್ದರೂ ಶಾಸ್ತ್ರಶ್ರವಣದಲ್ಲಿ ಇಚ್ಛಾರಹಿತನಿಗೋಸ್ಕರವಾಗಿಯೂ, ನವಾಚ್ಯಂ-ಉಪದೇಶಿಸತಕ್ಕದ್ದಲ್ಲವು, ಮಾಂಯೋಭ್ಯಸೂಯತಿ - ನನ್ನಸ್ವರೂಪವನ್ನೂ ನನ್ನ ಐಶ್ವರ್ಯವನ್ನೂ ನನ್ನ ಗುಣಗಳನ್ನೂ ಉಪನ್ಯಾಸಮಾಡುವಾಗ ಯಾವನಾದರೆ ದೋಷೋದ್ಘಾಟವನ್ನು ಮಾಡುವನೋ,(ತಸ್ಮೈ ಎಂಬದಾಗಿ ಇಟ್ಟುಕೊಳ್ಳಬೇಕು.) ತಸ್ಮೈ-ಅವನಿಗೋಸ್ಕರವೂ, ನವಾಚ್ಯಂ ಉಪದೇಶಿಸತಕ್ಕದ್ದಲ್ಲವು. ... ||೬೭||

(ಶಂ||ರಾ||ಗೀ||ವಿ) ಆದೇಯೋಜನೆಯು. (ಶಂ) ತಪಸ್ಸಿಲ್ಲದಿದ್ದರೂ ಅದಕ್ಕಿಂತಲೂ ಬೇರೆಯಾದ ಗುಣಗಳಿರುವ ಪಕ್ಷದಲ್ಲಿ ಮೇಧಾವಿಯಾಗಿದ್ದರೆ ಈ ಶಾಸ್ತ್ರವನ್ನು ಉಪದೇಶಿಸ ಬಹುದು. ||೬೭||

ಶ್ಲೋ|| ಯಇದಂಪರಮಂಗುಹ್ಯಂಮದ್ಭಕ್ತೇಷ್ವಭಿಧಾಸ್ಯತಿ |ಭಕ್ತಿಂಮಯಿ ಪರಾಂಕೃತ್ವಾ ಮಾಮೇವೈಷ್ಯತ್ಯಸಂಶಯಃ ... ... ||೬೮||

ಪ|| ಯಃ-ಇದಂ-ಪರಮಂ-ಗುಹ್ಯಂ ಮದ್ಭಕ್ತೇಷು-ಅಭಿಧಾಸ್ಯತಿ | ಭಕ್ತಿಂ-ಮಯಿ-ಪರಾಂ- ಕೃತ್ವಾ-ಮಾಂ-ಏವ-ಏಷ್ಯತಿ-ಅಸಂಶಯಃ ||

(ಅ||ರಾ|| ಭಾ||) ಯಃ-ಯಾವನು, ಪರಮಂಗುಹ್ಯಂ-ಉತ್ತಮವಾಗಿಯೂ ರಹಸ್ಯವಾಗಿಯೂ ಇರುವ, ಇದಂ-ಈಶಾಸ್ತ್ರವನ್ನು, ಮದ್ಭಕ್ತೇಷು-ನಮ್ಮ ಭಕ್ತರಲ್ಲಿ, ಅಭಿಧಾಸ್ಯತಿ-ಯಥಾತ್ಮ್ಯವಾಗಿ ಉಪದೇಶಿಸುವುನೋ, (ಸಃ-ಅವನು,) ಮಯಿ-ನನ್ನಲ್ಲಿ, ಪರಾಂಭಕ್ತಿಂಕೃತ್ವಾ - ಪರಭಕ್ತಿಯನ್ನು ಅನುಷ್ಠಿಸಿ, ಮಾಮೇವೈಷ್ಯತಿ - ನಮ್ಮನ್ನೆ ಹೊಂದುವನು. ಅಸಂಶಯಃ-ಈವಿಷಯದಲ್ಲಿ ಸಂಶಯವಿಲ್ಲವು||೬೮||

(ಶಂ||ಭಾ) ಅಭಿಧಾಸ್ಯತಿ-ಗೀತಾಗ್ರಂಥಗಳನ್ನಾದರೂ ಅವುಗಳ ಅರ್ಥಗಳನ್ನಾದರೂ ಸ್ಥಾಪನೆಮಾಡುತ್ತಾನೆಯೊ, (ಮನಸ್ಸಿನಲ್ಲಿ ಈ ಅರ್ಥಗಳು ದೃಢಪ್ರತಿಷ್ಠಿತ ಗಳಾಗುವಂತೆ ಉಪದೇಶಿಸುತ್ತಾನೆಯೊ

ಎಂದರ್ಥವು ) ಭಕ್ತಿಂಮಯಿಪರಾಂಕೃತ್ವಾ-ನನ್ನಲ್ಲಿ ಅತ್ಯಂತಭಕ್ತಿಯ ನ್ನಿಟ್ಟು, ಎಂದರೆ ಪರಮಗುರುವಾದ ಜ್ಞಾನಶಕ್ತ್ಯಾದಿಕಲ್ಯಾಣಗುಣನಿ ಧಿಯಾಗಿರುವ ಅಚ್ಯುತನ ಸೇವೆಯನ್ನು ಈ ಉಪದೇಶರೂಪವಾಗಿ ನಾನು ಮಾಡುವೆನೆಂಬ ಅಭಿಪ್ರಾಯದೊಡನೆ ಉಪದೇಶಿಸಬೇಕೆಂದರ್ಥವು. ಯ ಇಮಂಪರಮಂ ಎಂಬದಾಗಿ ಪಾಠವು. ಅರ್ಥಭೇದವಿಲ್ಲವು. ॥೬೮॥

ಶ್ಲೋ ॥ ನಚತಸ್ಮಾನ್ಮನುಷ್ಯೇಷು ಕಶ್ಚಿನ್ಮೇಪ್ರಿಯ
ಕೃತ್ತಮಃ। ಭವಿತಾನಚಮೇತಸ್ಮಾದನ್ಯಃಪ್ರಿಯತರೋ
ಭುವಿ ... ॥ ೬೯ ॥

ಪ ॥ ನ-ಚ-ತಸ್ಮಾತ್-ಮನುಷ್ಯೇಷು-ಕಶ್ಚಿತ್-ಮೇ-ಪ್ರಿಯಕೃತ್ತಮಃ । ಭವಿ ತಾ-ನ-ಚ-ಮೇ-ತಸ್ಮಾತ್-ಅನ್ಯಃ-ಪ್ರಿಯತರಃ-ಭುವಿ ॥

( ಅ॥ರಾ ॥ ಭಾ ) ಮನುಷ್ಯೇಷು-ಮನುಷ್ಯರಲ್ಲಿ, ತಸ್ಮಾತ್-ನನ್ನ ಭಕ್ತರಿಗೆ ಗೀತೋಪದೇಷ್ಟೃ ಆದ ಪುರುಷನಿಗಿಂತಲೂ, ಅನ್ಯಃ-ಇತರನು, ಕಶ್ಚಿತ್-ಒಬ್ಬನೂ, ಮೆ-ನನಿಗೆ, ಪ್ರಿಯಕೃತ್ತಮಃ-ಅತ್ಯಂ ತಪ್ರಿಯವಾದ ಕಾರ್ಯವನ್ನು ಮಾಡುವಂತವನೂ, ನ-ಇಲ್ಲವು, (ಅಭೂ ತ್ ಎಂಬದಾಗಿಶೇಷವು)ನಾಭೂತ್-ಇದಕ್ಕೆ ಪೂರ್ವಕಾಲದಲ್ಲಿಯೂ ಅಂ ತವನಿರಲಿಲ್ಲವು, ತಸ್ಮಾತ್-ನಮ್ಮ ಭಕ್ತರಿಗೆ ಗೀತಾಶಾಸ್ತ್ರೋಪದೇಷ್ಟೃ ಆದ ಅಧಿಕಾರಿಗಿಂತಲೂ, ಅನ್ಯಃ-ಇತರನಾದ, ಮೇಪ್ರಿಯತ್ತರಃ-ನನಿಗೆ ಅತ್ಯಂತಪ್ರೀತಿ ವಿಷಯನಾದವನು, ಭುವಿ-ಈ ಲೋಕದಲ್ಲಿ, ನಚಭವಿ ತಾ-ಮುಂದಿನಕಾಲದಲ್ಲಿಯು ಉಂಟಾಗಲಾರನು. ಆದರೆ ಈಶಾಸ್ತ್ರ ಕ್ಕೆ ಅಧಿಕಾರಿಯು ಅಪೇಕ್ಷಿತವಾಗಿರುವುದರಿಂದ ಮೊದಲು ಈಶಾ ಸ್ತ್ರಾಧಿಕಾರಿಯನ್ನು ಹೇಳಿದರೆ ಆದರಿಂದಲೆ ಈ ಶಾಸ್ತ್ರಕ್ಕೆ ಅನಧಿ ಕಾರಿಯೂ ವ್ಯಕ್ತಪಡುತ್ತಾನೆ. ಹೀಗಿದ್ದರೂ ಅನಧಿಕಾರಿಗಳನ್ನು ಮೊದಲು ಹೇಳಬಹುದೊ ? ಎಂದರೆ ಯೋಗ್ಯರನ್ನು ಮೊದಲು ಹೇ ಳಿರುವುದು ಅಯೋಗ್ಯರ ಅನಿಷ್ಟತಮತ್ವವನ್ನು ಹೇಳುವ ತಾತ್ಪರ್ಯದಿಂ ದಲೆ ಎಂದರಿಯಬೇಕು. ಯೋಗ್ಯನಿಗೆ ಹೇಳದೇ ಇರುವುದಕ್ಕಿಂತ ಲೂ ಅಯೋಗ್ಯನಿಗೆ ಹೇಳುವುದು ಅತ್ಯಂತಾ ಸಂದರ್ಭವೆಂದು ಮುಖ್ಯ ತಾತ್ಪರ್ಯವು. ... ॥೬೯॥

(ಗೀ ॥ ವಿ ) ಮನುಷ್ಯರಲ್ಲಿ ಪ್ರೀತಿಪಾತ್ರನು ದೊರಕಲಾರ ನೆಂದು ಸೂಚಿತವಾಯಿತೆಂದರಿಯ ಬೇಕು. ॥೬೯॥

ಶ್ಲೋ ॥ ಅಧ್ಯೇಷ್ಯತೇಚಯಇಮಂ ಧರ್ಮ್ಯಂಸಂವಾದ ಮಾವಯೋಃ। ಜ್ಞಾನಯಜ್ಞೇನತೇನಾಹಮಿಷ್ಟಸ್ಸ್ಯಾಮಿ ತಿಮೇಮತಿಃ ॥ ... ॥೭೦॥

ಪ ॥ ಅಧ್ಯೇಷ್ಯತೆ-ಚ-ಯಃ-ಇಮಂ-ಧರ್ಮ್ಯಂ-ಸಂವಾದಂ-ಆವಯೋಃ। ಜ್ಞಾನ ಯಜ್ಞೇನ-ತೇನ-ಅಹಂ-ಇಷ್ಟಃ-ಸ್ಯಾಂ-ಇತಿ-ಮೆ-ಮತಿಃ ॥

( ಅ॥ರಾ॥ಭಾ ) ಯಃ-ಯಾವನಾದರೆ, ಆವಯೋಃ-ನಮ್ಮಿಬ್ಬರು ಗಳ, ಧರ್ಮ್ಯಂ-ಧರ್ಮಮಾರ್ಗೋಪಯೋಗಿಯಾದ, ಇಮಂಸಂವಾದಂ-ಈ ಪ್ರಶ್ನೋತ್ತರ ಸಂದರ್ಭವನ್ನು, ಅಧ್ಯೇಷ್ಯತೆಚ-ವೇದದಂತೆಪುಸ್ತಕಾ ಪೇಕ್ಷೆಯಿಲ್ಲದೆ ಪಾರಾಯಣ ಮಾಡುವಂತೆ ಆಚಾರ್ಯನ ದಶೆಯಿಂದ ಗ್ರಹಿ ಸಿ ಕಂಠಪಾಠವಾಗುವಂತೆ ಉಪಸ್ಥಿತಿ ಮಾಡುತ್ತಾನೆಯೊ, ತೇನ-ಆಪು ರುಷನಿಂದ, ಜ್ಞಾನಯಜ್ಞೇನ- "ಸ್ವಾಧ್ಯಾಯಜ್ಞಾನಯಜ್ಞಾಶ್ಚ(೪॥) ಇ ತ್ಯಾದಿ ಪ್ರಕರಣಗಳಲ್ಲಿ ಹೇಳಿರುವ ಜ್ಞಾನಯಜ್ಞದಿಂದ, ಅಹಂ-ನಾನು, ಇಷ್ಟಸ್ಸ್ಯಾಂ- ಅಧ್ಯಯನಮಾತ್ರದಿಂದಲೆ ಆರಾಧಿಸಲ್ಪಟ್ಟವನಾಗುವೆ ನು, ಇತಿಮೇಮತಿಃ-ಎಂಬದಾಗಿ ನನ್ನನಿಶ್ಚಯವು. ॥೭೦॥

(ಶಂ ॥ ಭಾ ) ಜ್ಞಾನ ಯಜ್ಞೇನ-ಎಂಬುವುದರಿಂದ ಈ ಗೀತಾ ಶಾಸ್ತ್ರವನ್ನು ಜ್ಞಾನಯಜ್ಞಕ್ಕೆ ಸಮಾನವೆಂಬದಾಗಿ ಸ್ತುತಿಸಿರುವಂತೆ ಯಾದರೂ ಅಥವಾ ದೇವಾದಿವಿಷಯವಾದ ಯಜ್ಞಾದಿಗಳಂತೆ ಫಲಗಳ ನ್ನು ಕೊಡತಕ್ಕದ್ದೆಂತಲಾದರೂ ತಿಳಿಯಬೇಕು. ವಿಧಿಯಜ್ಞವೆಂತ ಲೂ ಜಪಯಜ್ಞವೆಂತಲೂ ಉಪಾಂಶುಯಜ್ಞವೆಂತಲೂ ಮಾನಸಯ ಜ್ಞವೆಂತಲೂ ಇರುವ ಚತುರ್ವಿಧಗಳಾದ ಯಜ್ಞಗಳ ಮಧ್ಯದಲ್ಲಿ ಮಾನಸ ವಾಗಿರುವುದರಿಂದ ಜ್ಞಾನ ಯಜ್ಞವು ಶ್ರೇಷ್ಠವೆಂದರಿಯ ಬೇಕು. ... ... ॥೭೦॥

(ಶ್ರೀ)ಈ ಗೀತಾರ್ಥವನ್ನು ತಿಳಿದುಕೊಳ್ಳದೆ ಕೇವಲ ಪಾರಾಯ ಣವನ್ನು ಮಾಡಿದವನುಕೂಡ ನನ್ನನ್ನು ಆರಾಧಿಸಿದವ ನೆಂಬುವುದು ಭಾವವು. ಅದು ಹೇಗೆಂದರೆ? ತನ್ನನ್ನು ಇಂತವನೆಂದು ತಿಳಿದುಕೊ

ಳ್ಳವೆ ಒಬ್ಬನು ತನ್ನ ಹೆಸರನ್ನು ಹೇಳಿ ಕೂಗಿದ ಮಾತ್ರದಲ್ಲಿ ಅವನು ತನ್ನನ್ನು ಕೂಗದೇ ಇದ್ದರೂ ತನ್ನನ್ನು ಕೂಗಿದಂತೆ ಹೇಗಾದರೆ ತಿಳಿದುಕೊಂಡು ಸಮೀಪಕ್ಕೆ ಬರುವನೊ ಆ ಪ್ರಕಾರವೆ ತಿಳಿಯದೇನೆ ನನ್ನ ನಾಮಗಳನ್ನು ಉಚ್ಚರಿಸಿದರೂ ಕೂಡ ಅಂತವನಲ್ಲಿ ನಾನು ಸಾನ್ನಿಧ್ಯವನ್ನು ಹೊಂದುವೆನು. ಆದುದರಿಂದ ಅಜಾಮಿಳ ಕ್ಷತ್ರಬಂಧುಃ ಮೊದಲಾದವರಿಗೆ ಹ್ಯಾಗಾದರೆ ನನ್ನ ದಿವ್ಯ ನಾಮೋಚ್ಚಾರಣದಿಂದಲೆ ಪ್ರಸನ್ನನಾದೆನೊ, ಅದರಂತೆ ಇವನಲ್ಲಿಯೂ ಪ್ರಸನ್ನನಾಗುವೆನು. ‖೭೦‖

(ಗೀ‖ ವಿ) ಫಲವನ್ನು ಹೇಳಿ ಗೀತಾರ್ಥವು ಸ್ತುತಿಸಲ್ಪಡುವುದು. ಧರ್ಮ್ಯಂ-ಸಕಲಜಗತ್ತನ್ನೂ ಧರಿಸುವ ಭಗವದ್ವಿಷಯವಾದ ಅಥವಾ ಧರ್ಮಕ್ಕೆ ಕಾರಣವಾಗಿರುವ. ... ‖೭೦‖

ಶ್ಲೋ ‖ ಶ್ರದ್ಧಾವಾನನಸೂ (ಯ) ಯಶ್ಚಶೃಣುಯಾ
ದಪಿಯೋನರಃ । ಸೋಪಿಮುಕ್ತಶ್ಶುಭಾಁಲ್ಲೋಕಾನ್ಪ್ರಾ
ಪ್ನುಯಾತ್ಪುಣ್ಯಕರ್ಮಣಾಂ ‖ ... ‖೭೧‖

ಪ ‖ ಶ್ರದ್ಧಾವಾನ್-ಅನಸೂಯುಃ-ಚ-ಶೃಣುಯಾತ್ ಅಪಿ-ಯಃ-ನರಃ ।ಸಃ-ಅಪಿ-ಮುಕ್ತಃ-ಶುಭಾನ್-ಲೋಕಾನ್-ಪ್ರಾಪ್ನುಯಾತ್-ಪುಣ್ಯಕರ್ಮಣಾಂ ‖

(ಅ‖ ರಾ‖ ಭಾ‖ ) ಯೋನರಃ-ಯಾವ ಮನುಷ್ಯನಾದರೆ, ಶ್ರದ್ಧಾವಾನ್-ವಿಶ್ವಾಸವುಳ್ಳವನಾಗಿಯೂ, ಅನಸೂಯುಶ್ಚ-ಗುಣಗಳಲ್ಲಿ ದೋಷಗಳನ್ನು ಹೊರಪಡಿಸುವಿಕೆಯೆಂಬ ಅಸೂಯೆಯಿಂದ ಬಿಡಲ್ಪಟ್ಟವನಾಗಿಯೂ, (ಇಮಂ ಎಂಬದಾಗಿ ಹಿಂದಿನ ಶ್ಲೋಕದಿಂದ ಆಕರ್ಷಿಸಿಕೊಳ್ಳಬೇಕು.) ಇಮಂ-ಈ ಕೃಷ್ಣಾರ್ಜುನಸಂವಾದವನ್ನು, ಶೃಣುಯಾದಪಿ-ಶ್ರವಣವನ್ನಾದರೂ ಮಾಡಿದ್ದೇ ಆದರೆ, ಸೋಪಿ-ಅಂತವನೂ, ಮುಕ್ತಃ-ಭಕ್ತಿವಿರೋಧಿಪಾಪಗಳ ದೆಸೆಯಿಂದ ಬಿಡಲ್ಪಟ್ಟವನಾಗಿ. ಪುಣ್ಯಕರ್ಮಣಾಂ-ನಮ್ಮ ಭಕ್ತರ, ಶುಭಾನ್ ಲೋಕಾನ್-ಪಾವನಗಳಾದ ಸಮೂಹಗಳನ್ನು, ಪ್ರಾಪ್ನುಯಾತ್-ಹೊಂದುವನು. ‖೭೧‖

(ಗೀ ‖ ವಿ ) ಶ್ರದ್ಧಾವಾನ್-ಆಸ್ತಿಕ್ಯಬುದ್ಧಿಯುಳ್ಳವನು. ಶೃಣುಯಾದಪಿ- (ಶಂ) ಅರ್ಥಜ್ಞಾನವಿಲ್ಲದೆ ಶ್ರವಣಮಾತ್ರವನ್ನಾದರೂ ಮಾಡಿ

ದರೆ, ಅಪಿಶಬ್ದದಿಂದ ಅರ್ಥಜ್ಞಾನದೊಡನೆ ಕೇಳಿದವನು ಉತ್ತಮಗತಿ ಯನ್ನು ಹೊಂದುವುದರಲ್ಲಿ ಸಂದೇಹವಿಲ್ಲವೆಂಬ ಕೈಮುತ್ಯನ್ಯಾಯವು ತೋರಿಸಲ್ಪಟ್ಟಿತು. (ಗೀ॥ವಿ) ಈ ಅಪಿಶಬ್ದದಿಂದ ಶ್ರವಣಮಾಡಿದವನಿ ಗಿಂತಲೂ ಪಠನಮಾಡುವಂತನಿಗೂ, ಪಠನಮಾಡುವಂತವನಿಗಿಂತಲೂ ಅನ್ಯರಿಗೆ ಹೇಳುವಂತವನಿಗೂ, ಅವನಿಗಿಂತಲೂ ದೇವತೆಗಳಿಗೂ ಮೋ ಕ್ಷದಲ್ಲಿ ಅಧಿಕ ಸುಖವುಂಟೆಂಬದಾಗಿ ಹೇಳಿದಂತೆ ಆಯಿತು. ಪುಣ್ಯಕರ್ಮ ಣಾಂಶುಭಾಁಲ್ಲೋಕಾಁ- ಪುಣ್ಯಕರ್ಮಿಗಳ ಉತ್ತಮ ಲೋಕಗಳನ್ನು, ಪ್ರಾಪ್ನುಯಾತ್-ಹೊಂದುವನು. ... ... ॥೭೧॥

ಶ್ಲೋ ॥ ಕಚ್ಚಿದೇತಚ್ಛ್ರುತಂಪಾರ್ಥ ತ್ವಯೈಕಾಗ್ರೇಣ ಚೇತಸಾ । ಕಚ್ಚಿದಜ್ಞಾನಸಂಮೋಹಃಪ್ರಣಷ್ಟಸ್ತೇಧನಂ ಜಯ ... ... ॥೭೨॥

ಪ ॥ ಕಚ್ಚಿತ್-ಏತತ್-ಶ್ರುತಂ-ಪಾರ್ಥ-ತ್ವಯಾ-ಏಕಾಗ್ರೇಣ-ಚೇತಸಾ । ಕಚ್ಚಿ ತ್-ಅಜ್ಞಾನಸಮ್ಮೋಹಃ-ಪ್ರಣಷ್ಟಃ-ತೆ-ಧನಂಜಯ ॥

(ಅ॥ ರಾ ॥ ಭಾ)ಪಾರ್ಥ-ಎಲೈಅರ್ಜುನನೆ, ಏತತ್-ನಿನಿಗೋಸ್ಕರ ವಾಗಿನಾನು ಉಪದೇಶಿಸಿರುವ ಈವಿಶೇಷಾರ್ಥಸಮೂಹವು,ತ್ವಯಾ-ನಿ ನ್ನಿಂದ, ಏಕಾಗ್ರೇಣ-ಅವಧಾನಯುಕ್ತವಾದ, ಚೇತಸಾ-ಮನಸ್ಸಿನೊ ಡನೆ, ಶ್ರುತಂಕಚ್ಚಿತ್-ಕೇಳಲ್ಪಟ್ಟಿತೆ ಯೇನು ? ಧನಂಜಯ-ಎಲೈ ಅರ್ಜುನನೆ, ತೆ-ನಿನ್ನ, ಅಜ್ಞಾನಸಮ್ಮೋಹಃ- ಅಜ್ಞಾನದಿಂದುಟಾದ ಬು ದ್ಧಿಭ್ರಂಶವು, ಪ್ರಣಷ್ಟಃಕಚ್ಚಿತ್-ನಾಶವಾಯಿತೆ ಯೇನು? ॥೭೨॥

(ಶಂ॥ಭಾ ) ಶಿಷ್ಯನಿಗೆ ತನ್ನಿಂದ ಉಪದೇಶಿಸಲ್ಪಟ್ಟ ಶಾಸ್ತ್ರಾ ರ್ಥವು ಗೃಹೀತವಾಯಿತೆ ? ಇಲ್ಲವೆ ? ಎಂಬುವುದನ್ನು ತಿಳಿದುಕೊಳ್ಳು ವುದಕ್ಕಾಗಿ ಪ್ರಶ್ನೆಮಾಡುತ್ತಾನೆ. ಅರ್ಜುನನು ಭಗವದುಪದಿಷ್ಟಗ ಳಾದ ಅರ್ಥಗಳನ್ನು ಗ್ರಹಿಸದೆ ಹೋದದ್ದು ತಿಳಿದರೆ ಪುನಶ್ಚ ಉಪಾ ಯಾಂತರದಿಂದ ಈ ಅರ್ಥಗಳನ್ನು ತಿಳಿಸೋಣವೆಂಬದಾಗಿ ಪ್ರಶ್ನೆಮಾ ಡುವ ಶ್ರೀಕೃಷ್ಣನ ಅಭಿಪ್ರಾಯವು. ಪ್ರಯತ್ನಾಂತರವನ್ನಾದರೂ ಆಶ್ರಯಿಸಿ ಶಿಷ್ಯನಿಗೆ ಕೃತಾರ್ಥತ್ವವನ್ನುಂಟುಮಾಡಬೇಕೆಂಬುವ ಆಚಾ ರ್ಯಧರ್ಮವು ಇದರಿಂದ ಪ್ರದರ್ಶಿತ ವಾಯಿತು. ... ॥೭೨॥

ಶ್ಲೋ॥ ಅರ್ಜುನ ಉವಾಚ । ನಷ್ಟೋಮೋಹಸ್ಸ್ಮೃತಿ
ರ್ಲಬ್ಧಾತ್ವತ್ಪ್ರಸಾದಾನ್ಮಯಾಚ್ಯುತ।ಸ್ಥಿತೋಽಸ್ಮಿಗತ
ಸಂದೇಹಃಕರಿಷ್ಯೇವಚನಂತವ ॥ ... ॥೭೩॥

ಪ ॥ ಅರ್ಜುನಃ-ಉವಾಚ॥ ನಷ್ಟಃ-ಮೋಹಃ-ಸ್ಮೃತಿಃ-ಲಬ್ಧಾ-ತ್ವತ್ಪ್ರಸಾದಾತ್-ಮಯಾ-ಅಚ್ಯುತ । ಸ್ಥಿತಃ-ಅಸ್ಮಿ-ಗತಸಂದೇಹಃ-ಕರಿಷ್ಯೇ-ವಚನಂ-ತವ ॥

(ಅ॥)ಅರ್ಜುನ ಉವಾಚ-ಅರ್ಜುನನು ಹೇಳಿದನು. ಅಚ್ಯುತ-ಎಲೈಶ್ರೀಕೃಷ್ಣನೆ, ತ್ವತ್ಪ್ರಸಾದಾತ್-ನಿನ್ನ ಅನುಗ್ರಹದ್ದೆಯಿಂದ, ಮಯಾ-ನನ್ನಿಂದ, ಸ್ಮೃತಿರ್ಲಬ್ಧಾ-ಆತ್ಮಸ್ವರೂಪಜ್ಞಾನವು ಹೊಂದಲ್ಪಟ್ಟಿತು. ಮೋಹೋನಷ್ಟಃ-ಅಜ್ಞಾನವು ನಷ್ಟನಾಯಿತು, ಗತಸಂದೇಹಃ-ಸಂದೇಹನಿವೃತ್ತಿಯನ್ನು ಮಾಡಿಕೊಂಡವನಾಗಿ, ಸ್ಥಿತೋಽಸ್ಮಿ-ಇರುವೆನು. ತವವಚನಂಕರಿಷ್ಯೇ-ನಿನ್ನಮಾತನ್ನು ನೆರವೇರಿಸುವೆನು. ॥೭೩॥

(ಶಂ॥ಭಾ) ಅವಿವೇಕವು ನಾಶಹೊಂದಿತೆ ಎಂಬ ಪ್ರಶ್ನಕ್ಕೆ ಅಜ್ಞಾನವು ಹೋಯಿತೆಂದು ಉತ್ತರವನ್ನು ಹೇಳಿದನು. ಇದರಿಂದ ಶಾಸ್ತ್ರ ವಿಚಾರಕ್ಕೆ ಅಜ್ಞಾನ ನಿವೃತ್ತಿಯೂ ಆತ್ಮಸ್ವರೂಪಾನು ಸಂಧಾನವೂ ಫಲವೆಂದು ಪ್ರಕಟನ ಮಾಡಿದಂತೆ ಆಯಿತು. ತವವಚನಂಕರಿಷ್ಯೇ-ಎಂಬುವುದರಿಂದ ನನಗೆ ಆಗಬೇಕಾದದ್ದೇನೂ ಇಲ್ಲವಾದರೂ ನಿನ್ನ ಆಜ್ಞಾಪರಿಪಾಲನವೆ ನನ್ನ ಕರ್ತವ್ಯವೆಂಬದಾಗಿ ತಿಳಿದಿರುವೆನೆಂಬ ತಾತ್ಪರ್ಯವನ್ನು ಗ್ರಹಿಸಬೇಕು. ... ... ॥೭೩॥

(ರಾ॥ ಭಾ) ಅಚ್ಯುತ-ಎಲೈ ಶ್ರೀಕೃಷ್ಣನೆ, ಮೋಹಃ-ದೇಹವೇ ಆತ್ಮವೆಂತಲೂ, ಸಮಸ್ತವಾದ ಚೇತನಾ ಚೇತನ ವಸ್ತುವೂ ಸ್ವತಂತ್ರವೆಂತಲೂ, ನಿತ್ಯನೈಮಿತ್ತಿಕ ರೂಪವಾದಕರ್ಮವು ಬಂಧಕವೆಂತಲೂ ತಿಳಿದುಕೊಂಡಿದ್ದ ವಿಪರೀತ ಜ್ಞಾನವು, ತ್ವತ್ಪ್ರಸಾದಾತ್-ನಿನ್ನ ಅನುಗ್ರಹದ್ದೆಯಿಂದ, ನಷ್ಟಃ-ಹೋಯಿತು. ಮಯಾ-ನನ್ನಿಂದ, ಸ್ಮೃತಿಃ-ಆತ್ಮನು ಪ್ರಕೃತಿ ವಿಲಕ್ಷಣನೆಂತಲೂ ಪ್ರಕೃತಿ ಸ್ವಭಾವವಾದ ಸ್ವರೂಪ ವಿಕಾರಗಳಿಂದ ಶೂನ್ಯನೆಂತಲೂ ಜ್ಞಾತೃತ್ವೈಕ ಸ್ವಭಾವನೆಂತಲೂ ಪರಮ ಪುರುಷ ಶೇಷತ್ವ ತತ್ಪ್ರರ. ತಂತ್ರಾದಿ ಸ್ವಭಾವನೆಂತಲೂ ತಿಳಿದುಕೊಂಡ ಜ್ಞಾನವು, * ನಿಖಿಲ ಜಗತ್ಸೃಷ್ಟಿ ಸ್ಥಿತಿ ಪ್ರಲಯ ಲೀಲನಾಗಿಯೂ ಅಶೇಷ ದೋಷಪ್ರತ್ಯ

☞ *ಇವುಗಳಿಗೆ (ರಾ । ಭಾ) ೧ನೆ ಅಧ್ಯಾಯದ ಅವತಾರಿಕೆಯಲ್ಲಿ ಅರ್ಥವನ್ನು ನೋಡಿ.

ನೀಕ ಕಲ್ಯಾಣೈಕತಾನ ಸ್ವರೂಪನಾಗಿಯೂ ಸ್ವಾಭಾವಿಕಾನವಧಿ ಕಾತಿಶಯಜ್ಞಾನಬಲೈಶ್ವರ್ಯ ವೀರ್ಯ ಶಕ್ತಿತೇಜಃ ಪ್ರಭೃತಿಗಳಾದ ಕಲ್ಯಾಣ ಗುಣಗಣಗಳಿಗೆ ಮಹಾಸಮುದ್ರನಾಗಿಯೂ ಪರಬ್ರಹ್ಮಶಬ್ದವಾಚ್ಯನಾಗಿಯೂ ಇರುವ ಪರಮಪುರುಷನ ಯಾಥಾತ್ಮ್ಯ ಜ್ಞಾನವೂ ಇಂಥಾ ಪರಾವರತತ್ವ ಯಾಥಾತ್ಮ್ಯ ವಿಜ್ಞಾನದ ಅಭ್ಯಾಸದೊಡನೆ ಸೇರಿಯೂ ಅನುದಿನವೂ ವೃದ್ಧಿಹೊಂದಿ ಬರುತಲಿರುವ ಪರಮ ಪುರುಷನ ಪ್ರೀತಿಯನ್ನೇ ಮುಖ್ಯಫಲವಾಗಿ ವುಳ್ಳದ್ದಾಗಿಯೂ ಇರುವ ನಿತ್ಯನೈಮಿತ್ತಿಕ ಕಾಮ್ಯ ಕರ್ಮಗಳಿಂದಲೂ ನಿಷಿದ್ಧ ಪರಿಹಾರದಿಂದಲೂ ಶಮದಮಾದ್ಯಾತ್ಮಗುಣಗಳಿಂದಲೂ ವೃದ್ಧಿಹೊಂದತಕ್ಕದ್ದಾದ ಭಕ್ತಿರೂಪವಾಗಿರುವ ಉಪಾಸನದಿಂದಲೆ ವೇದಾಂತ ವೇದ್ಯನಾಗಿಯೂ ಪರಮಪುರುಷನಾಗಿಯೂ ವಾಸುದೇವನಾಗಿಯೂ ಇರುವ ನೀನು ಹೊಂದತಕ್ಕವನೆಂಬ ಜ್ಞಾನವೂ, ಲಬ್ಧಾ-ಹೊಂದಲ್ಪಟ್ಟಿತು. ಗತಸಂದೇಹಃ-ಬಂಧುಗಳಲ್ಲಿ ಸ್ನೇಹದಿಂದಲೂ ದಯೆಯಿಂದಲೂ ಸಹಜವಾದ ಧರ್ಮವನ್ನು ಅಧರ್ಮತ್ವೇನತಿಳಿಯುವಿಕೆ ಎಂಬ ವಿಪರೀತ ಜ್ಞಾನದಿಂದ ಬಿಡಲ್ಪಟ್ಟ ಸಮಸ್ತ ಸಂದೇಹಗಳುಳ್ಳವನಾಗಿ, ಸ್ಥಿತೋಽಸ್ಮಿ-ಸ್ವಸ್ಥನಾಗಿರುತಲಿಧೇನೆ, ತವವಚನಂ ಕರಿಷ್ಯೇ-ಈಗಲೇ ಯುದ್ಧಾದಿಗಳನ್ನು ಮಾಡೆಂಬ ನಿನ್ನ ವಾಕ್ಯವನ್ನು ನೆರವೇರಿಸುವೆನು. ನೀನು ಹೇಳಿರುವಂತೆ ಯುದ್ಧವನ್ನು ಮಾಡುವೆನೆಂದು ತಾತ್ಪರ್ಯವು. ... ॥೭೩॥

(ಗೀ॥ ವಿ) ಸ್ಮೃತಿರ್ಲಬ್ಧಾ-ನಾರಾಯಣ ದ್ವೇಷಿಗಳನ್ನೂ ಅವರ ಅನುಬಂಧಿಗಳನ್ನೂ ಸಂಹರಿಸುವುದು ಅತ್ಯಂತಾವಶ್ಯಕವೆಂತಲೂ ಅದು ಪರಮ ಧರ್ಮವೆಂತಲೂ ತಿಳಿದುಕೊಂಡಿರುವ ಜ್ಞಾನವು ಹೊಂದಲ್ಪಟ್ಟಿತು. ... ... ॥೭೩॥

ಶ್ಲೋ॥ ಸಂಜಯಉವಾಚ॥ ಇತ್ಯಹಂವಾಸುದೇವಸ್ಯಪಾರ್ಥಸ್ಯಚಮಹಾತ್ಮನಃ । ಸಂವಾದಮಿಮಮಶ್ರೌಷಮದ್ಭುತಂರೋಮಹರ್ಷಣಂ ॥ ... ॥೭೪॥

ಪ॥ ಸಂಜಯಃ-ಉವಾಚ॥ ಇತಿ-ಅಹಂ-ವಾಸುದೇವಸ್ಯ-ಪಾರ್ಥಸ್ಯ-ಚ-ಮಹಾತ್ಮನಃ। ಸಂವಾದಂ-ಇಮಂ-ಅಶ್ರೌಷಂ-ಅದ್ಭುತಂ-ರೋಮಹರ್ಷಣಂ ॥

(ಅ|| ರಾ|| ಭಾ) ಇತಿ-ಈ ಪ್ರಕಾರವಾಗಿ, ವಾಸುದೇವಸ್ಯ-ವಸುದೇವ ಪುತ್ರನಾದ ಶ್ರೀಕೃಷ್ಣನಿಗೂ, ಮಹಾತ್ಮನಃ - ಮಹಾಬುದ್ಧಿಯುಳ್ಳವನಾಗಿಯೂ ಆ ಶ್ರೀಕೃಷ್ಣನಚರಣಾರವಿಂದಗಳನ್ನೇ ಆಶ್ರಯಿಸಿದವನಾಗಿಯೂ ಇರುವ,ಪಾರ್ಥಸ್ಯಚ-ಅಂಥಾ ಶ್ರೀಕೃಷ್ಣನಿಗೆ ತಂದೆಯಾದವಸುದೇವನ ಸಹೋದರಿಯಾದ ಕುಂತೀಕುಮಾರನಾದ ಅರ್ಜುನನಿಗೂ, (ನಡದಿರುವ) ರೋಮಹರ್ಷಣಂ - ರೋಮಾಂಚವನ್ನುಂಟುಮಾಡತಕ್ಕದ್ದಾಗಿಯೂ, ಅದ್ಭುತಂ-ಆಶ್ಚರ್ಯಕರವಾಗಿಯೂ ಇರುವ, ಇಮಂ ಸಂವಾದಂ-ಈ ಪ್ರಶ್ನೋತ್ತರ ಸಂದರ್ಭವನ್ನು, ಅಶ್ರೌಷಂ-ನಾನು ಕೇಳಿದೆನು. ... ... ||೭೪||

ಶ್ಲೋ || ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂಪರಂ| ಯೋಗಂಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಸ್ಸ್ವಯಂ || ... ... ||೭೫||

ಪ|| ವ್ಯಾಸಪ್ರಸಾದಾತ್-ಶ್ರುತವಾನ್-ಏತತ್-ಗುಹ್ಯಂ-ಅಹಂ-ಪರಂ | ಯೋಗಂ-ಯೋಗೇಶ್ವರಾತ್-ಕೃಷ್ಣಾತ್-ಸಾಕ್ಷಾತ್-ಕಥಯತಃ-ಸ್ವಯಂ ||

(ಅ|| ರಾ|| ಭಾ) ವ್ಯಾಸಪ್ರಸಾದಾತ್-ಶ್ರೀವೇದವ್ಯಾಸರ ದಿವ್ಯಾನುಗ್ರಹದ್ದೆಸೆಯಿಂದ, ದಿವ್ಯಚಕ್ಷುಸ್ಸನ್ನೂ ದಿವ್ಯವಾದ ಕಿವಿಯನ್ನೂ ಹೊಂದಿದವನಾಗಿ, ಏತತ್ಪರಂ-ಈ ಶ್ರೇಷ್ಠವಾದ, ಯೋಗಂ - ಯೋಗಶಾಸ್ತ್ರವೆಂಬ, ಗುಹ್ಯಂ - ರಹಸ್ಯಾರ್ಥವನ್ನು, ಸ್ವಯಂಕಥಯತಃ-ತಾನಾಗಿಯೆ ಉಪದೇಶಿಸುವಂತವನಾಗಿಯೂ, ಯೋಗೇಶ್ವರಾತ್-ಜ್ಞಾನಬಲೈಶ್ವರ್ಯ ವೀರ್ಯ ಶಕ್ತಿತೇಜಸ್ಸುಗಳಿಗೆ ಮಹಾನಿಧಿಯಾಗಿಯೂ ಇರುವ, (ಶಂ)ಸಕಲ ಯೋಗಗಳಿಗೂ ಈಶ್ವರನಾಗಿಯೂ ಇರುವ,ಕೃಷ್ಣಾತ್-ಶ್ರೀಕೃಷ್ಣನ ದೆಸೆಯಿಂದ, ಸಾಕ್ಷಾತ್-ಪ್ರತ್ಯಕ್ಷವಾಗಿಯೇ, ಅಹಂ-ನಾನು, ಅಶ್ರೌಷಂ-ಕೇಳಿದೆನು. ... ... ||೭೫||

(ಗೀ|| ವಿ) ಭಾರತ ಯುದ್ಧಾರಂಭದಲ್ಲಿ ಕುರುಕ್ಷೇತ್ರದಲ್ಲಿರುವ ಯುದ್ಧರಂಗದಲ್ಲಿ ನಡೆಯುವ ಸಕಲ ಸಂಗತಿಗಳೂನನಗೆ ಪ್ರತ್ಯಕ್ಷವಾಗಿ ತಿಳಿಯುವಂತೆಯೂ ತಿಳಿಸುವ ಸಮಸ್ತಾರ್ಥಗಳನ್ನೂ ನಿನಗೆ ಹೇಳುವಂತೆಯೂ ವ್ಯಾಸದೇವರು ನನಗೆ ಜ್ಞಾನಚಕ್ಷುಸ್ಸನ್ನೂ ಜ್ಞಾನಕಿವಿಯನ್ನೂ

ಕೊಟ್ಟು ಅನುಗ್ರಹಿಸಿರುವುದ್ಧರಿಂದ ಈಗೀತಾಶಾಸ್ತ್ರದ ಆನು ಪೂರ್ವಿಯ ನ್ನುತಿಳಿದಿರುವೆನೆಂದು ತಾತ್ಪರ್ಯವು. ... ||೭೫||

ಶ್ಲೋ|| ರಾಜನ್ಸಂಸ್ಮೃತ್ಯಸಂಸ್ಮೃತ್ಯಸಂವಾದಮಿಮಮ
ದ್ಭುತಂ |ಕೇಶವಾರ್ಜುನಯೋಃಪುಣ್ಯಂಹೃಷ್ಯಾಮಿಚಮು
ರ್ಹುಹುಃ || ... ... ||೭೬||

ಪ|| ರಾಜನ್-ಸಂಸ್ಮೃತ್ಯ-ಸಂಸ್ಮೃತ್ಯ-ಸಂವಾದಂ-ಇಮಂ-ಅದ್ಭುತಂ | ಕೇಶವಾ ರ್ಜುನಯೋಃ-ಪುಣ್ಯಂ-ಹೃಷ್ಯಾಮಿ-ಚ-ಮುಹುಃ-ಮುಹುಃ ||

(ಅ|| ರಾ|| ಭಾ) ರಾಜನ್-ಎಲೈ ಧೃತರಾಷ್ಟ್ರ ಮಹಾರಾಜನೆ, ಕೇಶವಾರ್ಜುನಯೋಃ - ಶ್ರೀಕೃಷ್ಣಾರ್ಜುನರ, ಪುಣ್ಯಮದ್ಭುತಮಿ ಮಂಸಂವಾದಂ-ಪಾವನವಾಗಿಯೂ ಆಶ್ಚರ್ಯಕರವಾಗಿಯೂ ಇರುವ ಈ ಪ್ರಶ್ನೋತ್ತರ ಸಂದರ್ಭವನ್ನು, ( ಗೀ || ವಿ ) ಪುಣ್ಯಂ-ಪರಲೋಕ ಸುಖಕ್ಕೆ ಹೇತುವಾದ ಸಂವಾದವನ್ನು, ಸಂಸ್ಮೃತ್ಯ ಸಂಸ್ಮೃತ್ಯ-ಸಾ ಕ್ಷಾತ್ತಾಗಿ ಕೇಳಿರುವಂತೆಯೆ ನೆನಸಿಕೊಂಡು ನೆನಸಿಕೊಂಡು, ಮು ಹುರ್ಮುಹುಃ-ಆಗಾಗ್ಯೆ, ಹೃಷ್ಯಾಮಿ-ಆನಂದಿಸುವೆನು. ||೭೬||

ಶ್ಲೋ|| ತಚ್ಚಸಂಸ್ಮೃತ್ಯಸಂಸ್ಮೃತ್ಯರೂಪಮತ್ಯದ್ಭು
ತಂಹರೇಃ | ವಿಸ್ಮಯೋಮೇಮಹಾನ್ರಾಜನ್ಹೃಷ್ಯಾಮಿ
ಚಪುನಃಪುನಃ || ... ||೭೭||

ಪ|| ತತ್-ಚ-ಸಂಸ್ಮೃತ್ಯ-ಸಂಸ್ಮೃತ್ಯ-ರೂಪಂ-ಅತ್ಯದ್ಭುತಂ-ಹರೇಃ | ವಿಸ್ಮ ಯಃ-ಮೇ-ಮಹಾನ್-ರಾಜನ್-ಹೃಷ್ಯಾಮಿ-ಚ-ಮುಹುಃ-ಮುಹುಃ ||

(ಅ|| ರಾ|| ಭಾ) ರಾಜನ್-ಎಲೈ ಧೃತರಾಷ್ಟ್ರಮಹಾರಾಜನೆ, ಹರೇಃ-ಶ್ರೀಕೃಷ್ಣನ,ಅತ್ಯದ್ಭುತಂ-ಅತ್ಯಂತಾಶ್ಚರ್ಯಕರವಾದ, ತಚ್ಚ ರೂಪಂ-ಅರ್ಜುನನಿಗೆ ತೋರಿಸಲ್ಪಟ್ಟಈಶ್ವರ ಸಂಬಂಧವಾದ ಆದಿವ್ಯ ರೂಪವನ್ನು, ಸಂಸ್ಮೃತ್ಯ ಸಂಸ್ಮೃತ್ಯ-ಕಂಡಂತೆಯೆ ನೆನೆಸಿ ನೆನೆಸಿ, ಮೇ-ಸಂತೋಷಿಸುತಲಿರುವ ನನಿಗೆ, ಮಹಾನ್ವಿಸ್ಮಯಃ - ಮಹತ್ತಾದ ಆಶ್ಚರ್ಯವು, ( ಜಾಯತೆ- ಎಂಬದಾಗಿ ಇಟ್ಟುಕೊಳ್ಳಬೇಕು ) ಜಾಯ ತೆ - ಉಂಟಾಗುವುದು, ಪುನಃಪುನಶ್ಚ ಹೃಷ್ಯಾಮಿ-ಆಗಾಗ್ಯೆ ಆನಂದ ಪಡುವೆನು. ... ... ... ||೭೭||

ಶ್ಲೋ॥ ಯತ್ರಯೋಗೇಶ್ವರಃಕೃಷ್ಣೋಯತ್ರಪಾರ್ಥೋ ಧನುರ್ಧರಃ । ತತ್ರಶ್ರೀರ್ವಿಜಯೋಭೂತಿರ್ಧ್ರುವಾನೀತಿ ರ್ಮತಿರ್ಮಮ ॥ ... ॥೭೮॥

ಇತಿ ಶ್ರೀಮಹಾಭಾರತೇಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶ್ರೀಭೀಷ್ಮಪರ್ವಣಿ ಶ್ರೀಭಗವದ್ಗೀತಾಸೂಪನಿಷತ್ಸು ಪರಬ್ರಹ್ಮವಿದ್ಯಾಯಾಂಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ( ಸಕಲಶಾಸ್ತ್ರಾರ್ಥಕಥನಮೋಕ್ಷೋಪದೇಶಯೋಗೋನಾಮ ) ಮೋಕ್ಷಸನ್ನ್ಯಾಸಯೋಗೋ ನಾಮಾಷ್ಟಾದಶೋಽಧ್ಯಾಯಃ ॥

—*ಶ್ರೀಭಗವದ್ಗೀತಾಸಮಾಪ್ತಾ.*—

ಪ॥ ಯತ್ರ-ಯೋಗೇಶ್ವರಃ-ಕೃಷ್ಣಃ-ಯತ್ರ-ಪಾರ್ಥಃ-ಧನುರ್ಧರಃ। ತತ್ರ-ಶ್ರೀಃ-ವಿಜಯಃ-ಭೂತಿಃ-ಧ್ರುವಾಃ-ನೀತಿಃ-ಮತಿಃ-ಮಮ ॥

( ಅ॥ರಾ॥ಭಾ ) ಯತ್ರ-ಯಾವಸ್ಥಲದಲ್ಲಿ, ಯೋಗೇಶ್ವರಃ-ಯೋಗವೆಂದರೆ ಅನೇಕಭೇದಗಳಿಂದ ಕೂಡಿರುವ ಚೇತನಾಚೇತನ ವಸ್ತುಗಳ ಆಯಾ ಸ್ವಭಾವಗಳು; ಅವುಗಳಿಗೆ ನಿರ್ವಾಹಕನಾಗಿರುವ, ಕೃಷ್ಣಃ-ಶ್ರೀಕೃಷ್ಣನಿರುತ್ತಾನೆಯೊ, ಯತ್ರ-ಯಾವಸ್ಥಲದಲ್ಲಿತಾನೆ, ಧನುರ್ಧರಃಪಾರ್ಥಃ-ಧನುರ್ಧರನಾಗಿಯೂ ಆಶ್ರೀಕೃಷ್ಣನ ತಂದೆಯ ಸಹೋದರೀಮಗನಾಗಿಯೂ ಆಶ್ರೀಕೃಷ್ಣನಪಾದಾರವಿಂದಗಳನ್ನ ಆಶ್ರಯಿಸಿದವನಾಗಿಯೂ ಇರುವ ಅರ್ಜುನ ನಿರುವನೊ, ತತ್ರ- ಆಸ್ಥಲದಲ್ಲಿ, ಶ್ರೀಃ-ಲಕ್ಷ್ಮಿಯೂ, ವಿಜಯಃ_ಶತ್ರುಜಯವೂ, ಭೂತಿಃ-ಪ್ರಭುತ್ವವೂ, (ಗೀ॥ ವಿ) ಐಶ್ವರ್ಯವೂ ಅಥವಾ ಸಂಪತ್ತೂ, ನೀತಿಃ-ರಾಜನೀತಿಯೂ, ಧ್ರುವಾಃ - ಸ್ಥಿರಗಳಾಗಿರುವು ವೆಂಬದಾಗಿ, ಮಮ ಮತಿಃ_ನನ್ನ ನಿಶ್ಚಯವು. ॥೭೮॥

(ಶ್ರೀ) ಅರ್ಜುನನಿಗೆ ಮಾಡಿರುವ ವಿಶ್ವರೂಪಪ್ರದರ್ಶನ ವೃತ್ತಾಂತದಿಂದಲೂ ಪರಮಾರ್ಥೋಪದೇಶಾದಿ ವೃತ್ತಾಂತದಿಂದಲೂ ನಿನಗೆ ತೋರುವ ಅಂಶವು ನಿನ್ನ ಮಕ್ಕಳಿಗೆ ಜಯವುಂಟಾಗಿ ರಾಜ್ಯಾದಿಗಳು ಪ್ರಾಪ್ತವಾಗಲಾರದೆಂಬುವುದೆ. ಆದುದರಿಂದಅಂಥಾದುರಾಶೆಯನ್ನು ಬಿಡೆಂಬ ಅಭಿಪ್ರಾಯದಿಂದ ಸಂಜಯರು ಹೇಳುತ್ತಾರೆ. ಯಾವಪಕ್ಷದಲ್ಲಿ ಯೋಗಗಳಿಗೆ ಈಶ್ವರನಾದ ಶ್ರೀಕೃಷ್ಣನಿರುವನೊ ಯಾವ ಪಕ್ಷದಲ್ಲಿ ಧನುರ್ಧಾರಿಯಾದಅರ್ಜುನನಿರುವನೊ ಆಪಕ್ಷದಲ್ಲಿರಾಜ್ಯಲಕ್ಷ್ಮಿಯು ಜಯಲಕ್ಷ್ಮಿಯುಶ್ರೀಮಹಾಲಕ್ಷ್ಮಿಯೂಐಶ್ವರ್ಯಾಭಿವೃದ್ಧಿಯೂನ್ಯಾಯವೂ ತಪ್ಪ

ದೇಉಂಟಾಗುವುದೆಂದು ನನ್ನ ಅಭಿಪ್ರಾಯವು. ಇಂಥಾ ತನ್ನ ನಿಶ್ಚಯ ವನ್ನು ಧೃತರಾಷ್ಟ್ರನು ಕೇಳಿ ಇನ್ನು ಮೇಲಾದರೂ ಶ್ರೀಕೃಷ್ಣನನ್ನು ಶರಣಹೊಂದಿ ಪಾಂಡವರೊಡನೆ ಸಮಾಧಾನವನ್ನು ಮಾಡಿಕೊಳ್ಳಲಿ ಎಂಬದಾಗಿ ಸಂಜಯರ ಅಭಿಪ್ರಾಯವೆಂದರಿಯಬೇಕು.

ಭಗವದ್ಭಕ್ತಿಯುಕ್ತಸ್ಯ ತತ್ಪ್ರಸಾದಾತ್ಮಬೋಧತಃ ।
ಸುಖಂಬಂಧವಿಮುಕ್ತಿಸ್ಸ್ಯಾದಿತಿ ಗೀತಾರ್ಥಸಂಗ್ರಹಃ॥

ಭಗವದ್ಭಕ್ತಿಯುಕ್ತನಾದ ಪುರುಷನಿಗೆ ಭಗವದನುಗ್ರಹದಿಂದುಂಟಾದ ಆತ್ಮಜ್ಞಾನದಿಂದಲೆ ಸುಖವಾಗಿ ಬಂಧ ವಿಮೋಚನವುಂಟಾಗುವುದೆಂಬುವುದೆ ಶ್ರೀಮದ್ಗೀತಾರ್ಥಸಾರಸಂಗ್ರಹವು. ॥೭೮॥

ಈ ಅಧ್ಯಾಯಾರ್ಥಗಳನ್ನು ಸಂಗ್ರಹಿಸುವ
ಅದ್ವೈತಸಿದ್ಧಾಂತಿಗಳ ಸಂಗ್ರಹಶ್ಲೋಕವು.

ಮೂ॥ ಅಧ್ಯಾಯೈರ್ವ್ಯಕ್ತಸಪ್ತಾಧಿಕದಶಭಿರಭಿಪ್ರಾಯಉ
ಕ್ತಿಕ್ರಮೇಣತ್ಯಾಗಸ್ಸನ್ನ್ಯಾಸಪೂರ್ವಸ್ತ್ರಿವಿಧಮತಿಧೃ
ತಿಜ್ಞಾನಕರ್ತೃಕ್ರಿಯಾದಿಃ । ಬ್ರಹ್ಮಾಪ್ತೇರುಪಾಯಃ
ಪುನರಪಿಗದಿತೋಽಷ್ಟಾದಶೇಸಂಗ್ರಹಾರ್ಥಂಪಾರ್ಥಸ್ತ್ವೇ
ನೋದತಿಷ್ಠನ್ನನುಸಮರಕೃತೇತ್ಯಕ್ತಸಂದೇಹಜಾತಃ॥೧೮॥

ತಾ॥ ಧ್ಯಾನಾಭ್ಯಾಸಿಯಾದವನಿಗೆ ಕರ್ಮಫಲತ್ಯಾಗ ಮಾವಶ್ಯಕವೆಂತಲೂ ಸಾತ್ವಿಕರಾಜಸ ತಾಮಸ ಭೇದಗಳುಳ್ಳ ಬುದ್ಧಿಧೃತಿಜ್ಞಾನಕರ್ತೃಕ್ರಿಯಾದಿಗಳ("ಬುದ್ಧೇರ್ಭೇದಂ ಧೃತೇಶ್ಚೈವ ॥(೧೮॥ ೨೯॥) ಇತ್ಯಾದಿಗಳಿಂದ ಹೇಳಲ್ಪಟ್ಟಿರುವುವು.) ವಿವರಗಳೂ ಬ್ರಹ್ಮೈಕ್ಯಕ್ಕೆ ಸಾಕ್ಷಾತ್ಸಾಧನವು ಇಂಥಾದ್ದೆಂತಲೂ ಹಿಂದಿನ ಅಧ್ಯಾಯಗಳಲ್ಲಿ ಕ್ರಮವಾಗಿ ಹೇಳಲ್ಪಟ್ಟ ಅರ್ಥಗಳನ್ನು ಪುನಶ್ಚ ಸಂಗ್ರಹವಾಗಿ ಉಪದೇಶಿಸಲೂ ಸರ್ವಸಂಶಯಗಳನ್ನು ಹೋಗಲಾಡಿಸಿಕೊಂಡಿರುವ ಅರ್ಜುನನು ಯುದ್ಧಸನ್ನದ್ಧನಾದನೆಂಬ ಅರ್ಥವು ಈ ಹದಿನೆಂಟನೆ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವುದು. ... ॥೧೮॥

—*ಶ್ರೀಯಮುನಾಚಾರ್ಯರ ಸಂಗ್ರಹಶ್ಲೋಕವು*—

ಮೂ॥ಈಶ್ವರೇಕರ್ತೃತಾಬುದ್ಧಿಸ್ಸತ್ವೋಪಾದೇಯತಾನ್ತಿ
ಮೇ।ಸ್ವಕರ್ಮಪರಿಣಾಮಶ್ಚ ಶಾಸ್ತ್ರಸಾರಾರ್ಥಉಚ್ಯತೇ॥೨೨

ತಾ॥ ಈ ಅಧ್ಯಾಯದಲ್ಲಿ ಈಶ್ವರನಿಗೇನೆ ಕರ್ತೃತ್ವವೆಂತಲೂ ಸತ್ವಗುಣವು ಅವಶ್ಯಸ್ವೀಕಾರ್ಯವೆಂತಲೂ ತನ್ನ ಕರ್ಮಾನುಷ್ಠಾನಗಳ ಪರಿಣಾಮಪ್ರಕಾರಗಳೂ ಶಾಸ್ತ್ರಸಾರಾರ್ಥವೂ ಹೇಳಲ್ಪಟ್ಟಿರುವುದು ೨೦॥

ಮೂ ॥ ಕರ್ಮಯೋಗಸ್ತಪಸ್ತೀರ್ಥದಾನಯಜ್ಞಾದಿಸೇವನಂ । ಜ್ಞಾನಯೋಗೋಜಿತಸ್ವಾಂತೈಃಪರಿಶುದ್ಧಾತ್ಮನಿಸ್ಥಿತಿಃ ॥ ... ... ॥೨೨॥

ತಾ ॥ ತಪಸ್ಸಿನ ಅನುಷ್ಠಾನವೂ ತೀರ್ಥಸ್ನಾನಗಳನ್ನು ಮಾಡುವಿಕೆಯೂ ದಾನಗಳನ್ನು ಮಾಡುವಿಕೆಯೂ ಯಜ್ಞಾದಿಗಳ ಅನುಷ್ಠಾನವೂ ಇವೇ ಮೊದಲಾದವುಗಳು ಕರ್ಮಯೋಗಗಳು. ಅನ್ತಃಕರಣವನ್ನು ನಿಗ್ರಹಿಸಿ ಪರಿಶುದ್ಧಾತ್ಮ ಸ್ವರೂಪದಲ್ಲಿ ನಿಲ್ಲಿಸುವಿಕೆಯು ಜ್ಞಾನ ಯೋಗವು ॥ ॥೨೨॥

ಮೂ ॥ ಭಕ್ತಿಯೋಗಃಪರೈಕಾನ್ತ್ಯಪ್ರೀತ್ಯಾಧ್ಯಾನಾದಿಷುಸ್ಥಿತಿಃ । ತ್ರಯಾಣಾಮಪಿಯೋಗಾನಾಂತ್ರಿಭಿರನ್ಯೋನ್ಯಸಂಗಮಃ ॥೨೪॥ ನಿತ್ಯನೈಮಿತ್ತಿಕಾನಾಂಚಪರಾರಾಧನರೂಪಿಣಾಂ । ಆತ್ಮದೃಷ್ಟೇಸ್ತ್ರಯೋಪ್ಯೇತೇಯೋಗದ್ವಾರೇಣಸಾಧಕಾಃ ॥ ... ॥೨೫॥

ತಾ ॥ ಅತ್ಯಂತವಾದ ಭಗವತ್ಪ್ರೇಮೆಯೊಡನೆ ಇತರವಿಷಯಗಳಲ್ಲಿ ವ್ಯಾಪಿಸದ ಮನಸ್ಸಿನಿಂದ ಧ್ಯಾನಾದಿಗಳನ್ನು ಮಾಡುವಿಕೆಯು ಭಕ್ತಿಯೋಗವು. ಕರ್ಮಯೋಗಗಳಿಗೂ ಪರಮಾತ್ಮಾರಾಧನರೂಪಗಳಾದ ನಿತ್ಯನೈಮಿತ್ತಿಕ ಕರ್ಮಗಳಿಗೂ ಪರಸ್ಪರ ಸಂಬಂಧವು ಯಾವಾಗಲೂ ಉಂಟಾಗಿರುವುದು. ಪರ ಭಕ್ತಿದ್ವಾರಕವಾದ ಆತ್ಮದರ್ಶನಕ್ಕೆ ಯೋಗ ದ್ವಾರಾಕರ್ಮಜ್ಞಾನ ಭಕ್ತಿಯೋಗ ಗಳು ಸಾಧಕಗಳಾಗಿರುವುವು. ॥ ॥೨೪॥೨೫॥

ಮೂ ॥ ನಿರಸ್ತಾಖಿಲಾಜ್ಞಾನೋದೃಷ್ಟ್ವಾತ್ಮಾನಂಪರಾನುಗಂ । ಪ್ರತಿಲಭ್ಯಪರಾಂಭಕ್ತಿಂತಯೈವಾಪ್ನೋತಿತತ್ಪದಂ ॥ ... ... ॥೨೬॥

ತಾ ॥ ಪುಣ್ಯವಿಶೇಷಗಳಿಂದ ಉಪಾಯವಿರೋಧಿಗಳಾದ ಪಾಪ

ಗಳನ್ನು ನಾಶಪಡಿಸಿಕೊಂಡ ಅಧಿಕಾರಿಯು ಹಿಂದೆಹೇಳಿರುವ ಪ್ರಕಾರದಿಂದ ಪರಮಾತ್ಮ ಶೇಷ ಭೂತನಾದ ಆತ್ಮವನ್ನು ಸಾಕ್ಷಾತ್ಕರಿಸಿ ಪರಮಾತ್ಮ ಪ್ರಕಾಶದಿಂದ ಪರಭಕ್ತಿಯನ್ನು ಹೊಂದಿ ಪರಮಭಕ್ತಿರೂಪವನ್ನು ಹೊಂದಿರುವ ಅದರಿಂದಲೆ ಆಪರಮಾತ್ಮ ಸ್ಥಾನವನ್ನು ಹೊಂದುವನು . ॥ ॥೨೬॥

ಮೂ॥ ಭಕ್ತಿಯೋಗಸ್ತದರ್ಥೀಚೇತ್ಸಮಗ್ರೈಶ್ವರ್ಯಸಾಧನಂ। ಆತ್ಮಾರ್ಥೀಚೇತ್ತ್ರಯೋಪ್ಯೇತೆ ತತ್ಕೈವಲ್ಯಸ್ಯಸಾಧಕಾಃ॥ ... ... ॥೨೭॥

ತಾ॥ ಭಕ್ತಿಯೋಗವು ಐಶ್ವರ್ಯಾಪೇಕ್ಷಿಗಳಿಗೆ ಅಂಥಾ ಸಮಗ್ರೈಶ್ವರ್ಯಕ್ಕೂ, ಆತ್ಮಾನುಭವಾಪೇಕ್ಷಿಗಳಿಗೆ ಈ ಕರ್ಮಜ್ಞಾನ ಭಕ್ತಿಗಳೆಂಬೀಮೂರೂ ಆ ಆತ್ಮಾನುಭವರೂಪವಾದ ಮೋಕ್ಷಕ್ಕೂ ಸಾಧನಗಳಾಗಿರುವುವು. ... ... ... ॥೨೭॥

ಮೂ॥ ಐಕಾಂತ್ಯಂಭಗವತ್ಯೇಷಾಂ ಸಮಾನಮಧಿಕಾರಿಣಾಂ । ಯಾವತ್ಪ್ರಾಪ್ತಿಪರಾರ್ಥೀಚೇತ್ತದೇವಾನಂತ್ಯಮಶ್ನುತೆ॥ ... ... ॥೨೮॥

ತಾ॥ ಈ ಸರ್ವಾಧಿಕಾರಿಗಳಿಗೂ ಪರಮಾತ್ಮನಲ್ಲಿ ದೇವತಾಂತರ ಭಜನವಿಲ್ಲದಿರುವಿಕೆ ಎಂಬ ಐಕಾಂತ್ಯವು ಸಮಾನವಾಗಿರುವುದು. ಪ್ರಾಪ್ತಿಪರ್ಯಂತವಾಗಿ ಪರಮಾತ್ಮಾನುಭವವನ್ನಪೇಕ್ಷಿಸುವಂತವನಿಗೆ ಸಾಕ್ಷಾನ್ಮೋಕ್ಷವೆ ಉಂಟಾಗುವುದು. ... ॥೨೮॥

ಮೂ॥ ಜ್ಞಾನೀತುಪರಮೈಕಾಂತೀತದಾಯತ್ತಾತ್ಮಜೀವನಃ । ತತ್ಸಂಶ್ಲೇಷವಿಯೋಗೈಕಸುಖದುಃಖಸ್ತದೇಕಧೀಃ॥ ೨೯ ॥ ಭಗವದ್ಧ್ಯಾನಯೋಗೋಕ್ತಿವಂದನಸ್ತುತಿಕೀರ್ತನೈಃ ।ಲಬ್ಧಾತ್ಮಾತದ್ಗತಪ್ರಾಣಮನೋಬುದ್ಧೀಂದ್ರಿಯಕ್ರಿಯಃ ॥ ೩೦ ॥ ನಿಜಕರ್ಮಾದಿಭಕ್ತ್ಯಂತಂಕುರ್ಯಾತ್ಪ್ರೀತ್ಯೈವಕಾರಿತಃ। ಉಪಾಯತಾಂಪರಿತ್ಯಜ್ಯನ್ಯಸೇದ್ದೇವೇತುತಾಮಭೀಃ ॥ ... ... ॥೩೧॥

ತಾ॥ ಅನನ್ಯ ಪ್ರಯೋಜನನಾಗಿರುವ ಪರಮೈಕಾಂತಿಯಾದ ಜ್ಞಾನಿಯು ಪರಮಾತ್ಮಾಧೀನವಾದ ಜೀವಿತವುಳ್ಳವನಾಗಿ ಆಪರಮಾತ್ಮ ಸಂಶ್ಲೇಷದಲ್ಲಿ ಸುಖವನ್ನೂ ಅವನ ವಿಶ್ಲೇಷದಲ್ಲಿ ದುಃಖವನ್ನೂ ಹೊಂದಿದವನಾಗಿ ಪರಮಾತ್ಮನಲ್ಲಿಯೆ ನಿಲ್ಲಿಸಲ್ಪಟ್ಟ ಚಿತ್ತವುಳ್ಳವನಾಗಿ ಭಗವಂತನನ್ನು ಧ್ಯಾನದಲ್ಲಿ ನೋಡುವಿಕೆಯಿಂದಲೂ ಭಗವತ್ಸ್ವರೂಪವನ್ನು ಅಪೇಕ್ಷಿಸಿದವರಿಗೆ ಉಪದೇಶಿಸುವಿಕೆಯಿಂದಲೂ ಪರಮಾತ್ಮನ ವಂದನ ಸ್ತೋತ್ರ ಕೀರ್ತನಗಳಿಂದಲೂ ಆತ್ಮಲಾಭವುಳ್ಳವನಾಗಿ ಪ್ರಾಣಮನೋಬುದ್ಧೀಂದ್ರಿಯ ಕ್ರಿಯೆಗಳನ್ನು ಪರಮಾತ್ಮಾಧೀನವನ್ನಾಗಿ ಮಾಡಿ ನಿತ್ಯಕರ್ಮಾದಿ ಭಕ್ತಿಪರ್ಯಂತವಾದ ಸಮಸ್ತವನ್ನೂ ಪ್ರೀತಿಪ್ರೇರಿತನಾಗಿ ಮಾಡಬೇಕು. ಅವುಗಳಲ್ಲಿ ಉಪಾಯತ್ವಬುದ್ಧಿಯನ್ನು ತ್ಯಾಗಮಾಡಬೇಕು. ಪರಮಾತ್ಮನೇ ಮುಖ್ಯೋಪಾಯನೆಂದು ತಿಳಿದು ನಿರ್ಭಯನಾಗಿರಬೇಕು. ... ॥೭೯॥೨೦॥೨೧॥

ಮೂ॥ ಏಕಾಂತಾತ್ಯಂತದಾಸ್ಯೈಕರತಿಸ್ತತ್ಪದಮಾಪ್ನು
ಯಾತ್ । ತತ್ಪ್ರಧಾನಮಿದಂಶಾಸ್ತ್ರಮಿತಿಗೀತಾರ್ಥ
ಸಂಗ್ರಹಃ ॥ ... ... ॥೩೨॥

ತಾ॥ ದೇವತಾಂತರ ಪ್ರಯೋಜನಾಂತರಗಳಲ್ಲಿ ಅಪೇಕ್ಷೆಯಿಲ್ಲದವನಾಗಿ ಭಗವದ್ದಾಸ್ಯವನ್ನೇ ಅಪೇಕ್ಷಿಸುವಂತವನು ಪರಮಾತ್ಮ ಸ್ಥಾನವನ್ನು ಹೊಂದುವನು. ಈ ವಿಷಯವನ್ನೇ ಶ್ರೀಮದ್ಗೀತಾಶಾಸ್ತ್ರವು ಮುಖ್ಯವಾಗಿ ಪ್ರತಿಪಾದಿಸುವುದಲ್ಲದೆ ಶಂಕರಾದಿಗಳಿಂದ ಹೇಳಲ್ಪಡುವ ಭವದಭಿಪ್ರಾಯ ವಿರುದ್ಧವಾದ ಸರ್ವಕರ್ಮಸನ್ಯಾಸಾದಿಗಳನ್ನು ಮುಖ್ಯಾರ್ಥಗಳೆಂದು ಪ್ರತಿಪಾದಿಸಲಾರದು. .. ॥೩೨॥

* ಶ್ರೀಮದ್ಯಾಮುನ ಮುನಯೇನಮಃ. *

---

ಶ್ರೀಮದ್ವೇದಾಂತ ಮಹಾದೇಶಿಕ ಸ್ವಾಮಿಗಳಿಂದ ಅನುಗ್ರಹಿಸಲ್ಪಟ್ಟ ಈ ಅಧ್ಯಾಯ ಸಂಗ್ರಹ ಗಾಥೆಯು.

ಮೂ॥ ಶತ್ರುವಪೀಡುನೇಕರುಮಾನ್ತನುಕದ್ಪೈಯು ಸ್,
ಕತ್ತುವಮುಳ್ಳದುತಾ೯ ಕುರಿಕೊಳ್ಳಪಕೈಶೆಮದನವುಪ್,

ಶತ್ತ್ವನಕ್ರಿಶಿಷ್ಪ್ರಯನುಮ್ ಶರಣಾಗತಿಯುಮ್, ಶತ್ತು
ವಮೇತರುವಾನುರೈತ್ತಾರ್ ತನಿವಾರ್ತ್ತನುಕ್ಕೇ ॥೧೯॥

ಟೀ॥ ಇನ್ನು ಮುಂದೆ " ಈಶ್ವರೇಕರ್ತೃತಾಬುದ್ಧಿಸ್ಸತ್ತ್ವೋಪಾದೇಯತಾಂತಿಮೇ! ಸ್ವಕರ್ಮಪರಿಣಾಮಶ್ಚಶಾಸ್ತ್ರಸಾರಾರ್ಥಉಚ್ಯತೇ ,, ಎಂಬ ಸಂಗ್ರಹಶ್ಲೋಕದಂತೆ ಈ ಅಷ್ಟಾದಶಾಧ್ಯಾಯಾರ್ಥಗಳನ್ನು ಒಂದು ಶ್ಲೋಕದಿಂದ ಸಂಗ್ರಹಿಸುತ್ತಾರೆ. ಶತ್ತುವಮೇ-ಸತ್ತ್ವಗುಣವನ್ನೇ, ತರುವಾರ್-ಕೊಡುವಂತವನು, " ಮಹಾನ್ಪ್ರಭುರ್ವೈಪುರುಷಸ್ಸತ್ವಸ್ಯೈಷ ಪ್ರವರ್ತಕಃ ,, ಎಂಬುವಂತೆ ಸತ್ವಗುಣಪ್ರವರ್ತಕನಾದ ಪರಮಪುರುಷನೆಂದರ್ಥವು. ಶತ್ತುವ-ಸತ್ವಪ್ರಯುಕ್ತವಾದ, ವೀಡಡೈ-ತ್ಯಾಗವನ್ನುಂಟಾಗಿರುವ,ಸಾತ್ವಿಕತ್ಯಾಗ ಘಟಿತವಾದ ಎಂದರ್ಥವು ನಕ್ರಿಕರುಮಂ-ಒಳ್ಳೇಕರ್ಮವನ್ನು, ತಾರ್-ತಾನೆ, ಉಕನ್ದಪ್ಪ್ರಯುಮ್-ಅಪೇಕ್ಷಿಸಿದ ಪ್ರಕಾರವನ್ನೂ; ಸಾತ್ವಿಕತ್ಯಾಗದಿಂದ ಕೂಡಿರುವಕರ್ಮವು ತನಿಗೆ ಅತ್ಯಂತ ಪ್ರಿಯವಾಗಿರುವುದರಿಂದ ಸಾತ್ವಿಕತ್ಯಾಗಕ್ಕೆಅವಶ್ಯ ಕರ್ತವ್ಯತೆಯುನ್ನೂ ಎಂದರ್ಥವು. ಇದರಿಂದ " ಈಶ್ವರೆ ಕರ್ತೃತಾಬುದ್ಧಿಯು ,, ಹೇಳಲ್ಪಟ್ಟಿತು. ಶತ್ತುವ ಮುಳ್ಳದು-ಸತ್ವಗುಣವುಳ್ಳ ವಾಪಾರವನ್ನು, ತಾರ್ - ಅನುಷ್ಠಾತಾ ಅದ ತಾನು, ಕುರಿಕ್ಕೊಳ್ವಕ್ಕ-ಲಕ್ಷ್ಯವಾಗಿ ಸ್ವೀಕರಿಸುವಂತೆ, ಶೆಯ್ದನವುಮ್- ಮಾಡಲ್ಪಡುವ ವ್ಯಾಪಾರವನ್ನೂ; ಶಾಸ್ತ್ರಾರ್ಥಾಧಿಕಾರಿಯಾದ ತಾನು ತಾಮಸವ್ಯಾಪಾರಗಳನ್ನು ಬಿಟ್ಟು ಸಾತ್ವಿಕ ವ್ಯಾಪಾರವನ್ನು ಸ್ವೀಕರಿಸುವಂತೆ ಪರಸ್ಪರ ವಿಲಕ್ಷಣಗಳಾದ ಗುಣತ್ರಯಕಾರ್ಯ ಭೂತವ್ಯಾಪಾರಗಳನ್ನೂ ಎಂದರ್ಥವು. ಶತ್ತುವ-ಸತ್ವಗುಣಮೂಲಕಗಳಾದ, ನಲ್-ಶ್ರೇಷ್ಠಗಳಾದ, ಕಿರಿಶೈ-ಕ್ರಿಯೆಗಳ, ಪಯನುಮ್-ಫಲಗಳನ್ನೂ; ಪರಮಪುರುಷಾರಾಧನ ರೂಪವಾಗಿ ಅನುಷ್ಠಿಸಲ್ಪಡುವ ತನ್ನ ವರ್ಣಾಶ್ರಮಧರ್ಮಗಳು ಪರಮ ಪುರುಷ ಪ್ರಾಪ್ತಿಪರ್ಯಂತವಾಗಿ ಪರಿಣಮಿಸುವ ಪ್ರಕಾರವನ್ನೂ ಎಂದರ್ಥವು. ಶರಣಾಗತಿಯುಮ್-ಚರಮಶ್ಲೋಕ ಪ್ರತಿಪಾದ್ಯವಾಗಿರುವ ಅಕಿಂಚನಾಧಿಕಾರಿಯಿಂದ ಅನುಷ್ಠಿಸಲ್ಪಡುವ ಶರಣಾಗತಿಯುನ್ನೂ; ಇದರಿಂದ ಸಂಗ್ರಹ ಶ್ಲೋಕದಲ್ಲಿರುವ ಶಾಸ್ತ್ರಸಾರಾರ್ಥವೆಂಬ ಪದವನ್ನು ಶರಣಾಗತಿ ಪರವಾಗಿ ವಿವರಿಸಿರುವಂತೆ ತಿಳಿಯ

ಬೇಕು. ಈ ಪದವು ಶ್ರೀಮದ್ಗೀತಾಭಾಷ್ಯದಅಷ್ಟಾದಶಾಧ್ಯಾಯಾರಂಭ ಭಾಷ್ಯದಲ್ಲಿ "ಕೃತ್ಸ್ನಸ್ಯಗೀತಾ ಶಾಸ್ತ್ರಸ್ಯ ಸಾರಾರ್ಥೋಭಕ್ತಿಯೋಗಃ ,, ಎಂಬದಾಗಿ ಭಕ್ತಿಯೋಗ ಪರವಾಗಿ ವ್ಯಾಖ್ಯಾನ ಮಾಡಲ್ಪಟ್ಟಿದ್ದರೂ ಆಭಾಷ್ಯವು ಚರಮ ಶ್ಲೋಕಕ್ಕೆ ಭಕ್ತ್ಯಂಗತ್ವೇನ ಶರಣಾಗತಿ ವಿಧಾಯಕತ್ವ ಯೋಜನಾಭಿಪ್ರಾಯಕ ವಾಗಿರುವುದರಿಂದಲೂ ಶ್ರೀ ಮದ್ಗದ್ಯತಾತ್ಪರ್ಯವನ್ನು ನಿರೂಪಿಸುವಾಗ ಚರಮಶ್ಲೋಕಕ್ಕೆ ಲಕ್ಷ್ಮೀತಂತ್ರ ಅಹಿರ್ಬುಧ್ನ್ಯಸಂಹಿತಾದಿ ಬಹುಪ್ರಮಾಣಾನುಗುಣಸ್ವತಂತ್ರ ಶರಣಾಗತಿ ಪರವಾದಯೋಜನೆಯಲ್ಲಿ ಸ್ವಾರಸ್ಯಾತಿಶಯವನ್ನು ತೋರಿಸಿರುವುದರಿಂದಲೂ ಈಪ್ರಕಾರವೇ ಶ್ರೀಮತ್ತಾತ್ಪರ್ಯ ಚಂದ್ರಿಕಾನಿಕ್ಷೇಪರಕ್ಷಾ ಗದ್ಯಭಾಷ್ಯಾದಿಗಳಲ್ಲಿ ತಾವೇ ಸಮರ್ಥಿಸುವುದರಿಂದಲೂ ಅಲ್ಲಿ ಈಪದವನ್ನು ಶರಣಾಗತಿ ಪರವಾಗಿನಿರ್ವಹಿಸಿರುವರು. (ಯದ್ವಾ) ಭಕ್ತಿಯೋಗವು ಅಂಗತ್ವೇನ ಪ್ರಪತ್ತ್ಯನುಷ್ಠಾನ ವಿಲ್ಲದಿದ್ದರೆ ಸಿದ್ಧಿಸುವುದಿಲ್ಲವಾದುದರಿಂದ ಭಕ್ತಿಯೋಗವನ್ನು ಹೇಳುವಸ್ಥಾನದಲ್ಲಿ ಪ್ರಪತ್ತಿಯೆಂಬ ಶರಣಾಗತಿಯನ್ನು ಹೇಳಿದಂತೆ ತಿಳಿಯಬೇಕು.

ಅಲ್ಲಿ ಕೆಲವರು " ಶ್ರೀಭಾಷ್ಯಕಾರರು ಶ್ರೀಮದ್ಗೀತಾಭಾಷ್ಯದಲ್ಲಿ ಚರಮಶ್ಲೋಕ ಸಿದ್ಧವಾದ ಶರಣಾಗತಿಯು ಅಂಗವಾಗಿ ಅನುಷ್ಠಿಸಲರ್ಹವೆಂದು ಹೇಳಿರುತ್ತಾರಲ್ಲದೆ ಸ್ವಾತಂತ್ರ್ಯ ರೂಪತ್ವವನ್ನು ಹೇಳಿಲ್ಲವಾದುದರಿಂದ ಮೋಕ್ಷಾರ್ಥವಾಗಿ ಸ್ವತಂತ್ರ ಪ್ರಪದನ ವೆಂಬುವುದು ಯುಕ್ತವೋ ,, ಎನ್ನುವರು. ಈ ಶರಣಾಗತಿಯನ್ನು ಭಕ್ತಿಯೋಗಾಂಗವಾಗಿ ಅನುಷ್ಠಿಸಬೇಕೆಂದು ಹೇಳಿರುವುದಕ್ಕೆ ಅಭಿಪ್ರಾಯ ವೇನಂದರೆ, ಈ ಪ್ರಪತ್ತಿಯು " ಸಾಹಿಸರ್ವತ್ರಸರ್ವೇಷಾಂ ಸರ್ವಕಾಮಫಲಪ್ರದಾ ,, ಎಂಬದಾಗಿ ಸಕಲ ಫಲಗಳಿಗೂ ಸಾಧನವಾಗಿರುವುದರಿಂದ ಅಲ್ಲಿ ಪ್ರಕೃತವಾದ ಭಕ್ತಿಯೋಗವೆಂಬ ಫಲದಲ್ಲಿ ಉದಾಹರಿಸಿದ ಪ ಕಾರವಲ್ಲದೆ ಸಕಲ ಫಲಸಾಧನವಾದ ಪ್ರಪತ್ತಿಗೆ ಭಕ್ತ್ಯಂಗತ್ವಮಾತ್ರವಲ್ಲದೆ ಸ್ವಾತಂತ್ರ್ಯವಿಲ್ಲವೆಂದು ಹೇಳಿದ್ದಾಗಿ ತಿಳಿಯಕೂಡದು. ಅಲ್ಲಿ " ಸುದುಷ್ಕರೇಣಶೋಚೇದ್ಯೋಯೋಗೇನಾನೇನಪ್ರೇಷ್ಯದೇತು ಸಾ । ಸಪತಸ್ಯಾಪ್ಯಹದೋವೇತಿಚರಮಶ್ಲೋಕಸಂಗ್ರಹಃ ,, ಎಂಬ ಕಾರಿಕೆಯನ್ನು ಅನುಸಂಧಿಸಬೇಕು. ಯಾವನುಮಾನ ಅಷ್ಟಾ

ರ್ಥಗಳು ಅತ್ಯಂತ ದುಷ್ಕರಗಳಾಗಿರುವುದರಿಂದ ನಮ್ಮಗಳಿಗೆ ಲಭಿಸಲಾ ರವೆಂದು ದೌಷ್ಕರ್ಯಪ್ರಯುಕ್ತವಾಗಿ ಯಾವನಾದರೆ ವ್ಯಸನಪಡುವನೋ ಅವನವಸಿಗೆ ನಾನೊಬ್ಬನೆ ಆಯಾ ಅಭೀಷ್ಟಾರ್ಥಗಳಿಗೆ ಉಪಾಯನು-ಸಾಧಕನು, ಎಂಬದಾಗಿ ಚರಮಶ್ಲೋಕ ತಾತ್ಪರ್ಯವನ್ನು ಶ್ರೀಕೃಷ್ಣನು ಹೇಳಿರುವಂತೆ ತಿಳಿಯ ಬೇಕು.

ಆದರೂ "ಸ್ಮರ್ತವ್ಯಸ್ಸತತಂವಿಷ್ಣುಃ-ಹರಿರೇಕಸ್ಸದಾಧ್ಯೇಯಃ-ಧ್ಯೇಯೊನಾರಾಯಣಸ್ಸದಾ,, ಎಂಬದಾಗಿ ಸರ್ವಶಾಸ್ತ್ರಾರ್ಥ ಪ್ರವರ್ತಕರಾದ ವ್ಯಾಸಾದಿಗಳು ಆವೃತ್ತವಾದ ಧ್ಯಾನವನ್ನೆ ಮೋಕ್ಷಸಾಧನತ್ವೇನ ಹೇಳಿರುವಲ್ಲಿ ಸ್ವಲ್ಪವಾದ ಶರಣಾಗತಿಯೆ ಮೋಕ್ಷಸಾಧನವೆಂದರೆ ಧ್ಯಾನವಿಧಿಗೆ ವಿರೋಧವಿಲ್ಲವೊ ? ಆದುದರಿಂದ ಅನಾವೃತ್ತಿಯುಳ್ಳ ಸಕೃತ್ಪ್ರಪದನದಿಂದ ಮೋಕ್ಷವೆನ್ನುವುದು ಯುಕ್ತವೊ ? ಕಿಂಚ "ಮಾಮೇವಯೆ ಪ್ರಪದ್ಯಂತೆ,, ಇತ್ಯಾದಿಗಳಲ್ಲಿ ಭಕ್ತ್ಯಂಗತ್ವೇನ ಶರಣಾಗತಿಯನ್ನು ವಿಧಿಸಿರುವಂತೆ ಚರಮಶ್ಲೋಕದಲ್ಲಿಯೂ ಶ್ರೀ ಭಾಷ್ಯಕಾರರುದ್ವಿತೀಯ ಯೋಜನೆಯಲ್ಲಿ ಕಂಠೋಕ್ತವಾಗಿ ಹೇಳಿರುವಂತೆ ಸಪರಿಕರ (ಅಂಗಸಹಿತವಾದ) ಪ್ರಪತ್ತಿಯನ್ನು ಭಕ್ತ್ಯಂಗವಾಗಿ ವಿಧಿಸಿರುವಂತೆ ತಳಿಯಬೇಡವೆ ? ಎಂದರೆ ಅದಕ್ಕುತ್ತರವು. "ಶರಣಂತ್ವಾಂಪ್ರಪನ್ನಾಯೆಧ್ಯಾನಯೋಗವಿವರ್ಜಿತಾಃ । ತೇಪಿಮೃತ್ಯುಮತಿಕ್ರಮ್ಯಯಾಂತಿತದ್ವೈಷ್ಣವಂಪದಂ,, ಎಂಬ ಪ್ರಮಾಣದಲ್ಲಿ ಧ್ಯಾನಯೋಗದಲ್ಲಿ ಅಶಕ್ತರಾದವರು ಅದನ್ನನುಷ್ಠಿಸುವುದಕ್ಕೆ ಸಾಧ್ಯವಿಲ್ಲದೆ ತತ್ಸ್ಥಾನದಲ್ಲಿ ಪರಮಾತ್ಮನ ಚರಣಾರವಿಂದ ಶರಣಾಗತಿಯನ್ನು ಮಾಡಿದರೆ ಅಂತವರುಕೂಡ ಸಂಸಾರವನ್ನತಿ ಕ್ರಮಿಸಿ ಮೋಕ್ಷವನ್ನು ಹೊಂದುವರೆಂಬದಾಗಿ ಹೇಳಿರುವುದರಿಂದಲೂ ಶಕ್ತಾಶಕ್ತಾಧಿಕಾರಿ ಭೇದದಿಂದ ಧ್ಯಾನಶರಣಾಗತಿ ಶಾಸ್ತ್ರಗಳು ಸಪ್ರಯೋಜನವಾಗಿರುವುದರಿಂದಲೂ "ಯದ್ಯೇನಕಾಮಕಾಮೇನನಸಾಧ್ಯಂಸಾಧನಾಂತರೈಃ । ಮುಮುಕ್ಷುಣಾಯತ್ಸಾಂಖ್ಯೇನಯೋಗೇನನಚಭಕ್ತಿತಃ ॥ ಪ್ರಾಪ್ಯತೆ ಪರಮಂಧಾಮಯತೋನಾವರ್ತತೆಯತಿಃ । ತೇನತೇನಾಪ್ಯತೆತತ್ತನ್ನ್ಯಾಸೇನೈವಮಹಾಮುನೆ ॥ ಪರಮಾತ್ಮಚತೇನೈವಸಾಧ್ಯತೆ ಪುರುಷೋತ್ತಮಃ,,ಎಂಬೀ ವಚನಗಳಲ್ಲಿ ಉಪಾಯಾಂ

ತರಗಳಿಂದ ಸಾಧಿಸಲ್ಪಡದ ಇಷ್ಟಾರ್ಥಗಳಿಗೂ ಪರಮಾತ್ಮ ಪ್ರಾಪ್ತಿ ರೂಪವಾದ ಮೋಕ್ಷಕ್ಕೂ ನ್ಯಾಸವೆಂಬ ಶರಣಾಗತಿಯೆ ಮುಖ್ಯಸಾಧನವೆಂಬದಾಗಿ ಹೇಳಿರುವುದರಿಂದಲೂ ಶ್ರೀಭಾಷ್ಯಕಾರರೇ ಭಕ್ತ್ಯಂಗತ್ವವನ್ನು ಈಶರಣಾಗತಿಗೆ ಹೇಳಿದ್ದರೂ ಸ್ವಾತಂತ್ರ್ಯವನ್ನು ಗದ್ಯದಲ್ಲಿ ಅನುಗ್ರಹಿಸಿರುವುದರಿಂದಲೂ ಭಕ್ತ್ಯಂಗತ್ವಮಾತ್ರವೇ ಪ್ರಪತ್ತಿಗೆ ಇರುವುದಲ್ಲದೆ ಸ್ವಾತಂತ್ರ್ಯವಿಲ್ಲ ವೆಂಬೀ ವಾದವೂ ಧ್ಯಾನಮಾತ್ರಕ್ಕೆನೇ ಮೋಕ್ಷಸಾಧನತ್ವವೆಂಬ ವಾದವೂ ಯುಕ್ತವಲ್ಲವು. (ವಿಸ್ತರಭಯದಿಂದ ಸಂಗ್ರಹೀತವಾಯಿತು ) ಆದುದರಿಂದ ಈ ಪ್ರಕರಣದ ಭಕ್ತಿಸ್ಥಾನದಲ್ಲಿ ಶರಣಾಗತಿ ಶಬ್ದವನ್ನು ಪ್ರಯೋಗಿಸಿರುವುದು ಉಚಿತವೆಂತಲೆ ತಿಳಿಯಬೇಕು. ) ತನಿ-ಅದ್ವಿತೀಯನಾದ, ಪಾರ್ತ್ತನುಕ್ಕು-ಅರ್ಜುನನಿಗೆ, ಉರೈತ್ತಾ್ನ-ಉಪದೇಶಿಸಿದನು. ॥೧೯॥

ಮೂ ॥ ವೞಪತ್ತರುಕ್ಕು ಮರುಂದೆನ್ನುಮಾಯನ್ವ
ತಾನುರೈತ್ತ, ಇನ್ವಕ್ಕಡಲಮುದಾಮೆನನಿನ್ನಿಕ್ಕೀತೈತ
ತನ್ನೈ, ಅನ್ಬರಕ್ಕುರೈಪ್ಪವರ್ಕೇಟ್ಪಪ್ಪವರಾದರಿತ್ತೋದು
ಮವರ್, ತುೞಬಕ್ಕಡಲಿಲ್ ತುಳಂಗುಕ್ಕೈನೀಂಗಿತ್ತಲಂ
ಗುವರೆ ॥ ... ... ॥೨೦॥

ಟೀ॥ ಈ ಪ್ರಕಾರವಾಗಿ ಶ್ರೀಮದ್ಗೀತಾಶಾಸ್ತ್ರಸಾರಾರ್ಥವನ್ನು ಸಂಗ್ರಹಿಸಿ ಇನ್ನು ಮುಂದೆ "ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ । ಭಕ್ತಿಂಮಯಿಪರಾಂ ಕೃತ್ವಾಮಾಮೇವೈಷ್ಯತ್ಯಸಂಶಯಃ ॥ ಅಧ್ಯೇಷ್ಯತೇಚಯಇಮಂ ಧರ್ಮ್ಯಂಸಂವಾದಮಾವಯೋಃ । ಜ್ಞಾನಯಜ್ಞೇನತೇನಾಹಮಿಷ್ಟಸ್ಸ್ಯಾಮಿತಿಮೇಮತಿಃ॥ಶ್ರದ್ಧಾವಾನನಸೂಯಶ್ಚ ಶೃಣುಯಾದಪಿಯೋನರಃ।ಸೋಪಿಮುಕ್ತಶ್ಶುಭಾನ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಂ,, ಎಂಬಶಾಸ್ತ್ರಾಂತ ಶ್ಲೋಕಗಳಿಂದ ದರ್ಶಿತವಾದ ಶ್ರೀಮದ್ಗೀತಾ ಶಾಸ್ತ್ರಪ್ರವಚನಶ್ರವಣಾಧ್ಯಯನಗಳನ್ನು ಮಾಡತಕ್ಕವರಿಗೆ ಸಿದ್ಧಿಸುವ ಫಲವನ್ನು ಹೇಳುತ್ತಾರೆ. ವೞ-ದೃಢವಾದ, ಪತ್ತು-ಸಂಗವನ್ನು, ಅರುಕ್ಕುಮ್-ಛೇದಿಸುವುದಾದ, ಮರುಂದು-ಔಷಧವು, ಎನ್ನು ಈ ಪ್ರಕಾರವಾಗಿ

ತಿಳಿದು, ಮಾಯನ್ - ಆಶ್ಚರ್ಯಚೇಷ್ಟಿತನಾದ ಶ್ರೀಕೃಷ್ಣನಿಂದೆ, ತಾನ್-ಸ್ವಯಮೇವ, ಉರೈತ್ತ-ಹೇಳಲ್ಪಟ್ಟಿರುವ, ಶಾಸ್ತ್ರಾರಂಭ ಭಾಷ್ಯದಲ್ಲಿ ತೋರಿಸಿರುವಂತೆ ದೇಹತ್ತದನು ಬಂಧಿಸಂಗಾಖ್ಯಮೋಹ ರೂಪಮಹಾರೋಗ ಶಾಮಕದಿವ್ಯೌಷಧವುಇದೆಂಬ ಅಭಿಸಂಧಿಯಿಂದ ಶ್ರೀಕೃಷ್ಣನಿಂದ ಪ್ರವರ್ತಿತವಾದ ಎಂದರ್ಥವು. ಇದು ಗೀತಾ ಪದಕ್ಕೆ ವಿಶೇಷಣವು. ಇದರಿಂದ ಈ ಅರ್ಥಕ್ಕೆ ಅತ್ಯಂತ ಗೌರವವು ತೋರುವುದರಿಂದ " ಇದಂತೆ ನಾತಪಸ್ಕಾಯನಾಭಕ್ತಾಯ ಕದಾಚನ । ನಚಾಶುಶ್ರೂಷವೆ ವಾಚ್ಯಂನಚಮಾಂಯೋಭ್ಯಸೂಯತಿ ,, (೧೮ ॥ ೧೬) ಎಂಬ ಪ್ರಕಾರದಿಂದ ಯೋಗ್ಯರಾದವರಿಗಲ್ಲದೆ ಅಯೋಗ್ಯರಿಗೆ ಈ ಅರ್ಥವನ್ನು ಹೇಳದೆ ಗೋಪನ ಮಾಡಬೇಕೆಂದು ಫಲಿತವಾಯಿತು. ಇಲ್ಲಿ ಅಯೋಗ್ಯರಿಗೆ ಈ ಅರ್ಥವನ್ನು ಕೊಡಬಾರದೆಂದು ಮೊದಲು ಹೇಳಿರುವದಕ್ಕೆ ಯೋಗ್ಯರಾದವರಿಗೆ ಹೇಳದೆ ಇರುವುದಕ್ಕಿಂತಲೂ ಅಯೋಗ್ಯರಿಗೆ ಹೇಳುವುದು ಅತ್ಯಂತವಾಗಿ ಆಚಾರ್ಯನಿಗೆ ನಿಷ್ಠಾಹಾನಿಯನ್ನುಂಟುಮಾಡುವುದೆಂಬುವುದೆ ಅಭಿಪ್ರಾಯವು. ಇನ್‌ಬ-ಭೋಗ್ಯವಾದ, ಕಡಲ್, ಸಮುದ್ರಕ್ಕೆ ಅಮುದಂ-ಅಮೃತವಾಗುವುದು, ಎನ-ಈ ಪ್ರಕಾರವಾಗಿ, ನಿನ್ನ-ನಿಲ್ಲುವುದಾದ, ಇಕ್ಕೀತ್ತೈತನ್ನೈ-ಈ ಗೀತಾ ಶಾಸ್ತ್ರವನ್ನು, ಮಹಾಭಾರತ ರೂಪವಾದ ದುಃಖಸಾಗರಕ್ಕೆ ಅಮೃತವೆನ್ನುವಂತೆ ಸಾರತಮವಾದ ಈ ಗೀತಾಶಾಸ್ತ್ರವನ್ನು ಎಂದರ್ಥವು. ಇದರಿಂದ ಮೊದಲು ಹೇಳಿರುವ ಔಷಧ ರೂಪೇಣ ಪ್ರಸಕ್ತವಾದ ಅಭೋಗ್ಯತ್ವವು ನಿರಸ್ತವಾಯಿತು. ಅನ್ಬರ್ಕ್ಕು-ಭಗವದ್ಭಕ್ತಿಶಾಲಿಗಳಿಗೆ, ಉರೈಪ್ಪವರ್-ಹೇಳುವಂತವರು, ಕೇಟ್ಪವರ್-ಶ್ರವಣ ಮಾಡುವಂತವರೂ,ಹಿಂದೇ ಉದಾಹರಿಸಲ್ಪಡುವ ಫಲಪರವಾದ ಮೂರು ಶ್ಲೋಕಗಳಲ್ಲಿಪ್ರವಚನಾಧ್ಯಯನ ಶ್ರವಣಗಳನ್ನು ಅನುಕ್ರಮೇಣನಿರ್ದೇಶಿಸಿದ್ದರೂಇಲ್ಲಿ ಉಚ್ಚಾರಣ ಶ್ರವಣಾನೂಚ್ಚಾರಣಗಳಿಗೆ ಲೋಕಸಿದ್ಧಕ್ರಮವನ್ನು ಅನುಸರಿಸಿ ಪ್ರವಚನ ಶ್ರವಣಾಧ್ಯಯನಗಳನ್ನು ಯಥಾಕ್ರಮವಾಗಿ ನಿರ್ದೇಶಿಸಿರುವುದು ಯುಕ್ತವೇಸರಿ. ತುನ್ಬಕ್ಕಡಲಿಲ್-ದುಃಸಾಗರದಲ್ಲಿ, ತುಳಂಗುಗ್ರೈ-ಚಲಿಸುವಿಕೆಯು, ಸುಳಿಗಳೊಡನೆ ಕೂಡಿರುವ ತರಂಗಗಳ ಮಧ್ಯದಲ್ಲಿ ಬಿದ್ದಿರುವ ತೃಣದಂತೆ ಪರಿಭ್ರಮಿಸುವಿಕೆಯು, ನೀಂಗಿ-

ಸಿವರ್ತಿನಿ, ತುಲಂಗುವರ್-ನಿರ್ಮಲರಾಗಿ ಪ್ರಕಾಶಿಸುವರು *****॥೨೦॥

ಮೂ॥ ತೀತತ್ತನಱ್ಕಣಪ್ಪಾಱ್ಕಡಲ್ ತಾಮರೈಚ್ಚೆಮ್ಮಲರ್
ಮೇಲ್, ಮಾತುತ್ತ ಮಾಯನ್ ಮಱುವ ಕೀತ್ತೈಯಿನ್
ಪನ್ ಪೊರುಳ್ಳೈ, ಕೋತತ್ತ ನಾನ್ಮರೈ ಮೌಳಿಯಿನಾಶಿರಿಯನ್
ಕುರಿತ್ತಾನ್. ಕಾತತ್ತುಣೆವುದ್ದೈಯಾರ್ ಕರ್ತ್ತವಣ್ಣಂ ಕ
ರುತ್ತುಡನೆ. ... .. ॥೨೧॥

(ಟೀ) ಇನ್ನು ಮುಂದೆ ಉಭಯಲಿಂಗನಾದ ಶ್ರಿಯಃಪತಿನಾರಾಯಣನ ಪ್ರೀತ್ಯರ್ಥವಾಗಿ ಭಕ್ತಿಪ್ರಪತ್ತಿ ಪ್ರಧಾನವಾದ ಶ್ರೀಮದ್ಗೀತಾಶಾಸ್ತ್ರಸಾರಾರ್ಥಗಳನ್ನು ಭಕ್ತ ಪ್ರಪನ್ನಜನ ಸಂಗ್ರಹಣಧಾರಣ ಯೋಗ್ಯಗಳಾಗಿರುವಂತೆ ಸಂಗ್ರಹಿಸಿದವೆಂಬದಾಗಿ ಪ್ರಬಂಧಾರ್ಥಗಳನ್ನು ಉಪಸಂಹಾರಮಾಡುತ್ತಾರೆ. ಕೋದು - ದೋಷದಿಂದ, ಅತ್ತ - ಶೂನ್ಯವಾದ, ನಾನ್ಮರೈ-ನಾಲ್ಕು ವೇದಗಳ, ಮೌಳಿಯಿನ್-ಶಿರಸ್ಸುಗಳಲ್ಲಿ, ಆಶಿರಿಯನ್-ಆಚಾರ್ಯನು, ಸಕಲವೇದ ಗಳಲ್ಲಿಯೂ ಆಚಾರ್ಯಪದವನ್ನು ಹೊಂದಿರುವ ಶ್ರೀಮದ್ವೇಂಕಟನಾಥ ದೇಶಿಕರೆಂದರ್ಥವು. ಇಲ್ಲಿನಕೋದತ್ತ ಶಬ್ದವು ಆಚಾರ್ಯಪದಕ್ಕೆ ವಿಶೇಷಣವು. ಈವಿಶೇಷ್ಯಗಳಿಂದ ಪ್ರಬಂಧಕ್ಕೆ ನಿರ್ದೋಷ ಗುಣವತ್ಕರ್ತೃತ್ವೇನ ಪರಿಗ್ರಾಹ್ಯತ್ವಾತಿಶಯವು ಫಲಿತವಾಯಿತು. ತೀತು-ದೋಷಗಳಿಂದ, ಅತ್ತ-ಶೂನ್ಯಗಳಾದ, ನಱ್ಕುಣ-ಕಲ್ಯಾಣಗುಣಗಳಿಗೆ, ಪಾಲ್ಕಡಲ್- ಕ್ಷೀರಸಮುದ್ರನಾದ, ಅಖಿಲಹೇಯಪ್ರತ್ಯನೀಕ ಕಲ್ಯಾಣಗುಣಾಮೃತಸಾಗರ ಭೂತನಾದ ಎಂದರ್ಥವು. ಇದು ಮಾಯನ್ ಪದಕ್ಕೆ ವಿಶೇಷಣವು. ತಾಮರೈ-ತಾವರೆ ಎಂಬ, ಶೆಮ್ಮಲರ್ಮೇಲ್-ಕೆಂಪಾದ ಪುಷ್ಪದಲ್ಲಿರುವಂತ ವಳಾದ, ಮಾತು-ಸ್ತ್ರೀಯಿಂದ, ಉತ್ತ-ಸೇರಿದವನಾದ, ಅರುಣತಾಮರಸ ಪುಷ್ಪವಾಸಿನಿಯಾದ ಶ್ರೀ ಮಹಾಲಕ್ಷ್ಮೀದೇವಿಯೊಡನೆ ಅತ್ಯಂತ ಸಂಶ್ಲಿಷ್ಟನಾದ ಎಂದರ್ಥವು. ಮಾಯನ್- ಆಶ್ಚರ್ಯಚೇಷ್ಟಿತನಾದ ಶ್ರೀಕೃಷ್ಣನು, ಮರುವ-ಆದರಿಸುವಂತೆ, ಆ ಶ್ರೀ ಕೃಷ್ಣನ ಪ್ರೀತ್ಯರ್ಥವಾಗಿ ಎಂದರ್ಥವು. ಇದಕ್ಕೆ ಕುರಿತ್ತಾನ್ ಎಂಬ ಪದದೊಡನೆ ಅನ್ವಯವು. ಇನ್-ಭೋಗ್ಯವಾದ, ಕೀತ್ತೈಯಿನ್-ಗೀತಾಶಾಸ್ತ್ರದಲ್ಲಿ,

ವಣ್-ಸುಂದರಗಳಾದ, ಪೊರುಳ್ಕ-ಅರ್ಥಗಳನ್ನು, ಶ್ರೀಮದ್ಗೀತಾಶಾಸ್ತ್ರ ಸಾರಾರ್ಥಗಳನ್ನು ಎಂದರ್ಥವು. ಕಾದಲ್-ಭಕ್ತಿಯು, ತೇಱಿವು-ವಿಶ್ವಾಸವು, ಉಡೈಯಾರ್- ಭಕ್ತಿವಿಶ್ವಾಸಗಳೆಂಬೀ ಎರಡೂ ವುಳ್ಳವರು, ಇಲ್ಲಿನ ತೇಱಿವು ಶಬ್ದದಿಂದ ವಿಶ್ವಾಸ ಪ್ರಧಾನವಾದ ಪ್ರಪದನವು ವಿವಕ್ಷಿತವು. ಭಕ್ತಪ್ರಪನ್ನರೆಂದರ್ಥವು. ಕಱ್ಕುಂವಣ್ಣಮ್-ಅಭ್ಯಾಸಮಾಡುವ, ಕರುತ್ತುಡನೆ-ಅಭಿಪ್ರಾಯತ್ತೊಡನೆ, ಅವರು ಸುಖವಾಗಿ ಅಭ್ಯಾಸಮಾಡಿಸಂಸಾರೋತ್ತಾರಣವನ್ನು ಹೊಂದಲಿ ಎಂಬ ಅಭಿಪ್ರಾಯದಿಂದ ಎಂದರ್ಥವು. ಕುರಿತ್ತಾನ್-ಸಂಗ್ರಹಿಸಿದನು. ‖೨೧‖

ಇತಿ ಕವಿತಾರ್ಕಿಕಸಿಂಹಸ್ಯ ಸರ್ವತಂತ್ರಸ್ವತನ್ತ್ರಸ್ಯ ಶ್ರೀಮದ್ವೇಂಕಟನಾಥಸ್ಯ ಶ್ರೀಮದ್ವೇದಾಂತಾ ಚಾರ್ಯಸ್ಯಕೃತಿಷು ಶ್ರೀಮದ್ಗೀತಾರ್ಥ ಸಂಗ್ರಹಗಾಥಾ ಸಂಪೂರ್ಣಾ.

ಶ್ರೀಮತೇನಿಗಮಾನ್ತ ಮಹಾದೇಶಿಕಾಯನಮಃ.

ಈ ಶಾಸ್ತ್ರದಲ್ಲಿ ಪ್ರತ್ಯಧ್ಯಾಯದ ಸಮಾಪ್ತಿ ಪ್ರಕರಣದಲ್ಲಿ “ ಇತಿ ಶ್ರೀಭಗವದ್ಗೀತಾಸು ಉಪನಿಷತ್ಸು ,, ಇತ್ಯಾದಿ ಶಬ್ದಗಳಿರುವುದರಿಂದ ಅದರ ಅರ್ಥವಂ ವಿವರಿಸುವೆನು.

ಈ ಶಾಸ್ತ್ರವನ್ನು ಸ್ತ್ರೀಲಿಂಗವಾದ ಗೀತಾಶಬ್ದದಿಂದವ್ಯವಹರಿಸುವುದಕ್ಕೆ ಉಪನಿಷತ್ತಿಂಒಡಾಗಿ ಶಿಷ್ಟಸಮ್ಮತಿ ಇರುವುದೇ ಕಾರಣವೆಂದರಿಯಬೇಕು. ಇದಕ್ಕೆ “ ಅತೋಽಪನಿಷದಂಪುಣ್ಯಾಂ ಕೃಷ್ಣದ್ವೈಪಾಯನೋಽಬ್ರವತ್,,ಎಂಬದಾಗಿಹೇಳಿರುವ ಮಹರ್ಷಿಯ ವಚನವೇಪ್ರಮಾಣವು. ಭಗವದ್ಗೀತಾಸೂಪನಿಷತ್ಸು,ಎಂಬಬಹುವಚನವ್ಯವಹಾರವು ಏತಕ್ಕೆ ? ಎಂದರೆ, ಹದಿನೆಂಟು ಅಧ್ಯಾಯಗಳೂ ಹದಿನೆಂಟು ಉಪನಿಷತ್ತುಗಳೆಂದು ತೋರಿಸುವುದಕ್ಕಾಗಿಯೆ. ಅರ್ಜುನನಿಗೂ ಶ್ರೀಕೃಷ್ಣಸ್ವಾಮಿಗೂ ಪ್ರಶ್ನೋತ್ತರ ರೂಪವಾಗಿರುವುದರಿಂದ ಶ್ರೀಕೃಷ್ಣಾರ್ಜುನ ಸಂವಾದವೆಂದು ಹೇಳಲ್ಪಟ್ಟಿತು.

ಬ್ರಹ್ಮವಿದ್ಯಾ ಎಂಬುವುದು “ ನಾರಾಯಣಃಪರಂಬ್ರಹ್ಮಗೀತಾಶಾಸ್ತ್ರೇಸಮಿರಾತಃ ಎಂಬಂತೆ ಶ್ರೀಮನ್ನಾರಾಯಣ ನೆಂಬ ಬ್ರಹ್ಮವನ್ನು ಯಥಾವತ್ತಾಗಿ ಬೋಧಿಸುವುದರಿಂದ ಬ್ರಹ್ಮವಿದ್ಯಾ ಎಂಬದಾಗಿ ಹೇಳಿರುತ್ತಾರೆ.

ಯೋಗಶಾಸ್ತ್ರವೆಂಬುವದು ಆ ಪರಬ್ರಹ್ಮವನ್ನು ಹೊಂದುವು ದಕ್ಕೆ ಉಪಾಯಗಳಾದ ಕರ್ಮಯೋಗಜ್ಞಾನಯೋಗಭಕ್ತಿ ಯೋಗಗಳನ್ನು ವಿಸ್ತಾರದಿಂದ ಯಥಾವತ್ತಾಗಿ ಉಪದೇಶಿಸುವುದರಿಂದ ಎಂದರಿಯ ಬೇಕು.

ಇಂತಹ ಶ್ರೀಮದ್ಗೀತಾ ಶಾಸ್ತ್ರವು ಹದಿನೆಂಟು ಅಧ್ಯಾಯ ಗಳುಳ್ಳದ್ದಾಗಿರುವುದು. ಅದರಲ್ಲಿ ಪ್ರಥಮಷಟ್ಕವೆಂತಲೂ ದ್ವಿತೀಯ ಷಟ್ಕವೆಂತಲೂ ತೃತೀಯ ಷಟ್ಕವೆಂತಲೂ ಮೂರುಷಟ್ಕಗಳಿರುವುವು. ಷಟ್ಕವೆಂದರೆ ಆರು ಅಧ್ಯಾಯಗಳುಳ್ಳ ಒಂದು ಭಾಗವು.

ಈ ಗೀತಾಮಹಾ ಪ್ರಬಂಧಾರ್ಥವ್ಯಾವದೆಂದರೆ—ಅದಂ ಸ್ವಲ್ಪವಿವ ರಿಸುವೆವು. ಫಲಸಂಗಕರ್ತೃತ್ವ ತ್ಯಾಗಪೂರ್ವಕವಾಗಿಯೂ ಅಂ ತರ್ಗತಾತ್ಮಯಾಥಾತ್ಮ್ಯಜ್ಞಾನವಾಗಿಯೂ ಭಗವದಾ ರಾಧನರೂಪವಾಗಿಯೂ ಇರುವ ಪಂಚಮಹಾಯಜ್ಞಾದಿ ನಿತ್ಯನೈಮಿ ತ್ತಿಕ ಕರ್ಮಾನುಷ್ಠಾನವೆಂಬ ಕರ್ಮಯೋಗದಿಂದಲೂ ಪ್ರಕೃತಿ ವಿಯು ಕ್ತವಾಗಿಯೂ ಪರಿಶುದ್ಧವಾಗಿಯೂ ಪರಶೇಷತೈಕರಸವಾಗಿಯೂ ನಿತ್ಯನಾಗಿಯೂ ಇರುವ ಜೀವಾತ್ಮಜ್ಞಾನವೆಂಬ ಜ್ಞಾನಯೋಗದಿಂದಲೂ ಶಬ್ದಾದಿ ವಿಷಯಗಳಲ್ಲಿ ಅಪೇಕ್ಷೆಯಿಲ್ಲದೆ ಇರುವುದೆಂಬ ವೈರಾಗ್ಯದಿಂ ದಲೂ ಸಾಧಿಸಲ್ಪಡತಕ್ಕದ್ದಾದ ಏಕಾಂತ ಭಕ್ತಿಯಿಂದಲೇ ವರಿಸಲ್ಪಡ ತಕ್ಕವನಾದ ಶ್ರೀಮನ್ನಾರಾಯಣನೇ ಪರಬ್ರಹ್ಮವೆಂಬುವುದು ಈ ಶಾಸ್ತ್ರದ ಪ್ರಧಾನಾರ್ಥವು. ಈ ಅರ್ಥವು “ಸ್ವಧರ್ಮಜ್ಞಾನವೈರಾಗ್ಯ ಸಾಧ್ಯಭಕ್ತ್ಯೇಕಗೋಚರಃ । ನಾರಾಯಣಃ ಪರಂಬ್ರಹ್ಮಗೀತಾಶಾ ಸ್ತ್ರೇಸಮುದೀರಿತಃ„ ಎಂಬ ಸಂಗ್ರಹ ಶ್ಲೋಕದಿಂದ ಬೋಧಿತವಾಗಿರು ವುದೆಂದು ತಿಳಿಯಬೇಕು. ... ... ॥೧॥

ಪ್ರಥಮಷಟ್ಕಾರ್ಥ ವ್ಯಾವದೆಂದರೆ! ಜೀವಾತ್ಮನನ್ನು ಯಥಾವ ತ್ತಾಗಿ ನೋಡುವುದೆಂಬ ಯೋಗಕ್ಕೆ ಸಾಧನಗಳಾಗಿಯೂ ಕೈವಲ್ಯಾ ಪೇಕ್ಷೆಯುಳ್ಳವರಿಗೆ ಸುಖ ರೂಪವಾಗಿರುವ ಆ ಆತ್ಮಾನುಭವ ವೆಂಬ ಕೈವಲ್ಯಕ್ಕೆ ಸಾಧನಗಳಾಗಿಯೂ ಮೋಕ್ಷಸಾಧನವಾದ ಪರಭಕ್ತಿಗೆ ಉತ್ಪಾದಕಗಳಾಗಿಯೂ ಇರುವ ಕರ್ಮಯೋಗ ಜ್ಞಾನಯೋಗಗಳನ್ನು ಪ್ರತಿಪಾದಿಸುವಿಕೆಯೆ. ಈ ಅರ್ಥವು “ಜ್ಞಾನಕರ್ಮಾತ್ಮಿಕೇನಿಷ್ಠೇಯೋಗ

ಲಕ್ಷ್ಮೇಸುಸಂಸ್ಕೃತೇ । ಆತ್ಮಾನುಭೂತಿ ಸಿದ್ಧ್ಯರ್ಥೇಪೂರ್ವಷಟ್ಕೇನ ಚೋದಿತೇ ,, ಎಂಬ ಸಂಗ್ರಹ ಶ್ಲೋಕದಲ್ಲಿ ಹೇಳಿತವಾಗಿರುವುದು.

ಮಧ್ಯಮಷಟ್ಕಾರ್ಥ ವ್ಯಾವದೆಂದರೆ ? ಭಗವತ್ಪ್ರಾಪ್ತಿ ಎಂಬ ಮೋಕ್ಷಕ್ಕೆ ಸಾಧನವಾಗಿಯೂ ಕೆಳಗೆ ವಿವರಿಸಲ್ಪಟ್ಟ ಕರ್ಮಜ್ಞಾನ ಯೋಗಗಳಿಂದ ಸಾಧಿಸತಕ್ಕದ್ದಾಗಿಯೂ ಇರುವ ಭಕ್ತಿಯೋಗವನ್ನು ಪ್ರತಿಪಾದಿಸುವಿಕೆಯೆ. ಇಲ್ಲಿಯೂ " ಮಧ್ಯಮೆ ಭಗವತ್ತತ್ವಯಾಥಾತ್ಮ್ಯವಾಪ್ತಿ ಸಿದ್ಧಯೆ । ಜ್ಞಾನಕರ್ಮಾಭಿನಿರ್ವರ್ತ್ಯೋಭಕ್ತಿಯೋಗಃ ಪ್ರಕೀರ್ತಿತಃ ,, ಎಂಬ ಸಂಗ್ರಹಶ್ಲೋಕವನ್ನು ನೋಡಬಹುದು.

ಉತ್ತರ ಷಟ್ಕಾರ್ಥವ್ಯಾವದೆಂದರೆ?ಮೂಲಪ್ರಕೃತಿಯೇನು. ಬದ್ಧನಾಗಿಯೂ ಮುಕ್ತನಾಗಿಯೂ ಇರುವ ಜೀವಾತ್ಮನೇನು, ಮಹಾಭೂತಗಳೇ ಮೊದಲಾದ ಪ್ರಕೃತಿಕಾರ್ಯಗಳೇನು, ಸರ್ವೇಶ್ವರನಾದ ಪರಮಾತ್ಮನೇನು, ಇವರುಗಳ ಸ್ವರೂಪಗಳನ್ನು ಪೃಥಕ್ಕಾಗಿ ತೋರಿಸುವಿಕೆಯೂ ಕರ್ಮಜ್ಞಾನ ಭಕ್ತಿಯೋಗಗಳ ಅನುಷ್ಠಾನ ಪ್ರಕಾರಗಳೂ ಅದಕ್ಕುಪಯುಕ್ತವಾದ ಶಾಸ್ತ್ರವಶ್ಯತ್ವಾದಿಗಳೂ ತಿಳಿಯುವಂತೆ ಉಪದೇಶಿಸುವಿಕೆಯೆ. ಇದಕ್ಕೂ "ಪ್ರಧಾನ ಪುರುಷ ವ್ಯಕ್ತ ಸರ್ವೇಶ್ವರವಿವೇಚನಂ। ಕರ್ಮಧೀರ್ಭಕ್ತಿರಿತ್ಯಾದಿಃಪೂರ್ವಶೇಷೋಂತಿಮೋದಿತಃ,, ಎಂಬ ಸಂಗ್ರಹಶ್ಲೋಕವನ್ನು ಆಧಾರವಾಗಿ ತಿಳಿಯಬೇಕು. ॥೩॥

*ಇತಿ ಶ್ರೀಮದ್ಗೀತಾರ್ಥಸಾರೇ ಅಷ್ಟಾದಶಾಧ್ಯಾಯಃ.*

ಶಾಸ್ತ್ರವು ಪರಿಸಮಾಪ್ತಿಯನ್ನೈದಿತು.

ಕರ್ಣಾಟಭಾಷಯಾ ಶ್ರೀಮದ್ಗೀತಾಶಾಸ್ತ್ರಾರ್ಥ ಸಂಗ್ರಹಃ।
ಶ್ರೀಮತಾ ಪಾರ್ಥಸೂತೇನ ಕಾರಿತಃಪ್ರೀತಯೇಸತಾಂ॥

